# ಮೈಸೂರು ವಿಶ್ವವಿದ್ಯಾನಿಲಯ

## ತುರುವೇಕೆರೆ ತಾಲೂಕಿನ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ–ಒಂದು ವಿವರಣಾತ್ಮಕ ಅಧ್ಯಯನ

ಮೈಸೂರು ವಿಶ್ವವಿದ್ಯಾನಿಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ

**ಸಂಶೋಧಕರು**

ಶಿವಾನಂದ. ಎನ್.

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಮಾನಸಗಂಗೋತ್ರಿ

ಮೈಸೂರು–570006

**ಮಾರ್ಗದರ್ಶಕರು**

ಡಾ.ಜಿ.ಕರಿಯಪ್ಪ

ಎಂ.ಎ., ಪಿಹೆಚ್.ಡಿ., ಡಿಪ್ ಇನ್ ಎಪಿಗ್ರಫಿ

ಸಹ ಪ್ರಾಧ್ಯಾಪಕರು

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಮಾನಸಗಂಗೋತ್ರಿ, ಮೈಸೂರು–570006

2018

## ಪ್ರಮಾಣ ಪತ್ರ

ಶ್ರೀ ಶಿವಾನಂದ.ಎನ್. ಎಂಬ ಸಂಶೋಧನಾ ವಿದ್ಯಾರ್ಥಿಯಾದ ನಾನು **"ತುರುವೇಕೆರೆ ತಾಲೂಕಿನ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ-ಒಂದು ವಿವರಣಾತ್ಮಕ ಅಧ್ಯಯನ"** ಎಂಬ ವಿಷಯದಲ್ಲಿ ಡಾ.ಜಿ.ಕರಿಯಪ್ಪ, ಸಹ ಪ್ರಾಧ್ಯಾಪಕರು, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಮಾನಸಗಂಗೋತ್ರಿ, ಮೈಸೂರು ಅವರ ಮಾರ್ಗದರ್ಶನದಲ್ಲಿ ಸಂಶೋಧನೆ ಕೈಗೊಂಡ ಫಲವಾಗಿ ಮೈಸೂರು ವಿಶ್ವವಿದ್ಯಾನಿಲಯದ ಪಿಎಚ್.ಡಿ. ಪದವಿಗಾಗಿ ಮಹಾಪ್ರಬಂಧವನ್ನು ಪೂರ್ಣಗೊಳಿಸಿದ್ದೇನೆ ಎಂದು ಪ್ರಮಾಣೀಕರಿಸುತ್ತೇನೆ. ನಾನು ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದಲ್ಲಿ ಪಿಎಚ್.ಡಿ. ಪದವಿ ಪ್ರಾಪ್ತಿಗಾಗಿ ಕೋರಿ ಈ ಮಹಾಪ್ರಬಂಧವನ್ನು ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸುತ್ತಿದ್ದೇನೆ.

ಈ ಮಹಾಪ್ರಬಂಧವು ಇಡಿಯಾಗಲಿ ಅಥವಾ ಬಿಡಿಯಾಗಲಿ ಯಾವುದೇ ಪದವಿ ಅಥವಾ ಡಿಪ್ಲೋಮಾ ಪದವಿಗಾಗಿ ಈ ಮೊದಲು ಬೇರೆ ಯಾವುದೇ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

(**ಶಿವಾನಂದ. ಎನ್**.)
ಸಂಶೋಧನಾ ವಿದ್ಯಾರ್ಥಿ
ಸಹಿ ಮಾಡಿದ ದಿನಾಂಕ:

(**ಜಿ. ಕರಿಯಪ್ಪ**)
ಸಹ ಪ್ರಾಧ್ಯಾಪಕರು/ಮಾರ್ಗದರ್ಶಕರು
ಸಹಿ ಮಾಡಿದ ದಿನಾಂಕ:

**ಮೇಲು ಸಹಿ**

ಸಹಿ ಮಾಡಿದ ದಿನಾಂಕ:

(**ಕೆ. ಪ್ರಭು**)
ಸಹಾಯಕ ಪ್ರಾಧ್ಯಾಪಕರು/ಅಧ್ಯಕ್ಷರು

## ಪ್ರಮಾಣ ಪತ್ರ

ಶ್ರೀ ಶಿವಾನಂದ.ಎನ್. ಸಂಶೋಧನಾ ವಿದ್ಯಾರ್ಥಿಯಾದ ನಾನು ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದಲ್ಲಿ ಸಂಶೋಧನಾ ವಿದ್ಯಾರ್ಥಿಯಾಗಿ ಇದೇ ವಿಭಾಗದಲ್ಲಿ ಸಹ ಪ್ರಾಧ್ಯಾಪಕರಾಗಿರುವ ಡಾ.ಜಿ.ಕರಿಯಪ್ಪರವರ ಮಾರ್ಗದರ್ಶನದಲ್ಲಿ ಪಿಎಚ್.ಡಿ. ಪದವಿಗಾಗಿ ಸಂಶೋಧನಾಕಾರ್ಯ ಕೈಗೊಂಡು ಸಾದರಪಡಿಸಿರುವ **"ತುರುವೇಕೆರೆ ತಾಲೂಕಿನ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ-ಒಂದು ವಿವರಣಾತ್ಮಕ ಅಧ್ಯಯನ"** ಎಂಬ ಮಹಾಪ್ರಬಂಧವು ಮಾರ್ಗದರ್ಶಕರ ಮೇಲ್ವಿಚಾರಣೆಯಲ್ಲಿ ನನ್ನಿಂದ ರಚಿತವಾದ ಸ್ವಯಂ ಕೃತಿಯಾಗಿದೆ. ಇದು ಇಡಿಯಾಗಿ ಇಲ್ಲವೇ ಬಿಡಿಯಾಗಿ ಈ ಮೊದಲು ಬೇರೆ ಯಾವುದೇ ವಿಶ್ವವಿದ್ಯಾನಿಲಯಕ್ಕೆ ಯಾವುದೇ ಪದವಿ ಅಥವಾ ಡಿಪ್ಲೋಮಾಗಾಗಿ ಸಲ್ಲಿಸಿಲ್ಲವೆಂದು ಹಾಗೂ ಪ್ರಕಟವಾಗಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ದಿನಾಂಕ:
ಸ್ಥಳ: ಮೈಸೂರು

**(ಶಿವಾನಂದ. ಎನ್.)**
ಸಂಶೋಧನಾ ವಿದ್ಯಾರ್ಥಿ
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಮಾನಸಗಂಗೋತ್ರಿ, ಮೈಸೂರು-570006

# ದೃಢೀಕರಣ ಪತ್ರ

ಶ್ರೀ ಶಿವಾನಂದ.ಎನ್. ಸಂಶೋಧನಾ ವಿದ್ಯಾರ್ಥಿ, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಮಾನಸಗಂಗೋತ್ರಿ, ಮೈಸೂರು ಇವರು ನಮ್ಮ ವಿಭಾಗದಲ್ಲಿ ಪೂರ್ಣಕಾಲಿಕ ಸಂಶೋಧನಾ ವಿದ್ಯಾರ್ಥಿಯಾಗಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದ ಮೂಲಕ ಪಿಎಚ್.ಡಿ. ಪದವಿಗಾಗಿ ಸಂಶೋಧನಾಕಾರ್ಯ ಕೈಗೊಂಡು ಸಾದರಪಡಿಸಿರುವ **"ತುರುವೇಕೆರೆ ತಾಲೂಕಿನ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ–ಒಂದು ವಿವರಣಾತ್ಮಕ ಅಧ್ಯಯನ"** ಎಂಬ ಮಹಾಪ್ರಬಂಧವು ನನ್ನ ಮಾರ್ಗದರ್ಶನದಲ್ಲಿ ಶ್ರೀ ಶಿವಾನಂದ.ಎನ್. ಅವರಿಂದ ಸ್ವಯಂ ರಚಿತ ಕೃತಿಯಾಗಿದೆ ಎಂದು ದೃಢೀಕರಿಸುತ್ತೇನೆ. ಇದು ಇಡಿಯಾಗಿ ಇಲ್ಲವೇ ಬಿಡಿಯಾಗಿ ಈ ಮೊದಲು ಬೇರೆ ಯಾವುದೇ ವಿಶ್ವವಿದ್ಯಾನಿಲಯಕ್ಕೆ ಯಾವುದೇ ಪದವಿ ಅಥವಾ ಡಿಪ್ಲೋಮಾಗಾಗಿ ಸಲ್ಲಿಸಿಲ್ಲವೆಂದು ಹಾಗೂ ಪ್ರಕಟವಾಗಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ:
ಸ್ಥಳ: ಮೈಸೂರು

**(ಜಿ. ಕರಿಯಪ್ಪ)**
ಸಹ ಪ್ರಾಧ್ಯಾಪಕರು/ಮಾರ್ಗದರ್ಶಕರು
ಪ್ರಾಚೀನ ಇತಿಹಾಸ ಮತ್ತು ಪುರಾತತ್ವಅಧ್ಯಯನ ವಿಭಾಗ
ಮಾನಸಗಂಗೋತ್ರಿ, ಮೈಸೂರು–570006

## ಕೃತಜ್ಞತೆಗಳು

**“ತುರುವೇಕೆರೆ ತಾಲೂಕಿನ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ-ಒಂದು ವಿವರಣಾತ್ಮಕ ಅಧ್ಯಯನ”** ಎಂಬ ವಿಷಯದ ಬಗ್ಗೆ ಸಂಶೋಧನೆ ಕೈಗೊಳ್ಳಲು ಸೂಕ್ತ ಮಾರ್ಗದರ್ಶನವನ್ನು ನೀಡಿ ಪ್ರೋತ್ಸಾಹಿಸಿದ ನನ್ನ ಪೂಜ್ಯ ಗುರುಗಳಾದ ಡಾ.ಜಿ.ಕರಿಯಪ್ಪ, ಸಹ ಪ್ರಾಧ್ಯಾಪಕರು, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಮಾನಸಗಂಗೋತ್ರಿ, ಮೈಸೂರು ಅವರಿಗೆ ಹೃದಯಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಈ ನನ್ನ ಸಂಶೋಧನಾ ಕಾರ್ಯವನ್ನು ನಡೆಸಲು ಅವಕಾಶ ನೀಡಿದ ಮೈಸೂರು ವಿಶ್ವವಿದ್ಯಾನಿಲಯಕ್ಕೆ ನನ್ನ ಹೃದಯಪೂರ್ವಕ ವಂದನೆಗಳು. ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದಲ್ಲಿ ಸಂಶೋಧನೆ ನಡೆಸಲು ಸಹಕಾರ ನೀಡಿದ ವಿಭಾಗದ ಅಧ್ಯಕ್ಷರಾದ ಡಾ.ಕೆ.ಪ್ರಭುರವರಿಗೂ ಹಾಗೂ ಸಹಾಯಕ ಪ್ರಾಧ್ಯಾಪಕರಾದ ಡಾ.ವಿ.ಶೋಭಾ ಹಾಗೂ ನಿವೃತ್ತ ಪ್ರಾಧ್ಯಾಪಕರುಗಳಾದ ಡಾ.ಎಂ.ವಿ.ಕೃಷ್ಣಪ್ಪ, ಡಾ.ಎಂ.ಪಿ.ಮಹದೇವಯ್ಯ, ಡಾ.ಎನ್.ಎಸ್. ರಂಗರಾಜು ಅವರಿಗೂ ನನ್ನ ಕೃತಜ್ಞತೆಗಳು ಹಾಗೂ ಡಾ.ಕೆ.ಎಸ್.ಬೆಟ್ಟಪ್ಪ, ಸಂಶೋಧನಾ ಸಹಾಯಕರು ಹಾಗೂ ನನ್ನ ಸಂಶೋಧನಾ ಕಾರ್ಯಕ್ಕೆ ಸಹಾಯ ಮಾಡಿದ ವಿಭಾಗದ ಡಾ.ಹೆಚ್.ಎನ್.ಕಾಳಸ್ವಾಮಿ, ಯುಜಿಸಿ-ಪೋಸ್ಟ್ ಡಾಕ್ಟರಲ್ ಫೆಲೋ, ಅವರಿಗೂ ನನ್ನ ಧನ್ಯವಾದಗಳು. ವಿಭಾಗದ ಸಿಬ್ಬಂದಿಯವರಾದ ಮಾತೃ ಸ್ವರೂಪಿಣಿ ಶ್ರೀಮತಿ ಉಷಾಗಣೇಶ್, ಸಹಾಯಕರಾದ ಶಿವರಾಜು ಇವರುಗಳಿಗೂ ಅಭಾರಿಯಾಗಿರುತ್ತೇನೆ.

ನನ್ನ ಸಂಶೋಧನಾ ಕಾರ್ಯವನ್ನು ನಡೆಸಲು ಸಹಾಯ ಮಾಡಿದ ಮೈಸೂರು ವಿಶ್ವವಿದ್ಯಾನಿಲಯದ ಕೇಂದ್ರ ಗ್ರಂಥಾಲಯ, ಮಾನಸಗಂಗೋತ್ರಿ, ಮೈಸೂರು, ಭಾರತೀಯ ಪುರಾತತ್ವ ಇಲಾಖೆಯ ಗ್ರಂಥಾಲಯ, ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ನಿರ್ದೇಶನಾಲಯದ ಗ್ರಂಥಾಲಯ, ಕರ್ನಾಟಕ ಸರ್ಕಾರ ಹಾಗೂ ಮಹಾರಾಜ ಕಾಲೇಜು ಗ್ರಂಥಾಲಯ ಈ ಎಲ್ಲಾ ಗ್ರಂಥಾಲಯಗಳನ್ನು ನನ್ನ ಸಂಶೋಧನೆಗೆ ಅಪಾರವಾಗಿ ಬಳಸಿಕೊಂಡಿದ್ದೇನೆ ಇದಕ್ಕಾಗಿ ನನಗೆ ಅವಕಾಶ ನೀಡಿದ ಎಲ್ಲಾ ಗ್ರಂಥಾಲಯದ ಮುಖ್ಯಸ್ಥರುಗಳಿಗೆ ಅಭಾರಿಯಾಗಿದ್ದೇನೆ.

ನನಗೆ ಜನ್ಮವಿತ್ತ ತಂದೆ ತಾಯಿಯಾಗಿರುವ ಶ್ರೀ ನಂಜುಂಡಯ್ಯ ಮತ್ತು ಶ್ರೀಮತಿ ಲಕ್ಷ್ಮಮ್ಮ ಇವರ ಆಶೀರ್ವಾದದಿಂದ ನನ್ನ ವಿದ್ಯಾಭ್ಯಾಸಕ್ಕೆ ಪ್ರೇರಣೆಯಾಯಿತು. ಇವರಿಗೆ ನಾನು

ಚಿರಋಣಿಯಾಗಿರುತ್ತೇನೆ. ನನ್ನ ಸಂಶೋಧನಾ ಕಾರ್ಯಕ್ಕೆ ಪ್ರೋತ್ಸಾಹಿಸಿದ ನನ್ನ ಚಿಕ್ಕಪ್ಪನವರಾದ ಶ್ರೀ.ಬಿ.ಎನ್.ನಾಗರಾಜು ಮತ್ತು ಚಿಕ್ಕಮ್ಮನವರಾದ ಶ್ರೀಮತಿ ಗೀತಾ. ಎನ್. ಶಿಕ್ಷಕರು ಅವರಿಗೂ ನನ್ನ ಕೃತಜ್ಞತೆಗಳು. ನನ್ನ ಸಹೋದರರಾದ ಶ್ರೀ ರಾಜೇಶ್. ಎನ್. ಶ್ರೀ ರಾಜಶೇಖರ್.ಆರ್, ಯಶವಂತ್, ಬಿ.ಎನ್. ಸಹೋದರಿಯಾದ ಶ್ರೀಮತಿ ಕುಸುಮಾ. ಎನ್, ಅವರಿಗೂ ನನ್ನ ಕೃತಜ್ಞತೆಗಳು.

ನನ್ನ ಸಂಶೋಧನೆಗೆ ಸ್ಪೂರ್ತಿಯನ್ನು ತುಂಬಿದ ಹಾಗೂ ಹಿತೈಷಿಗಳಾದ ಡಾ.ಸಿ.ಈ.ಲೋಕೇಶ್, ಸಹಾಯಕ ಪ್ರಾಧ್ಯಾಪಕರು ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದ ಮುಖ್ಯಸ್ಥರು, ಮಹಾರಾಜ ಕಾಲೇಜು, ಮೈಸೂರು, ಡಾ.ಬಿ.ಸಿ.ಸುರೇಶ, ಸಹಾಯಕ ಪ್ರಾಧ್ಯಾಪಕರು, ಕಬ್ಬಳ್ಳಿ, ಡಾ.ಶೆಲ್ವಪಿಳ್ಳೈ ಐಯ್ಯಂಗಾರ್, ಅವರಿಗೂ ನನ್ನ ಕೃತಜ್ಞತೆಗಳು ಹಾಗೂ ಆತ್ಮೀಯ ಗೆಳೆಯರಾದ ಮಹೇಶ್. ಟಿ.ಎಂ. ಪಿ.ಡಿ.ಓ, ಡಾ.ಬಿ.ರವಿ, ಹೇಮಂತ್‌ಕುಮಾರ್, ಎಸ್. ಬಸವರಾಜು, ಎನ್.ಬಿ, ಚೌಡಯ್ಯ ಅವರಿಗೂ ನನ್ನ ಕೃತಜ್ಞತೆಗಳು.

ಈ ವಿಭಾಗದ ಹಾಗೂ ನನ್ನ ಸಂಶೋಧನಾ ಕಾರ್ಯಕ್ಕೆ ಸಹಕರಿಸಿದ ಆತ್ಮೀಯ ಗೆಳೆಯನಾದ ಡಾ.ಸನತ್ ಕುಮಾರ್ ಹಾಗೂ ವಿಭಾಗದ ಸಂಶೋಧಕ ಮಿತ್ರರಾದ ಚಂದ್ರಯ್ಯ, ಸುರೇಶ, ಶಶಿಧರ,ಸಿ.ಎ, ನಿಂಗನಾಯ್ಕ.ಸಿ. ನೀಲಯ್ಯ, ಪ್ರಕಾಶ್,ಎಂ. ಡಾ.ಸಿದ್ದರಾಜು, ಶಶಿಕುಮಾರ.ಎಸ್, ಡಾ.ಶಿಲ್ಪಶ್ರೀ, ಶ್ವೇತ.ಸಿ, ಉಮಾ, ಡಿ.ಟಿ, ಕೆಂಡಮ್ಮ, ಗೀತಾ, ಇವರಿಗೂ ತುಂಬು ಹೃದಯಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಈ ಮಹಾಪ್ರಬಂಧವನ್ನು ಡಿ.ಟಿ.ಪಿ ಮಾಡಿದ ಶ್ರೀಮತಿ ಕವಿತಾ ಶೀತಲ್ ಹಾಗೂ ಮಹಾಪ್ರಬಂಧವನ್ನು ಅಚ್ಚುಕಟ್ಟಾಗಿ ಬೈಂಡಿಂಗ್ ಮಾಡಿಕೊಟ್ಟಂತಹ ಮಧುರಾ ಎಂಟರ್ ಪ್ರೈಸಸ್‌ನ ಏಕನಾಥ್ ಅವರಿಗೂ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಕ್ಷೇತ್ರಕಾರ್ಯ ಮಾಡುವಾಗ ದೇವಾಲಯಗಳ ಛಾಯಾಚಿತ್ರ ತೆಗೆಯಲು ಅವಕಾಶ ಮಾಡಿಕೊಟ್ಟ ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆ ಸಿಬ್ಬಂದಿ ವರ್ಗದವರಿಗೂ ಹಾಗೂ ತುರುವೇಕೆರೆ ತಾಲೂಕಿನ ದೇವಾಲಯಗಳ ಅರ್ಚಕರುಗಳಗೂ ಮತ್ತು ಗ್ರಾಮಸ್ಥರಿಗೂ ಹಾಗೂ ಇನ್ನುಳಿದ ಎಲ್ಲಾ ನನ್ನ ಬಾಂಧವರು ಹಾಗೂ ಸ್ನೇಹಿತರೆಲ್ಲರಿಗೂ ಧನ್ಯವಾದಗಳನ್ನು ಅರ್ಪಿಸುತ್ತೇನೆ.

**(ಶಿವಾನಂದ.ಎನ್.)**

## ಸಂಕೇತಾಕ್ಷರಗಳು

| | | |
|---|---|---|
| **ಎಂ.ಎ.ಆರ್.** | – | ಮೈಸೂರು ಆರ್ಕಿಯಾಲಾಜಿಕಲ್ ರಿಪೋರ್ಟ್ಸ್ |
| **ಎ.ಕ.ಸಂ.** | – | ಎಪಿಗ್ರಾಫಿಯಾ ಕರ್ನಾಟಿಕ, ಸಂಪುಟಗಳು |
| **ಶಾ.ಸಂ.** | – | ಶಾಸನಸಂಖ್ಯೆ |
| **ಪು.ಸಂ.** | – | ಪುಟಸಂಖ್ಯೆ |
| **ಭೂ.ಪಟ** | – | ಭೂಪಟಗಳು |
| **ತ.ನ** | – | ತಳನಕ್ಷೆಗಳು |
| **ಚಿ.ಸಂ.** | – | ಚಿತ್ರಸಂಖ್ಯೆ |

# ಅಧ್ಯಾಯ–1

## ಪ್ರಸ್ತಾವನೆ

ಇತಿಹಾಸ ಮಾನವ ಜ್ಞಾನ ಮತ್ತು ತಿಳುವಳಿಕೆಯ ಒಂದು ಪ್ರಮುಖ ಅಂಗವಾಗಿದೆ. ಇತಿಹಾಸದ ಅಧ್ಯಯನವು ಬೋಧನೀಯವೂ ಕುತೂಹಲಕಾರಿಯೂ ಆಗಿದೆ. ಇತಿಹಾಸವು ಕೇವಲ ಪಾಂಡಿತ್ಯಕ್ಕೆ ಸೀಮಿತವಾದ ವಿಷಯವಾಗಿರದೇ ನಮ್ಮ ಚಿಂತನಾ ಮಾರ್ಗಗಳಲ್ಲಿ ಹಾಸು ಹೊಕ್ಕಾಗಿದೆ. ಹೀಗಾಗಿ ಬುದ್ದಿಗ್ರಾಹ್ಯ ಶಿಸ್ತುಗಳಲ್ಲಿ ಇತಿಹಾಸ ಅತಿ ಪರಿಶ್ರಮ ನೀಡುವ ಶಿಸ್ತು ಗತಿಸಿದ್ದು ಅಥವಾ ನಡೆದದ್ದು ಅಥವಾ ಸಂದದ್ದು ಎಂದು ತಿಳಿಸಲು ನಾವು ಉಪಯೋಗಿಸುವ ಧಾತುವಿನ ರೂಪದಲ್ಲಿಯೂ ಸಹ ಸ್ವಲ್ಪ ಇತಿಹಾಸ ಅಡಗಿದೆ. ನಮ್ಮ ಪ್ರತಿಯೊಂದು ನೆನಪು ಮತ್ತು ಕಾರ್ಯಗಳು ನಮ್ಮ ಮುಂದಿನ ಪೀಳಿಗೆಗೆ ಉಳಿಸಲು ದಿನಚರಿಗಳನ್ನು ಬರೆದಿಟ್ಟಿದ್ದಾರೆ. ಪ್ರಸ್ತುತ ಬರೆಯುತ್ತಿರುವ ಹಲವಾರು ಇತಿಹಾಸಕಾರರನ್ನು ಕಾಣಬಹುದು.

ಈ ರೀತಿಯ ಹವ್ಯಾಸಗಳು ಮುಂದಿನ ಜನಾಂಗಕ್ಕೆ ಇತಿಹಾಸವಾಗಿ ಪರಿವರ್ತನೆ ಗೊಳ್ಳುತ್ತದೆ. ಕೆಲವು ದಾಖಲೆಗಳು ಅವರ ಸಾಧನೆಗಳು ಕೇವಲ ಸಮರ್ಥನೆಗಳಾಗಿರದೆ ಅವರ ಅನುಭವಗಳ ಭಂಡಾರವೂ ಹೌದು. ಈ ದಾಖಲೆಗಳಲ್ಲಿ ವರ್ಣಚಿತ್ರಗಳು, ಶಿಲ್ಪಗಳು ಮುಂತಾದ ರೂಪಗಳಲ್ಲಿ ತಿಳಿಯಪಡಿಸುವುದು ಇತಿಹಾಸದ ಭಾಗಗಳಲ್ಲಿ ಒಂದಾಗಿದೆ.

ಮಾನವನ ಚಿಂತನಾ ವಿಚಾರಗಳಲ್ಲಿ ಇತಿಹಾಸವಿದೆ. ರಾಜರು ಮತ್ತು ಕದನಗಳು, ಆರ್ಥಿಕ ಪ್ರವೃತ್ತಿಗಳು, ಉಡಿಗೆ–ತೊಡಿಗೆಗಳು ಮತ್ತು ಪ್ರೇಮದ ನಡವಳಿಕೆಗಳು, ರೈಲು ದಾರಿ ನಿರ್ಮಾಣ ಮತ್ತು ಚದುರಂಗದಾಟ, ಸೇನಾ ತಂತ್ರ ಮತ್ತು ಪುರಾತನ ಆಭರಣಗಳು ಹೀಗೆ ಪ್ರತಿಯೊಂದು ವಿಷಯವೂ ಮಾನವ ಇತಿಹಾಸದ ಒಂದು ಭಾಗವಾಗಿದೆ. ಇತಿಹಾಸವು ಶಿಸ್ತಿನಿಂದ ಕ್ರಮವಾಗಿ ನಡೆಸುವ ಒಂದು ಸಂಶೋಧನೆಯಾಗಿದೆ. ವಿಭಿನ್ನ ದೃಷ್ಟಿಗಳಿಂದ ಅಧಿಕವಾಗಿ ರಚಿಸಲ್ಪಡುತ್ತಿರುವ ಇತಿಹಾಸ ಅದರ ಜಯಪ್ರಿಯತೆಗೆ ಸಾಕ್ಷಿಯಾಗಿದೆ.

"ಗತಕಾಲದ ಮಾನವನ ಜೀವನದ ಕಥೆಯೇ ಇತಿಹಾಸದ ವಸ್ತು"ವಾಗಿದ್ದು ಅಧ್ಯಯನದ ಒಂದು ವಿಷಯವಾಗಿ ಇತಿಹಾಸವು ಹೆಚ್ಚು ಕಡಿಮೆ ಪೂರ್ಣವಾಗಿ ಮೂಲಾಧಾರಗಳ ಅಧೀನದಲ್ಲಿದೆ. ಪ್ರತಿಯೊಬ್ಬ ವ್ಯಕ್ತಿಯು ಜ್ಞಾನ ಅಥವಾ ತಿಳುವಳಿಕೆಯನ್ನು ಇತಿಹಾಸದ ಮೂಲಾಧಾರಗಳಿಂದ ಪಡೆಯುತ್ತೇವೆ. ಮಾನವನ ಗತಕಾಲದ ಇತಿಹಾಸವನ್ನು ಆತನು ನಮಗೆ ಉಳಿಸಿರುವ ಕುರುಹುಗಳ ಆಧಾರದ ಮೇಲೆ ಪುನರ್ರಚಿಸುತ್ತೇವೆ. ಇತಿಹಾಸ ರಚನೆಯಲ್ಲಿ ಸಂಪ್ರದಾಯಗಳು, ದಂತಕಥೆಗಳು, ನಾಣ್ಯಗಳು, ಶಾಸನಗಳು, ಸ್ಮಾರಕಗಳು

ಮೊದಲಾದ ವಿವಿಧ ರೀತಿಯ ಆಧಾರಗಳಿಂದ ಇತಿಹಾಸ ರಚಿಸಲಾಗುತ್ತದೆ. ಇತಿಹಾಸವನ್ನು ಶಿಸ್ತಿನಿಂದ ಮತ್ತು ಕ್ರಮಬದ್ಧವಾಗಿ ರಚಿಸಲು ಆಧಾರಗಳ ಅವಶ್ಯಕತೆ ಪ್ರಮುಖವಾಗಿದೆ, ಈ ಆಧಾರಗಳನ್ನು ಪ್ರಮುಖವಾಗಿ ಎರಡು ರೀತಿಯಾಗಿ ವಿಭಾಗಿಸಲಾಗುತ್ತದೆ. ಸಾಹಿತ್ಯಾಧಾರಗಳು, ಪುರಾತತ್ತ್ವ ಆಧಾರಗಳು. ಈ ಮೇಲಿನ ಆಧಾರಗಳು ಇತಿಹಾಸದ ಎರಡು ಕಣ್ಣುಗಳಿದ್ದಂತೆ ಎಂದು ಹೇಳಲಾಗುತ್ತದೆ. ಕೆಲವರು ಇತಿಹಾಸವನ್ನು "ತುಂಡು ಪುರಾವೆಗಳ ಆಧಾರದ ಮೇಲೆ ಗತಕಾಲದ ಮಹತ್ವದ ವಿಷಯವನ್ನು, ವಸ್ತುವನ್ನು ಶೋಧಿಸುವ ಪ್ರಯತ್ನ" ಎಂದು ಅರ್ಥೈಸಿದ್ದಾರೆ.

ಇತಿಹಾಸದ ರಚನೆಗೆ ಪುರಾತತ್ವ ಆಧಾರ ಹೆಚ್ಚು ಉಪಯುಕ್ತವಾಗಿದೆ. ಪುರಾತತ್ತ್ವ ಆಧಾರದಲ್ಲಿ ಕಂಡು ಬರುವ ಶಾಸನಗಳು, ನಾಣ್ಯಗಳು, ಸಾರ್ಮಕಗಳಿಂದ ಇತಿಹಾಸ ರಚನೆಗೆ ಹೆಚ್ಚು ಖಚಿತವಾದ ಮಾಹಿತಿ ದೊರೆಯುತ್ತದೆ. ಹಾಗೆಯೇ ಒಂದು ಸ್ಥಳದ ಇತಿಹಾಸದ್ಗ ರಚನೆಗೆ ಪ್ರಮುಖವಾಗಿ ಸಾಹಿತ್ಯಾಧಾರ ಹಾಗೂ ಪುರಾತತ್ತ್ವ ಆಧಾರಗಳ ಅವಶ್ಯಕತೆಯಿದೆ. ಇದರ ಜೊತೆಯಲ್ಲಿ ಆ ಗ್ರಾಮದ ಸ್ಥಳ ಪುರಾಣಗಳು, ರಾಜರ ಆಳ್ವಿಕೆಯ ಕುರುಹುಗಳು, ಶಾಸನಗಳು, ಸಾರ್ಮಕಗಳಿಂದ ಆ ಗ್ರಾಮದ ಖಚಿತವಾದ ಇತಿಹಾಸ ರಚನೆಗೆ ಸಹಾಯಕವಾಗುತ್ತದೆ.

ಧಾರ್ಮಿಕ ಶ್ರದ್ಧೆಯು ಜೀವನದ ಒಂದು ಪ್ರಮುಖ ಅಂಶವೆನಿಸಿರುವ ಭಾರತದಲ್ಲಿ ಪ್ರಾಚೀನ ಕಾಲದಿಂದಲೂ ದೇವಾಲಯಗಳನ್ನು ನಿರ್ಮಿಸಿರುವುದನ್ನು ಕಾಣುತ್ತೇವೆ. ವಾಸ್ತು ಎಂದರೆ ವಸ್ತುಗಳಿಂದ ನಿರ್ಮಿತವಾದುದು ಎಂಬ ಅರ್ಥವನ್ನು ಕೊಡುತ್ತದೆ. ಶಿಲ್ಪವೆನ್ನುವುದು 64 ಕಲೆಗಳಿಗೆಲ್ಲ ಅನ್ವಯವಾಗುವ ಪದವೆನ್ನಬಹುದು.[1] ಕೇವಲ ಕಟ್ಟಡದ ನಿರ್ಮಾಣಗಳಿಗೆ ಸೀಮಿತವಾಗಿರದೆ ಪಟ್ಟಣ, ನಿರ್ಮಾಣದ ಯೋಜನೆ, ಉದ್ಯಾನವನಗಳು, ರಸ್ತೆಗಳು, ಪೀಠೋಪಕರಣಗಳ ನಿರ್ಮಾಣವು ಸಹ ಈ ಪದದ ಅರ್ಥವ್ಯಾಪ್ತಿಯಲ್ಲಿ ಬರುತ್ತದೆ.[2] ಈ ಶಾಸ್ತ್ರಕ್ಕೆ ಪ್ರಮಾಣಭೂತವು ಅಧಿಕೃತವೂ ಆದ ಮಾನಸಾರ ಎಂಬ ಗ್ರಂಥ ಈ ಎಲ್ಲಾ ಅಂಶಗಳನ್ನು ತಿಳಿಸುತ್ತದೆ. ಈ ಪದದ ವ್ಯಾಪ್ತಿಗೆ ಪರಿಮಿತಿಗೊಂಡು ವಾಸ್ತುಶಿಲ್ಪ ಎಂದರೆ ಕಟ್ಟಡಗಳ ನಿರ್ಮಾಣ ಮತ್ತು ಶಿಲ್ಪ ಎಂದರೆ ಮೂರ್ತಿಗಳ ನಿರ್ಮಾಣ ಎಂಬ ಅರ್ಥ ವ್ಯಾಪಕವಾಗಿದೆ.[3] ಈ ಹಿನ್ನೆಲೆಯಲ್ಲಿ ಕರ್ನಾಟಕದ ಇತಿಹಾಸದಲ್ಲಿ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ ಒಂದು ಪ್ರಮುಖವಾದ ಚರ್ಚಾ ವಿಷಯವಾಗಿದೆ. ಇಂತಹ ವಾಸ್ತುಶಿಲ್ಪ ಕಲೆ ಅಧ್ಯಯನಕ್ಕೆ ದೊರೆಯುವ ಮೂಲ ಸಾಮಗ್ರಿಗಳೆಂದರೆ ಪ್ರಾಚೀನ ದೇವಾಲಯಗಳು. ಕರ್ನಾಟಕದ ಬಹುತೇಕ ರಾಜಮನೆತನಗಳು ಎಲ್ಲಾ ರಂಗಗಳಲ್ಲಿಯೂ ತಮ್ಮದೇ ಆದ ವಿಶಿಷ್ಟ ಕೊಡುಗೆಗಳನ್ನು ನೀಡಿವೆ. ಅವುಗಳಲ್ಲಿ ಸಾಂಸ್ಕೃತಿಕವಾಗಿ ದೇವಾಲಯಗಳ ನಿರ್ಮಾಣ ಕಾರ್ಯವು ಒಂದಾಗಿದ್ದು, ಪ್ರಾಚೀನ

ಸಂಸ್ಕೃತಿಯನ್ನು ತಿಳಿಸುವ ದೇವಾಲಯಗಳು ಪುರಾತತ್ವ ಶಾಸ್ತ್ರಕ್ಕೆ ಮೂಲ ಆಕರಗಳಾಗಿವೆ. ಇದರಿಂದ ನಮ್ಮ ಪ್ರಾಚೀನ ಸಂಸ್ಕೃತಿಯು ಪಳಯುಳಿಕೆಗಳಿಂದ ವೈವಿಧ್ಯತೆಯ ಆಯಾಮಗಳನ್ನು ತಿಳಿಸಲು ಸಾಧ್ಯವಾಗುತ್ತದೆ. ಈ ಹಿನ್ನೆಲೆಯಲ್ಲಿ ವಾಸ್ತುಶಿಲ್ಪದ ದೃಷ್ಟಿಯಿಂದ ನೋಡಿದಾಗ ತುರುವೇಕೆರೆ ತಾಲೂಕಿನಲ್ಲಿ ಗಂಗ, ಹೊಯ್ಸಳ, ವಿಜಯನಗರದ ಅರಸರ ಕಾಲದ ದೇವಾಲಯಗಳು ಕಂಡುಬರುತ್ತದೆ.

ತುರುವೇಕೆರೆ ತಾಲೂಕಿನಲ್ಲಿ ನಾನು ಸಂಶೋಧನಾ ಕ್ಷೇತ್ರಕಾರ್ಯ ಕೈಗೊಂಡು ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪಕ್ಕೆ ಸಂಬಂಧಿಸಿದಂತೆ ಸ್ಥಳ ಪುರಾಣ, ದೇವಾಲಯಗಳು ಇರುವ ಸ್ಥಳ, ದೇವಾಲಯಗಳ ಇತಿಹಾಸ, ವಾಸ್ತುವಿನ ಮುಖ್ಯ ಲಕ್ಷಣಗಳು, ದೇವಾಲಯದ ನಿರ್ಮಾಣಕಾರ್ಯ, ನಿರ್ಮಾತೃ, ಪೋಷಕರು, ವಾಸ್ತು ಮತ್ತು ಶಿಲ್ಪದ ಶ್ರೇಷ್ಠತೆ ಹಾಗೂ ವೈವಿಧ್ಯತೆ ಮುಂತಾದ ವಿಷಯಗಳ ಬಗ್ಗೆ ಚರ್ಚಿಸಿ ವಿಮರ್ಶಿಸುವುದಾಗಿದೆ.

**ಭೌಗೋಳಿಕ ಹಿನ್ನೆಲೆ**

ಯಾವುದೇ ಒಂದು ದೇಶದ ಅಥವಾ ಪ್ರದೇಶದ ಸಾಂಸ್ಕೃತಿಕ ಮತ್ತು ರಾಜಕೀಯ ಹಾಗೂ ಪೂರ್ವಇತಿಹಾಸವನ್ನು ಅರಿಯಲು ಆ ಪ್ರದೇಶದ ಭೌಗೋಳಿಕ ಹಿನ್ನೆಲೆಯನ್ನು ಅರಿಯುವುದು ಬಹು ಮುಖ್ಯವಾದ ಅಂಶವಾಗಿದೆ. ಪ್ರಾಚೀನ ಮಾನವನ ಜೀವನ, ಅವನ ವಾಸಸ್ಥಾನ, ಆಹಾರ, ಜೀವನ ಕ್ರಮ, ರಾಜವಂಶಗಳ ಆಡಳಿತ, ಧಾರ್ಮಿಕ ಪರಿಸ್ಥಿತಿ, ಆರ್ಥಿಕ ಪರಿಸ್ಥಿತಿಯ ಮೇಲೆ ಭೌಗೋಳಿಕ ಅಂಶಗಳು ಹಿಂದಿನಿಂದಲೂ ತಮ್ಮ ಪ್ರಭಾವವನ್ನು ಬೀರುತ್ತಾ ಬಂದಿವೆ.

ಈ ಹಿನ್ನೆಲೆಯಲ್ಲಿ ಆ ಪ್ರದೇಶದ ವಾಯುಗುಣ, ಗಾಳಿ, ಮಳೆ, ನದಿ ತೀರಗಳು, ಸಮುದ್ರ ಮಟ್ಟ, ಶಿಲೆಗಳು, ಖನಿಜಸಂಪತ್ತು, ಅರಣ್ಯ ಸಂಪತ್ತು, ಫಲವತ್ತಾದ ಭೂಮಿ ಮುಂತಾದ ಅಂಶಗಳು ಆಯಾ ಪ್ರದೇಶದ ಇತಿಹಾಸವನ್ನು ನಿರ್ಧರಿಸುವ ಪ್ರಮುಖ ಅಂಶಗಳಾಗಿವೆ. ಕರ್ನಾಟಕದ ೩೦ ಜಿಲ್ಲೆಗಳಲ್ಲಿ ತುಮಕೂರು ಜಿಲ್ಲೆಯು ಒಂದಾಗಿದೆ. "ಕಲ್ಪವೃಕ್ಷ ವೃಂದಾವನಂಗಳಲಿ ಹೇಗೋ ಹೊಕ್ಕು ಬಂದೆ" ಎಂದು ಕವಿ ಬೇಂದ್ರೆ ತುಮಕೂರು ಕಲ್ಪವೃಕ್ಷದ ತವರೂರು ಎಂದು ಬಣ್ಣಿಸಿದ್ದಾರೆ.[4]

ತುಮಕೂರು ಜಿಲ್ಲೆಯ ತಾಲೂಕು ಕೇಂದ್ರಗಳಲ್ಲಿ ತುರುವೇಕೆರೆಯೂ ಸಹ ಒಂದು. ತುರುವೇಕೆರೆ ಎನ್ನುವ ಊರಿನ ಸ್ಥಳನಾಮದಲ್ಲಿ 'ತುರುವೇ' ಮತ್ತು 'ಕೆರೆ' ಎನ್ನುವ ಎರಡು ಘಟಕಗಳಿವೆ. ಇಲ್ಲಿ 'ತುರುವೇ' ಎಂಬುದರಲ್ಲಿ ತುರು ಎಂಬುದರ ಅರ್ಥ ಗೋವು (ಹಸು)

ಆಗಿದೆ.ಇನ್ನು 'ಕೆರೆ' ಎಂದರೆ ನೀರಿನ ಆಶ್ರಯ ತಾಣ ನಿರ್ಮಾಣವಾಗಿದೆ. ಗೋವುಗಳಿಗೂ ಮತ್ತು ಕೆರೆಗಳಿಗೂ ಅವಿನಾಭಾವ ಸಂಬಂಧವಿರುತ್ತದೆ. ಆದ್ದರಿಂದ ತುರುವಿನ ಕೆರೆಯೇ ತುರುವೇಕೆರೆ ಅಗಿದೆ.[5]

ತುರುವೇಕೆರೆಯ ಹೆಸರೇ ಸೂಚಿಸುವಂತೆ ಇದು ಕೆರೆನೀರಾವರಿ ಪ್ರದೇಶವಾಗಿದ್ದು ಕೆರೆಕಟ್ಟೆಗಳು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತವೆ. ತುರುವೇಕೆರೆಯು ನಾಲ್ಕು ಹೋಬಳಿಗಳನ್ನು ಒಳಗೊಂಡಿದೆ. ಅವುಗಳೆಂದರೆ ತುರುವೇಕೆರೆ, ದಂಡಿನಶಿವರ, ಮಾಯಸಂದ್ರ, ದಬ್ಬೇಘಟ್ಟ. ಇದು ಒಟ್ಟು 770.6 ಚ.ಕಿ.ಮೀ. ಹೊಂದಿದೆ. ತುರುವೇಕೆರೆಯು ಸಮುದ್ರಮಟ್ಟದಿಂದ 2,643 ಅಡಿ ಎತ್ತರವಿದೆ.[6]

ತುರುವೇಕೆರೆ ತಾಲೂಕು ಪ್ರದೇಶದಲ್ಲಿ 8.5 ಕಿ.ಮೀ. ದೂರ ಶಿಂಷಾ ನದಿಯು ಹಾದು ಹೋಗುತ್ತದೆ. ಈ ಶಿಂಷಾ ನದಿಯು ದೇವರಾಯನ ದುರ್ಗದ ದಕ್ಷಿಣದಲ್ಲಿ ಹುಟ್ಟಿ ಗುಬ್ಬಿ ತಾಲೂಕಿನ ನೈರುತ್ಯ ಭಾಗದಲ್ಲಿ ಹರಿದು ಕಡಬದಲ್ಲಿ ದೊಡ್ಡ ಕೆರೆಯನ್ನು ಉಂಟುಮಾಡಿದೆ. ಮುಂದೆ ಹರಿದು ಇದು ಗುಬ್ಬಿ ತಾಲೂಕಿನಲ್ಲಿ ಕಲ್ಲೂರು ಜಲಪಾತ ನಿರ್ಮಿಸಿ ತುರುವೇಕೆರೆಯ ಕೆರೆಯನ್ನು ಸೇರುತ್ತದೆ. ತುರುವೇಕೆರೆ ಪ್ರದೇಶದಲ್ಲಿ ಗ್ರಾನೈಟ್ ಶಿಲಾಪದರಗಳು ಕಂಡುಬರುತ್ತವೆ. ಚಿಕ್ಕನಾಯಕನಹಳ್ಳಿ ವಾಯುವ್ಯ ಭಾಗದಿಂದ ತುರುವೇಕೆರೆಯ ಬಾಣಸಂದ್ರದವರೆಗೂ ಈ ಶಿಲಾಪದರವು ಹರಡಿದೆ.[7] ಕಟ್ಟಡ ಮತ್ತು ಅದರ ಅಲಂಕಾರಿಕ ಶಿಲಾಪದರಗಳು ತುರುವೇಕೆರೆಯ ಶಿಲಾಪದರಗಳಲ್ಲಿ ದೊರಕುತ್ತದೆ. ಈ ಶಿಲಾಪದರವು ಕೆಂಪು ಮತ್ತು ಬೂದುಬಣ್ಣದ ಶಿಲಾಪದರಗಳಾಗಿದ್ದು, ಭೂಮಿಯ ತಳದಲ್ಲಿ ಜೋಡಿಸಲ್ಪಟ್ಟ ಶಿಲಾಪದರಗಳಾಗಿದ್ದು ಇವುಗಳು ಈ ಪ್ರದೇಶದಲ್ಲಿ ದೊರೆಯುತ್ತವೆ. ಇಂತಹ ಶಿಲೆಯನ್ನು ಮೈಸೂರು ಅರಮನೆಯ ನಿರ್ಮಾಣದಲ್ಲಿ ಬಳಸಲಾಗಿದೆ.[8] ಸಾಬೂನುಗಲ್ಲು ತುರುವೇಕೆರೆಯ ಕಡೇಹಳ್ಳಿ ಗುಡ್ಡದಲ್ಲಿ ದೊರೆಯುತ್ತದೆ. ಇದೇ ಕಲ್ಲಿನಿಂದ ತುರುವೇಕೆರೆ ಗಂಗಾಧರೇಶ್ವರ ದೇವಾಲಯದ ನಂದಿಯನ್ನು ನಿರ್ಮಿಸಲಾಗಿದೆ.

**ಮಳೆ:–** ತುರುವೇಕೆರೆಯಲ್ಲಿ ವಾರ್ಷಿಕವಾಗಿ ಸರಾಸರಿ 25 ಸೆಂ.ಮೀನಷ್ಟು ಮಳೆಯಾಗುತ್ತದೆ.[9] ಏಪ್ರಿಲ್ ಮತ್ತು ಮೇ ತಿಂಗಳಿನಲ್ಲಿ ಹೆಚ್ಚು ಮಳೆಯಾಗುತ್ತದೆ. ಕೆರೆ ಕಟ್ಟೆಗಳು ಈ ಪ್ರದೇಶದಲ್ಲಿ ಹೆಚ್ಚು ನಿರ್ಮಾಣವಾಗಿದ್ದು ಕೃಷಿಗೆ ಎಲ್ಲಾ ಕಾಲದಲ್ಲೂ ನೀರನ್ನು ಒದಗಿಸುತ್ತವೆ.

**ಸಸ್ಯವರ್ಗ:–** ಹುಣಸೆ, ತೇಗ, ಜಾಗೆ, ಕರಾಚಿ, ಕಾರೆ, ಕಗ್ಗಲಿ, ಧೂಪ, ಕಕ್ಕೆ, ಸುಜ್ಜಲು ಮುಂತಾದ ಮರಗಳು ಕಂಡುಬರುತ್ತವೆ. ಈ ಭಾಗದಲ್ಲಿ ತೋಟಗಾರಿಕೆ ಬೆಳೆಗಳು ಹಾಗೂ ತೆಂಗು ಬೆಳೆಯು

ಪ್ರಮುಖ ಬೆಳೆಯಾಗಿ ವರ್ಷಪೂರ್ತಿ ಹಚ್ಚಹಸಿರಿನಿಂದ ಕಂಗೊಳಸುತ್ತವೆ. ಅಲ್ಲಲ್ಲಿ ಸಣ್ಣ ಸಣ್ಣ ಬೆಟ್ಟಗುಡ್ಡಗಳು ಕಂಡುಬಂದಿದ್ದು ಕುರುಚಲು ಸಸ್ಯವರ್ಗ ಕಂಡುಬರುತ್ತವೆ.

**ತುರುವೇಕೆರೆಯ ಐತಿಹ್ಯ**

ತುಮಕೂರು ಜಿಲ್ಲೆಯ ತುರುವೇಕೆರೆ ತಾಲೂಕು ತನ್ನದೇ ಆದ ಐತಿಹಾಸಿಕ ಮಹತ್ವವನ್ನು ಹೊಂದಿದೆ. ಈ ಪ್ರದೇಶದ ಜನಮಾನಸದಲ್ಲಿ ತುರುವೇಕೆರೆಗೆ ಸಂಬಂಧಿಸಿದಂತೆ ಅನೇಕ ನಂಬಿಕೆಗಳು ಹಾಗೂ ಪುರಾಣ ಕಥೆಗಳು ತಿಳಿದುಬರುತ್ತದೆ. ಬೇಟೆರಾಯಸ್ವಾಮಿ ದೇವಾಲಯದ ಸ್ಥಾನಿಕರ ವಂಶದವರ ವಶದಲ್ಲಿರುವ 'ರಾಯರೇಖೆ' ಸುರುಳಿರೇಖೆಯಲ್ಲಿ ಶಾಲಿವಾಹನನು ಹುಟ್ಟಿ ಕಲಿಯುಗದ 3170 ವರ್ಷಗಳಲ್ಲಿ ಉಜ್ಜಯನಿಯಲ್ಲಿ ಸಿಂಹಾಸನರೂಢನಾಗಿ ತನ್ನ ಆಳ್ವಿಕೆಯನ್ನು ಆರಂಭಿಸಿದನೆಂದು ಉಲ್ಲೇಖವಿದೆ.[10]

ತುರುವೇಕೆರೆಯ ಬೇಟೆರಾಯಸ್ವಾಮಿ ದೇವಾಲಯದ ಸ್ಥಾನಿಕರು ಅಥವಾ ವಂಶಜರು ಸ್ಮಾರ್ಥ ಬ್ರಾಹಣರಾಗಿದ್ದು, ಹಣೆಯಲ್ಲಿ ನಾಮವನ್ನು ಧರಿಸುತ್ತಾರೆ. ಇವರು ಶ್ರೀನಿವಾಸನ ಆರಾಧಕರಾಗಿದ್ದು ವೈಷ್ಣವ ಧರ್ಮ ಅನುಸರಿಸುತ್ತಾರೆ. ಪುರಾಣದ ಪ್ರಕಾರ ತುರುವೇಕೆರೆಯಲ್ಲಿ ಪ್ರಾಚೀನ ಕಾಲದಲ್ಲಿ ಬೇಟೆರಂಗಪ್ಪ ಎನ್ನುವವನು ಪಾಳೆಯಗಾರನಾಗಿದ್ದು ಇವರ ವಂಶಜರು ಬೇಟೆರಾಯಸ್ವಾಮಿ ದೇವಾಲಯದ ಮೇಲ್ವಿಚಾರಕರಾಗಿದ್ದರು. ಬೇಟೆರಾಯಸ್ವಾಮಿ ದೇವಾಲಯಕ್ಕೆ ಬೇಟೆರಾಯ ಎಂದು ಹೆಸರು ಬರಲು ಕಾರಣ ಈ ಬೇಟೆರಂಗಪ್ಪನೇ. ಪುರಾಣದ ಪ್ರಕಾರ ದ್ವಾಪರಯುಗದಲ್ಲಿ ದೇವಕುಲದವರಿಗೆ ರಾಕ್ಷಸರು ಚಿತ್ರಹಿಂಸೆಯನ್ನು ನೀಡುತ್ತಿದ್ದು, ಇವರ ವಿನಂತಿಯ ಮೇರೆಗೆ ಬೇಟೆರಂಗಪ್ಪ ಕಾಡುಪ್ರಾಣಿಯ ವೇಷದಲ್ಲಿ ರಾಕ್ಷಸರನ್ನು ಸಂಹರಿಸಿದನು.[11] ರಾಯರೇಖೆಯ ಪ್ರಕಾರ ದ್ವಾಪರಯುಗದಲ್ಲಿ ಅನುಭವ ಜ್ಞಾನವುಳ್ಳ ಕ್ರಿಕಂಡು ಎಂಬ ಯತಿಯು ಬದರಿಕ್ಷೇತ್ರದಲ್ಲಿ ವಾಸವಾಗಿದ್ದು, ದಕ್ಷಿಣ ಭಾರತದ ಪುಣ್ಯಕ್ಷೇತ್ರಗಳಿಗೆ ಭೇಟಿ ನೀಡಿದನು. ಅವನು ತುರುವೇಕೆರೆಗೆ ಭೇಟಿ ನೀಡಿ ಅಸಾಧಾರಣವಾದ ದೇವಾರ್ಪಿತ ಪರಿಶುದ್ಧ ಐದು ಲಿಂಗಗಳನ್ನು ಸ್ಥಾಪಿಸಿದನು.ಅವುಗಳೆಂದರೆ ತುರುವೇಕೆರೆ ತಾಲೂಕಿನ ನಾಗನದಿ ದಂಡೆಯ ಪೂರ್ವಕ್ಕೆ ಶಂಭುಲಿಂಗೇಶ್ವರ ದೇವಾಲಯ, ಚಿಕ್ಕತುರುವೇಕೆರೆಯ ಪಶ್ಚಿಮಕ್ಕೆ ಕಲ್ಲೇಶ್ವರ ದೇವಾಲಯ, ಆನೆಕೆರೆಯ ವಾಯುವ್ಯ ದಿಕ್ಕಿಗೆ ಶಂಕರೇಶ್ವರ, ತೋರೆಮಾವಿನಹಳ್ಳಿಯ ಉತ್ತರ ಭಾಗದಲ್ಲಿ ಮಲ್ಲೇಶ್ವರ ಒಟ್ಟು 5 ಲಿಂಗಗಳನ್ನು ಸ್ಥಾಪಿಸಿದನು ನಂತರ ತುರುವೇಕೆರೆಯ ಪಕ್ಕದಲ್ಲಿನ ನಾಗನದಿಯ ದಂಡೆಯ ಮೇಲೆ ವಾಸಿಸುತ್ತಾ ತಪಸ್ಸನ್ನು ಗೈದನು. ಇವರ ತಪಸ್ಸನ್ನು ಮೆಚ್ಚಿ ದೇವರು ಪ್ರತ್ಯಕ್ಷನಾಗಿ ವರ ಪಡೆದು ಈ ಮುನಿಯು ಬೇಟೆರಾಯ ಎಂಬ ಹೆಸರಿನಲ್ಲಿ ನೆಲೆಸಿದನು. ನಂತರ ಪಕ್ಷಿವಾಹನ ಕೊಳದಲ್ಲಿ ಮಾಯವಾದನು. ನಂತರ ಕಲಿಯುಗದಲ್ಲಿ

ಅವತಾರವೆತ್ತಿದ ಪಕ್ಷಿವಾಹನ ಕೊಳ ಎಂದು ಹೆಸರು ಬರಲು ಕಾರಣವೆಂದರೆ ಬ್ರಹ್ಮನು ಹಂಸರೂಪ ತಾಳಿ ಈ ಕೊಳದಲ್ಲಿ ಪ್ರತಿನಿತ್ಯ ಸ್ನಾನಗೈಯುತ್ತಿದ್ದನು. ಕಲಿಯುಗದಲ್ಲಿ ರಾಜಪರೀಕ್ಷಿತ ಅವನ ನಂತರ ಜನಮೇಜಯ, ಮುಕುಟವರ್ಧನ, ರಾಜೇಂದ್ರ, ಕ್ಷೇಮಕ, ಸರಂಗ ಇನ್ನಿತರೆ ರಾಜರುಗಳು ಹಸ್ತಿನಾವತಿಯಲ್ಲಿ ಆಳುತ್ತಿದ್ದರು. ಯುಧಿಷ್ಠಿರ ಯುಗದ 3034 ವರ್ಷಗಳು ಕಳೆದ ನಂತರ ವಿಕ್ರಮಾದಿತ್ಯನು ಉಜ್ಜಯನಿಯಲ್ಲಿ ಆಳ್ವಿಕೆಯನ್ನು ಪ್ರಾರಂಭಿಸಿದನು. ಅವನ ಶಕದ 145 ವರ್ಷಗಳ ನಂತರ ಮತ್ತು ಕಲಿಯುಗದ 3179ನೇ ವರ್ಷದಲ್ಲಿ ಶಾಲಿವಾಹನ ಆಳ್ವಿಕೆಯನ್ನು ಪ್ರಾರಂಭಿಸಿದನು.

ಈ ಶಾಲಿವಾಹನನು ತುರುವೇಕೆರೆಯ ತಂಡಗ ಗ್ರಾಮದಲ್ಲಿ ಜನಿಸಿದನೆಂಬ ಐತಿಹ್ಯವಿದೆ. ಪ್ರಾಚೀನ ಕಾಲದಲ್ಲಿ ತಂಡಗ ಗ್ರಾಮವನ್ನು 'ಶಂಕರ ನಾರಾಯಣ ಶ್ರೀ ವಿಜಯಪುರ'ಎಂದು ಕರೆಯಲಾಗುತ್ತಿತ್ತು.[12] ಇದೊಂದು ಅಗ್ರಹಾರವಾಗಿದ್ದು ಇಲ್ಲಿ ಪ್ರಾಚೀನ ಹೊಯ್ಸಳ ದೇವಾಲಯವಾದ ಚನ್ನಕೇಶವ ದೇವಾಲಯವಿದೆ. ಈ ಶಾಲಿವಾಹನನು ತಂಡಗದಲ್ಲಿ ಒಬ್ಬ ಬ್ರಾಹ್ಮಣನಿಂದ ಕುಂಬಾರ ಸ್ತ್ರೀಯ ಹೊಟ್ಟೆಯಲ್ಲಿ ಜನಿಸಿದನೆಂಬ ಐತಿಹ್ಯವಿದೆ. ಶಾಲಿವಾಹನನು ತನ್ನ 12ನೇ ವಯಸ್ಸಿನಲ್ಲಿಯೇ ವಿಕ್ರಮಾದಿತ್ಯನ ಸೈನ್ಯವನ್ನು ಸೋಲಿಸಿದನು ಮತ್ತು ಗೋದಾವರಿಯ ತನಕವೂ ಆತನನ್ನು ಬೆನ್ನಟ್ಟಿ ಯುದ್ಧದಲ್ಲಿ ಕೊಂದ ನಂತರ ಉಜ್ಜಯನಿಯನ್ನು ವಶಪಡಿಸಿಕೊಂಡನು. ನಂತರ ಚೋಳ ರಾಜನೊಬ್ಬ ಬ್ರಾಹ್ಮಣನೊಬ್ಬನ ರಸಸಿದ್ಧಿ ಸ್ಪರ್ಶಮಣಿಯನ್ನು ಬಲತ್ಕಾರವಾಗಿ ಕಿತ್ತುಕೊಂಡನು. ಇದರಿಂದ ಬ್ರಾಹ್ಮಣ ಮನನೊಂದು ಮರಣ ಹೊಂದಿದನು. ತನ್ನ ತಪ್ಪಿನ ಅರಿವಾಗಿ ಚೋಳರಾಜ ತನ್ನ ಪಾಪ ವಿಮುಕ್ತಿಗಾಗಿ ಪವಿತ್ರ ದೇವಾಲಯಗಳನ್ನು ಅನೇಕ ಸ್ಥಳಗಳಲ್ಲಿ ನಿರ್ಮಿಸಿದನೆಂಬ ಐತಿಹ್ಯವಿದೆ. ಈ ಚೋಳರಾಜನು ತುರುವೇಕೆರೆಯಲ್ಲಿ ಒಂದು ಚನ್ನಿಗರಾಯ ಮತ್ತು ಮೂಲೆಶಂಕರೇಶ್ವರ ದೇವಾಲಯವನ್ನು ನಿರ್ಮಿಸಿದನೆಂದು ಹೇಳಲಾಗಿದೆ. ನಂತರ ಹೊಯ್ಸಳ ದೊರೆ 3ನೇ ನರಸಿಂಹನ ದಂಡನಾಯಕ ಸೋಮಣ್ಣ ದಂಡನಾಯಕನು ಕ್ರಿ.ಶ.1263ರಲ್ಲಿ ತುರುವೇಕೆರೆಯನ್ನು ಅಗ್ರಹಾರವನ್ನಾಗಿ ಮಾಡಿ ಭದ್ರಪಡಿಸಿದನು. ವಿಜಯನಗರ ಅರಸ ವೀರನರಸಿಂಗರಾಯನ ಆಳ್ವಿಕೆಯ ಕಾಲದಲ್ಲಿ ಪಕ್ಷಿವಾಹನ ಕೊಳದಲ್ಲಿ ಮಾಯವಾಗಿದ್ದ ಬೇಟೆರಾಯಸ್ವಾಮಿಯು ತುರುವೇಕೆರೆ ಹೆಬ್ಬಾರ್ ವೈಷ್ಣವ ಬ್ರಾಹ್ಮಣನಾದ ಚೌಡಪ್ಪಯ್ಯ ಎಂಬುವನ ಕನಸಿನಲ್ಲಿ ಕಾಣಿಸಿಕೊಂಡು ಆತನ ಹಣೆಯ ಮೇಲೆ ನಾಮವನ್ನಿಟ್ಟು ತನ್ನ ಸೇವೆಗೈಯ್ಯುವಂತೆ ಆಜ್ಞಾಪಿಸಿದನು. ಚೌಡಪ್ಪಯ್ಯನು ತನ್ನ ಹೆಸರನ್ನು ವರದಬೇಟೆರಾಯಸ್ವಾಮಿ ಎಂದು ಪುನರ್‌ನಾಮಕರಣ ಮಾಡಿಕೊಂಡು ಬೇಟೆ ರಾಯನ ಹೆಸರಿನಲ್ಲಿ ಈಗ ಕಂಡುಬರುವ ಬೇಟೆರಾಯಸ್ವಾಮಿ ಎಂಬ ದೇವಾಲಯವನ್ನು ನಿರ್ಮಿಸಿದನು. ವಿಜಯನಗರ ಅರಸ ವೀರನರಸಿಂಗರಾಯನು ರಾಣಿಯಾದ ಲೋಕಮ್ಮ

ಎಂಬುವಳ ಮುಖಾಂತರ ಹೊಸಹಳ್ಳಿ ಎಂಬ ಗ್ರಾಮವನ್ನು 'ಲೋಕಮ್ಮನಹಳ್ಳಿ'ಎಂದು ಪುನರ್ ನಾಮಕರಣ ಮಾಡಿ ೩೦೦ ವರಾಹಗಳನ್ನು ಈ ದೇವಾಲಯಕ್ಕೆ ದಾನಕೊಟ್ಟು ದೇವಾಲಯದ ಮುಂಭಾಗದಲ್ಲಿ ಕಂಡುಬರುವ ಮೂರು ಅಂಕಣದ ದ್ವಾರ ಮಂಟಪವನ್ನು ನಿರ್ಮಿಸಿದನು.[13] ನಂತರ ವಿಜಯನಗರ ಅರಸರಾದ ಸಂಕಣ್ಣ ನಾಯಕ, ಕೃಷ್ಣದೇವರಾಯ, ನರಸನಾಯಕ ಮಾಯಸಂದ್ರದಿಂದ ಆಳ್ವಿಕೆ ಮಾಡುತ್ತಿದ್ದ ಹಾಗಲವಾಡಿ ಪಾಳೇಯಗಾರರಾದ ರಾಮರಾಜಯ್ಯ, ಹರಿಭೈರನಾಯಕ ಮುಂತಾದವರು ಈ ದೇವಾಲಯಕ್ಕೆ ತಮ್ಮದೇ ಆದ ಕೊಡುಗೆಗಳನ್ನು ನೀಡಿದರು. ತುರುವೇಕೆರೆಯನ್ನು ಬಿಜಾಪುರ ಸುಲ್ತಾನರ ಕಾಲದಲ್ಲಿ ಶಿರಾದಲ್ಲಿ ಆಳ್ವಿಕೆ ನಡೆಸುತ್ತಿದ್ದ ದಂಡನಾಯಕ ಮಲ್ಲಿಕ್‌ರಿಹಾನ್ ವಶಪಡಿಸಿಕೊಂಡನು. ನಂತರ ಮೈಸೂರು ಒಡೆಯರಾದ ಕಂಠೀರವ ನರಸರಾಜರು ತುರುವೇಕೆರೆಯನ್ನು ವಶಪಡಿಸಿಕೊಂಡು ಬೇಟೆರಾಯಸ್ವಾಮಿ ದೇವಾಲಯಕ್ಕೆ ಅನೇಕ ದಾನದತ್ತಿಗಳನ್ನು ಕ್ರಿ.ಶ.೧೬೮೬ರವರೆಗೂ ನೀಡಿದರು. ಈ ಅವಧಿಯಲ್ಲಿ ದೇವಾಲಯದ ಸ್ಥಾನಿಕರಲ್ಲಿ ಉಂಟಾದ ಭಿನ್ನಾಭಿಪ್ರಾಯದಿಂದಾಗಿ ದೇವಾಲಯಕ್ಕೆ ದಾನದತ್ತಿ ಕಡಿಮೆಯಾಗ ತೊಡಗಿತು. ಇದನ್ನು ಮನಗಂಡ ತಿರುಮಲ ಅಯ್ಯಂಗಾರ್ ಮತ್ತು ಪೆರುಮಾಳಯ್ಯ ಎಂಬುವರು ಕ್ರಿ.ಶ.೧೭೦೫ರಲ್ಲಿ ಮೈಸೂರು ರಾಣಿಯವರಿಗೆ ಒಂದು ಭಿನ್ನವತ್ತಳೆಯನ್ನು ನೀಡಿದರು. ಕ್ರಿ.ಶ.೧೭೮೪ರಲ್ಲಿ ಟಿಪ್ಪುಸುಲ್ತಾನ್ ದೇವಾಲಯಕ್ಕೆ ಮತ್ತೆ ದಾನದತ್ತಿಗಳನ್ನು ಪ್ರಾರಂಭಿಸಿದನು. ಕ್ರಿ.ಶ.೧೮೩೧ರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರು ದಂಗೆಕೋರರನ್ನು ಅಡಗಿಸಲು ತುರುವೇಕೆರೆ ತಾಲೂಕಿನ ಮೂಲಘಟ್ಟ ಕೆರೆಯ ಬಳಿ ಬೀಡುಬಿಟ್ಟಿದ್ದಾಗ ತುರುವೇಕೆರೆಯ ಕೆಲವು ಸ್ಥಾನಿಕರು ಮೈಸೂರು ಅರಮನೆಯ ಅಂತಃಪುರದ ಸೇವಕಿ ತುರುವೇಕೆರೆಯ ತೊರೆಮಾವಿನಹಳ್ಳಿಯ ಲಿಂಗಮ್ಮಾಜಿ ಎಂಬುವಳ ಮೂಲಕ ಒಂದು ಭಿನ್ನವತ್ತಳೆಯನ್ನು ಸಲ್ಲಿಸಲಾಗಿ ಮುಮ್ಮಡಿ ಕೃಷ್ಣರಾಜ ಒಡೆಯರು ವಾರ್ಷಿಕವಾಗಿ ೧೦೦ ವರಹಗಳನ್ನು ದಾಸಪ್ಪಾಜಿ ಅರಸು ಎಂಬುವನ ಮೂಲಕ ದಾನವಾಗಿ ಘೋಷಿಸಿದರು.[14]

**ಅಧ್ಯಯನದ ಉದ್ದೇಶ**

ಅಧ್ಯಯನದ ಉದ್ದೇಶ ಪ್ರಧಾನವಾಗಿ ಅಜ್ಞಾತವಾಗಿರುವ ತುರುವೇಕೆರೆ ತಾಲೂಕಿನ ಚರಿತ್ರೆ ಮತ್ತು ಸಂಸ್ಕೃತಿಯನ್ನು ಸಂಶೋಧನೆಯ ಮೂಲಕ ಬೆಳಕಿಗೆ ತರುವ ಉದ್ದೇಶವನ್ನು ಹೊಂದಿದೆ. ಸ್ಥಳಿಯ ಚರಿತ್ರೆಯ ಅಧ್ಯಯನದ ದೃಷ್ಟಿಯಿಂದ ಇಲ್ಲಿ ದೊರೆಯುವ ಪ್ರಾಥಮಿಕ ಮತ್ತು ದ್ವಿತೀಯ ಆಕರಗಳನ್ನು ಆಧಾರವಾಗಿಟ್ಟುಕೊಂಡು ಈ ತಾಲೂಕಿನ ಸಾಂಸ್ಕೃತಿಕ ಇತಿಹಾಸವನ್ನು ತಿಳಿಯುವ ಉದ್ದೇಶ ಹೊಂದಿದೆ. ಈ ತಾಲೂಕಿನ ಮಹತ್ವದ ಹಿನ್ನೆಲೆಯಲ್ಲಿ ಆಳ್ವಿಕೆ ಮಾಡಿದ ರಾಜರ ಕುರುಹುಗಳಾಗಿ ಶಾಸನ, ಸಾಹಿತ್ಯಾಕೃತಿ, ದೇವಾಲಯಗಳು,

ಮೂರ್ತಿಶಿಲ್ಪ ಇವುಗಳೆಲ್ಲವೂ ಸೇರಿದಂತೆ ದ್ವಿತೀಯ ಮತ್ತು ಸಾಹಿತ್ಯಿಕ ಆಕರಗಳು ಲಭ್ಯವಿದ್ದು ಅವುಗಳನ್ನು ವ್ಯವಸ್ಥಿತವಾಗಿ ಮತ್ತು ವಸ್ತುನಿಷ್ಠವಾಗಿ ಬಳಸಿಕೊಂಡು ಮರುವಿಮರ್ಶೆ ಮಾಡುವ ಮೂಲಕ ಚಾರಿತ್ರಿಕ ಹಿನ್ನೆಲೆ ಕಟ್ಟಿಕೊಡುವುದು ಈ ಅಧ್ಯಯನದ ಉದ್ದೇಶವಾಗಿದೆ. ಪ್ರಮುಖವಾಗಿ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪಕ್ಕೆ ಸಂಬಂಧಿಸಿದಂತೆ ಮನುಷ್ಯನ ಬದುಕಿನಲ್ಲಿ ಅಡಗಿರುವ ಮೌಖಿಕ ಇತಿಹಾಸದ ಸ್ವರೂಪ, ಸಾಂಸ್ಕೃತಿಕ ಪರಂಪರೆಯ ಮೌಲ್ಯ, ಧಾರ್ಮಿಕ ಆಚರಣೆಗಳ ಮಹತ್ವ, ದೈವತ್ವದ ನಂಬಿಕೆ, ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪಕ್ಕೆ ಸಂಬಂಧಿಸಿದಂತೆ ಸಂಶೋಧನೆಯ ವಸ್ತುನಿಷ್ಠತೆಯನ್ನು ಪರಾಮರ್ಶಿಸಿ ಅಧ್ಯಯನಗಳಿಗೆ ಹೊಸ ರೂಪ ನೀಡುವ ಉದ್ದೇಶ ಹೊಂದಿದೆ.

ಪ್ರಮುಖವಾಗಿ ಸಂಶೋಧನಾ ವಸ್ತುವಿಷಯ ದೇವಾಲಯಗಳ ಮತ್ತು ಕಲೆ ವಾಸ್ತುಶಿಲ್ಪಕ್ಕೆ ಸಂಬಂಧಿಸಿದ್ದು. ದೇವಾಲಯದ ಅಂಗಗಳಾದ ಗರ್ಭಗೃಹ, ಸುಖನಾಸಿ, ನವರಂಗ, ಮುಖಮಂಟಪ, ಅಧಿಷ್ಠಾನ, ಭಿತ್ತಿ, ಶಿಖರ ಒಳಗೊಂಡಂತೆ ಕಲೆ ಮತ್ತು ವಾಸ್ತುಶಿಲ್ಪ ಕಲೆಯನ್ನು ಕ್ಷೇತ್ರಕಾರ್ಯದ ಮೂಲಕ ಅಧ್ಯಯನ ಮಾಡುವ ಪ್ರಮುಖ ಉದ್ದೇಶವನ್ನು ಹೊಂದಿದೆ.

**ವ್ಯಾಪ್ತಿ**

"ತುರುವೇಕೆರೆ ತಾಲೂಕಿನ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ-ಒಂದು ವಿವರಣಾತ್ಮಕ ಅಧ್ಯಯನ" ಎಂಬ ಶೀರ್ಷಿಕೆಯು ಸೂಚಿಸುವಂತೆ ಅಧ್ಯಯನವು ತುರುವೇಕೆರೆ ತಾಲೂಕಿನ ವ್ಯಾಪ್ತಿಯನ್ನು ಒಳಗೊಂಡಿದ್ದು ಭೌಗೋಳಿಕ ವಿಸ್ತಾರ ಮತ್ತು ಕಾಲಾವಧಿಯ ಹಿನ್ನೆಲೆಯಲ್ಲಿ ಆರಂಭದಿಂದ ವಿಜಯನಗರ ಕಾಲದವರೆಗೆ ನನ್ನ ಅಧ್ಯಯನದ ವ್ಯಾಪ್ತಿಯನ್ನು ಸೀಮಿತಗೊಳಿಸಲಾಗಿದೆ.

ಈ ತಾಲೂಕಿನಲ್ಲಿ ದೊರೆಯುವ ಪುರಾತತ್ವ ಮತ್ತು ಇತಿಹಾಸ ರಚನೆಗೆ ಅವಶ್ಯಕವಾದ ಹಾಗೂ ವಿಶೇಷವಾಗಿ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪಕ್ಕೆ ಸಂಬಂಧಿಸಿದಂತೆ ಐತಿಹಾಸಿಕ ಮಹತ್ವವುಳ್ಳ ದೇವಾಲಯಗಳನ್ನು ಕುರಿತಂತೆ ವಿವರಣಾತ್ಮಕ ಅಧ್ಯಯನವನ್ನು ದೇವಾಲಯಗಳು, ಸ್ಮಾರಕಗಳು, ಶಾಸನಗಳು, ವೀರಗಲ್ಲು ಮತ್ತು ಮಾಸ್ತಿಗಲ್ಲುಗಳಿಗೆ ಸಂಬಂಧಿಸಿದಂತೆ ಧಾರ್ಮಿಕವಾಗಿ, ಸಾಮಾಜಿಕವಾಗಿ, ಚಾರಿತ್ರಿಕವಾಗಿ ಮತ್ತು ಸಾಂಸ್ಕೃತಿಕ ಮಹತ್ವವನ್ನು ಒಳಗೊಂಡಂತೆ ಮಾಹಿತಿಯನ್ನು ನೀಡುವಲ್ಲಿ ಈ ಮಹಾಪ್ರಬಂಧವು ಯಶಸ್ವಿಯಾಗಿದೆ ಎನ್ನಬಹುದು.

**ಅಧ್ಯಯನದ ವಿಧಾನ**

ಬಹುಮುಖ್ಯವಾಗಿ ಸಂಶೋಧನೆಗೆ ಅಧ್ಯಯನ ವಿಧಾನವಿರಬೇಕು. ಏಕೆಂದರೆ ಯಾವುದೇ ಒಂದು ಗ್ರಂಥದ ರಚನೆಯಲ್ಲಿ ಯೋಜನೆ ಎಂಬುದು ಸಂಶೋಧನೆಗೆ ಕನ್ನಡಿಯಂತಿದ್ದು ಪ್ರಸ್ತುತ ಅಧ್ಯಯನದಲ್ಲಿ ಪೂರಕ ಅಧ್ಯಯನ ಕ್ರಮಗಳನ್ನು ರೂಪಿಸಿಕೊಳ್ಳಲಾಗಿದೆ. ಅಧ್ಯಯನದ ಸಮೀಕ್ಷೆ, ವಿವರಗಳಲ್ಲಿ ನಮೂದಿಸಿರುವ ಎಲ್ಲಾ ಗ್ರಂಥಗಳನ್ನು ಪ್ರಸ್ತುತ ಮಹಾಪ್ರಬಂಧವನ್ನು ರೂಪಿಸುವಲ್ಲಿ ಬಳಸಿಕೊಳ್ಳಲಾಗಿದೆ. ಈ ಪ್ರಬಂಧವನ್ನು ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನಕ್ಕೆ ಸಂಬಂಧಿಸಿದಂತೆ ವಿದ್ವಾಂಸರು ಎತ್ತಿರುವ ಕೆಲವು ಪ್ರಶ್ನೆಗಳು ಮತ್ತು ಆ ಪ್ರಶ್ನೆಗಳಿಗೆ ವಿಮರ್ಶಾತ್ಮಕವಾಗಿ ಉತ್ತರ ಕಂಡುಕೊಳ್ಳಲು ಪ್ರಯತ್ನಿಸಲಾಗಿದೆ. ಕಲೆ ಮತ್ತು ವಾಸ್ತುಶಿಲ್ಪಕ್ಕೆ ಸಂಬಂಧಿಸಿದಂತೆ ಬಹುಮುಖ್ಯವಾಗಿ ಪಾತ್ರವಹಿಸುವ ದೇವಾಲಯ, ಮೂರ್ತಿಶಿಲ್ಪ, ಸ್ಮಾರಕಗಳು ಇವುಗಳನ್ನು ಅಧ್ಯಯನ ಮಾಡುವಾಗ ಖುದ್ದಾಗಿ ಭೇಟಿ ನೀಡಿ ಕ್ಷೇತ್ರ ಪರಿವೀಕ್ಷಣೆ ಮಾಡುವ ಮೂಲಕ ವಿವರಗಳನ್ನು ಸಂಗ್ರಹಿಸಲಾಗಿದೆ. ಜೊತೆಗೆ ದೇವಾಲಯಗಳಿಗೆ ಸಂಬಂಧಿಸಿದಂತೆ ಛಾಯಾಚಿತ್ರಗಳನ್ನು ತೆಗೆದು ಪ್ರಬಂಧದಲ್ಲಿ ಮಾರ್ಗದರ್ಶಕರ ಸಲಹೆ ಸೂಚನೆ ಮೇರೆಗೆ ಅಳವಡಿಸಿಕೊಂಡು ಕ್ಷೇತ್ರಕಾರ್ಯದಲ್ಲಿ ಕಂಡುಬರುವ ಫಲಿತಗಳನ್ನು ಒಂದೇ ಕ್ಷೇತ್ರದಲ್ಲಿ ತರುವ ಪ್ರಯತ್ನವನ್ನು ಈ ಪ್ರಬಂಧದಲ್ಲಿ ಮಾಡಲಾಗಿದೆ. ಒಟ್ಟಾರೆ ತುರುವೇಕೆರೆ ತಾಲೂಕಿನ ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಚರಿತ್ರೆಯನ್ನು ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪದ ವಿಶೇಷ ಅಧ್ಯಯನದ ಮೂಲಕ ನಾನು ಸಂಶೋಧನಾತ್ಮಕವಾಗಿ ಕಂಡುಕೊಂಡ ಫಲಿತವೇ ಈ ಸಂಶೋಧನಾ ಮಹಾಪ್ರಬಂಧವಾಗಿದೆ.

**ಅಧ್ಯಯನದ ಸ್ವರೂಪ**

ತುರುವೇಕೆರೆ ತಾಲೂಕಿನ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ ಒಂದು- ವಿವರಣಾತ್ಮಕ ಅಧ್ಯಯನ ಎಂಬ ಪ್ರಸ್ತುತ ಮಹಾಪ್ರಬಂಧವನ್ನು ಅಧ್ಯಯನದ ಅನುಕೂಲಕ್ಕಾಗಿ ಏಳು ಪ್ರಮುಖ ಅಧ್ಯಾಯಗಳಾಗಿ ವಿಂಗಡಿಸಲಾಗಿದೆ. ಜೊತೆಗೆ ಪ್ರಮುಖ ಅಧ್ಯಾಯಗಳನ್ನು ಹಲವು ಉಪಶೀರ್ಷಿಕೆಗಳಾಗಿ ವಿಂಗಡಿಸಿಕೊಂಡಿದ್ದು ಆರು ಅಧ್ಯಾಯಗಳನ್ನು ಒಳಗೊಂಡಿದೆ. ಅವುಗಳು ಈ ಕೆಳಕಂಡಂತಿವೆ.

1) ಪ್ರಸ್ತಾವನೆ

2) ತುಮಕೂರು ಜಿಲ್ಲೆಯನ್ನೊಳಗೊಂಡಂತೆ ರಾಜಕೀಯ ಇತಿಹಾಸ

3) ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ

4) ಶಾಸನಗಳ ಅಧ್ಯಯನ

5) ವೀರಗಲ್ಲುಗಳು, ಮಾಸ್ತಿಗಲ್ಲುಗಳು ಹಾಗೂ ಪ್ರಮುಖ ಶಿಲ್ಪಗಳು

6) ಉಪಸಂಹಾರ

ಈ ಮೇಲಿನ ಸಂಶೋಧನಾ ವಸ್ತು ಸ್ವರೂಪವು ಅಧ್ಯಯನದ ಬಹುಮುಖಿಯ ಆಯಾಮವಾಗಿದೆ. ಅದರಲ್ಲಿ ಮೊದಲನೇ ಅಧ್ಯಾಯದಲ್ಲಿ ವಿಷಯದ ಪ್ರಸ್ತಾವನೆ, ಭೌಗೋಳಿಕ ಹಿನ್ನೆಲೆ ಮತ್ತು ಐತಿಹ್ಯ, ಮಹತ್ವ, ಉದ್ದೇಶ, ವ್ಯಾಪ್ತಿ, ಅಧ್ಯಯನದ ವಿಧಾನ, ಸ್ವರೂಪ ಹಾಗೂ ವಿಷಯಕ್ಕೆ ಸಂಬಂಧಿಸಿದಂತೆ ಇದುವರೆವಿಗೂ ನಡೆದಿರುವ ಅಧ್ಯಯನದ ಸಮೀಕ್ಷೆಯನ್ನು ನೀಡಲಾಗಿದೆ.

ಎರಡನೇ ಅಧ್ಯಾಯದಲ್ಲಿ ಪ್ರಸ್ತುತ ತುಮಕೂರು ಜಿಲ್ಲೆಯನ್ನೊಳಗೊಂಡಂತೆ ತುರುವೇಕೆರೆ ತಾಲೂಕಿನಲ್ಲಿ ಆಳ್ವಿಕೆ ಮಾಡಿದ ರಾಜಮನೆತನಗಳಾದ ಗಂಗ, ನೊಳಂಬ, ಚೋಳ, ಬಾದಾಮಿ ಚಾಲುಕ್ಯ, ಹೊಯ್ಸಳ ಮತ್ತು ವಿಜಯನಗರ ಅರಸರು ಈ ಪ್ರದೇಶದಲ್ಲಿ ಆಳ್ವಿಕೆ ಮಾಡಿದ್ದು, ಅವರ ರಾಜಕೀಯ ಚರಿತ್ರೆಯನ್ನು ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ.

ಮೂರನೇ ಅಧ್ಯಾಯದಲ್ಲಿ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪಕ್ಕೆ ಸಂಬಂಧಿಸಿದಂತೆ ವಿವರಿಸಲಾಗಿದೆ. ಅವುಗಳಲ್ಲಿ ಶೈವ, ವೈಷ್ಣವ ದೇವಾಲಯಗಳಿಗೆ ಸಂಬಂಧಿಸಿದಂತೆ ದೇವಾಲಯದ ಭಾಗಗಳಾದ ಗರ್ಭಗೃಹ, ಸುಖನಾಸಿ, ನವರಂಗ, ಮುಖಮಂಟಪ, ಜಗತಿ, ಅಧಿಷ್ಠಾನ, ಭಿತ್ತಿ, ಕಪೋತ, ಹಾರ, ಶಿಖರ, ಸ್ತೂಪಿ ಇವುಗಳಿಗೆ ಸಂಬಂಧಪಟ್ಟಂತೆ ಅಧ್ಯಯನ ಮಾಡಿ ಸಾಂಸ್ಕೃತಿಕವಾಗಿ ವಿವರಿಸಲಾಗಿದೆ.

ನಾಲ್ಕನೇ ಅಧ್ಯಾಯದಲ್ಲಿ ದೇವಾಲಯದ ಶಾಸನಗಳಿಗೆ ಸಂಬಂಧಿಸಿದಂತೆ ಶಾಸನಗಳು ಇರುವ ಊರು, ದೊರೆತ ಸ್ಥಳ, ರಾಜವಂಶ, ರಾಜ ಭಾಷೆ, ಕಾಲ, ಲಿಪಿ, ಉಲ್ಲೇಖ ಇವುಗಳಿಗೆ ಸಂಬಂಧಿಸಿದಂತೆ ಶಾಸನಗಳಲ್ಲಿ ದೊರೆತ ಸಾಂಸ್ಕೃತಿಕ ಸಾರಾಂಶವನ್ನು ಸಂಕ್ಷಿಪ್ತವಾಗಿ ನೀಡಲಾಗಿದೆ.

ಐದನೇ ಅಧ್ಯಾಯದಲ್ಲಿ ತುರುವೇಕೆರೆ ತಾಲೂಕಿನಲ್ಲಿ ಕಂಡುಬರುವ ವೀರಗಲ್ಲುಗಳು ಮಾಸ್ತಿಗಲ್ಲುಗಳು ಹಾಗೂ ಪ್ರಮುಖ ಶಿಲ್ಪಗಳ ಬಗ್ಗೆ ವಿವರಣಾತ್ಮಕವಾದ ಮಾಹಿತಿಯನ್ನು ನೀಡಲಾಗಿದೆ. ಆಯಾ ಸ್ಥಳಗಳಲ್ಲಿ ಕಂಡುಬರುವ ಸ್ಮಾರಕ ಶಿಲ್ಪಗಳ ಬಗ್ಗೆ ಆಯಾ

ಕಾಲಾನುಕ್ರಮದಲ್ಲಿ ವಿಂಗಡಿಸಿ ಸ್ಮಾರಕಗಳ ಲಕ್ಷಣಗಳು ಮತ್ತು ಅವುಗಳು ತಿಳಿಸುವಂತಹ ಇತಿಹಾಸದ ಬಗ್ಗೆ ಕೂಲಂಕಷವಾಗಿ ವಿವರಿಸಲಾಗಿದೆ.

ಆರನೇ ಅಧ್ಯಾಯವು ಉಪಸಂಹಾರವಾಗಿದ್ದು ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಂಡ ಪ್ರಮುಖ ಸಂಗತಿಗಳ ಸಮೀಕ್ಷೆಯನ್ನು ಹಾಗೂ ಫಲಿತಗಳನ್ನಲ್ಲದೇ ನಿರ್ಧಾರಿತ ಅಂಶಗಳನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ.

**ದೇವಾಲಯದ ಉಗಮ ಮತ್ತು ವಿಕಾಸ**

ವಿಶಾಲಭಾರತದ ಸಂಸ್ಕೃತಿಯ ಅವಿಭಾಜ್ಯ ಅಂಗವಾಗಿ ಕಲೆ ಮತ್ತು ವಾಸ್ತುಶಿಲ್ಪಗಳು ಬೆಳೆದು ಬಂದಿವೆ. ಆಯಾ ಕಾಲಘಟ್ಟದ ಇತಿಹಾಸವನ್ನು ಗುರುತಿಸುವಿಕೆಯಲ್ಲಿ ದೇವಾಲಯಗಳು ಮಹತ್ವದ ಕುರುಹುಗಳಾಗಿವೆ. ಇತಿಹಾಸ ಪೂರ್ವ ಕಾಲದಿಂದಲೂ ಸಹ ಕಲಾ ಪ್ರೇಮವು ಮಾನವನ ಸಹಜಗುಣ, ಕಲೆ ನಾಗರೀಕರಿಗೆ ಮಾತ್ರವಲ್ಲದೆ ನಾಗರೀಕತೆಯ ಅಂಧಕಾರದಲ್ಲಿದ್ದಂತಹ ಮಾನವನಿಗೂ ಹೆಚ್ಚು ಪ್ರಿಯವಾಗಿತ್ತು. ಶಿಲಾಯುಗದ ಮಾನವನ ಕಾಲದಿಂದಲೂ ಕಲೆಗೆ ಪ್ರಮುಖವಾದ ಸ್ಥಾನವಿತ್ತು. ಕಲೆಯನ್ನು ಪ್ರಾರಂಭದ ಭಾಷೆ ಎಂದು ಕರೆಯಬಹುದಾಗಿದೆ.

ಮಾನವನು ಕಲೆಯನ್ನು ಹೇಗೆ ಕಲಿತ ಎಂಬುದನ್ನು ಸಂಕ್ಷಿಪ್ತವಾಗಿ ಹೇಳುವುದಾದರೆ ಆದಿಮಾನವನು ನಮ್ಮಂತೆ ಮನೆ ಕಟ್ಟಿಕೊಂಡು ಅನ್ನ ಬೇಯಿಸಿ, ಊಟ ಮಾಡಿ ಜೀವಿಸುತ್ತಿರಲಿಲ್ಲ, ಬಿಸಿಲು ಮಳೆ ಇನ್ನಿತರ ಬಾಧೆಗಳಿಗೆ ಹಾಗೂ ಶತ್ರುಗಳ ಕಾಟದಿಂದ ಪಾರಾಗಲು ಗುಹೆಗಳಲ್ಲಿ ವಾಸವಿದ್ದುಕೊಂಡು ಸುಖ-ದುಃಖಗಳನ್ನು ವ್ಯಕ್ತಪಡಿಸುವ ಆಕಾಂಕ್ಷೆಯಿಂದ ಏನೇನೋ ಗೀಚಿದನು. ಅದರಲ್ಲಿ ಒಂದು ರೂಪ ಕಂಡಿತು. ಮುಂದೆ ಅದನ್ನು ಬೆಳೆಸಿಕೊಂಡು ಬಂದನು. ಕಾಲಕ್ರಮೇಣ ಕಲೆ ನಿಜಸ್ವರೂಪವನ್ನು ಸೃಷ್ಟಿಸಲು ತಳಪಾಯವಾಗಿ ಮಾರ್ಪಟ್ಟಿತು. ಪ್ರಾಣಿ ಪಕ್ಷಿಗಳ ಇನ್ನಿತರ ಚಿತ್ರಣವನ್ನು ಸೊಗಸಾಗಿ ಚಿತ್ರಿಸಿದನು. ಹೀಗೆ ಕಲೆಮುಂದೆ ಬೆಳೆದು ಇಂದಿಗೂ ಜೀವಂತವಾಗಿದೆ.

ಕಲೆಯು ಆಯಾಕಾಲದ ಮನೋಧರ್ಮವನ್ನು ತಿಳಿಸುತ್ತವೆ. ಕಲೆಯಿಂದಲೇ ತಂತ್ರಜ್ಞಾನ ಬೆಳೆದುಬಂದಿದೆ. ಇದು ಆಯಾ ಮತಧರ್ಮಗಳ ಸೇವಾ ಕೆಲಸವಾಗುವಂತೆ ಆಯಿತು. ಈ ಹಿನ್ನೆಲೆಯಿಂದಲೇ ಆಯಾ ಭಾಗದ ದೇವಾಲಯಗಳಲ್ಲಿ ಬಸದಿಗಳಲ್ಲಿ, ಮಠಗಳಲ್ಲಿ ಶಿಲ್ಪಗಳನ್ನು ಕಾಣಬಹುದಾಗಿದೆ. ಇಂತಹ ಶಿಲ್ಪಗಳನ್ನು ಗಾರೆಯಿಂದ, ಮರದಿಂದ, ಅಲ್ಲದೆ ಕಲ್ಲಿನಲ್ಲಿ ಕೆತ್ತಿರುವುದನ್ನು ಸಹ ಗಮನಿಸಬಹುದಾಗಿದೆ. ದೇವಾಲಯಗಳಲ್ಲಿ ಅಲಂಕಾರದ

ಕೃತಿಗಳು ಹೇರಳವಾಗಿ ಕಂಡುಬರುತ್ತವೆ. ರಾಜರುಗಳು ಧರ್ಮಕ್ಕೆ ದೇವರಿಗೆ ಸಲ್ಲಿಸುವ ಸೇವೆಯನ್ನು ದೇವಾಲಯಗಳಲ್ಲಿ ಕಾಣುತ್ತೇವೆ. ಆದ್ದರಿಂದ ಶ್ರದ್ಧಾಭಕ್ತಿಯಿಂದ ದೇವಾಲಯಗಳನ್ನು, ಮಠಗಳನ್ನು ಸುಃಖ, ಶಾಂತಿ, ಪುಣ್ಯ, ವಿಜಯದ ನೆನಪಿಗಾಗಿ ದೇವಾಲಯಗಳನ್ನು ನಿರ್ಮಾಣ ಮಾಡಿದರು. ದೇವಾಲಯಗಳ ಅನೇಕ ಮಾದರಿಗಳನ್ನು ಹೆಸರಿಸಲಾಗಿದೆ. ಸಮರಾಂಗಣ ಸೂತ್ರಧಾರ, ಕಾಮಿಕಾಗಮ, ಸುಪ್ರಬೇಧಾಗಮಗಳಲ್ಲಿ ದೇವಾಲಯಗಳ ಶೈಲಿಯನ್ನಾಧರಿಸಿ ದ್ರಾವಿಡ, ನಾಗರ, ವೇಸರಗಳೆಂದು ವರ್ಗೀಕರಿಸಲಾಗಿದೆ. ದಕ್ಷಿಣ ಭಾರತ ವಾಸ್ತುಗ್ರಂಥಗಳ ಪ್ರಕಾರ ದ್ರಾವಿಡ, ನಾಗರ, ವೇಸರ ಶೈಲಿಗಳ ಅರ್ಥಗಳನ್ನು ಕೆಲವೊಂದು ಗ್ರಂಥಗಳಲ್ಲಿ ತಿಳಿಸಿದ್ದಾರೆ. ಮಯಮತ, ವೈಖಾನಸಾಗಮ, ವಿಮಾನಾಚನಕಲ್ಪ, ದೀಪ್ತಾಗಮ, ಕಾರಣಾಗಮ ಮುಂತಾದ ಶಿಲ್ಪಗ್ರಂಥಗಳಲ್ಲಿ ದೇವಾಲಯಗಳ ರಚನಾ ವಿನ್ಯಾಸದ ಆಧಾರದ ಮೇಲೆ ದೇವಾಲಯಗಳನ್ನು ಮಾಡಲಾಗಿದೆ.

ದೇವಾಲಯಗಳನ್ನು ನಿರ್ಮಿಸುವ ಉದ್ದೇಶವೇನೆಂದರೆ ಮಾನವನ ಪ್ರಾಪಂಚಿಕ ಸುಖ ದುಃಖಗಳು ಮಾನವನ ಪೂರ್ಣ ವಿಕಾಸಕ್ಕೆ ಬಹುಮುಖ್ಯವಾದವೆಂದು ಪ್ರಾಚೀನರ ನಂಬಿಕೆಯಾಗಿತ್ತು ಮತ್ತು ಇದು ಭಾರತೀಯರಲ್ಲಿರುವ ಆಧ್ಯಾತ್ಮಿಕ ಭಾವನೆಯ ಕಾರಣದಿಂದಾಗಿ ನಮ್ಮ ಸಂಸ್ಕೃತಿಗೆ ಪರಮೋಚ್ಛ ಆಲಯಗಳಾದವು (ಆತ್ಮಕ್ಕೆ ಶರೀರವು ಹೇಗೆ ಮನೆಯು ಹಾಗೆ) ಈ ಪ್ರಕೃತಿಯೇ ಆಲಯವೆಂಬಂತೆ ದೇವಾಲಯದ ಕೆಲವು ಭಾಗಗಳಿಗೆ ಮಾನವನ ಶರೀರದ ಭಾಗಗಳ ಹೆಸರುಗಳನ್ನು ಬಳಸಿರುವುದು ಕಂಡುಬರುತ್ತದೆ. ಭಾರತದ ಸಾಮ್ರಾಜ್ಯ ಯುಗಕ್ಕೆ ಬಂದರೆ ಅರಸರು ತಮ್ಮ ವಿಜಯದ ಪ್ರತೀಕವಾಗಿ ದೇವಾಲಯಗಳನ್ನು ಕಟ್ಟಿಸುತ್ತಿದ್ದರು. ಕಟ್ಟಡದ ಭಾಗವು ಗ್ರೀವದಿಂದ ಮೇಲಕ್ಕೆ ಆರು ಅಥವಾ ಎಂಟು ಮುಖಗಳಿದ್ದರೆ ಅದೇ ದ್ರಾವಿಡಶೈಲಿ ಬುಡದಿಂದ ತುದಿಯವರೆಗೂ ಚೌಕೋನವಾಗಿದ್ದರೆ ಅದು ನಾಗರಶೈಲಿ ಅದೇ ರೀತಿ ಗರ್ಭಗೃಹದ ಮೇಲಿನ ಭಾಗವು ವೃತ್ತಾಕಾರವಾಗಿರುವುದು ವೇಸರಶೈಲಿ ಎಂದು ಹೇಳಲಾಗಿದೆ.

ದೇವಾಲಯಗಳು ಚರಿತ್ರೆಯ ವಿವಿಧ ಕಾಲಘಟ್ಟಗಳಲ್ಲಿ ಪ್ರಚಲಿತದಲ್ಲಿದ್ದ ಧರ್ಮದ ವಿವಿಧ ಛಾಯೆಗಳನ್ನು, ಪ್ರಾಧಾನ್ಯತೆಗಳನ್ನು ಪ್ರತಿಬಿಂಬಿಸುವುದಲ್ಲದೆ, ಜನರ ಅಭಿರುಚಿ, ಧರ್ಮದಲ್ಲಿನ ಆಸ್ಥೆ ಸಾಮಾಜಿಕ ಸಂಪ್ರದಾಯ, ನಂಬಿಕೆ ಇತ್ಯಾದಿ ಸಮಕಾಲೀನ ವಿಷಯಗಳನ್ನು ತಿಳಿಸುವ ದಾಖಲೆಗಳು ದೊರೆಯುತ್ತವೆ. ಇಲ್ಲಿರುವ ದೇವಾಲಯಗಳು ಶೈವ, ವೈಷ್ಣವ ಧರ್ಮಕ್ಕೆ ಸೇರಿದವುಗಳಾಗಿದ್ದು ವಾಸ್ತುಶೈಲಿಯ ದೃಷ್ಟಿಯಿಂದ ನೋಡುವುದಾದರೆ ಮೂಲತಹ ದ್ರಾವಿಡ ಶೈಲಿ ಬಳಕೆಯಲ್ಲಿದ್ದು ದ್ರಾವಿಡ ಬೆಳವಣಿಗೆಗಳು ಕಂಡುಬರುತ್ತದೆ.

**ಇದುವರೆವಿಗೂ ನಡೆದಿರುವ ಅಧ್ಯಯನ**

**ವೆಂಕೋಬರಾಯ, ಬಿ**.ಅವರು 'ಮೈಸೂರು ದೇಶದ ವಾಸ್ತುಶಿಲ್ಪ' (1928)ಎಂಬ ತಮ್ಮ ಗ್ರಂಥದಲ್ಲಿ ಹಳೆಯ ಮೈಸೂರು ರಾಜ್ಯದ ದೇವಾಲಯಗಳನ್ನು ಕುರಿತು ಪರಿಚಯಾತ್ಮಕವಾಗಿ ತಿಳಿಸಿದ್ದಾರೆ. ಮೈಸೂರು ದೇಶದ ವಾಸ್ತುಶಿಲ್ಪದ ಹಿನ್ನೆಲೆ ಕುರಿತು ಬರೆಯುತ್ತಾ 'ದಕ್ಷಿಣ ದೇಶದಲ್ಲಿರುವ ಕಟ್ಟಡಗಳಲ್ಲಿ ಯಾವುದೂ ಪ್ರಾಯಶಃ ಕ್ರಿ.ಶ.6ನೆಯ ಶತಮಾನಕ್ಕಿಂತ ಹಿಂದಿನದಲ್ಲ, ಅಲ್ಲಿಂದ ಮುಂದಕ್ಕೆ ಕಟ್ಟಿದ ಕಟ್ಟಡಗಳು ಯಥೇಚ್ಛವಾಗಿವೆ' ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಅಲ್ಲದೆ ವಿವಿಧ ವಿದ್ವಾಂಸರ ಈವರೆಗಿನ ಅಭಿಪ್ರಾಯಗಳನ್ನು ಸಂಕ್ಷೇಪವಾಗಿ ಪರಿಚಯಿಸಿದ್ದಾರೆ. ಆ ಕಾಲಕ್ಕೆ ಲಭ್ಯವಿದ್ದ ಮಾಹಿತಿಗಳ ಆಧಾರದ ಮೇರೆಗೆ ಆಗಿನ ಮೈಸೂರು ದೇಶದ ಭೌಗೋಳಿಕ ವ್ಯಾಪ್ತಿಗೆ ಅನ್ವಯಿಸಿ ನೋಡಿದಾಗ ಗ್ರಂಥದ ಮಹತ್ವ ತಿಳಿಯುತ್ತದೆ. [15]

**ಶ್ರೀನಿವಾಸನ್,ಪಿ.ಆರ್**.ಅವರ 'ದಕ್ಷಿಣ ಭಾರತದ ದೇವಾಲಯಗಳು' (1959) ಎಂಬ ಗ್ರಂಥದಲ್ಲಿ ಆಧ್ಯಾತ್ಮಿಕ ವಿಕಾಸಕ್ಕೆ ದೇಹದಂಡನೆಯ ಪ್ರಯೋಗ ಮಾಡಬೇಕೆಂದು ತಿಳಿದು ಧಾರ್ಮಿಕ ಆಚಾರಗಳು ಹುಟ್ಟಿಕೊಂಡು ದೇವಾಲಯಕ್ಕೆ ಬುನಾದಿಯಾದವೆಂಬ ವಿಚಾರಗಳನ್ನು ಚರ್ಚಿಸಲಾಗಿದೆ. ಜನಪದ ದೇವತೆಗಳಾದ ಗ್ರಾಮದೇವತೆಗಳ ಬಗೆಗೆ ಇಲ್ಲಿ ವಿವರಗಳಿದ್ದು ಸ್ತ್ರೀ ದೇವತೆಗಳ ಆರಾಧನೆಯ ಬಗೆಗೆ ವಿವರಗಳಿವೆ. ಗ್ರಾಮ ದೇವತೆಗಳಿಂದ ಶಿಷ್ಟ ದೇವತೆಗಳವರೆಗೆ ಆದ ಧಾರ್ಮಿಕ ಬೆಳವಣಿಗೆಯ ವಿಚಾರಗಳು ಈ ಕೃತಿಯಲ್ಲಿವೆ. [16]

**ಶ್ರೀಕಂಠಶಾಸ್ತ್ರಿ,ಎಸ್**. ಅವರ 'ಹೊಯ್ಸಳ ವಾಸ್ತುಶಿಲ್ಪ'(1965) ಹೊಯ್ಸಳ ವಾಸ್ತುಶಿಲ್ಪವನ್ನೇ ವಿಶೇಷವಾಗಿ ಪರೀಶೀಲಿಸಿರುವ ಗ್ರಂಥ. ಇದು ಹೊಯ್ಸಳ ಶೈಲಿಯ ಎಲ್ಲಾ ದೊಡ್ಡ ಮತ್ತು ಸಣ್ಣ ದೇವಾಲಯಗಳನ್ನು ಕುರಿತ ಒಂದು ಉತ್ತಮ ಮಾರ್ಗದರ್ಶಕ ಕೃತಿಯಾಗಿದೆ. ಇದರಲ್ಲಿ 20 ಛಾಯಾಚಿತ್ರಗಳನ್ನು ನೀಡಿದ್ದಾರೆ. ಜೊತೆಗೆ ತುರುವೇಕೆರೆ ತಾಲೂಕಿಗೆ ಸಂಬಂಧಿಸಿದಂತೆ ನಾಗಲಾಪುರದ ಚನ್ನಕೇಶವ, ಕೇದಾರೇಶ್ವರ ದೇವಾಲಯ, ತಂಡಗ ಗ್ರಾಮದ ಚನ್ನಕೇಶವ ದೇವಾಲಯ, ಹುಲಿಕಲ್ಲಿನ ಸಂಗಮೇಶ್ವರ ದೇವಾಲಯ, ತುರುವೇಕೆರೆಯ ಚನ್ನಕೇಶವ ಹಾಗೂ ಮೂಲಶಂಕರೇಶ್ವರ ದೇವಾಲಯಗಳ ವಾಸ್ತುಶಿಲ್ಪಗಳ ಬಗ್ಗೆ ಸವಿವರಣೆಯನ್ನು ನೀಡಿದ್ದಾರೆ. [17]

**ಮಹಾಲಿಂಗಮ್,ಟಿ.ವಿ**.ಅವರ 'ದಿ ಸೌತ್ ಇಂಡಿಯನ್ ಟೆಂಪಲ್ ಕಾಂಪ್ಲೆಕ್ಸ್', (1970) ಎಂಬ ಗ್ರಂಥದಲ್ಲಿ ದೇವಾಲಯಗಳ ವಿವಿಧ ಭಾಗಗಳ ಅಧ್ಯಯನವನ್ನು ಸ್ಥೂಲವಾಗಿ ನೀಡಲಾಗಿದೆ. [18]

**ಕಾಮೇಶ್ವರರಾವ್,ವಿ**.'ಸೆಲೆಕ್ಟ್ ವಿಜಯನಗರ ಟೆಂಪಲ್ಸ್ ಆಫ್ ರಾಯಲಸೀಮೆ' (1976) ಗ್ರಂಥದ ಕರ್ತೃ ಅವರು ಇದರಲ್ಲಿ ರಾಯಲಸೀಮೆಗೆ ಒಳಪಟ್ಟಿರುವ ವಿಜಯನಗರ ಕಾಲದ

ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪಗಳ ಅಧ್ಯಯನವಿದೆ. ಕ್ರಿ.ಶ.1268ರಿಂದ ಕ್ರಿ.ಶ.1612ರವರೆಗೆ ನಿರ್ಮಾಣವಾಗಿರುವ ಸುಮಾರು 19 ದೇವಾಲಯಗಳು ಹಾಗೂ ಕಾಲ ನಿರ್ಣಯವಾಗದ ಸುಮಾರು 12 ದೇವಾಲಯಗಳ ವಾಸ್ತುಶಿಲ್ಪ ಶೈಲಿ ಹಾಗೂ ಪ್ರತಿಮಾ ಶಿಲ್ಪದ ಬಗ್ಗೆ ಮಾಹಿತಿ ಒಳಗೊಂಡಿದೆ. ಶೈವ ಮತ್ತು ವೈಷ್ಣವ ಶಿಲ್ಪಗಳನ್ನು ವಿಂಗಡಿಸಿ ಸವಿವರವಾಗಿ ಅಧ್ಯಯನ ಮಾಡಿದ್ದಾರೆ.ಈ ಕೃತಿಯಲ್ಲಿ ಸು.152 ಛಾಯಾಚಿತ್ರಗಳು, 16 ತಳನಕ್ಷೆಗಳಿವೆ. [19]

**ಆಚಾರ್ಯ,ಪಿ.ಕೆ.**ಅವರ 'ಇಂಡಿಯನ್ ಆರ್ಕಿಟೆಕ್ಚರ್' (1979) ಎಂಬ ಗ್ರಂಥದಲ್ಲಿ ವಾಸ್ತುಶೈಲಿ ಮತ್ತು ಶಿಲ್ಪ ಲಕ್ಷಣಗಳನ್ನು ವಿವರಿಸುವ ಪ್ರಾಚೀನ ಸಾಹಿತ್ಯ ಕೃತಿಗಳು ಹಾಗೂ ಶಾಸ್ತ್ರ ಗ್ರಂಥಗಳ ಬಗ್ಗೆ ವಿವರಗಳಿವೆ. ವಾಸ್ತುಶೈಲಿ ಮತ್ತು ಶಿಲ್ಪಲಕ್ಷಣಗಳನ್ನು ಕುರಿತು ಪ್ರಾಚೀನ ಗ್ರಂಥಗಳಲ್ಲಿ ಉಲ್ಲೇಖಿಸಲಾಗಿರುವ ವಸ್ತು ವಿಷಯಗಳನ್ನು ಕ್ರೋಢೀಕರಿಸಲಾಗಿದೆ. ಮುಖ್ಯವಾಗಿ ಮಾನಸಾರ, ಮಯಮತ, ಪುರಾಣ, ಆಗಮ, ವೈದಿಕ ಸಾಹಿತ್ಯ, ಬೌದ್ಧ ಸಾಹಿತ್ಯ ಮುಂತಾದವುಗಳನ್ನು ಆಧರಿಸಿ ವಿವರಣೆಯನ್ನು ನೀಡಿದ್ದಾರೆ. ವಾಸ್ತುಶೈಲಿ ಮತ್ತು ಶಿಲ್ಪಗಳ ಅಧ್ಯಯನಕ್ಕೆ ಇದೊಂದು ಆಕರ ಗ್ರಂಥವಾಗಿದೆ ಎಂದರೆ ತಪ್ಪಾಗಲಾರದು. 'ಎ ಡಿಕ್ಷನರಿ ಅಫ್ ಹಿಂದೂ ಆರ್ಕಿಟೆಕ್ಚರ್' (1981) ಎಂಬ ಇವರ ಮತ್ತೊಂದು ಗ್ರಂಥದಲ್ಲಿ ದೇವಾಲಯಗಳ ಪ್ರತಿಯೊಂದು ಭಾಗಗಳ ವಿವರಣೆಯನ್ನು ನೀಡಲಾಗಿದೆ. ವಾಸ್ತುಶಿಲ್ಪದ ಅಧ್ಯಯನಕ್ಕೆ ಇದೊಂದು ಮಹತ್ತರ ಗ್ರಂಥವಾಗಿದೆ. ದೇವಾಲಯಗಳನ್ನು ಕುರಿತ ಕೆಲವು ಅಧ್ಯಯನಗಳು ಪ್ರಕಟವಾಗಿವೆ. [20]

**ಮೇಟಿ,ಎಸ್.ಕೆ.**ಅವರ 'ಮಾಸ್ಟರ್ ಪಿಸೀಸ್ ಆಫ್ ಹೊಯ್ಸಳ ಆರ್ಟ್ ಬೇಲೂರು, ಹಳೇಬೀಡು, ಸೋಮನಾಥಪುರ' (1979) ಎಂಬ ಗ್ರಂಥ ಹೊಯ್ಸಳರ ಪ್ರಮುಖ ದೇವಾಲಯಗಳ ವಾಸ್ತು ರಚನೆ, ಶಿಲ್ಪ ರಚನೆ ಅವುಗಳ ವೈವಿಧ್ಯತೆಯ ಮೇಲೆ ಬೆಳಕು ಚೆಲ್ಲುತ್ತದೆ. [21]

**ರಾಮಚಂದ್ರರಾವ್,ಎಸ್.ಕೆ.** ಅವರ 'ಭಾರತದ ದೇವಾಲಯ ನೆಲೆ:ಹಿನ್ನೆಲೆ' (1980) ಎಂಬ ಕೃತಿಯಲ್ಲಿ ದೇವಾಲಯದ ಉಗಮ ಮತ್ತು ಬೆಳವಣಿಗೆಯ ಬಗ್ಗೆ ವಿವರಗಳಿವೆ. ಬಹುಮುಖ ಸಂಸ್ಕೃತಿಯುಳ್ಳ ಮನುಷ್ಯನು ತನ್ನ ಮಾನಸಿಕ ಕಲ್ಪನೆಗೆ ಒಂದು ರೂಪ ಕೊಟ್ಟಿರುವುದೇ ಧರ್ಮವಾಯಿತು, ಅದರ ಕೈ ಕೆಲಸ ಮೂರ್ತಿ ಶಿಲ್ಪವಾಯಿತು ಎಂದಿದ್ದಾರೆ. ಕೆಲವು ದೇವಾಲಯಗಳ ವಾಸ್ತುಶೈಲಿಯನ್ನು ಇಲ್ಲಿ ಉಲ್ಲೇಖಿಸಿದ್ದಾರೆ. [22]

**ಶೇಷಶಾಸ್ತ್ರಿ,ಆರ್.**ಅವರ 'ಕರ್ನಾಟಕದ ವೀರಗಲ್ಲುಗಳು' (1982) ಎಂಬ ಪಿಎಚ್.ಡಿ. ಗ್ರಂಥದಲ್ಲಿ ವೀರಗಲ್ಲಿನ ಉಗಮ ಮತ್ತು ವಿಕಾಸದೊಂದಿಗೆ ಇತಿಹಾಸದಲ್ಲಿ ಅವುಗಳ ಪಾತ್ರವೇನು ಎಂಬುದರ

ಬಗ್ಗೆ ಸವಿವರವಿದೆ. ವೀರಗಲ್ಲುಗಳ ಪಾಠ ಮತ್ತು ಶಿಲ್ಪವನ್ನು ಮುಖ್ಯವಾಗಿ ಗಮನದಲ್ಲಿಟ್ಟು ಕೊಂಡು ಸಾಂಸ್ಕೃತಿಕ ಮತ್ತು ಸಾಮಾಜಿಕ ಅಂಶಗಳನ್ನು ಗುರುತಿಸಿ ವಿಶ್ಲೇಷಿಸಲಾಗಿದೆ. [23]

**ಇಸ್ಮಾಯಿಲ್,ಕೆ**.ಅವರ 'ಕರ್ನಾಟಕ ಟೆಂಪಲ್ಸ್' (1984) ಎಂಬ ಗ್ರಂಥ ಎಂಟು ಅಧ್ಯಾಯಗಳನ್ನು ಒಳಗೊಂಡಿದ್ದು ಸಾಮಾಜಿಕ ಹಾಗೂ ಆರ್ಥಿಕ ಕೊಡುಗೆಗಳಲ್ಲಿ ದೇವಾಲಯಗಳ ಪಾತ್ರವೇನು ಎಂಬುದನ್ನು ಈ ಗ್ರಂಥದಲ್ಲಿ ತಿಳಿಸಲಾಗಿದೆ. ವಿಚಾರ ವಿಮರ್ಶೆಯಲ್ಲಿ ಹೆಚ್ಚಾಗಿ ಶಾಸನಾಧಾರಗಳನ್ನು ಬಳಸಿಕೊಳ್ಳಲಾಗಿದೆ. [24]

**ಸಿಂದಗಿರಾಜಶೇಖರ** ಅವರ 'ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ' ಎಂಬ ಗ್ರಂಥದಲ್ಲಿ ಕರ್ನಾಟಕವನ್ನು ಆಳಿದ ಶಾತವಾಹನರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಳುಕ್ಯರು, ಹೊಯ್ಸಳರು ಮತ್ತು ವಿಜಯನಗರದ ಅರಸರ ಕಾಲದ ವಾಸ್ತಶಿಲ್ಪಗಳ ಲಕ್ಷಣಗಳನ್ನು ಕರ್ನಾಟಕದಲ್ಲಿ ಜೈನರ ವಾಸ್ತುಶಿಲ್ಪ ಮತ್ತು ಚಿತ್ರಕಲೆಯ ಲಕ್ಷಣಗಳನ್ನೂ ವಿಜಯನಗರ ಕಾಲದ ಚಿತ್ರಕಲೆಯನ್ನೂ ತಿಳಿಸಿದೆ. ಕರ್ನಾಟಕದ ವಾಸ್ತುಶಿಲ್ಪ ಕಲೆಯನ್ನು ಅಧ್ಯಯನ ಮಾಡುವುದಕ್ಕೆ ಇದೊಂದು ಬಹುಮುಖ್ಯ ಪೂರಕವಾದ ಗ್ರಂಥವಾಗಿದೆ. [25]

**ಪದ್ಮನಾಭ,ಕೆ**.ಅವರ 'ಹೊಯ್ಸಳ ಸ್ಕಲ್ಪ್‌ಚರ್ಸ್ ಎ ಕಲ್ಚರಲ್ ಸ್ಟಡಿ' (1989) ಎಂಬ ಗ್ರಂಥದಲ್ಲಿ ಹೊಯ್ಸಳರ ಕಾಲದ ದೇವಾಲಯದ ಲಕ್ಷಣಗಳು ಮತ್ತು ವಿವಿಧ ಮಾದರಿಗಳ ಬಗೆಗೆ ಮಾಹಿತಿಯನ್ನು ಒದಗಿಸಿದೆ. ಹೊಯ್ಸಳರ ಕಾಲದ ಶಿಲ್ಪಗಳ ಆಧಾರದ ಮೇಲೆ ಸಮಕಾಲೀನ ಸಮಾಜದಲ್ಲಿ ಅಂದು ಜನಪದರು ಬಳಸುತ್ತಿದ್ದಂತಹ ಉಡುಪುಗಳು, ಪೀಠೋಪಕರಣಗಳು, ಕಿರೀಟಗಳು, ಪಾತ್ರೆಗಳು, ಸಂಗೀತ ಸಾಧನಗಳು, ಆಯುಧಗಳು ಹಾಗೂ ಇನ್ನಿತರ ವಸ್ತುಗಳ ಬಗ್ಗೆ ವಿವರವಾಗಿ ತಿಳಿಸಲಾಗಿದೆ. [26]

**ದೇಜಗೌ**.ದೇಜಗೌರವರ ಸ್ಥಳನಾಮ ವ್ಯಾಸಂಗ-1990-ಈ ಕೃತಿಯು ಒಟ್ಟು ಸ್ಥಳನಾಮಗಳ ಉಗಮ, ವಿಜ್ಞಾನದ ವ್ಯಾಪ್ತಿ, ಕ್ಷೇತ್ರಕಾರ್ಯ, ಸಂಶೋಧನಾ ವಿಧಾನ, ಸಾಧನ, ಅನುಬಂಧಗಳು ಒಳಗೊಂಡಂತೆ 158 ಪುಟಗಳನ್ನು ಹೊಂದಿರುವ ಕೃತಿಯಾಗಿದ್ದು ಸಂಶೋಧನಾಸಕ್ತರಿಗೆ ಉತ್ತಮ ಗ್ರಂಥವಾಗಿದೆ. [27]

**ಶೇಠೆ,ಬಿ.ಎಸ್**. ಅವರ 'ಕರ್ನಾಟಕದಲ್ಲಿ ಸತಿಪದ್ಧತಿ' (1991) ಎಂಬ ಪಿಹೆಚ್.ಡಿ. ಗ್ರಂಥದಲ್ಲಿ ಕರ್ನಾಟಕದಲ್ಲಿ ಸತಿಪದ್ಧತಿಯ ಉಗಮ ಮತ್ತು ವಿಕಾಸದೊಡನೆ ಅದರ ಅಂತಿಮ ಹಂತದವರೆಗಿನ ವಿವರಣೆಯನ್ನು ನೀಡಿದ್ದಾರೆ. ಪ್ರಪಂಚದಾದ್ಯಂತ ಯಾವ ರೀತಿಯಲ್ಲಿ

ಸತಿಪದ್ಧತಿ ಇದ್ದಿತೆಂಬುದನ್ನು ಉದಾಹರಣೆಗಳ ಸಹಿತ ವಿವರಿಸಿದ್ದಾರೆ. ಶಾಸನ ಪಾಠ ಮತ್ತು ಶಿಲ್ಪ ಲಕ್ಷಣಗಳ ಜೊತೆಗೆ ಹಲವು ಸಾಹಿತ್ಯಾಧಾರಗಳನ್ನು ಬಳಸಿಕೊಂಡು ಸತಿಪದ್ಧತಿಯ ವಿವರಣೆ ಯನ್ನು ನೀಡಿದ್ದಾರೆ. [28]

**ಶರ್ಮ,ಐ.ಕೆ**.ಅವರ 'ಟೆಂಪಲ್ಸ್ ಆಫ್ ದಿ ಗಂಗಾಸ್ ಆಫ್ ಕರ್ನಾಟಕ' (1992) ಎಂಬ ಗ್ರಂಥದಲ್ಲಿ ಗಂಗರ ಕಾಲದ ದೇವಾಲಯಗಳ ವಾಸ್ತುಶೈಲಿಯ ಉಗಮ ಮತ್ತು ಬೆಳವಣಿಗೆಯನ್ನು ತಿಳಿಸುತ್ತಾ ದಕ್ಷಿಣ ಕರ್ನಾಟಕದಲ್ಲಿ ಗಂಗರ ದೇವಾಲಯಗಳು ಬಹಳ ಉತ್ತುಂಗ ಸ್ಥಿತಿಯಲ್ಲಿ ಇದ್ದವೆಂದು ಹೇಳುತ್ತಾರೆ. ಪ್ರಸ್ತುತ ಸಂಶೋಧನಾ ಪ್ರಬಂಧದ ವ್ಯಾಪ್ತಿಗೆ ಬರುವ ಆಸಂದಿ ಮತ್ತು ಕಡೂರಿನ ದೇವಾಲಯಗಳಲ್ಲಿ ಗಂಗರ ಕಾಲದ ವಾಸ್ತುಶೈಲಿಯ ಲಕ್ಷಣಗಳು ಇರುವುದನ್ನು ಕಾಣಬಹುದಾಗಿದೆ. [29]

**ಎಸ್, ಶೆಟ್ಟರ್**.ಅವರು ಬರೆದಿರುವ 'ದಿ ಹೊಯ್ಸಳ ಟೆಂಪಲ್ಸ್ ಅಟ್ ಕರ್ನಾಟಕ', ಧಾರವಾಡ–1992, ಇದರಲ್ಲಿ ಹೊಯ್ಸಳ ಕಾಲದ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪದ ಬಗ್ಗೆ ಸಮಗ್ರವಾಗಿ ವಿವರಣೆಯನ್ನು ನೀಡಿದ್ದಾರೆ. ಇವರು ಬರೆದಿರುವ ಕೃತಿಯು ಸಂಪುಟ–1, ದೇವಾಲಯದ ವಿವರಣೆಗೆ ಸಂಬಂಧಿಸಿದ್ದು ಸಂಪುಟ–2 ಛಾಯಾಚಿತ್ರಕ್ಕೆ ಸಂಬಂಧಿಸಿದೆ. [30]

**ದೇವರಕೊಂಡಾರೆಡ್ಡಿ**.ಅವರ'ತಲಕಾಡಿನ ಗಂಗರ ದೇವಾಲಯಗಳ ಒಂದು ಅಧ್ಯಯನ' (1994) ಎಂಬ ಗ್ರಂಥವನ್ನು ರಚಿಸಿದ್ದು ಈ ಗ್ರಂಥದಲ್ಲಿ ಗಂಗರ ಕಾಲದ ದೇವಾಲಯಗಳ ಉಗಮ ಮತ್ತು ವಿಕಾಸವನ್ನು ವಿವರವಾಗಿ ಚರ್ಚಿಸಿದ್ದಾರೆ. ಈ ಗ್ರಂಥ ಸಂಪೂರ್ಣವಾಗಿ ಕ್ಷೇತ್ರಕಾರ್ಯವನ್ನು ಆಧರಿಸಿ ರಚಿತವಾದ ಕೃತಿ.ಈ ಕೃತಿಯಲ್ಲಿ ಗಂಗರ ಸಾಂಸ್ಕೃತಿಕ ಸಾಧನೆಗಳಿಗೆ ಒದಗಿದ ಪ್ರೇರಣೆ, ಪ್ರಭಾವವನ್ನು, ಬಾಣರು ಮತ್ತು ನೊಳಂಬರ ದೇಗುಲ ವಾಸ್ತುವಿನ ಮೇಲೆ ಗಂಗರ ವಾಸ್ತುಶೈಲಿ ಬೀರಿದ ಪ್ರಭಾವವನ್ನೂ ಉದಾಹರಣೆಗಳ ಮೂಲಕ ಗಮನಕ್ಕೆ ತಂದಿದ್ದಾರೆ. [31]

**ಶಿವರುದ್ರಸ್ವಾಮಿ,ಎಸ್.ಎನ್**. ಅವರ 'ವಿಜಯನಗರ ಟೆಂಪಲ್ಸ್ ಇನ್ ಕರ್ನಾಟಕ' (1996) ಎಂಬ ಗ್ರಂಥದಲ್ಲಿ ವಿಜಯನಗರ ಕಾಲದ ದೇವಾಲಯಗಳ ವಾಸ್ತುಶೈಲಿಯ ಲಕ್ಷಣಗಳನ್ನು ವಿವರಿಸಲಾಗಿದೆ. ಶಿಲ್ಪಗಳ ಬಗ್ಗೆಯೂ ವಿವರಣೆ ಇದೆ.ಕರ್ನಾಟಕದ ಪ್ರತಿಯೊಂದು ತಾಲ್ಲೂಕಿ ನಲ್ಲಿರುವ ವಿಜಯನಗರ ಕಾಲದ ದೇವಾಲಯಗಳ ಪಟ್ಟಿಯನ್ನು ಇಲ್ಲಿ ನೀಡಿದ್ದಾರೆ. ಇದರಲ್ಲಿ ಸುಮಾರು 169 ಛಾಯಾಚಿತ್ರಗಳಿವೆ. [32]

**ಅಪರ್ಣ.ಕೂ.ಸ,** ಅವರು ಬರೆದಿರುವ ದೇವಾಲಯಗಳ ವಾಸ್ತುಶಿಲ್ಪ ಪರಿಚಯ, ಹಂಪಿ–1999. ಇವರು ದೇವಾಲಯಗಳ ಲಕ್ಷಣಗಳ ಬಗ್ಗೆ ಸಾಕಷ್ಟು ಮಾಹಿತಿಯನ್ನು ನೀಡಿ ಸಂಶೋಧಕರಿಗೆ ಬಹಳ ಉಪಯುಕ್ತ ಮಾಹಿತಿಯನ್ನು ನೀಡುವಂತ ಪ್ರಯತ್ನವನ್ನು ಲೇಖಕರು ಮಾಡಿದ್ದಾರೆ. [33]

**ರಂಗರಾಜು,ಎನ್.ಎಸ್**.ಅವರ 'ಹೊಯ್ಸಳ ಟೆಂಪಲ್ಸ್ ಇನ್ ಮಂಡ್ಯ ಅಂಡ್ ತುಮಕೂರು ಡಿಸ್ಟ್ರಿಕ್ಟ್ಸ್' (2001) ಪಿ.ಎಚ್.ಡಿ. ಪ್ರೌಢಪ್ರಬಂಧದಲ್ಲಿ ಮಂಡ್ಯ ಮತ್ತು ತುಮಕೂರು ಜಿಲ್ಲೆಯ ಹೊಯ್ಸಳ ದೇವಾಲಯಗಳ ಲಕ್ಷಣಗಳು, ಉಗಮ ಮತ್ತು ವಿಕಾಸ ಹಾಗೂ ಕರ್ನಾಟಕದ ಹೊಯ್ಸಳ ವಾಸ್ತುಶೈಲಿಗೆ ಈ ಎರಡು ಜಿಲ್ಲೆಗಳ ಕೊಡುಗೆಯನ್ನು ಸವಿವರವಾಗಿ ತಿಳಿಸಿದ್ದಾರೆ. [34]

**ಜ್ಞಾನಾನಂದ,ಜಿ**. ಅವರ 'ಶಿಲ್ಪಾದರ್ಶ' (2002) ಎಂಬ ಎರಡು ಸಂಪುಟಗಳಿವೆ. ಮೊದಲ ಸಂಪುಟ ಶಿಲ್ಪಶಾಸ್ತ್ರದ ಗಂಭೀರ ಅಧ್ಯಯನಕ್ಕೆ ಮೂಲ ಆಕರವಾಗಿದೆ. ಎರಡನೆಯ ಸಂಪುಟ ಭಾರತೀಯ ದೇವಾಲಯಗಳ ಇತಿಹಾಸದ ಬಗೆಗೆ ಕುತೂಹಲಕರವಾದ ವಿವರಗಳನ್ನು ಸಂಕ್ಷಿಪ್ತವಾಗಿ ದಾಖಲಿಸುತ್ತದೆ. ಬೌದ್ಧ, ಜೈನ ಮತ್ತು ಹಿಂದೂ ದೇವಾಲಯಗಳ ಸ್ವರೂಪ ವೈವಿಧ್ಯತೆಗಳನ್ನು ರೇಖಾಚಿತ್ರಗಳ ಮೂಲಕ ವಿವರಿಸಲಾಗಿದೆ. [35]

**ಸುರೇಶ್,ಕೆ.ಎಂ**.ಅವರ 'ಟೆಂಪಲ್ಸ್ ಆಫ್ ಕರ್ನಾಟಕ' (2003) ಎಂಬ ಗ್ರಂಥ ಎರಡು ಸಂಪುಟಗಳನ್ನೊಳಗೊಂಡಿದೆ. ಮೊದಲನೆಯ ಸಂಪುಟದಲ್ಲಿ ಹಲವಾರು ದೇವಾಲಯಗಳ ವಾಸ್ತುಶೈಲಿಯ ಲಕ್ಷಣಗಳನ್ನು ತಿಳಿಸಲಾಗಿದೆ. ಏಕಕೂಟ ದೇವಾಲಯದಿಂದ ಆರಂಭಗೊಂಡು ನವಕೂಟ ದೇವಾಲಯದವರೆಗೆ ಅವುಗಳ ವಿವರಣೆಯನ್ನು ಸಂಕ್ಷಿಪ್ತವಾಗಿ ನೀಡಲಾಗಿದೆ. ಎರಡನೆಯ ಸಂಪುಟದಲ್ಲಿ ದೇವಾಲಯಗಳ ತಲನಕ್ಷೆ ಹಾಗೂ 540 ಛಾಯಾಚಿತ್ರಗಳನ್ನು ನೀಡಲಾಗಿದೆ. [36]

**ಗೋಪಿನಾಥ್,ಟಿ.ಎ**. ಅವರ 'ದಿ ಎಲಿಮೆಂಟ್ಸ್ ಆಫ್ ಹಿಂದೂ ಐಕಾನೋಗ್ರಫಿ' (1911) ಎಂಬ ಗ್ರಂಥದಲ್ಲಿ ಶಿಲ್ಪಗಳ ಪ್ರತಿಮಾ ಲಕ್ಷಣಗಳನ್ನು ಕುರಿತಂತೆ ಉಲ್ಲೇಖಗಳಿವೆ. ಇತ್ತೀಚಿನ ವರ್ಷಗಳಲ್ಲಿ ಪ್ರಕಟವಾದ ಶ್ರೀನಿವಾಸ್ ವಿ. ಪಾಡಿಗಾರ್‌ರವರ 'ದಿ ಕಲ್ಟ್ ಆಫ್ ವಿಷ್ಣು' ಎಂಬ ಕೃತಿ ಹೊಯ್ಸಳ ಶಿಲ್ಪಗಳ ಉದಾಹರಣೆಗಳೊಂದಿಗೆ ಪ್ರತಿಮಾ ಲಕ್ಷಣಗಳನ್ನು ಕುರಿತಂತೆ ವಿವರಿಸುತ್ತದೆ. [37]

**ಡಾ.ಆರ್.ಗೋಪಾಲ್**. ಅವರ'ತುಮಕೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ'–2009, ಇದು 584 ಪುಟಗಳನ್ನು ಹೊಂದಿದ್ದು ಇತಿಹಾಸ, ಪುರಾತತ್ವ, ನಾಣ್ಯಶಾಸ್ತ್ರ, ಶಾಸನಶಾಸ್ತ್ರ, ದೇವಾಲಯ, ಕಲೆ ಮತ್ತು ವಾಸ್ತುಶಿಲ್ಪ, ದಾನದತ್ತಿಗಳು, ಸ್ಮಾರಕಗಳು, ಕೋಟೆ ಕೊತ್ತಲಗಳು,

ಪ್ರಾಚ್ಯಾವಶೇಷಗಳು, ನಾಣ್ಯಗಳು, ಆರಂಭದ ಅರಸರು, ಸ್ಥಳನಾಮಗಳು, ಕೃಷಿ, ಧಾರ್ಮಿಕ ಚರಿತ್ರೆ, ಅಗ್ರಹಾರಗಳು ಒಟ್ಟಾರೆ ಸಾಂಸ್ಕೃತಿಕ ಅಧ್ಯಯನಕ್ಕೆ ಸಂಬಂಧಿಸಿದ ಇತಿಹಾಸ ಏಳುಬೀಳಿನ ಕಥೆಯನ್ನು ನಿರೂಪಿಸುವಂತಹ ಜೊತೆಗೆ ಇಡೀ ಜಿಲ್ಲೆಯ ಸಮಗ್ರ ಮಾಹಿತಿಯನ್ನು ಒಳಗೊಂಡಂತೆ ಸಂಶೋಧನಾಸಕ್ತ ವಿದ್ಯಾರ್ಥಿಗಳಿಗೆ, ವಿದ್ವಾಂಸರಿಗೆ ಮತ್ತು ಇತಿಹಾಸ ಆಸಕ್ತರಿಗೆ ಅಧ್ಯಯನದ ಸಲುವಾಗಿ ಹೆಚ್ಚಿನ ಮಹತ್ವವನ್ನು ಒಳಗೊಂಡ ಆಮೂಲಾಗ್ರ ಕೃತಿಗಳಲ್ಲಿ ಇದು ಕೂಡ ಒಂದು. [38]

**ಡಾ.ಮುದ್ದುವೀರಪ್ಪ**. ಅವರ ತುಮಕೂರು ಜಿಲ್ಲೆಯ ಕೋಟೆಯ ಸಾಂಸ್ಕೃತಿಕ ಒಳನೋಟಗಳು (2011)–ಈ ಗ್ರಂಥದಲ್ಲಿ ತುಮಕೂರು ಜಿಲ್ಲೆಯ ಚಾರಿತ್ರಿಕ ಹಿನ್ನೆಲೆ, ಸ್ಥಳನಾಮಗಳು, ಕೋಟೆಗಳು, ಐತಿಹ್ಯಗಳು, ಗಾದೆ ಮತ್ತು ನಂಬಿಕೆಗಳು. ಧಾರ್ಮಿಕ ಆಚರಣೆಗಳು ಮತ್ತು ಸಂಸ್ಕೃತಿ ವಿಚಾರಗಳನ್ನು ಸ್ಪಷ್ಟಪಡಿಸುವ ಅತ್ಯಮೂಲ್ಯ ಕೃತಿಯಾಗಿದ್ದು 402 ಪುಟಗಳನ್ನು ಹೊಂದಿದೆ. [39]

**ಡಾ.ಪಿ.ವಿ.ಕೃಷ್ಣಮೂರ್ತಿ**.ಶಾಸನಮಂಥನ–2011, ಈ ಗ್ರಂಥದಲ್ಲಿ ಶಾಸನ, ವೀರಗಲ್ಲು, ಮಾಸ್ತಿಕಲ್ಲು, ಶಾಸನಶಿಲ್ಪ, ಶಾಸನಗಳು, ಚಾರಿತ್ರಿಕ ಮಹತ್ವ, ಸಾಮಾಜಿಕ, ಆರ್ಥಿಕ, ಧಾರ್ಮಿಕ ಸಾಹಿತ್ಯ, ಶೈವ, ವೈಷ್ಣವ ಮತ್ತು ಜೈನಧರ್ಮಕ್ಕೆ ಸಂಬಂಧಪಟ್ಟಂತೆ ಹೆಚ್ಚಿನ ಮಾಹಿತಿಗಳಿದ್ದು, ಇದೊಂದು ಮಹತ್ವದ ಗ್ರಂಥವಾಗಿದ್ದು 358 ಪುಟಗಳನ್ನು ಒಳಗೊಂಡಿದ್ದು, ಸಂಶೋಧಕರಿಗೆ ಅತ್ಯುಪಯುಕ್ತ ಕೃತಿಯಾಗಿದೆ. [40]

**ಡೇವಿಡ್**. ಅವರ ತುಮಕೂರು ಜಿಲ್ಲೆಯ ಚಿತ್ರಕಲೆ ಒಂದು ಸಾಂಸ್ಕೃತಿಕ ಅಧ್ಯಯನ–2011–ಈ ಗ್ರಂಥವು 345 ಪುಟಗಳನ್ನು ಹೊಂದಿದ್ದು ತುಮಕೂರು ಜಿಲ್ಲೆಯ ಸಾಂಪ್ರದಾಯಿಕ ಚಿತ್ರಕಲೆಗಳು, ಜಾನಪದೀಯ ಬೆಳವಣಿಗೆ, ಭಿತ್ತಿ ಚಿತ್ರಕಲೆ, ಶಿಲ್ಪಕಲೆ, ಸಾಂಪ್ರದಾಯಿಕ ಶಿಲ್ಪಕಲೆ, ವಾಸ್ತು, ಶಿಲ್ಪ, ದೇವಾಲಯಗಳು, ಬಸದಿಗಳು, ಗಿರಿದುರ್ಗಗಳು ಕರ್ನಾಟಕಕ್ಕೆ ಕ್ರೈಸ್ತರ ಕೊಡುಗೆಗಳು, ಸಾಂಸ್ಕೃತಿಕ ಅವಲೋಕನವನ್ನು ಒಳಗೊಂಡಂತೆ ವಿಶ್ಲೇಷಣಾತ್ಮಕ ಕೃತಿಯಾಗಿದ್ದು ಈ ಹಿನ್ನೆಲೆಯಲ್ಲಿ ಹೆಚ್ಚಿನ ರೀತಿಯಲ್ಲಿ ನೆರವಾಗಬಲ್ಲ ಕೃತಿಯಾಗಿದೆ. [41]

**ಡಾ.ಶ್ರೀಪಾದ ಭಟ್, ಎಲ್.ಪುಟ್ಟರಾಜು,** ಪ್ರೊ.ಡಿ.ಶಿವಲಿಂಗಯ್ಯ (ಪ್ರಧಾನ ಸಂಪಾದಕರು) ತುಮಕೂರು ಜಿಲ್ಲೆಯ ಸ್ಥಳನಾಮಗಳು–2011, ಈ ಕೃತಿಯು 170 ಪುಟಗಳನ್ನು ಹೊಂದಿದ್ದು, ತುಮಕೂರು ಜಿಲ್ಲೆಯ ಸ್ಥಳನಾಮಗಳು, ಅವುಗಳ ವ್ಯಾಪ್ತಿ, ಸ್ಥಳನಾಮದ ವಿಜ್ಞಾನ ಇತಿಹಾಸ, ತುರುವೇಕೆರೆ ತಾಲೂಕಿನ ಭೌಗೋಳಿಕ, ಪ್ರಾಣಿವಾಚಕ, ಸ್ವಯಂವಾಚಕ, ಧರ್ಮವಾಚಕ,

ಐತಿಹಾಸಿಕ ಸ್ಥಳನಾಮಗಳ ಬಗ್ಗೆ ಸ್ಥೂಲವಾದ ವಿವರಣೆಯನ್ನು ನೀಡುತ್ತದೆ. ತುಮಕೂರು ಜಿಲ್ಲಾ ಪ್ರದೇಶವನ್ನು ಸಂಶೋಧನಾತ್ಮಕವಾಗಿ ಅಧ್ಯಯನ ಮಾಡುವವರಿಗೆ ಅತ್ಯಮೂಲ್ಯ ಗ್ರಂಥವಾಗಿದೆ. [42]

**ಡಾ.ಹೆಚ್.ತಿಪ್ಪೇರುದ್ರಸ್ವಾಮಿ**. ಅವರ ಕರ್ನಾಟಕ ಸಂಸ್ಕೃತಿ ಸಮೀಕ್ಷೆ-2013 ಈ ಗ್ರಂಥದಲ್ಲಿ ಭಾರತೀಯ ಸಂಸ್ಕೃತಿ, ಪ್ರಾಚೀನತೆ, ಕರ್ನಾಟಕದಲ್ಲಿ ಆಳ್ವಿಕೆ ನಡೆಸಿದ ರಾಜಮನೆತನಗಳು ಆಡಳಿತ ಕ್ರಮಕ್ಕೆ ಸಂಬಂಧಿಸಿದಂತೆ ಧಾರ್ಮಿಕ ಪರಿಸ್ಥಿತಿ ಹಾಗೂ ವಿದ್ಯಾಭ್ಯಾಸ, ಶಾಸನಗಳಲ್ಲಿ ಸಂಸ್ಕೃತಿ ಅದರಲ್ಲಿ ಶಾಸನ ಸಂಪತ್ತು, ವೀರಗಲ್ಲು, ದಾನಶಾಸನಗಳು ಮತ್ತು ವಾಸ್ತುಶಿಲ್ಪ ಮತ್ತು ಶಿಲ್ಪಕಲೆಗೆ ಸಂಬಂಧಿಸಿದಂತೆ ಉಗಮ, ಬೆಳವಣಿಗೆ, ಚಾಲುಕ್ಯ, ಹೊಯ್ಸಳ, ವಿಜಯನಗರ ಮತ್ತು ಮುಸ್ಲಿಂ ಕಲೆ ಮತ್ತು ವಾಸ್ತುಶಿಲ್ಪಕ್ಕೆ ಸಂಬಂಧಿಸಿದಂತೆ ಸಮಗ್ರ ಅಧ್ಯಯನ ಕುರಿತ ವಿಷಯಗಳನ್ನು ಒಂದೇ ಕಡೆ ನಿರೂಪಿಸಿರುವುದು ಈ ಗ್ರಂಥದಲ್ಲಿ ಕಂಡುಬಂದಿದ್ದು 816 ಪುಟಗಳನ್ನು ಹೊಂದಿರುವ ಈ ಗ್ರಂಥವು ಸಂಶೋಧನಾತ್ಮಕವಾಗಿ ಅತ್ಯುಪಯುಕ್ತ ಕೃತಿಯಾಗಿದೆ. [43]

**ಡಾ.ಜಿ.ಮನೋಜ್**.ಅವರದೇವಾಲಯ ವಾಸ್ತು ವಿಜ್ಞಾನ ಶಾಸ್ತ್ರಗಳ ಹಿನ್ನೆಲೆಯಲ್ಲಿ-2015 ಎಂಬ ಕೃತಿಯು ಒಟ್ಟು 155 ಪುಟಗಳನ್ನು ಹೊಂದಿದ್ದು ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪಕ್ಕೆ ಸಂಬಂಧಿಸಿದ ದೇವಾಲಯದ ಉಗಮ, ವ್ಯಾಖ್ಯಾನಗಳು, ದ್ರಾವಿಡ ದೇವಾಲಯಗಳ ವಾಸ್ತುಪರಿಚಯ, ದೇವಾಲಯದ ಪ್ರಮುಖ ಭಾಗಗಳು, ಅವುಗಳ ಲಕ್ಷಣಗಳು, ಸ್ತಂಭಗಳ ವಿಧಗಳು, ನಾಗರ ಮತ್ತು ವೇಸರಶೈಲಿ ದೇವಾಲಯಗಳ ಕಲಾಲಕ್ಷಣಗಳನ್ನು ಸಮಗ್ರವಾಗಿ ಈ ಕೃತಿಯಲ್ಲಿ ಚರ್ಚಿಸಿದ್ದು ಸಂಶೋಧನಾಸಕ್ತರಿಗೆ ಅತ್ಯಮೂಲ್ಯ ಕೃತಿಯಾಗಿದೆ. [44]

ಅನೇಕ ಪಾಶ್ಚಾತ್ಯ ವಿದ್ವಾಂಸರು ಭಾರತದ ದೇವಾಲಯಗಳ ಉಗಮ, ಬೆಳೆವಣಿಗೆ ಹಾಗೂ ಲಕ್ಷಣಗಳನ್ನು ಕುರಿತು ಜಿಜ್ಞಾಸೆ ನಡೆಸಿದ್ದಾರೆ. ಪರ್ಸಿ ಬ್ರೌನ್‌ರವರ 'ಇಂಡಿಯನ್ ಟೆಂಪಲ್ ಆರ್ಕಿಟೆಕ್ಚರ್' ಎಂಬ ಗ್ರಂಥ ಭಾರತದ ಬೌದ್ಧ, ಜೈನ ಮತ್ತು ಹಿಂದೂ ದೇವಾಲಯಗಳ ಉಗಮ ಮತ್ತು ವಿಕಾಸದ ಬಗ್ಗೆ ವಿವರಣೆ ನೀಡುವ ಮಹತ್ವದ ಗ್ರಂಥವಾಗಿದೆ. ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪಗಳ ಬಗ್ಗೆ ಸಂಶೋಧನೆ ಮಾಡುವವರಿಗೆ ಆಧಾರ ಕೃತಿಯಾಗಿದೆ.

**ಡಾಖೆ,ಎಂ.ಎ.**ಅವರ 'ದಿ ಇಂಡಿಯನ್ ಟೆಂಪಲ್ಸ್ ಪಾರ್ಮ್ಸ್' (1977) ಎಂಬ ಗ್ರಂಥದಲ್ಲಿ ಸುಮಾರು 51 ಚಿತ್ರಗಳ ಸಹಿತ ದೇವಾಲಯಗಳ ವಾಸ್ತುಶೈಲಿ ಲಕ್ಷಣಗಳನ್ನು ತಿಳಿಸಿದ್ದಾರೆ. ಪ್ರಾಚೀನ ಗ್ರಂಥಗಳ ಮೂಲ ವಿಚಾರಗಳೊಂದಿಗೆ ಹೋಲಿಸಿ ವಾಸ್ತುವಿನ ಬೆಳೆವಣಿಗೆಯನ್ನು

ತಿಳಿಸಲಾಗಿದೆ. ನಾಗರ, ದ್ರಾವಿಡ, ವೇಸರ ಶೈಲಿಯ ಲಕ್ಷಣಗಳ ವಿವರಣೆ ನೀಡಲಾಗಿದೆ. ಹಳೇ ಮೈಸೂರು ಪ್ರಾಂತ್ಯದಲ್ಲಿ ಹೊಯ್ಸಳರ ಕಾಲದಲ್ಲಿ ವೇಸರಶೈಲಿ ಅತ್ಯುನ್ನತ ಮಟ್ಟಕ್ಕೇರಿತು ಎಂದು ಅಭಿಪ್ರಾಯಪಟ್ಟಿದ್ದಾರೆ. ಡಾಖಿ, ಎಂ.ಎ.ಮತ್ತು ಮೈಕಲ್ ಮೈಸ್ಟರ್‌ರವರು ಸಂಪಾದಿಸಿದ 'ಇಂಡಿಯನ್ ಟೆಂಪಲ್ ಆರ್ಕಿಟೆಕ್ಚರ್ ಆಫ್ ಸೌತ್ ಇಂಡಿಯಾ', 'ಲೊಯರ್ ದ್ರಾವಿಡದೇಶ' (1983) 'ಅಪ್ಪರ್ ದ್ರಾವಿಡದೇಶ' (1986) ಎಂಬ ಶಬ್ದಕೋಶಗಳಲ್ಲಿ (ಭಾಗ 1, 2, 3) ಭಾರತೀಯ ದೇವಾಲಯಗಳ ವಾಸ್ತುಲಕ್ಷಣಗಳ ಸಂಪೂರ್ಣ ವಿವರಣೆಯನ್ನು ನೀಡಲಾಗಿದೆ. ಇವುಗಳಲ್ಲಿ ದ್ರಾವಿಡ ಮತ್ತು ನಾಗರಶೈಲಿಯ ದೇವಾಲಯಗಳನ್ನು ಕುರಿತಂತೆ ಅನೇಕ ವಿಚಾರಗಳಿವೆ. [45]

**ಜಾರ್ಜ್ ಮೆಕಾಲೆ**. ಅವರ 'ವಿಜಯನಗರ ಆರ್ಕಿಟೆಕ್ಚರಲ್ ಇನ್‌ವೆಂಟರಿ ಆಫ್ ದಿ ಅರ್ಬನ್ ಕೋರ್' (1990, ಭಾಗ-1, 2) ಎಂಬ ಗ್ರಂಥದಲ್ಲಿ ವಿಜಯನಗರ ಕಾಲದ ಕೆಲವು ದೇವಾಲಯಗಳ ವಾಸ್ತುಶೈಲಿಯ ಬೆಳವಣಿಗೆಯನ್ನು ನಕ್ಷೆಗಳ ಮೂಲಕ ವಿವರಣೆ ನೀಡಲಾಗಿದೆ. ಭಾಗ-1ರಲ್ಲಿ ವಿವರಣೆ, ನಕ್ಷೆಗಳು ಹಾಗೂ ಭೂಪಟಗಳನ್ನು ಭಾಗ ಎರಡರಲ್ಲಿ 540 ಛಾಯಾಚಿತ್ರಗಳನ್ನು ನೀಡಲಾಗಿದೆ. [46]

**ಗೆರಾರ್ಡ್ ಪೊಕೇಮಾ**. ಅವರ 'ಹೊಯ್ಸಳ ಟೆಂಪಲ್ಸ್' (1996) ಎಂಬ ಗ್ರಂಥದಲ್ಲಿ ಸುಮಾರು 15 ಹೊಯ್ಸಳ ದೇವಾಲಯಗಳ ವಾಸ್ತುಶಿಲ್ಪಗಳನ್ನು ಕುರಿತ ವಿವರಗಳಿವೆ. ಹೊಯ್ಸಳ ದೇವಾಲಯಗಳ ನಿರ್ಮಾಣದ ತಾಂತ್ರಿಕತೆ, ದೇವಾಲಯದ ವಿನ್ಯಾಸಗಳು, ಭಿತ್ತಿ, ವಿಮಾನ, ನವರಂಗ ಹಾಗೂ ಎಲ್ಲಕ್ಕಿಂತ ಮುಖ್ಯವಾಗಿ ದೇವಾಲಯಗಳ ತಲವಿನ್ಯಾಸಗಳ ಬಗ್ಗೆ ವಿಶೇಷವಾಗಿ ಗಮನಹರಿಸಲಾಗಿದೆ. [47]

**ಸ್ಟೆಲ್ಲಾ ಕ್ರಾಮ್‌ರಿಶ್ಚ್**. ಅವರ ಇಂಡಿಯನ್ ಸ್ಕಲ್ಪ್‌ಚರ್-2013, ಎಂಬ ಕೃತಿಯಲ್ಲಿ ಭಾರತೀಯ ಶಿಲ್ಪಕಲಾ ಕೃತಿಗೆ ಸಂಬಂಧಿಸಿದಂತೆ ಸಿಂಧೂ ಬಯಲಿನ ನಾಗರೀಕತೆಯಿಂದ ಪ್ರಾರಂಭಿಸಿ ಮಧ್ಯಕಾಲೀನ ಯುಗದವರೆಗೆ ಅಂದರೆ ಪ್ರಾಚೀನ, ಸಾಂಪ್ರದಾಯಿಕ, ಮಧ್ಯಕಾಲೀನ ಇತಿಹಾಸದ ಅಂತ್ಯದವರೆಗೂ ಶಿಲ್ಪಕಲೆಯ ಉಗಮ ಮತ್ತು ಬೆಳವಣಿಗೆ ಎಷ್ಟರಮಟ್ಟಿಗೆ ಊರ್ಜಿತಗೊಂಡವು ಎಂಬುದನ್ನು ಸಮಗ್ರವಾದ ವಿವರವನ್ನು ನೀಡಲಾಗಿರುವ ಕೃತಿಯಾಗಿದ್ದು 241 ಪುಟಗಳನ್ನು ಒಳಗೊಂಡಿದೆ. ಜೊತೆಗೆ 116 ಛಾಯಾಚಿತ್ರಗಳನ್ನು ಈ ಕೃತಿಯು ಹೊಂದಿದ್ದು ಸಂಶೋಧನಾಸಕ್ತರಿಗೆ ಉಪಯುಕ್ತ ಕೃತಿಯಾಗಿದೆ. [48]

**ಮೈಸೂರು ನಾಗರಾಜಶರ್ಮಾ**.ಅವರ ಹೊಯ್ಸಳ ಶಿಲ್ಪದಲ್ಲಿ ಶಿವ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು-2010, ಈ ಕೃತಿಯು ಹೊಯ್ಸಳ ದೇವಾಲಯಗಳಲ್ಲಿ ಕಂಡುಬರುವ ಲಿಂಗ ಸ್ವರೂಪಿ, ಶೈವ ಪರಂಪರೆಯ ಬಗ್ಗೆ ಉಲ್ಲೇಖಿಸುತ್ತದೆ. ಲಿಂಗಗಳ ಉದ್ಭವ, ಶೈವಾಗಮಗಳ ವರ್ಣನೆ, ದೇವಾಲಯಗಳ ಲಕ್ಷಣಗಳು, ದೇವಾಲಯಗಳ ಕೂಟ ರಚನೆ, ದೇವಾಲಯಗಳ ವಿವಿಧ ಭಾಗಗಳ ಬಗ್ಗೆ ಚರ್ಚಿಸುತ್ತದೆ. [49]

**ಡಾ.ಡಿ.ಎನ್.ಯೋಗೀಶ್ವರಪ್ಪ**. ಅವರ ಕಲ್ಪಶೋಧ (ತುಮಕೂರು ಜಿಲ್ಲೆಯ ಸಂಶೋಧನಾ ಲೇಖನಗಳು) ಪ್ರಗತಿ ಗ್ರಾಫಿಕ್ಸ್, ಬೆಂಗಳೂರು, 2012, ಈ ಕೃತಿಯು ತುಮಕೂರು ಜಿಲ್ಲೆಯನ್ನು ಒಳಗೊಂಡಂತೆ ಇತಿಹಾಸ, ದೇವಾಲಯಗಳು, ನಾಡಪ್ರಭುಗಳು, ತಾಲೂಕಿನ ಸ್ಥಳನಾಮಗಳು, ತುಮಕೂರು ಜಿಲ್ಲೆಯ ಆಧುನಿಕ ಇತಿಹಾಸ ಮುಂತಾದ ವಿಷಯಗಳ ಬಗ್ಗೆ ಸಂಪೂರ್ಣ ಮಾಹಿತಿಯನ್ನು ನೀಡುತ್ತದೆ. [50]

ಈ ಮೇಲೆ ವಿವರಿಸಿದ ಲೇಖಕರುಗಳಲ್ಲದೆ ಹಲವಾರು ವಿದ್ವಾಂಸರು ಕರ್ನಾಟಕದ ದೇವಾಲಯಗಳ ವಾಸ್ತು ಮತ್ತು ಶಿಲ್ಪಕ್ಕೆ ಸಂಬಂಧಿಸಿದಂತೆ ಲೇಖನಗಳನ್ನು ಪ್ರಕಟಿಸಿದ್ದಾರೆ. 'ಇತಿಹಾಸ ದರ್ಶನ', 'ಸ್ಟಡೀಸ್ ಇನ್ ಕರ್ನಾಟಕ ಹಿಸ್ಟರಿ ಅಂಡ್ ಕಲ್ಚರ್' 'ವಿಜಯನಗರ ಅಧ್ಯಯನ' ಮೊದಲಾದ ಗ್ರಂಥಗಳ ಸಂಪುಟಗಳಲ್ಲಿ ಲೇಖನಗಳು ಸಂಗ್ರಹಗೊಂಡಿವೆ. ಈ ಎಲ್ಲಾಮಾಹಿತಿಗಳನ್ನು ಗಮನಿಸಿ, ವಿಶ್ಲೇಷಿಸಿ ನನ್ನ ಅಧ್ಯಯನದಲ್ಲಿ ಸಂದರ್ಭೋಚಿತವಾಗಿ ಬಳಸಿಕೊಳ್ಳಲು ಪ್ರಯತ್ನಿಸಿದ್ದೇನೆ. ಜೊತೆಗೆ ಕ್ಷೇತ್ರಕಾರ್ಯ ಕೈಗೊಂಡು ಪ್ರತಿಯೊಂದು ದೇವಾಲಯವನ್ನು ಪರಿಶೀಲಿಸಿ ವಿವರಗಳನ್ನು ಟಿಪ್ಪಣಿ ಮಾಡಿಕೊಂಡು ಅಧ್ಯಯನದ ಫಲವನ್ನು ನನ್ನ ಸಂಶೋಧನಾ ಮಹಾಪ್ರಬಂಧದಲ್ಲಿ ಅಳವಡಿಸಿಕೊಂಡಿದ್ದೇನೆ ಹಾಗೂ ಆಯಾಕ್ಷೇತ್ರದ ಸ್ಥಳ ಪುರಾಣಗಳನ್ನು ಸಂಗ್ರಹಿಸಿ ಅವುಗಳ ಉಪಯೋಗವನ್ನು ಸೂಕ್ತವಾಗಿ ಮಾಡಿಕೊಂಡಿದ್ದೇನೆ. ಅಧ್ಯಯನಕ್ಕೆ ಪೂರಕವಾಗಿ ಭೂಪಟಗಳು, ತಳನಕ್ಷೆಗಳು, ದೇವಾಲಯಗಳ ಪಟ್ಟಿ ಹಾಗೂ ಛಾಯಾಚಿತ್ರಗಳನ್ನು ಮಹಾಪ್ರಬಂಧದಲ್ಲಿ ನೀಡಲಾಗಿದೆ.

## ಅಡಿ ಟಿಪ್ಪಣಿಗಳು

1. ತಿಪ್ಪೇರುದ್ರಸ್ವಾಮಿ, ಎಚ್. ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಮೈಸೂರು, 2010, ಪು.ಸಂ.523
2. ಗೋಪಾಲ್.ಬಾ.ರಾ. ಕರ್ನಾಟಕದ ಕಲೆಗಳು, ಸಂಪುಟ, 4, ವಾಸ್ತು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 2010, ಪು.ಸಂ.1
3. ತಿಪ್ಪೇರುದ್ರಸ್ವಾಮಿ, ಪೂರ್ವೋಕ್ತ, ಪು.ಸಂ.523
4. ಪಾಟೀಲ್ ಪುಟ್ಟಪ್ಪ, ಈ ಕನ್ನಡ ನಾಡು ನನ್ನದು, ಮೈಸೂರು, ಪು.ಸಂ.115
5. ಕನ್ನಡ ವಿಶ್ವಕೋಶ, ಮೈಸೂರು ವಿಶ್ವವಿದ್ಯಾನಿಲಯ, ಸಂಪುಟ, ಪು.ಸಂ.60
6. ಮೈಸೂರು ಜಿಲ್ಲಾ ಗ್ಯಾಸೆಟಿಯರ್, ತುಮಕೂರು ಜಿಲ್ಲೆ, 1969, ಪು.ಸಂ.5–7
7. ಪೂರ್ವೋಕ್ತ, ಪು.ಸಂ.9–14
8. ಪೂರ್ವೋಕ್ತ,
9. ಪೂರ್ವೋಕ್ತ, ಪು.ಸಂ.20–21
10. ಎಂ.ಎ.ಆರ್.1916, ಪು.ಸಂ.3
11. ಪೂರ್ವೋಕ್ತ, ಪು.ಸಂ.3
12. ಎ.ಕ.ಸಂ.12, ಶಾ.ಸಂ.31, ಪು.ಸಂ.133
13. ಎಂ.ಎ.ಆರ್. 1916, ಪು.ಸಂ.3
14. ಪೂರ್ವೋಕ್ತ, ಪು.ಸಂ.3
15. ವೆಂಕೋಬರಾಯ, ಬಿ.'ಮೈಸೂರು ದೇಶದ ವಾಸ್ತುಶಿಲ್ಪ' ಬೆಂಗಳೂರು, 1928
16. ಶ್ರೀನಿವಾಸನ್,ಪಿ.ಆರ್. 'ದಕ್ಷಿಣ ಭಾರತದ ದೇವಾಲಯಗಳು', ಮೈಸೂರು, 1959
17. ಶ್ರೀಕಂಠಶಾಸ್ತ್ರಿ, ಎಸ್. 'ಹೊಯ್ಸಳ ವಾಸ್ತುಶಿಲ್ಪ' ಮೈಸೂರು ವಿ.ವಿ. ಮೈಸೂರು, 1965
18. ಮಹಾಲಿಂಗಮ್,ಟಿ.ವಿ. 'ದಿ ಸೌತ್ ಇಂಡಿಯನ್ ಟೆಂಪಲ್ ಕಾಂಪ್ಲೆಕ್ಸ್',1970
19. ಕಾಮೇಶ್ವರರಾವ್,ವಿ.'ಸೆಲೆಕ್ಟ್ ವಿಜಯನಗರ ಟೆಂಪಲ್ಸ್ ಆಫ್ ರಾಯಲಸೀಮೆ', 1976

20. ಆಚಾರ್ಯ,ಪಿ.ಕೆ. 'ಇಂಡಿಯನ್ ಆರ್ಕಿಟೆಕ್ಚರ್', 1979

21. ಮೇಟೆ,ಎಸ್.ಕೆ. 'ಮಾಸ್ಟರ್ ಪಿಸೀಸ್ ಆಫ್ ಹೊಯ್ಸಳ ಆರ್ಟ್ ಬೇಲೂರು, ಹಳೇಬೀಡು, ಸೋಮನಾಥಪುರ', 1979

22. ರಾಮಚಂದ್ರರಾವ್, ಎಸ್.ಕೆ.'ಭಾರತದ ದೇವಾಲಯ ನೆಲೆ–ಹಿನ್ನೆಲೆ' ಐಬಿಎಚ್ ಪ್ರಕಾಶನ,ಬೆಂಗಳೂರು, 1980

23. ಶೇಷಶಾಸ್ತ್ರಿ, ಆರ್. 'ಕರ್ನಾಟಕದ ವೀರಗಲ್ಲುಗಳು' ಧಾರವಾಡ–1982

24. ಇಸ್ಮಾಯಿಲ್,ಕೆ. 'ಕರ್ನಾಟಕ ಟೆಂಪಲ್ಸ್' ಬೆಂಗಳೂರು, 1984

25. ಸಿಂದಗಿರಾಜಶೇಖರ 'ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ' ಧಾರವಾಡ, 1988

26. ಪದ್ಮನಾಭ, ಕೆ. 'ಹೊಯ್ಸಳ ಸ್ಕಲ್ಪ್‌ಚರ್ಸ್ ಎ ಕಲ್ಚರಲ್ ಸ್ಟಡಿ', 1989

27. ದೇಜಗೌ. ಸ್ಥಳನಾಮ ವ್ಯಾಸಂಗ, ಮೈಸೂರು ವಿ.ವಿ. ಮೈಸೂರು, 1990

28. ಶೇಠೆ,ಬಿ.ಎಸ್. 'ಕರ್ನಾಟಕದಲ್ಲಿ ಸತಿಪದ್ಧತಿ', 1991

29. ಶರ್ಮ, ಐ.ಕೆ. 'ಟೆಂಪಲ್ಸ್ ಆಫ್ ದಿ ಗಂಗಾಸ್ ಆಫ್ ಕರ್ನಾಟಕ' ದೆಹಲಿ, 1992

30. ಎಸ್, ಶೆಟ್ಟರ್ 'ದಿ ಹೊಯ್ಸಳ ಟೆಂಪಲ್ಸ್ ಅಟ್ ಕರ್ನಾಟಕ', ಧಾರವಾಡ, 1992

31. ದೇವರಕೊಂಡಾರೆಡ್ಡಿ 'ತಲಕಾಡಿನ ಗಂಗರ ದೇವಾಲಯಗಳ ಒಂದು ಅಧ್ಯಯನ' ಬೆಂಗಳೂರು, 1994

32. ಶಿವರುದ್ರಸ್ವಾಮಿ, ಎಸ್.ಎನ್. 'ವಿಜಯನಗರ ಟೆಂಪಲ್ಸ್ ಇನ್ ಕರ್ನಾಟಕ', 1996

33. ಅಪರ್ಣ. ಕೂ.ಸ, ದೇವಾಲಯಗಳ ವಾಸ್ತುಶಿಲ್ಪ ಪರಿಚಯ, ಹಂಪಿ, 1999

34. ರಂಗರಾಜು, ಎನ್.ಎಸ್. 'ಹೊಯ್ಸಳ ಟೆಂಪಲ್ಸ್ ಇನ್ ಮಂಡ್ಯ ಅಂಡ್ ತುಮಕೂರು ಡಿಸ್ಟ್ರಿಕ್ಟ್ಸ್', ಪ್ರಸಾರಾಂಗ, ಮೈ.ವಿ.ವಿ. ಮೈಸೂರು, 2001

35. ಜ್ಞಾನಾನಂದ,ಜಿ. 'ಶಿಲ್ಪಾದರ್ಶ' ಹಂಪಿ, 2002

36. ಸುರೇಶ್,ಕೆ.ಎಂ. 'ಟೆಂಪಲ್ಸ್ ಆಫ್ ಕರ್ನಾಟಕ' ಹಂಪಿ, 2003

37. ಗೋಪಿನಾಥ್,ಟಿ.ಎ. 'ದಿ ಎಲಿಮೆಂಟ್ಸ್ ಆಫ್ ಹಿಂದೂ ಐಕಾನೋಗ್ರಫಿ' ದೆಹಲಿ, 1982

38. ಡಾ.ಆರ್.ಗೋಪಾಲ್.'ತುಮಕೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ',2009

39. ಡಾ.ಮುದ್ದುವೀರಪ್ಪ. ತುಮಕೂರು ಜಿಲ್ಲೆಯ ಕೋಟೆಯ ಸಾಂಸ್ಕೃತಿಕ ಒಳನೋಟಗಳು, 2011

40. ಡಾ.ಪಿ.ವಿ.ಕೃಷ್ಣಮೂರ್ತಿ. ಶಾಸನಮಂಥನ, 2011

41. ಡೇವಿಡ್.'ತುಮಕೂರು ಜಿಲ್ಲೆಯ ಚಿತ್ರಕಲೆ ಒಂದು ಸಾಂಸ್ಕೃತಿಕ ಅಧ್ಯಯನ', 2011

42. ಡಾ. ಶ್ರೀಪಾದ ಭಟ್, ಎಲ್.ಪುಟ್ಟರಾಜು, ಪ್ರೊ.ಡಿ.ಶಿವಲಿಂಗಯ್ಯ, (ಸಂ) ತುಮಕೂರು ಜಿಲ್ಲೆಯ ಸ್ಥಳನಾಮಗಳು, 2011

43. ಡಾ. ಹೆಚ್.ತಿಪ್ಪೇರುದ್ರಸ್ವಾಮಿ, ಕರ್ನಾಟಕ ಸಂಸ್ಕೃತಿ ಸಮೀಕ್ಷೆ, 2013

44. ಡಾ.ಜಿ.ಮನೋಜ್. ದೇವಾಲಯ ವಾಸ್ತು ವಿಜ್ಞಾನಶಾಸ್ತ್ರಗಳ ಹಿನ್ನೆಲೆಯಲ್ಲಿ-2015

45. ಡಾಖೆ, ಎಂ.ಎ.'ದಿ ಇಂಡಿಯನ್ ಟೆಂಪಲ್ಸ್ ಪಾರ್ಮ್', 1977

46. ಜಾರ್ಜ್ ಮೆಕಾಲೆ. 'ವಿಜಯನಗರ ಆರ್ಕಿಟೆಕ್ಚರಲ್ ಇನ್‌ವೆಂಟರಿ ಆಫ್ ದಿ ಅರ್ಬನ್ ಕೋರ್' (ಭಾಗ- 1, 2) 1990

47. ಗೆರಾರ್ಡ್ ಫೊಕೇಮಾ.'ಹೊಯ್ಸಳ ಟೆಂಪಲ್ಸ್' ನ್ಯೂಡೆಲ್ಲಿ-1996

48. ಸ್ಟೆಲ್ಲಾ ಕ್ರಾರ್ಮರಿಶ್ಚ್. ಇಂಡಿಯನ್ ಸ್ಕಲ್ಪ್‌ಚರ್, 2013

49. ಮೈಸೂರು ನಾಗರಾಜಶರ್ಮಾ. 'ಹೊಯ್ಸಳ ಶಿಲ್ಪದಲ್ಲಿ ಶಿವ', ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು-2010

50. ಡಾ.ಡಿ.ಎನ್.ಯೋಗೀಶ್ವರಪ್ಪ. 'ಕಲ್ಪಶೋಧ' (ತುಮಕೂರು ಜಿಲ್ಲೆಯ ಸಂಶೋಧನಾ ಲೇಖನಗಳು) ಪ್ರಗತಿ ಗ್ರಾಫಿಕ್ಸ್, ಬೆಂಗಳೂರು, 2012

# ಅಧ್ಯಾಯ–2

## ತುಮಕೂರು ಜಿಲ್ಲೆಯನ್ನೊಳಗೊಂಡಂತೆ ರಾಜಕೀಯ ಇತಿಹಾಸ

ಯಾವುದೇ ಒಂದು ರಾಷ್ಟ್ರದ ಅಥವಾ ಪ್ರದೇಶದ ಸಾಂಸ್ಕೃತಿಕ ಇತಿಹಾಸ ರಚನೆಗೆ ಹಾಗೂ ರಾಜಕೀಯ, ಸಾಮಾಜಿಕ, ಅರ್ಥಿಕ, ಧಾರ್ಮಿಕ ಇತಿಹಾಸದ ಪುನರ್ರಚನೆಗೆ ಆ ಪ್ರದೇಶದಲ್ಲಿ ದೊರೆಯುವ ಪುರಾತತ್ವ ಅವಶೇಷಗಳು, ಪುರಾತತ್ವ ನೆಲೆಗಳು, ನಾಣ್ಯಗಳು, ಶಾಸನಗಳು ಮತ್ತು ಪ್ರಾಚೀನ ಸ್ಮಾರಕಗಳೇ ಪ್ರಮುಖ ಆಧಾರವಾಗಿರುತ್ತವೆ. ಈ ಪ್ರದೇಶದಲ್ಲಿ ಕಂಡುಬರುವ ಪ್ರಾಚೀನ ಪುರಾತತ್ವ ನೆಲೆಗಳನ್ನು ಗಮನಿಸಿದಾಗ ತುಮಕೂರು ಜಿಲ್ಲೆಯು ಪ್ರಾಚೀನ ಮಾನವನ ವಾಸಕ್ಕೆ ಯೋಗ್ಯವಾಗಿತ್ತೆಂದು ತಿಳಿದುಬರುತ್ತದೆ.

ಈ ಹಿನ್ನೆಲೆಯಲ್ಲಿ ತುಮಕೂರು ಜಿಲ್ಲೆಯು ಫಲವತ್ತಾದ ಭೂಮಿಯನ್ನು ಹೊಂದಿದ್ದು, ಬೆಟ್ಟಗುಡ್ಡ, ನದಿ, ಕಣಿವೆಗಳಿಂದ ಆವೃತವಾಗಿದ್ದು ಪ್ರಾಣಿಸಂಪತ್ತು ವಾಸಮಾಡಲು ಯೋಗ್ಯವಾದ ನೈಸರ್ಗಿಕ ಆವಾಸಗಳು, ಶಿಲಾಯುಧಗಳನ್ನು ತಯಾರಿಸಲು ಅವಶ್ಯಕವಾದ ವಿವಿಧ ಜಾತಿಯ ಶಿಲಾಮಾಧ್ಯಮಗಳು ಇನ್ನೂ ಮುಂತಾದ ನೈಸರ್ಗಿಕ ಸಂಪನ್ಮೂಲಗಳಿಂದ ಕೂಡಿದ ಪ್ರದೇಶವಾಗಿದ್ದು, ಮಾನವನ ಜೀವನದ ವಿಕಾಸದಲ್ಲಿ ಸಾಕಷ್ಟು ಪ್ರಾಮುಖ್ಯತೆಯನ್ನು ಪಡೆದಿದೆ. ತುಮಕೂರು ಜಿಲ್ಲೆಯ ಕೆಲವು ಸ್ಥಳಗಳೊಂದಿಗೆ ರಾಮಾಯಣ ಹಾಗೂ ಮಹಾಭಾರತದ ಕಥೆಗಳು ಹೆಣೆದುಕೊಂಡಿದ್ದು, ಋಷಿಮುನಿಗಳ ತಪೋಭೂಮಿಯಾಗಿತ್ತೆಂಬ ವಾಡಿಕೆ ಇದೆ

**ಇತಿಹಾಸ ಪೂರ್ವಕಾಲ**

ಇತಿಹಾಸದ ಪೂರ್ವ ಕಾಲದ ಮಾನವನ ಸಾಂಸ್ಕೃತಿಕ ಇತಿಹಾಸದ ಬಗ್ಗೆ ಅಧ್ಯಯನ ಮಾಡಬೇಕಾಗಿದೆ. ಪರಿಸರ ವ್ಯವಸ್ಥೆಯ ಬಗ್ಗೆ ಹೆಚ್ಚಿನ ಪ್ರಜ್ಞೆ ಆಸಕ್ತಿದಾಯಕವಾಗಿದೆ. ಅಂದರೆ ಮಾನವೀಯ ಮೌಲ್ಯವನ್ನು ಎತ್ತಿ ಹಿಡಿಯುವಲ್ಲಿ ಭೂಗೋಳವು ಧಾರ್ಮಿಕ ಹಾಗೂ ಸಾಂಸ್ಕೃತಿಕ ಸಂಗತಿಗಳನ್ನು ತುಲನಾತ್ಮಕವಾಗಿ ಮಾಡುವುದೇ ಅಗಿರುತ್ತದೆ.

ಇತ್ತೀಚೆಗೆ ನಡೆದಿರುವ ಸಂಶೋಧನೆಗಳಿಂದ ಪೂರ್ವಇತಿಹಾಸವನ್ನು ಸರಿಯಾಗಿ ತಿಳಿಯಲು ಆ ಕಾಲದ ವಾತಾವರಣ, ಹವಮಾನ ಮುಂತಾದ ವಿಷಯಗಳ ಗ್ರಹಿಕೆ ಅತ್ಯವಶ್ಯಕವೆಂದು ದೃಢಪಟ್ಟಿದೆ. ಇತಿಹಾಸ ಪೂರ್ವ ಕಾಲದ ಸಂಸ್ಕೃತಿಯನ್ನು ಮಾನವ ಕಾರ್ಯಚಟುವಟಿಕೆಯ ರೂಪವೆಂದು ಒಪ್ಪುವುದಾದರೆ, ಆ ಕಾರ್ಯ ಚಟುವಟಿಕೆ ಯಾವ ವಾತಾವರಣಕ್ಕೆ ಹೊಂದಿಕೊಂಡು ಬೆಳೆಯಿತು ಎಂಬುದು ಪರಿಶೀಲನಾರ್ಹ. ಮಾನವಿಕ

ಭೂಗೋಳಶಾಸ್ತ್ರವು ಭೌಗೋಳಿಕ ಪ್ರದೇಶ ಮತ್ತು ಸಾಂಸ್ಕೃತಿಕ ಭಾವನೆಗಳ ನಡುವಣ ಸಂಬಂಧವನ್ನು ಪರಿಶೀಲಿಸುತ್ತದೆ.

ಪೂರ್ವ ಇತಿಹಾಸ ಕಾಲವನ್ನು ಹಳೇಶಿಲಾಯುಗ, ಮಧ್ಯಶಿಲಾಯುಗ ಹಾಗೂ ನವಶಿಲಾಯುಗ ಎಂದು ಕ್ರಮವಾಗಿ ವಿಭಾಗಿಸಲಾಗಿದೆ. ಪುನಃ ಹಳೇ ಶಿಲಾಯುಗವನ್ನು ಆದಿ ಹಳೇಶಿಲಾಯುಗ, ಮಧ್ಯ ಹಳೇ ಶಿಲಾಯುಗ ಹಾಗೂ ಅಂತ್ಯ ಹಳೇಶಿಲಾಯುಗ ಎಂದು ಮೂರು ವಿಭಾಗಗಳಾಗಿ ವರ್ಗೀಕರಿಸಲಾಗಿದೆ. ಹೀಗಾಗಿ ಶಿಲಾಯುಗದ ಪ್ರತಿಯೊಂದು ಹಂತವನ್ನು ಅಂದಿನ ಜನರ ಕಲ್ಲಿನ ಉಪಕರಣಗಳ ಆಕೃತಿಗಳಿಗನುಗುಣವಾಗಿ ನಿರ್ಧರಿಸ ಲಾಗಿದೆ. ಕರ್ನಾಟಕದ ಮೈಸೂರು ಪ್ರಾಂತ್ಯದಲ್ಲಿ ಪ್ರಾಚೀನ ಶಿಲಾಯುಗದ ಅವಶೇಷಗಳನ್ನು ಪತ್ತೆ ಹಚ್ಚಿರುವ ಬಗ್ಗೆ ಪುರಾತತ್ವ ತಜ್ಞರಾದ ರಾಬರ್ಟ್ ಬ್ರೂಸ್ ಫೂಟ್ ಮತ್ತು ಡಾ.ಎಂ.ಶೇಷಾದ್ರಿಯವರು ಕೂಲಂಕಷವಾಗಿ ಅಧ್ಯಯನ ನಡೆಸಿರುವರು.[1]

ಕರ್ನಾಟಕದ ಹಲವಾರು ಪ್ರದೇಶಗಳಲ್ಲಿನ ಪೂರ್ವಶಿಲಾಯುಗ ಕಾಲದ ಕೈಗೊಡಲಿ ಸಂಸ್ಕೃತಿಯ ಅವಶೇಷಗಳು ದೊರಕಿವೆ. ಕ್ರಿ.ಶ.19ನೆಯ ಶತಮಾನದ ಉತ್ತರಾರ್ಧದಲ್ಲಿ ಭಾರತೀಯ ಪುರಾತತ್ವ ಪಿತಾಮಹನೆಂದು ಕರೆಯಲ್ಪಟ್ಟಿರುವ ರಾಬರ್ಟ್ ಬ್ರೂಸ್‌ಫೂಟ್ ಅವರು ಭೂಗರ್ಭಶಾಸ್ತ್ರ ಸಂಬಂಧವಾದ ಅನ್ವೇಷಣೆಯಲ್ಲಿ ತೊಡಗಿದ್ದು, ಕರ್ನಾಟಕದ ಹಲವಾರು ಪ್ರದೇಶಗಳಲ್ಲಿ ಈ ಕಾಲಕ್ಕೆ ಸೇರಿರುವ ಪ್ರಾಚ್ಯಾವಶೇಷಗಳನ್ನು ಕಂಡುಹಿಡಿದರು. ಅವುಗಳಲ್ಲಿ ಹಳೆಯ ಮೈಸೂರು ಪ್ರಾಂತ್ಯದ ತುಮಕೂರು ಜಿಲ್ಲೆಯ ತಿಪಟೂರಿನ ಕಿಬ್ಬನಹಳ್ಳಿ ನೆಲೆಯು ಪ್ರಮುಖವಾದುದಾಗಿದೆ. ಇದರ ಬಳಿಯಿರುವ ಬಿಳಿಗೆರೆ ನೆಲೆಯೂ ಸಹ ಅಷ್ಟೇ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ.[2]

ತುರುವೇಕೆರೆಯಿಂದ 13 ಕಿ.ಮೀ.ದೂರದಲ್ಲಿರುವ ಬಾಣಸಂದ್ರ ಬೆಟ್ಟಗಳ ತಪ್ಪಲಿನಲ್ಲಿ ಸುಮಾರು ಅರ್ಧ ಚದರ ಮೈಲಿಯ ಪ್ರದೇಶದಲ್ಲಿ ಆದಿಹಳೇಶಿಲಾಯುಗ ಸಂಸ್ಕೃತಿಯ ಆಯುಧಗಳು ದೊರೆತಿದ್ದು, ಡಾ.ಶೇಷಾದ್ರಿಯವರು ಈ ನೆಲೆಯಿಂದ ಆಯುಧಗಳನ್ನು ಸಂಗ್ರಹಿಸಿ ಪರೀಕ್ಷಿಸಿದ್ದಾರೆ. ಅವರ ಅಭಿಪ್ರಾಯದಂತೆ ಇದೊಂದು ಪೂರ್ವಶಿಲಾಯುಗದ ಮಾನವನ ವಾಸಕ್ಕೆ ಆದರ್ಶವಾದ ನೆಲೆಯಾಗಿದ್ದರೂ ಮತ್ತು ಮನುಷ್ಯರಿಗೆ, ಪ್ರಾಣಿಗಳಿಗೆ ಬೇಕಾದ ನೀರು ಪಕ್ಕದ ಕಣಿವೆಯಿಂದ ದೊರೆಯುತ್ತಿತ್ತೆಂದು ಅವರು ಹೇಳಿದ್ದರೂ. ಆ ಪ್ರದೇಶದಲ್ಲಿ ಈಗ ಯಾವ ದೊಡ್ಡ ನದಿಯಾಗಲೀ, ಸರೋವರವಾಗಲೀ ಇದ್ದ ಮಾಹಿತಿಗಳೇನೂ ದೊರೆತಿಲ್ಲ. ಈ ಪ್ರದೇಶದಲ್ಲಿ ದೊರೆತ ಆಯುಧಗಳಲ್ಲಿ ಅನೇಕ ರೀತಿಯವುಗಳಿದ್ದು ಮಿಶ್ರ ಸಂಸ್ಕೃತಿಯಂತೆ ಕಾಣುತ್ತದೆ. ಕೈಗೊಡಲಿ ಸಂಸ್ಕೃತಿಯು ಬಹಳ ಪುರಾತನವಾದ ಅಬ್ಬೆ ವಿಲ್ಲಿಯನ್ ಮತ್ತು

ಅಂತ್ಯಕಾಲಕ್ಕೆ ಸೇರುವ ಅಷ್ಯೂಲಿಯನ್ ಕೊನೆ ಹಂತದ ಕೈಗೊಡಲಿಗಳೂ, ವಿವಿಧ ರೀತಿಯ ಕ್ಲೀವರ್ ಕೊಡಲಿಗಳು, ಉಂಡೆಕಲ್ಲಿನ ಕಲ್ಲು ಮಚ್ಚುಗಳೂ, ಚಕ್ಕೆ ಕೊಡಲಿಗಳು, ಚಕ್ಕೆ ಕಲ್ಲಿನ ಒರೆಯುವ ಆಯುಧಗಳು, ಕ್ಲಾಕ್ಟೋನಿಯನ್ ರೀತಿಯ ಚಕ್ಕೆಗಳೂ, ಮಧ್ಯಶಿಲಾಯುಗ ಸಂಸ್ಕೃತಿಯ ಚಕ್ಕೇಕಲ್ಲಿನ ಆಯುಧಗಳೂ ಒಟ್ಟಾಗಿ ದೊರೆತು ಎಲ್ಲಾ ಸಂಸ್ಕೃತಿಗಳ ವೈವಿಧ್ಯತೆಯನ್ನು ತೋರಿಸಿದರೂ ಕಾಲನಿರ್ಣಯ ಮಾಡಲು ಪ್ರಯೋಜನಕಾರಿಯಾಗಿಲ್ಲ.[3] ಕಿಬ್ಬನಹಳ್ಳಿ, ಬಿಳಿಗೆರೆ ಮತ್ತು ಬಾಣಸಂದ್ರದ ಗುಡಿಸಲು ನೆಲೆಗಳಲ್ಲಿ ಬೆಂಗಳೂರಿನ ಸೆಂಟ್ರಲ್ ಕಾಲೇಜಿನ ಭೂವಿಜ್ಞಾನ ಪ್ರಾಧ್ಯಾಪಕರುಗಳಾದ ಸಂಪತ್ ಅಯ್ಯಂಗಾರ್ ಮತ್ತು ಎಲ್.ರಾಮರಾವ್ ಎಂಬುವರು ಸಹ ಅಧ್ಯಯನ ನಡೆಸಿ ಆದಿಹಳೇಶಿಲಾಯುಗ ಸಂಸ್ಕೃತಿಯ ಆಯುಧಗಳನ್ನು ಸಂಗ್ರಹಿಸಿದ್ದಾರೆ.[4]

ಈ ಪ್ರದೇಶದಲ್ಲಿ ಒಂದೇ ಒಂದು ಬೃಹತ್ ಶಿಲಾಯುಗ ಸಂಸ್ಕೃತಿಯ ನೆಲೆಯಿದ್ದು ಶಿಲಾವೃತ್ತಗಳು, ಕಲ್ಗೋರಿಗಳು ಕಂಡುಬಂದಿವೆ. ತಿಪಟೂರು ತಾಲೂಕಿನ ಕೇರಳಕಟ್ಟೆ ಎಂಬ ನೆಲೆಯ ಗುಡ್ಡಗಳ ಸಾಲಿನ ತಪ್ಪಲಿನಲ್ಲಿ ಅರ್ಧ ಡಜನ್‌ಗೂ ಹೆಚ್ಚು ವೃತ್ತಾಕಾರದ ಸಮಾಧಿಗಳನ್ನು ಎಚ್.ಕೆ.ಸ್ಲೇಟರ್ ಎಂಬ ವಿದ್ವಾಂಸರು ಪತ್ತೆ ಮಾಡಿದ್ದು, ಈ ಶಿಲಾ ಸಮಾಧಿಗಳು ಚೌಕಾಕಾರ ವಾಗಿದ್ದು ೮ ಅಡಿ ಉದ್ದ ಮತ್ತು ಅಗಲವನ್ನು ಹೊಂದಿವೆ ಹಾಗೂ ಇವುಗಳು ಕಣಶಿಲೆಯ ಕಲ್ಲುಚಪ್ಪಡಿಗಳಿಂದ ನಿರ್ಮಿತವಾಗಿವೆ.[5]

ತಿಪಟೂರು ತಾಲೂಕಿನ ಕರಡಿ ಎಂಬ ಪ್ರಾಚೀನ ನೆಲೆಯಲ್ಲಿ ಸೂಕ್ಷ್ಮ ಶಿಲಾಯುಗ ಸಂಸ್ಕೃತಿಯ ಶಿಲೋಪಕರಣದ ನೀಳಚೆಕ್ಕೆ ಮೊನೆ, ಹೆರೆಚೆಕ್ಕೆ ಹಾಗೂ ಮೂಲ ಶಿಲಾಗಟ್ಟಿಗಳು ದೊರೆತ್ತಿದ್ದು ಜಾಸ್ಪರ್ ಮತ್ತು ಬೆಣಚುಕಲ್ಲಿನಿಂದ ಮಾಡಲ್ಪಟ್ಟಿವೆ. ಇದೇ ತಾಲೂಕಿನ ಶೆಟ್ಟಿಹಳ್ಳಿ ಎಂಬ ಪ್ರಾಚೀನ ನೆಲೆಯಲ್ಲಿ ಸೂಕ್ಷ್ಮಶಿಲಾಯುಗ ಸಂಸ್ಕೃತಿಯ ಉಪಕರಣಗಳಾದ ಹೆರೆಚೆಕ್ಕೆ, ಕೊರೆಯುಳಿ, ನೀಳಚೆಕ್ಕೆ ಮುಂತಾದ ಉಪಕರಣಗಳು ಅರ್ಧಚಂದ್ರಾಕೃತಿಯಲ್ಲಿದ್ದು ಅದಿರುಯುಕ್ತ ಜಾಸ್ಪರ್ ಮತ್ತು ಬೆಣಚುಕಲ್ಲಿನಲ್ಲಿ ಮಾಡಲ್ಪಟ್ಟಿವೆ. ತುರುವೇಕೆರೆ ತಾಲೂಕಿನ ಸಂಪಿಗೆ ಗ್ರಾಮವು ಪ್ರಾಚೀನ ಮಾನವನ ನೆಲೆಯಾಗಿದ್ದು ಐತಿಹಾಸಿಕವಾಗಿ ಮಹತ್ವವುಳ್ಳ ಸ್ಥಳವಾಗಿದೆ. ಈ ಪ್ರದೇಶದಲ್ಲಿ ಸೂಕ್ಷ್ಮಶಿಲಾಯುಗ ಸಂಸ್ಕೃತಿಗೆ ಸಂಬಂಧಿಸಿದ ನೀಳಚೆಕ್ಕೆ, ಮೊನೆ, ಹೆರೆ ಚೆಕ್ಕೆ, ಬಾಣದ ಮೊನೆಗಳು ದೊರೆತಿದ್ದು ಬೆಣಚುಕಲ್ಲಿನಲ್ಲಿ ಮಾಡಿದವುಗಳಾಗಿವೆ.[6]

ಕುಣಿಗಲ್ ತಾಲೂಕಿನ ಹೇರೂರು, ಗುಬ್ಬಿ ತಾಲೂಕಿನ ಕೈಮರ, ಚಿಕ್ಕನಾಯಕನ ಹಳ್ಳಿಯ ಅಂಕನಬಾವಿ ಮುಂತಾದ ಪ್ರಾಚೀನ ನೆಲೆಗಳಲ್ಲಿ ನೂತನ ಶಿಲಾಯುಗ ಸಂಸ್ಕೃತಿಯ

ಉಪಕರಣಗಳು ದೊರೆತಿವೆ. ಅಲ್ಲದೇ ಕೈದಾಳ, ಮಾರನಾಯಕನ ಪಾಳ್ಯ ಇನ್ನೂ ಮುಂತಾದ ಪ್ರಾಚೀನ ನೆಲೆಗಳಲ್ಲಿ ಕೆಂಪು, ಕಪ್ಪು ವರ್ಣದ ಇತಿಹಾಸ ಆರಂಭ ಕಾಲದ ಮಡಕೆಯ ಚೂರುಗಳು ದೊರೆತಿದ್ದು, ತುಮಕೂರು ಜಿಲ್ಲೆಯಲ್ಲಿ ಒಟ್ಟು 265 ಪ್ರಾಚೀನ ನೆಲೆಗಳು ಕಂಡುಬರುತ್ತವೆ. ಈ ಮೇಲ್ಕಂಡ ಎಲ್ಲಾ ಅಂಶಗಳನ್ನು ಗಮನಿಸಿದಾಗ ಈ ಪ್ರದೇಶವು ಪ್ರಾಚೀನ ಮಾನವನ ಜೀವನ ವಿಕಾಸಕ್ಕೆ ಉತ್ಕೃಷ್ಟವಾಗಿತ್ತು ಎಂಬುದರಲ್ಲಿ ಸಂದೇಹವಿಲ್ಲ.[7]

**ತುಮಕೂರು ಒಳಗೊಂಡಂತೆ ತುರುವೇಕೆರೆಯ ಐತಿಹ್ಯ**

ಮಧುಗಿರಿಯ ಏಳು ಸುತ್ತಿನ ಕೋಟೆಯನ್ನು ಪಾಂಡವರು ಕಟ್ಟಿದರೆಂಬ ಐತಿಹ್ಯವಿದೆ. ಅಮರಶಿಲ್ಪಿ ಜಕಣಚಾರಿ ಕೈದಾಳದಲ್ಲಿ ಜನಿಸಿದನೆಂಬ ದಂತಕಥೆ ಇದೆ. ನೊಣವಿನಕೆರೆ, ತುರುವೇಕೆರೆ, ಅರಳಗುಪ್ಪೆ, ಸೀಬಿ, ಶ್ರವಣಗುಡಿ, ನಿಡುಗಲ್ಲು, ಮಾರುಹೊಳೆ, ಮಧುಗಿರಿ, ಹೆಬ್ಬೂರು, ದೇವರಾಯನ ದುರ್ಗ, ಚೆನ್ನರಾಯನ ದುರ್ಗ ಇನ್ನೂ ಮುಂತಾದ ಸ್ಥಳಗಳು ಪ್ರಾಚೀನತೆ ಹಾಗೂ ಇತಿಹಾಸ ಹೊಂದಿರುವ ಸ್ಥಳಗಳಾಗಿವೆ. ತುರುವೇಕೆರೆ ತಾಲೂಕಿನ ತಂಡಗ ಗ್ರಾಮದಲ್ಲಿ ಶಾಲಿವಾಹನ ಜನ್ಮ ಪಡೆದನೆಂಬ ಪ್ರತೀತಿ ಇದೆ.[8]

ಗುಬ್ಬೀ ತಾಲೂಕಿನ ಕಡಬ ಗ್ರಾಮವು ಪ್ರಾಚೀನ ಸ್ಥಳವಾಗಿದ್ದು, ಕದಂಬ ಋಷಿಯ ಕ್ಷೇತ್ರವಾಗಿದ್ದು ಈ ಋಷಿಮುನಿಯಿಂದಲೇ ಕಡಬ ಗ್ರಾಮಕ್ಕೆ ಹೆಸರು ಬಂದಿತೆಂಬ ಐತಿಹ್ಯವಿದೆ. ಕದಂಬ ಋಷಿಯು ಶಿಂಷಾ ನದಿಯ ದಂಡೆಯ ಮೇಲೆ ತಪಸ್ಸನ್ನಾಚರಿಸಿದನೆಂಬ ಸ್ಥಳಪುರಾಣ ನಮಗೆ ದೊರೆಯುತ್ತದೆ. ಲಂಕೆಯಿಂದ ಹಿಂತಿರುಗಿದ ಶ್ರೀರಾಮನು ಇಲ್ಲಿ ಕೆಲಕಾಲ ತಂಗಿದ್ದು, ಸೀತೆಯ ಅಪೇಕ್ಷೆಯಂತೆ ಅವನು ಜನರಿಗೆ ಅನುಕೂಲವಾಗಲೆಂದು ಇಕ್ಕಟ್ಟಾಗಿದ್ದ ನದಿಗೆ ಅಡ್ಡಲನ್ನು ನಿರ್ಮಿಸಿ ಇಂದಿನ ದೊಡ್ಡ ಕೆರೆಯ ನಿರ್ಮಾಣಕ್ಕೆ ಕಾರಣನಾದನೆಂಬ ಐತಿಹ್ಯವೂ ಸಹ ಇದೆ.ತುರುವೇಕೆರೆ ತಾಲೂಕಿನ ಸಂಪಿಗೆ ಗ್ರಾಮವು ಸಾಂಸ್ಕೃತಿಕ ಮಹತ್ವವುಳ್ಳ ಐತಿಹಾಸಿಕ ಸ್ಥಳವಾಗಿದೆ. ಪ್ರಾಚೀನ ಕಾಲದಲ್ಲಿ ಈ ಗ್ರಾಮವನ್ನು 'ಚಂಪಕನಗರ' ಎಂದು ಕರೆಯಲಾಗುತ್ತಿದ್ದು ಈ ನಗರವು ಮಹಾಭಾರತದ ಹಂಸಧ್ವಜನ ಮಗ ಸುಧನ್ವನ ರಾಜಧಾನಿಯಾಗಿತ್ತು ಎನ್ನಲಾಗುತ್ತಿದೆ.[9]

**ಕದಂಬರು**

ಶಾತವಾಹನರ ಸಮಕಾಲೀನರಾಗಿದ್ದ ಚುಟುಗಳೇ ಅಲ್ಲದೇ ಕರ್ನಾಟಕದಲ್ಲಿ ಬೇರೆ ಬೇರೆ ಸಣ್ಣಪುಟ್ಟ ರಾಜವಂಶಗಳಗೂ ಆಳ್ವಿಕೆ ಮಾಡುತ್ತಿದ್ದವು. ಉತ್ತರ ಕನ್ನಡ ಜಿಲ್ಲೆಯ ಬನವಾಸಿಯಲ್ಲಿ ಕ್ರಿ.ಶ.325ರಲ್ಲಿ ಮಯೂರ ಶರ್ಮನಿಂದ ಕದಂಬ ವಂಶದ ಸಾಮ್ರಾಜ್ಯ ಸ್ಥಾಪನೆಯಾಯಿತು.

ಶಿವಮೊಗ್ಗ ಜಿಲ್ಲೆಯ ತಾಳಗುಂದದ ಶಾಂತಿವರ್ಮನ ಶಾಸನದಲ್ಲಿ ಉಲ್ಲೇಖಿಸಿರುವಂತೆ ಷಟ್ ಕರ್ಮನಿರತನಾಗಿದ್ದ ಮಯೂರಶರ್ಮನು ಬ್ರಾಹ್ಮಣ ವಂಶದ ಮಾನವ್ಯಗೋತ್ರದ ಹಾರತಿಪುತ್ರನೆಂದು ತನ್ನನ್ನು ಕರೆದುಕೊಂಡಿದ್ದಾನೆ. [10] ಬನವಾಸಿ ಬಳಿಯ ಗುಡ್ನಾಪುರದ ಶಾಸನದಲ್ಲಿ ಮಯೂರಶರ್ಮನ ತಾತ ವೀರಶರ್ಮನು ಚತುರ್ವೇದ ಸಂಹಿತೆಗಳ ಪಂಡಿತನಾಗಿದ್ದನೆಂದು ಹಾಗೂ ಈತನು ವೀರಶರ್ಮನ ಮಗನಾಗಿ, ಬಂಧುಷೇಣನ ಪುತ್ರನೆಂದೂ ತಿಳಿಸುತ್ತದೆ.[11] ವೀರಶರ್ಮ ಮಯೂರ ಶರ್ಮನನ್ನು ಅಂದಿನ ಪ್ರಸಿದ್ಧ ಘಟಿಕಾಸ್ತಾನವಾಗಿದ್ದ ಹಾಗೂ ಪಲ್ಲವರ ರಾಜಧಾನಿಯಾಗಿದ್ದ ಕಂಚಿಪುರಕ್ಕೆ ಉನ್ನತ ಶಿಕ್ಷಣಕ್ಕೆ ಕರೆದೊಯ್ದನು. ಅನಂತರ ಅಲ್ಲಿ ಅವರಿಂದ ಅಪಮಾನಿತವಾಗಿ ಬಂಡೆದ್ದು ಬನವಾಸಿಗೆ ಹಿತಿರುಗಿ ಬಂದು ಕನ್ನಡ ಮೂಲದ ರಾಜವಂಶದ ಸಾಮ್ರಾಜ್ಯವನ್ನು ಬನವಾಸಿಯಲ್ಲಿ ಸ್ಥಾಪಿಸಿದನು. ಅಲ್ಲಿಂದ ಈ ಪ್ರಾಂತ್ಯದ ಮೇಲೆ ಪಲ್ಲವರು ಹೊಂದಿದ್ದ ಪ್ರಾಂತ್ಯಗಳನ್ನು ಮಯೂರಶರ್ಮನು ತನ್ನ ವಶಕ್ಕೆ ತೆಗೆದುಕೊಂಡು ತಾನು ಸ್ವತಂತ್ರ ರಾಜನೆಂದು ಘೋಷಿಸಿಕೊಂಡನು ಕದಂಬ ಸಾಮ್ರಾಜ್ಯದ ಎಲ್ಲೆಗಳನ್ನು ಕಾವೇರಿ ತೀರದವರೆಗೂ ವಿಸ್ತರಿಸಿದನು.

ಚಿಕ್ಕಮಗಳೂರು ಜಿಲ್ಲೆಯ ಬೀರೂರಿನ ತಾಮ್ರಪಟ ಶಾಸನವೊಂದರಲ್ಲಿ ಶಾಂತಿವರ್ಮನನ್ನು ಸಮಗ್ರ 'ಕರ್ನಾಟ ಭೂವರ್ಗ ಭರ್ತಾರ' ಎಂದು ಕರೆದಿದ್ದು 'ಕರ್ಣಾಟ' ಎಂಬ ಹೆಸರನ್ನು ಪ್ರಥಮಬಾರಿಗೆ ಪ್ರಯೋಗಿಸಿರುವುದು ಇಲ್ಲಿ ಕಂಡುಬರುತ್ತದೆ. ಕದಂಬ ಕಾಕುತ್ಸವರ್ಮನು ತನ್ನ ಹೆಣ್ಣು ಮಕ್ಕಳನ್ನು ಗುಪ್ತ, ವಾಕಾಟಕ, ಭಟಾರಿ ಹಾಗೂ ಗಂಗವಂಶದ ರಾಜಕುಮಾರರಿಗೆ ವಿವಾಹ ಮಾಡಿಕೊಟ್ಟ ಕಾರಣ ಕದಂಬ ವಂಶವು ನೆರೆ ರಾಜ್ಯಗಳೊಂದಿಗೆ ಸ್ನೇಹ ಬಾಂಧ್ಯವವನ್ನು ಬೆಳಸಿಕೊಳ್ಳಲು ಅನುಕೂಲವಾಯಿತು. ಹೀಗೆ ಕರ್ನಾಟಕದ ಉತ್ತರ ಭಾಗವು ಕದಂಬರ ಆಳ್ವಿಕೆಗೆ ಒಳಪಟ್ಟಿದ್ದಾಗ ದಕ್ಷಿಣ ಭಾಗವು ತಲಕಾಡಿನ ಗಂಗರ ಆಳ್ವಿಕೆಗೆ ಒಳಪಟ್ಟಿತ್ತು.ಈ ಎರಡು ರಾಜವಂಶಗಳು ಸೌಹಾರ್ದಯುತವಾಗಿದ್ದ ಕಾರಣ ಆಗ ಅಸ್ತಿತ್ವದಲ್ಲಿದ್ದ ಸಣ್ಣಪುಟ್ಟ ರಾಜ್ಯಗಳೊಂದಿಗೆ ಹೊಂದಾಣಿಕೆ ಮಾಡಿಕೊಂಡು ಕ್ರಿ.ಶ.4ನೇ ಶತಮಾನದ ಮಧ್ಯಭಾಗದಲ್ಲಿ ರಾಜ್ಯಾಡಳಿತ ಮಾಡಲು ಪ್ರಾರಂಭಿಸಿದರು.ಈ ಎರಡು ರಾಜವಂಶಗಳ ಆಳ್ವಿಕೆಯ ಕಾಲದಲ್ಲಿ ಕರ್ನಾಟಕವು ಸುಭದ್ರವಾದ ರಾಜಕೀಯ ಮತ್ತು ಸಾಂಸ್ಕೃತಿಕ ಪ್ರಗತಿಗೆ ಸುರಕ್ಷಿತವಾದ ತಳಹದಿಯನ್ನು ಹಾಕಿದರು.ಉತ್ತರ ಕರ್ನಾಟಕದಲ್ಲಿ ಬನವಾಸಿ ಕದಂಬರ ಆಳ್ವಿಕೆಯ ಪ್ರಾರಂಬದೊಡನೆ ಕರ್ನಾಟಕ ಸಂಸ್ಕೃತಿಯ ಅನೇಕ ನವ ಪರಂಪರೆಗಳ ಉಗಮವಾಯಿತ್ತೆಂದು ಹಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

## ಗಂಗರು

ತಲಕಾಡಿನ ಗಂಗ ಮನೆತನದ ಅರಸರು ಸುಮಾರು ಎಂಟು ಶತಮಾನಗಳ ಕಾಲ ಕನ್ನಡ ನಾಡಿನ ದಕ್ಷಿಣ ಭಾಗವನ್ನು ಆಳಿದರು. ತಲಕಾಡಿನ ಗಂಗ ಸಂತತಿಯ ಆಳ್ವಿಕೆ ಕೊನೆಗೊಂಡ ಅನಂತರವೂ ಈ ಮನೆತನದ ಉಪಶಾಖೆಗಳು ಅಲ್ಲಲ್ಲಿ ಸಣ್ಣಪುಟ್ಟ ಸಂಸ್ಥಾನಗಳನ್ನು ಸ್ಥಾಪಿಸಿಕೊಂಡು ಪ್ರಬಲ ಸಂತತಿಗಳ ಅಧೀನರಾಗಿ ಶತಮಾನಗಳ ಕಾಲ ಆಳ್ವಿಕೆಯನ್ನು ಮುಂದುವರೆಸಿದವು. ಈಗಿನ ಕೋಲಾರ, ಬೆಂಗಳೂರು, ಮೈಸೂರು, ಮಂಡ್ಯ, ತುಮಕೂರು ಜಿಲ್ಲಾ ಪ್ರದೇಶಗಳು ಹಿಂದೆ ಗಂಗವಾಡಿ ಎನಿಸಿದ್ದವು. ಗಂಗ ವಂಶವು ಈ ಪ್ರದೇಶದಲ್ಲಿ ಕ್ರಿ.ಶ.೩೫೦ ರಿಂದ ಕ್ರಿ.ಶ.೫೫೦ರವರೆಗೆ ಪರಮಾಧಿಕಾರಿಗಳಾಗಿ ಮುಂದೆ ಹತ್ತನೆಯ ಶತಮಾನದ ಕೊನೆಯವರೆಗೆ ಬಾದಾಮಿ ಚಾಲುಕ್ಯರ ಹಾಗೂ ರಾಷ್ಟ್ರಕೂಟರ ಮಾಂಡಲಿಕರಾಗಿಯೂ ಆಳುತ್ತಿದ್ದರು. ಆರಂಭದಲ್ಲಿ ಕೋಲಾರ ಮುಂದೆ ತಲಕಾಡು ಕೆಲಕಾಲ ಬೆಂಗಳೂರು ಜಿಲ್ಲೆಯ ಮಣ್ಣೆ ಇವರ ರಾಜಧಾನಿಗಳು. ಶಾಸನಗಳೇ ಇವರ ಇತಿಹಾಸಕ್ಕೆ ಮೂಲಧಾರಗಳಾದರೂ 'ಲೋಕವಿಭಾಗ' ಎಂಬ ಪ್ರಾಕೃತಕೃತಿ ಹಾಗೂ ಕನ್ನಡ ಕೃತಿಯಾದ' ಚಾವುಂಡರಾಯ ಪುರಾಣ'ದಲ್ಲೂ ಇವರ ಕುರಿತು ಕೆಲವು ಅಂಶಗಳು ತಿಳಿಯುತ್ತವೆ. ತಮಿಳು ಶಾಸನಗಳಲ್ಲಿ ವಿಶೇಷವಾಗಿ ಗಂಗರನ್ನು ಕೊಂಗಣಿ ಅರಸರೆಂದು ಕರೆಯಲಾಗಿದೆ. ಅವರು ತಮ್ಮನ್ನು ಜಾನ್ಹವೇಯ ಕುಲದವರೂ ಕಣ್ವಾಯನ ಗೋತ್ರದವರೂ ಎಂದು ಕರೆದು ಕೊಂಡಿದ್ದಾರೆ. ಅನೇಕ ಶಾಸನಗಳ ಹೇಳಿಕೆಯಂತೆ ದಡಿಗ ಮತ್ತು ಮಾಧವರೆಂಬ ಸೋದರರಿಬ್ಬರೂ ಜೈನಗುರು ಸಿಂಹನಂದಿಯಿಂದ ದೇವದತ್ತಿಯಿಂದ ಖಡ್ಗವೊಂದನ್ನು ಪಡೆದರು. ಮಾಧವನು ಆ ಖಡ್ಗದಿಂದ ಕಲ್ಲಿನ ಕಂಬವೊಂದನ್ನು ಕತ್ತರಿಸಲು ಜೈನಮುನಿಯು ಆತನನ್ನು ಒಬ್ಬ ರಾಜನೆಂದು ಪಟ್ಟಕಟ್ಟಿದನು. ಮಾಧವನಿಗೆ ಕೊಂಗಣಿ ಅರಸ ಎಂದು ಹೆಸರಿತ್ತು.[12]

ಸಾಮಾನ್ಯವಾಗಿ ಪ್ರಾಚೀನ ಕಾಲದಲ್ಲಿ ಭಾರತದಲ್ಲಿ ಆಳಿದ ಎಲ್ಲಾ ರಾಜಮನೆತನಗಳ ಮೂಲಕ್ಕೆ ಸಂಬಂಧಿಸಿದಂತೆ ಅನೇಕ ರಾಜ ಮನೆತನಗಳ ಮೂಲಕ್ಕೆ ಸಂಬಂಧಿಸಿದಂತೆ ಅನೇಕ ಜಿಜ್ಞಾಸೆಗಳಿವೆ. ಕರ್ನಾಟಕದಲ್ಲಿ ಆಳಿದ ಯಾವೊಂದು ರಾಜ ಮನೆತನದ ಮೂಲವೂ ಗಂಗರ ಮೂಲದಷ್ಟು ವಾದವಿವಾದಕ್ಕೊಳಗಾಗಿಲ್ಲ. ಗಂಗರ ಮೂಲಕ್ಕೆ ಸಂಬಂಧಿಸಿದಂತೆ ಅವರ ಪ್ರಾರಂಭದ ಶಾಸನಗಳಲ್ಲಾಗಲಿ ಅಥವಾ ಅವರ ಸಮಕಾಲೀನ ರಾಜಮನೆತನಗಳ ಆಧಾರಗಳ ಲ್ಲಾಗಲೀ ವರ್ಣನೆಗಳಿಲ್ಲ.[13]

ಗಂಗ ಸಂತತಿಯನ್ನು ಧಡಿಗ ಮತ್ತು ಮಾಧವ ಎಂಬ ಸಹೋದರರು ಸ್ಥಾಪಿಸಿದರು. ಗಂಗರಾಜ್ಯ ಸ್ಥಾಪಿಸಲು ಸಿಂಹನಂದಿ ಎಂಬ ಜೈನ ಮುನಿಯ ಸಹಕಾರಿಯಾದನೆಂದೂ ಹಾಗೂ

ಗಂಗರು ಜೈನ ಮತಾವಲಂಬಿಗಳೆಂದು ಗಂಗ ಸಂತತಿಯ ಕೊನೆಯ ರಾಜರುಗಳು ಹೊರಡಿಸಿರುವ ಶಾಸನಗಳಲ್ಲಿ ವರ್ಣಿಸಲಾಗಿದೆ.[14] ತುಮಕೂರು ಜಿಲ್ಲೆಯ ಎಲ್ಲಾ ತಾಲೂಕುಗಳನ್ನು ಒಳಗೊಂಡಂತೆ ಪ್ರಾಚೀನ ಗಂಗರ ಶಾಸನಗಳು ಮೂಲ 12ನೇ ಸಂಪುಟದಲ್ಲಿ ಪ್ರಕಟವಾಗಿದೆ. ತುರುವೇಕೆರೆ ತಾಲೂಕು ಮಾದಿಹಳ್ಳಿ ಗ್ರಾಮದಲ್ಲಿ ದೊರೆತ 10ನೇ ಶತಮಾನದ ಕಚ್ಚೆಯ ಗಂಗ ಎಂಬ ಬಬ್ಬನನ್ನು ಹೆಸರಿಸುತ್ತದೆ. ಆದರೆ ಅವನು ಮುಖ್ಯ ಗಂಗ ವಂಶಕ್ಕೆ ಸೇರಿರಲಿಲ್ಲ. [15]

ಕ್ರಿ.ಶ. ಸುಮಾರು 4ನೇ ಶತಮಾನದ ಮಧ್ಯಭಾಗದಲ್ಲಿ ದಡಿಗ ಮತ್ತು ಮಾಧವ ಎಂಬ ಗಂಗ ದೊರೆಗಳು ಚಿಕ್ಕದಾದ ಸಾಮ್ರಾಜ್ಯವನ್ನು ಸ್ಥಾಪಿಸಿದರು. ಆದರೆ ಸಮಕಾಲೀನ ದಾಖಲೆಗಳ ಪ್ರಕಾರ ಕೊಂಗುಣಿವರ್ಮ ಮತ್ತು ದಡಿಗ ಎಂಬ ಎರಡು ಹೆಸರುಗಳು ಒಂದೇ ವ್ಯಕ್ತಿಯನ್ನು ಕುರಿತದ್ದು ಎಂದು ಹಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ನಂತರ ಅವನ ಮಗನಾದ ಮೊದಲನೆ ಮಾಧವನು ಅಧಿಕಾರಕ್ಕೆ ಬಂದನು. ಇವನು ನಂದಿವರ್ಮ–ಪಲ್ಲವ ಮಲ್ಲನ ನೇತೃತ್ವದಲ್ಲಿ ಗಂಗರ ರಾಜಧಾನಿ ಕುವಲಾಪುರದ ಮೇಲೆ ಮಾಡಿದ ದಾಳಿಯನ್ನು ತಡೆಗಟ್ಟಿದ್ದು ಮಾತ್ರವಲ್ಲದೇ ನಾಲ್ಕನೇ ಶತಮಾನದಲ್ಲಿ ಗಂಗರ ಸಾಮ್ರಾಜ್ಯದ ಸುಭದ್ರ ತಳಹದಿಯನ್ನು ಸ್ಥಾಪಿಸಲು ಕಾರಣನಾದನು. ನಂತರ ಮಾಧವನು ನಂದಗಿರಿ ಅಥವಾ ನಂದಿಬೆಟ್ಟದಲ್ಲಿ ಭದ್ರಕೋಟೆಯನ್ನು ನಿರ್ಮಿಸಿಕೊಂಡು ಆಳ್ವಿಕೆ ನಡೆಸಿದನೆಂಬ ಅಂಶವು ಶಾಸನಗಳಿಂದ ವ್ಯಕ್ತವಾಗುತ್ತದೆ.

ಮೈಸೂರಿನ ತಾಮ್ರ ಶಾಸನವೊಂದರಲ್ಲಿ ಕೊಂಗುಣಿವರ್ಮ ಧರ್ಮ ಮಹಾರಾಜನು ಕಣ್ವಾಯನ ಗೋತ್ರದಲ್ಲಿ ಜನಿಸಿದನೆಂದು ಹಾಗೂ ಮಹಾರಾಜಾಧಿರಾಜನೆಂಬ ಬಿರುದು ಪಡೆದಿದ್ದ ಮಾಧವನು ಈತನ ಮಗನೆಂದು ಉಲ್ಲೇಖಿಸುತ್ತದೆ ನಂತರ ಮಾಧವರ್ಮನ ಮಗ ಹರಿವರ್ಮನು ಅಧಿಕಾರಕ್ಕೆ ಬಂದನು. ಶ್ರೀರಂಗಪಟ್ಟಣದಲ್ಲಿ ದೊರೆತಿರುವ ತಾಮ್ರಪಟ ಶಾಸನವೊಂದರಲ್ಲಿ ಕೊಂಗಣಿವರ್ಮನಿಂದ ಆರಂಭಗೊಂಡ ಗಂಗರ ವಂಶಾವಳಿಯನ್ನು ತಿಳಿಸುತ್ತದೆ.[16] ಹರಿವರ್ಮನ ಮಗ ವಿಷ್ಣುಗೋಪನನ್ನು ಉಲ್ಲೇಖಿಸಿರುವ ಈ ಶಾಸನದಲ್ಲಿ ತ್ರಿವಿಕ್ರಮನ ಮಗನನ್ನು ದುಗ್ಗನೆಂದು ಕರೆಯಲಾಗಿದೆ. ಗಂಗರ ಪ್ರಮುಖ ಪ್ರಾಂತ್ಯವಾಗಿದ್ದ ಚಿಕ್ಕಗಂಗವಾಡಿಯ ಗಂಗವಾಡಿ–96,000 ಆಡಳಿತ ವಿಭಾಗದ ಮುಖ್ಯಕೇಂದ್ರ ಸ್ಥಳವಾಗಿದ್ದು ಆ ಕಾಲದ ಪ್ರಮುಖ ಪ್ರಾಚೀನ ರಾಜವಂಶವಾಗಿತ್ತೆಂದು ಶಾಸನಗಳಿಂದ ಖಚಿತವಾಗುತ್ತದೆ. ಮಾಧವವರ್ಮನ ತರುವಾಯ ಅಧಿಕಾರಕ್ಕೆ ಬಂದ ಹರಿವರ್ಮನು ಆರ್ಯವರ್ಮ ಮತ್ತು ಕೃಷ್ಣವರ್ಮನೆಂದು ಹಲವು ಬಾರಿ ಸಂಭೋಧಿಸಿರುವುದು ಖಚಿತವಾಗುತ್ತದೆ. ಹರಿವರ್ಮನ

ತರುವಾಯ ಅವನ ಮಗನಾಧ ಎರಡನೇ ಮಾಧವನು ಸಿಂಹಾಸನವನ್ನು ಅಲಂಕರಿಸಿದನು. ಪೆನುಗೊಂಡ ತಾಮ್ರಶಾಸನದ ಪ್ರಕಾರ ಈತನು ಪಲ್ಲವ ಸ್ಕಂದವರ್ಮನ ಸಹಾಯದೊಂದಿಗೆ ಅಧಿಕಾರಕ್ಕೆ ಬಂದನೆಂದು ತಿಳಿದುಬರುತ್ತದೆ. ಎರಡನೇ ಮಾಧವನ ತರುವಾಯ ಅಧಿಕಾರಕ್ಕೆ ಬಂದು ಸುಮಾರು ಎರಡು ದಶಕಗಳ ಕಾಲ ಆಳ್ವಿಕೆ ಮಾಡಿದನು. ಈತನ ನಂತರ ಮುಮ್ಮಡಿ ಮಾಧವನು ತಡಂಗಾಲು ಮಾಧವನೆಂದು ಬಿರುದುಗಳಿಸಿ ಪಟ್ಟಕ್ಕೆ ಬಂದನು. ಮುಮ್ಮಡಿ ಮಾಧವನ ನಂತರ ಅವನ ಮಗ ಅವನೀತ ಅಪ್ರಾಪ್ತ ವಯಸ್ಕನಾಗಿದ್ದಾಗಲೇ (ಕ್ರಿ.ಶ.469-529) ಪಟ್ಟಾಭಿಷಕ್ತನಾದನು. ಈತನು ಸುಮಾರು 60 ವರ್ಷಗಳ ಕಾಲ ಆಳ್ವಿಕೆ ಮಾಡಿದನು.ನಂತರ ಇವನ ಮಗ ದುರ್ವಿನೀತನು ಆಡಳಿತಕ್ಕೆ ಬಂದನು. ದುರ್ವಿನೀತನು (ಸುಮಾರು 529-579) ಗಂಗವಂಶದಲ್ಲಿ ಅತ್ಯಂತ ಪ್ರಭಾವಶಾಲಿ ದೊರೆಯಾಗಿದ್ದನು. ದುರ್ವಿನೀತನು ಪರಾಕ್ರಮಶಾಲಿ ರಾಜನಾಗಿದ್ದು ಮಾತ್ರವಲ್ಲದೇ ಸ್ವತಃ ಸಂಸ್ಕೃತ ಮತ್ತು ಕನ್ನಡ ಭಾಷೆಯಲ್ಲಿ ಅಪರಿಮಿತ ಪಾಂಡಿತ್ಯವನ್ನು ಹೊಂದಿದ್ದನು. ಈತನು 15 ಸರ್ಗಗಳಲ್ಲಿ ಮೂಲತಃ ಸಂಸ್ಕೃತದಲ್ಲಿ ಭಾರವಿ ರಚಿಸಿದ ಕಿರಾತಾರ್ಜುನೀಯ ಕಾವ್ಯಕ್ಕೆ ಟೀಕೆಯನ್ನು ರಚಿಸಿರುವನೆಂದು ಪ್ರತೀತಿ ಇದೆ. ಈತನ ಆಳ್ವಿಕೆಯ ಅವಧಿಯಲ್ಲಿ ಪುನ್ನಾಟ ಹಾಗೂ ಪನ್ನಾಡೆ (ಬಾಣ) ಭಾಗಗಳು ಗಂಗ ಸಾಮ್ರಾಜ್ಯದಲ್ಲಿ ವಿಲೀನಗೊಂಡವು. ದುರ್ವಿನೀತನು ಬಾದಾಮಿ ಚಾಲುಕ್ಯರ ಅಧಿಕಾರವನ್ನು ಒಪ್ಪಿಕೊಂಡಿದ್ದನೆಂದು ಹಾಗೂ ಒಂದನೇ ಪುಲಿಕೇಶಿಯು ತನ್ನ ನೆರೆಹೊರೆಯ ಸಾಮ್ರಾಜ್ಯವನ್ನು ಗೆದ್ದುಕೊಂಡು ಸಾಂಕೇತಿಕವಾಗಿ ಅಶ್ವಮೇಧಯಾಗವನ್ನು ನೆರವೇರಿಸಲು ಈತನು ನೆರವಾದನೆಂದು ಊಹಿಸಲಾಗಿದೆ. ಈತನ ನಂತರ ಅವನ ಇಬ್ಬರು ಮಕ್ಕಳು ಒಬ್ಬರ ತರುವಾಯ ಒಬ್ಬರಂತೆ ಅಧಿಕಾರಕ್ಕೆ ಬಂದರು. ನಂತರ ಮುಷ್ಕರನ ಮಗ ತ್ರಿವಿಕ್ರಮ ಪಟ್ಟಕ್ಕೆ ಬಂದನು  ತ್ರಿವಿಕ್ರಮನ ತರುವಾಯ ಭೂವಿಕ್ರಮನು ಅಧಿಕಾರಕ್ಕೆ ಬಂದು ಬಾದಾಮಿ ಚಾಲುಕ್ಯ ದೊರೆಯೊಂದಿಗೆ ಉತ್ತಮ ಸಂಬಂಧವನ್ನು ಹೊಂದಿದ್ದು ಮಾತ್ರವಲ್ಲದೇ ಪಲ್ಲವ ಪರಮೇಶ್ವರ ವರ್ಮನನ್ನು ವಿಳಾಂದೆ ಎಂಬ ಸ್ಥಳದಲ್ಲಿ ಸೋಲಿಸಿ ಕ್ರಿ.ಶ.670ರಲ್ಲಿ ಪರಾಭವಗೊಳಿಸಲು ವಿಕ್ರಮಾದಿತ್ಯನಿಗೆ ಸಹಾಯ ಮಾಡಿದನೆಂದು ತಿಳಿದುಬರುತ್ತದೆ. ಭೂವಿಕ್ರಮನ ಕಿರಿಯ ತಮ್ಮನಾದ ಮೊದಲನೇ ಶಿವಮಾರನು ಕ್ರಿ.ಶ.679ರಲ್ಲಿ ಗಂಗ ಸಾಮ್ರಾಜ್ಯದ ಸಿಂಹಾಸನವನ್ನು ಅಲಂಕರಿಸಿದನು. ಮೊದಲನೇ ಶಿವಮಾರನ ನಂತರ ಅವನ ಮೊಮ್ಮಗನಾದ ಶ್ರೀಪುರುಷನು (ಕ್ರಿ.ಶ.796 ರಿಂದ 798) ಅಧಿಕಾರಕ್ಕೆ ಬಂದುದರ ಬಗ್ಗೆ ಜಾವಳಿ ತಾಮ್ರಶಾಸನವು ಖಚಿತಪಡಿಸುತ್ತದೆ. ಆದರೆ ಒಂದನೇ ಶಿವಮಾರ ಮತ್ತು ಶ್ರೀಪುರುಷನ ಶಾಸನಗಳಲ್ಲಿ ಉಲ್ಲೇಖಿತರಾದ ಈ ವ್ಯಕ್ತಿಗಳಿಗೆ ಸಂಬಂಧಿಸಿದಂತೆ ಜಯ ಮತ್ತು ವೃದ್ಧಿಯರು ಪಲ್ಲವ ಯುವರಾಜನ ಮಕ್ಕಳೆಂದು ಶಾಸನವೊಂದು ತಿಳಿಸುತ್ತದೆ. ಶ್ರೀಪುರುಷನು ಕಂಚಿಗೆ ಮುತ್ತಿಗೆ

ಹಾಕಿ ಪಲ್ಲವ ನಂದಿವರ್ಮನನ್ನು ಪರಾಭವಗೊಳಿಸಿ ಪೆರ್ಮಾನಡಿ ಎಂಬ ಬಿರುದುಗಳಿಸಿದನು. ಈತನಿಗೆ ಚಾಲುಕ್ಯವಂಶದ ಎರಡನೇ ವಿಕ್ರಮಾದಿತ್ಯನು ಈ ಯುದ್ಧದಲ್ಲಿ ಬೆಂಬಲಿಸಿದ್ದನೆಂದು ದಾಖಲೆಗಳಿಂದ ವ್ಯಕ್ತವಾಗುತ್ತದೆ. ನಂತರ ಪಾಂಡ್ಯ ವಂಶದ ತೈಮೂರನು ಗಂಗವಂಶದ ರಾಜಕುಮಾರಿಯನ್ನು ಅಪಹರಿಸಿ ಆಕೆಯನ್ನು ವಿವಾಹವಾದನೆಂದು ಪ್ರತೀತಿಯಿದೆ. ಇದೇ ಸಮಯದಲ್ಲಿ ಶ್ರೀಪುರುಷನು ವಂಬೈ ಎಂಬ ಸ್ಥಳದಲ್ಲಿ ಪರಾಭವ ಹೊಂದಿದನು.ಆಗ ಕುವಲಾಪುರದಿಂದ ಮಾನ್ಯಪುರಕ್ಕೆ ತನ್ನ ರಾಜಧಾನಿಯನ್ನು ಸ್ಥಳಾಂತರಿಸಿದನೆಂದು ಶಾಸನಗಳಿಂದ ಸ್ಪಷ್ಟವಾಗುತ್ತದೆ. ಹೀಗೆ ಶ್ರೀಪುರುಷನು ತನ್ನ ಪ್ರಬಲ ಶಕ್ತಿಯಿಂದ ಗಂಗ ಸಾಮ್ರಾಜ್ಯವನ್ನು ಸಂರಕ್ಷಿಸಿದನು. ಶ್ರೀಪುರುಷನು ರಾಜಕೇಸರಿ, ರಣಭಾಜನ, ಭೀಮಕೋಪ, ಕೊಂಗುನಾ, ರಾಜಾಧಿರಾಜ, ಪರಮೇಶ್ವರ ಮೊದಲಾದ ಬಿರುದುಗಳನ್ನು ಧರಿಸಿದ್ದನು. ಈತನು ಕೈಗೊಂಡ ಪ್ರಮುಖ ಸಾಧನೆಯೆಂದರೆ ನೊಳಂಬರನ್ನು ಸೋಲಿಸಿ ನೊಳಾಂಬಾಂತಕ ಎಂದು ಬಿರುದುಗಳಿಸಿದನು. ಇವನನ ಮಂತ್ರಿಯಾದ ಚಾವುಂಡರಾಯನು ಶ್ರವಣಬೆಳಗೊಳದಲ್ಲಿ ಬೃಹತ್ ಪ್ರಮಾಣದ ಏಕಶಿಲೆಯ ಬಾಹುಬಲಿಯ ಮೂರ್ತಿಯನ್ನು ಪ್ರತಿಷ್ಠಾಪಿಸಿ ಭಾರತೀಯ ಶಿಲ್ಪಕಲಾ ಇತಿಹಾಸದಲ್ಲಿ ಗಂಗರ ಹೆಸರು ಅಮರವಾಗುವಂತೆ ಮಾಡಿದ್ದಾನೆ. ನಂತರ ಮಾರಸಿಂಹನಿಗೆ ಸತ್ಯವಾಕ್ಯ, 4ನೇ ರಾಚಮಲ್ಲ, ರಕ್ಕಸಂಗ ಮತ್ತು ಅರುಮೋಳಿದೇವ ಎಂಬ ನಾಲ್ವರು ಮಕ್ಕಳಿದ್ದರು. ಈ ಸಹೋದರರಲ್ಲಿ ಅಂತಃಕಲಹಗಳು ಉಂಟಾದವು ಚಾವುಂಡರಸನು ತನ್ನ ರಾಜನಾಗಿದ್ದ ಮಾರಸಿಂಹನ ತಮ್ಮ ಗೋವಿಂದರಸನ ವಿರುದ್ಧವಾಗಿ 4ನೇ ರಾಜಮಲ್ಲನ ಪರವಾಗಿ ಸಹಾಯಕ್ಕೆ ನಿಂತನು.ಆಂತರಿಕ ಕಲಹಗಳ ಬಗ್ಗೆ ತಿಳಿದಿದ್ದ ಚಾಲುಕ್ಯ ತೈಲಪನು ಈ ವಂಶದ ಆಡಳಿತದಲ್ಲಿ ಮಧ್ಯಪ್ರವೇಶ ಮಾಡಿ ಎಲ್ಲರನ್ನು ಸೋಲಿಸಿ ಗಂಗವಾಡಿಯನ್ನು ಚಾಲುಕ್ಯ ಸಾಮ್ರಾಜ್ಯದೊಳಗೆ ಲೀನವಾಗಿಸಿಕೊಂಡನು. ಅನಂತರ ಚೋಳರು ಗಂಗರ ಅಳಿದುಳಿದ ಸಾಮ್ರಾಜ್ಯವನ್ನು ತನ್ನ ಸಾಮ್ರಾಜ್ಯದಲ್ಲಿ ವಿಲೀನಗೊಳಿಸಿಕೊಂಡರು.

ಶ್ರೀಪುರುಷನ ನಂತರ 2ನೇ ಶಿವಮಾರನು ಕ್ರಿ.ಶ.788ರಲ್ಲಿ ಅಧಿಕಾರಕ್ಕೆ ಬಂದನು. ಈತನು ಕೂಡ ರಾಷ್ಟ್ರಕೂಟರ ವಿರುದ್ಧ ಹೋರಾಡಬೇಕಾಯಿತು. ರಾಷ್ಟ್ರಕೂಟ ದೊರೆ ಧ್ರುವನು ಈತನನ್ನು ಮುದಗುಂಡೂರು ಯುದ್ಧದಲ್ಲಿ ಪರಾಭವಗೊಳಿಸಿ ಸೆರೆಹಿಡಿದುಕೊಂಡು ಹೋದನು. ಶಿವಮಾರನ ಸ್ಥಾನದಲ್ಲಿ ಧ್ರುವನು ತನ್ನ ಮಗನಾದ ಸ್ತಂಭನನ್ನು ಗಂಗವಾಡಿಯ ರಾಜ್ಯ ಪಾಲನನ್ನಾಗಿ ನೇಮಕ ಮಾಡಿದನು. ಈತನು ಸಹ ಮಾನ್ಯಪುರದಿಂದಲೇ ಆಡಳಿತವನ್ನು ನಿರ್ವಹಿಸಿದನು. ಧ್ರುವನ ಮರಣಾನಂತರ ಆತನ ಇಬ್ಬರು ಮಕ್ಕಳ ನಡುವೆ ಸಂಭವಿಸಿದ ಅಧಿಕಾರ ಕಲಹದ ಪರಿಣಾಮವಾಗಿ 3ನೇ ಗೋವಿಂದನು ಪಟ್ಟಕ್ಕೆ ಬಂದು ಇಮ್ಮಡಿ ಶಿವಮಾರನು ಇನ್ನು ಮುಂದೆ ತನ್ನನ್ನು ಬೆಂಬಲಿಸಬಹುದೆಂಬ ನಿರೀಕ್ಷೆಯೊಂದಿಗೆ ಗೋವಿಂದನು

ಆತನನ್ನು ಬಿಡುಗಡೆ ಮಾಡಿದನು. ಆದರೆ ಶಿವಮಾರನು 3ನೇ ಗೋವಿಂದನನ್ನು ಬೆಂಬಲಿಸುವ ಬದಲು ಸ್ತಂಭನಿಗೆ ಬೆಂಬಲ ನೀಡಿದನು. ಗಂಗವಾಡಿ ಪ್ರಾಂತ್ಯದ ಮುಖ್ಯ ಅಧಿಕಾರವನ್ನು ಶಿವಮಾರನ ಮಗನಾದ ಯುವರಾಜ ಮಾರಸಿಂಹನಿಗೆ ಕ್ರಿ.ಶ.796ರಲ್ಲಿ ವಹಿಸಿಕೊಡಲಾಯಿತು. ಅನಂತರ ಮುಮ್ಮಡಿ ಗೋವಿಂದನಿಗೂ ಮತ್ತು ಸ್ತಂಭನಿಗೂ ಯುದ್ಧ ನಡೆದು ಸ್ತಂಭನು ಸೋಲನ್ನು ಅನುಭವಿಸಿದನು. ಆದರೆ ಗೋವಿಂದನು ತನ್ನ ಹೃದಯವಂತಿಕೆಯಿಂದ ಸ್ತಂಭನನ್ನು ಮತ್ತೆ ಗಂಗವಾಡಿಯ ಪ್ರಾಂತ್ಯಾಧಿಕಾರಿಯನ್ನಾಗಿ ನೇಮಿಸಿದನು. ಇಮ್ಮಡಿ ಶಿವಮಾರನು ಅಮೋಘವರ್ಷನೊಡನೆ ಕ್ರಿ.ಶ.816ರಲ್ಲಿ ನಡೆದ ಯುದ್ಧದಲ್ಲಿ ಮಡಿದನೆಂದು ಪ್ರತೀತಿಯಿದೆ. ಆಲೂರಿನ ಕ್ರಿ.ಶ.796ರ ತಾಮ್ರಶಾಸನದಲ್ಲಿ ಹರಿವರ್ಮ, ವಿಷ್ಣುಗೋಪ, ಮಾಧವ, ಅವನೀತ, ದುರ್ವಿನೀತ, ದುಗ್ಗಮಾರ, ಶಿವಮಾರ, ಶ್ರೀಪುರುಷ ಹಾಗೂ ಶಿವಮಾರದೇವನವರೆಗಿನ ವಂಶಾವಳಿಯನ್ನು ನೀಡಲಾಗಿದೆ. ಮಾರಸಿಂಹನ ನಂತರ ಅಧಿಕಾರಕ್ಕೆ ಬಂದ ರಾಚಮಲ್ಲನು ರಾಷ್ಟ್ರಕೂಟರಿಂದ ಸ್ವತಂತ್ರನಾಗಲು ನೊಳಂಬರೊಡನೆ ವೈವಾಹಿಕ ಸಂಬಂಧವನ್ನು ಬೆಳೆಸಿದನು.[17] ತರುವಾಯ ರಾಚಮಲ್ಲನ ಮಗನಾಧ ಎರೆಯಂಗ ನೀತಿಮಾರ್ಗನು ಕ್ರಿ.ಶ.843ರಲ್ಲಿ ಅಧಿಕಾರಕ್ಕೆ ಬಂದನು. ಅಮೋಘವರ್ಷನು ಗಂಗವಂಶದ ರಾಜಕುಮಾರಿ ಚಂದ್ರಲಬ್ಬೆಯನ್ನು ವಿವಾಹವಾದ ಕಾರಣ ಗಂಗರೊಡನೆ ಸ್ನೇಹ ಬಾಂಧವ್ಯವನ್ನು ಬೆಳಸಿಕೊಂಡಿದ್ದರು. ಎರೆಯಂಗನ ಜೇಷ್ಠಪುತ್ರನಾದ 2ನೇ ರಾಚಮಲ್ಲನು (ಕ್ರಿ.ಶ.870-919) ಉತ್ತರಾಧಿಕಾರಿಯಾದನು. ಈತನು ಅಧಿಕಾರಕ್ಕೆ ಬಂದ ಆರಂಭದಲ್ಲೇ ಆತನ ವಿರುದ್ಧ ತಿರುಗಿಬಿದ್ದ ನೊಳಂಬ ಮಹೇಂದ್ರನನ್ನು ಎದುರಿಸಬೇಕಾಯಿತು. ನಂತರ ಕ್ರಿ.ಶ.895ರಲ್ಲಿ ಬೂತುಗನ ಮಗ ಇಮ್ಮಡಿ ಎರೆಯಂಗನು ಮಹೇಂದ್ರನನ್ನು ಸೋಲಿಸಿ ಗಂಗರು ಕಳೆದುಕೊಂಡಿದ್ದ ರಾಜಕೀಯ ಎಲ್ಲೆಗಳನ್ನು ಪುನಃ ಹಿಂದಕ್ಕೆ ಪಡೆದನು. ಎರೆಯಪ್ಪರಸನ ಮೂವರು ಮಕ್ಕಳಾದ ನರಸಿಂಹ (ಕ್ರಿ.ಶ.919-925) ಕಕ್ಕೆಯ ಗಂಗ/ಮುಮ್ಮಡಿ ರಾಚಮಲ್ಲ (ಕ್ರಿ.ಶ.923-936) ಹಾಗೂ ಅನಂತರ ಇಮ್ಮಡಿ ಬೂತುಗ (ಕ್ರಿ.ಶ.936-960) ಇವರು ಒಬ್ಬರ ತರುವಾಯ ಒಬ್ಬರಂತೆ ಅಧಿಕಾರಕ್ಕೆ ಬಂದು ಗಂಗ ಸಾಮ್ರಾಜ್ಯದ ಮುನ್ನಡೆಯನ್ನು ತಲಕಾಡಿನಿಂದ ನಿರ್ದೇಶನ ಮಾಡಿದರು.

ಇಮ್ಮಡಿ ಬೂತುಗನು ರಾಷ್ಟ್ರಕೂಟ ದೊರೆ ಅಮೋಘವರ್ಷ ಅಥವಾ ಬದ್ದೆಗದೇವನ ಸಹಾಯದೊಂದಿಗೆ ತನ್ನ ಹಿರಿಯಣ್ಣನನ್ನು ಪದಚ್ಯುತಿಗೊಳಿಸಿ ಅಧಿಕಾರಕ್ಕೆ ಬಂದನು. ಇಮ್ಮಡಿ ಬೂತುಗನು ಬದ್ದೆಗದೇವನ ಮಗಳಾದ ರೇವಕನಿಮ್ಮಡಿಯನ್ನು ವಿವಾಹವಾಗಿದ್ದುದರಿಂದಾಗಿ ಸ್ವಾಭಾವಿಕವಾಗಿ ಮುಮ್ಮಡಿ ಅಮೋಘವರ್ಷನು ಈತನಿಗೆ ಸಿಂಹಾಸನವನ್ನೇರಲು ಸಹಾಯವನ್ನು ಒದದಗಿಸಿದನು. ಈತನ ನಂತರ ಕಲ್ಯಾಣದ ಚಾಲುಕ್ಯರು ಪ್ರಬಲರಾಗಿ ರಾಷ್ಟ್ರಕೂಟರ ಆಡಳಿತವನ್ನು ಕೊನೆಗಾಳಿಸಿದರು. ಆದರೆ ಮುಮ್ಮಡಿ ಮಾರಸಿಂಹ ರಾಷ್ಟ್ರಕೂಟ

ದೊರೆ ನಾಲ್ಕನೇ ಇಂದ್ರನನ್ನು ಬಂಕಾಪುರದಲ್ಲಿ ಪಟ್ಟಾಭಿಷೇಕ್ತನನ್ನಾಗಿ ಮಾಡುವಲ್ಲಿ ಸಹಕರಿಸಿದನು. ಇದರಿಂದಾಗಿ ಕಲ್ಯಾಣದ ಚಾಲುಕ್ಯರ ಮೊದಲ ಅರಸ ಇಮ್ಮಡಿ ತೈಲಪನ ಅವಕೃಪೆಗೆ ಮುಮ್ಮಡಿ ಮಾರಸಿಂಹ ಪಾತ್ರನಾಗಬೇಕಾಯಿತು.

ತುರುವೇಕೆರೆ ತಾಲ್ಲೂಕಿನ ಕೊಂಡಜ್ಜಿ ಗ್ರಾಮದ ಹೊಸಮನೆ ವೆಂಕಟಶಾಸ್ತ್ರಿಗಳ ವಶದಲ್ಲಿದ್ದ ತಾಮ್ರ ಶಾಸನವೊಂದು ದೊರೆತಿದೆ. ಈ ತಾಮ್ರ ಶಾಸನವು ಸಂಸ್ಕೃತ ಭಾಷೆಯಲ್ಲಿದ್ದು ಐದು ತಾಮ್ರದ ಹಲಗೆಗಳಲ್ಲಿ ಶಾಸನವನ್ನು ಬರೆಸಲಾಗಿದೆ.ಈ ಶಾಸನವು ಗಜ ಮುದ್ರೆಯನ್ನು ಹೊಂದಿದ್ದು ಕಾಶ್ಯಪ ಗೋತ್ರದ ಅಮ್ಮಭಟ್ಟ ಎಂಬುವನಿಗೆ ಕೆರಗೋಡು ಮುಂತಾದ ಗ್ರಾಮಗಳ ಸುಂಕವನ್ನು ದಾನ ನೀಡಿದುದರ ಬಗ್ಗೆ ತಿಳಿಸುತ್ತದೆ. ಈ ಶಾಸನವು ಗಂಗ ರಾಜ ಶ್ರೀಪುರುಷ ಮಾನ್ಯಪುರದಲ್ಲಿ ಬೀಡು ಬಿಟ್ಟಿದ್ದಾಗ ಆತನ ಮಗ ವಿನಯಾದಿತ್ಯ ಇದೇ ಸಮಯದಲ್ಲಿ ನಾಡು ಗಂಗಾವಾಡಿ 96000 ವನ್ನು ಆಳ್ವಿಕೆ ನಡೆಸುತ್ತಿದ್ದರ ಬಗ್ಗೆ ಉಲ್ಲೇಖವಿದೆ.[18]

ತುಮಕೂರು ತಾಲೂಕಿನ ಹಿರಿಗುಂಡಗಲ್ ದೊರೆತಿ ಗ್ರಾಮದ ಈಶಾನ್ಯ ದಿಕ್ಕಗೆ ತಿಮ್ಮಕ್ಕನ ಹೊಲದಲ್ಲಿ ದೊರೆತಿರುವ ವೀರಗಲ್ಲು ಗಂಗರಾಜು ಶ್ರೀಪುರುಷನ ಹೆಸರನ್ನು ಉಲ್ಲೇಖಿಸಿದ್ದು ದುರಾದೃಷ್ಟವಶಾತ್ ಕಾಲಮಾನವನ್ನು ಹೊಂದಿಲ್ಲ.[19] ಅದೇ ಸ್ಥಳಗಳಲ್ಲಿರುವ ಇನ್ನೊಂದು ವೀರಗಲ್ಲು ಸಹ ಶ್ರೀಪುರುಷನ ಆಳ್ವಿಕೆಯ ಕಾಲದಲ್ಲಿ ವೀರನೊಬ್ಬ ಮಡಿದ ಮಾಹಿತಿಯನ್ನು ಉಲ್ಲೇಖಿಸುತ್ತದೆ. ಇದೇ ಸ್ಥಳದ 17ನೆಯ ವೀರಗಲ್ಲು ಗಂಗರಾಜ ಶ್ರೀಪುರುಷನ ಸೈನಿಕ ಎರಿಗೇಸಿ ಎಂಬುವನು ಯುದ್ಧದಲ್ಲಿ ಮಡಿದ ಸಂಗತಿಯನ್ನು ತಿಳಿಸುತ್ತದೆ.[20]

ಇದೇ ಸ್ಥಳದಲ್ಲಿ ದೊರೆತಿರುವ 12ನೇ ವೀರಗಲ್ಲಿನ ಕೆಳಭಾಗದಲ್ಲಿ ವೀರನೊಬ್ಬ ಯುದ್ಧದಲ್ಲಿ ಮಡಿದ ಸಂಗತಿಯನ್ನು ಉಲ್ಲೇಖಿಸುತ್ತಾ ಶ್ರೀಪುರುಷನ ಆಳ್ವಿಕೆಯಲ್ಲಿ ಮನೆಮಗನೊಬ್ಬ ಮಡಿದನೆಂದು ಉಲ್ಲೇಖಿಸುತ್ತದೆ. [21] ಕ್ರಿ.ಶ.ಸುಮಾರು 775ಕ್ಕೆ ಇಸವಿಗೆ ಸಲ್ಲುವ ಇದೇ ಸ್ಥಳದಲ್ಲಿ ದೊರೆತ 6ನೆಯ ವೀರಗಲ್ಲು ಶ್ರೀಪುರುಷನ ಬಿರುದು ಪೃಥ್ವಿಕೊಂಗಣಿ ಎಂದು ಉಲ್ಲೇಖಿಸುತ್ತಾ ರಾಷ್ಟ್ರಕೂಟರೊಡನೆ ನಡೆದ ಯುದ್ಧದ ಬಗ್ಗೆ ಉಲ್ಲೇಖಿಸುತ್ತದೆ.[22] ಅದೇ ಸ್ಥಳದಲ್ಲಿರುವ 3ನೆಯ ವೀರಗಲ್ಲು ಶ್ರೀಪುರುಷನ ಆಳ್ವಿಕೆಯಲ್ಲಿ ಮನೆಮಗ ಅಂದರೆ ವೀರನು ಬಲ್ಲಹನೊಡನೆ ಹೋರಾಡಿದ ವಿಷಯವನ್ನು ಪ್ರಸ್ತಾಪಿಸುತ್ತದೆ. ಬಲ್ಲಹ ಬಹುಶಃ ರಾಷ್ಟ್ರಕೂಟರ 1ನೇ ಕೃಷ್ಣ ಅಥವಾ 2ನೇ ಗೋವಿಂದನಾಗಿರಬಹುದು [23]

ಗಂಗದೊರೆ ಶಿವಮಾರನು ರಾಷ್ಟ್ರಕೂಟ ದೊರೆ ಮೂರನೇ ಗೋವಿಂದನೊಡನೆ ಕಾಗಿಮೊಗೆಯೂರು ಎಂಬ ಸ್ಥಳದಲ್ಲಿ ಹೋರಾಡಿದ ಸಂಗತಿಯನ್ನು ತಿಳಿಸುತ್ತದೆ.[24] ಇದೇ

ಸ್ಥಳದಲ್ಲಿ ದೊರೆತಿರುವ 5ನೆಯ ವೀರಗಲ್ಲು ಶ್ರೀಜಡ್ದನ್ ಮತ್ತು ಸಿಯಗೆಲ್ಲಾ ಕಾಗಿಮೊಗೆಯೂರು ಎಂಬಲ್ಲಿ ರಾಷ್ಟ್ರಕೂಟರೊಡನೆ ಹೋರಾಡಿದ ಬಗ್ಗೆ ತಿಳಿಸುತ್ತದೆ.[25] ತುಮಕೂರಿನ ಗುಬ್ಬಿ ತಾಲೂಕಿನ ಪ್ರಭುವನಹಳ್ಳಿ ಎಂಬ ಗ್ರಾಮದಲ್ಲಿ ವರದಯ್ಯ ಎಂಬುವರ ಹೊಲದಲ್ಲಿ ಕಂಡುಬಂದಿರುವ ವೀರಗಲ್ಲು ಗಂಗದೊರೆ 2ನೇ ರಾಚಮಲ್ಲನನ್ನು ಉಲ್ಲೇಖಿಸುತ್ತದೆ. 2ನೇ ರಾಚಮಲ್ಲನ ಆಳ್ವಿಕೆಯ ಸಮಯದಲ್ಲಿ ಮರಲಿಗೆಯೂರು ಎಂಬಲ್ಲಿ ಕುಮಾದಯರ್ ಎಂಬುವನು ಯುದ್ಧದಲ್ಲಿ ಹೋರಾಡಿ ಸತ್ತನೆಂಬ ವಿಷಯವನ್ನು ಉಲ್ಲೇಖಿಸುತ್ತದೆ.[26] ಇದೇ ಸ್ಥಳದಲ್ಲಿ ಮತ್ತೊಂದು ವೀರಗಲ್ಲು ದೊರೆತಿದ್ದ ಹೆಚ್ಚು ತೃಟಿತವಾಗಿದೆ. ಈ ಶಾಸನವು ಸಹ 2ನೇ ರಾಚಮಲ್ಲನ ಹೆಸರನ್ನು ಉಲ್ಲೇಖಿಸುತ್ತದೆ.[27]

ತಿಪಟೂರು ತಾಲೂಕಿನ ಕೆರೆಕೊಡಿ ರಂಗಾಪುರ ಪರದೇಶಿ ಸ್ವಾಮಿಗಳ ಮಠದ ಏಜೆಂಟರಾದ ನಿರ್ವಾಣಪ್ಪ ಎಂಬುವರ ಬಳಿ ದೊರೆತ ತಾಮ್ರ ಶಾಸನವು ಗಂಗರ ವಂಶಾವಳಿಯನ್ನು ಸಂಪೂರ್ಣವಾಗಿ ದಾಖಲಿಸುತ್ತದೆ. ಈ ತಾಮ್ರಶಾಸನವು ಎರಡನೇ ರಾಚಮಲ್ಲನ ಆಳ್ವಿಕೆ ಸುಮಾರು ಕ್ರಿ.ಶ.೯೦೦ಕ್ಕೆ ಸಲ್ಲುವ ಶಾಸನವಾಗಿದ್ದು, ಕೊಂಗುಣಿವರ್ಮನಿಂದ ಹಿಡಿದು 2ನೇ ರಾಚಮಲ್ಲ ಮತ್ತು ಬೂತುಗನ ತನಕ ಗಂಗ ವಂಶಾವಳಿಯನ್ನು ನೀಡುತ್ತದೆ.[28] ಸಿರಾ ತಾಲೂಕಿನ ಹಲ್ಲೂರು ಗ್ರಾಮದ ಅರಳಿಕಟ್ಟೆಯ ಸಮೀಪದ ಗದ್ದೆಯ ಬದುವಿನಲ್ಲಿ ನಿಂತಿರುವ ವೀರಗಲ್ಲು ಸುಮಾರು ಕ್ರಿ.ಶ.೯೦೦ರ ಕಾಲಕ್ಕೆ ಸಂಬಂಧಿಸಿದ್ದು ಮೂರನೇ ರಾಚಮಲ್ಲನ ಆಡಳಿತ ಕಾಲದಲ್ಲಿ ಗೋಕಳ್ಳರ ವಿರುದ್ಧ ಹೋರಾಟದಲ್ಲಿ ಕಾಮೇಶ್ವರ ಭಟ್ಟಾರಕ ಎಂಬುವನು ಸ್ವರ್ಗಸ್ಥನಾದ ವಿಷಯದ ಬಗ್ಗೆ ತಿಳಿಸುತ್ತದೆ.[29]

**ರಾಷ್ಟ್ರಕೂಟರು**

ಕ್ರಿ.ಶ.757ರಲ್ಲಿ ಬಾದಾಮಿ ಚಾಲುಕ್ಯ ಸಂತತಿಯನ್ನು ಸೋಲಿಸಿ ಕ್ರಿ.ಶ.973ರವರೆಗೆ ಸುಮಾರು ಎರಡು ಶತಮಾನದವರೆಗೆ ವಿಶಾಲ ಸಾಮ್ರಾಜ್ಯವನ್ನಾಳಿದ ರಾಷ್ಟ್ರಕೂಟರು ಭಾರತದ ಇತಿಹಾಸದಲ್ಲಿ ಸ್ಮರಣೀಯರೆನಿಸಿಕೊಂಡಿದ್ದಾರೆ. ರಾಷ್ಟ್ರಕೂಟರ ಸಾಮ್ರಾಜ್ಯವು ಉತ್ತರದಲ್ಲಿ ನರ್ಮದಾ ನದಿಯಿಂದ ದಕ್ಷಿಣದಲ್ಲಿ ಕಾವೇರಿಯವರೆಗೂ, ಪಶ್ಚಿಮದಲ್ಲಿ ಅರಬ್ಬಿ ಸಮುದ್ರ ಮತ್ತು ಮಾಳವದಿಂದ, ಪೂರ್ವದಲ್ಲಿ ಆಂಧ್ರಪ್ರದೇಶದ ವಾರಂಗಲ್ ಮತ್ತು ಕಡಪ ಜಿಲ್ಲೆಗಳವರೆಗೂ ವಿಸ್ತರಿಸಿಕೊಂಡಿತ್ತು .ಇಂತಹ ವಿಶಾಲ ಸಾಮ್ರಾಜ್ಯವನ್ನು ಸ್ಥಾಪಿಸಿ ಕನ್ನಡ ಸಂಸ್ಕೃತಿ, ನಾಡು, ನುಡಿಗೆ ರಾಷ್ಟ್ರಕೂಟರು ನೀಡಿದ ಕೊಡುಗೆ ಅಮೋಘವಾದುದಾಗಿದೆ.[30] ತುಮಕೂರು ಜಿಲ್ಲೆಯ ಕಡಬ ಗ್ರಾಮದಲ್ಲಿ ರಾಷ್ಟ್ರಕೂಟ 3ನೇ ಗೋವಿಂದ ಶಾಸನ ದೊರೆತಿದ್ದು ಈ ಶಾಸನವು ಕ್ರಿ.ಶ.812

ಮೇ 13 ಶುಕ್ರವಾರಕ್ಕೆ ಸಂದುತ್ತದೆ. ಈ ಶಾಸನದಲ್ಲಿ ಪ್ರಭೂತವರ್ಷ 3ನೇ ಗೋವಿಂದನವರೆಗೆ ರಾಷ್ಟ್ರಕೂಟ ವಂಶಾವಳಿಯನ್ನು ಕೊಡಲ್ಪಟ್ಟಿದೆ. ಒಂದು ಗಮನಿಸಬೇಕಾದ ಅಂಶವೆಂದರೆ ಈ ವಂಶಾವಳಿಯಲ್ಲಿ ದಂತಿದುರ್ಗನ ಹೆಸರಿನ ಬದಲಾಗಿ ವೈರಮೇಘ ಎಂಬ ಹೆಸರಿದೆ. ದಂತಿದುರ್ಗನಿಗೆ ವೈರಮೇಘ ಎಂಬ ಇನ್ನೊಂದು ಹೆಸರಾಗಲಿ, ಬಿರುದಾಗಲಿ ಇದ್ದಂತೆ ಬೇರೆ ಯಾವ ಮೂಲದಿಂದಲೂ ತಿಳಿದುಬಂದಿಲ್ಲ. ಈ ಹೆಸರು ಹೆಚ್ಚಾಗಿ ಪಲ್ಲವ ದಂತಿವರ್ಮನ ಬಿರುದೆಂದು ಮತ್ತು ಅವನ ಸಾಮಂತರಾದ ಬಾಣ ಅರಸರ ಹೆಸರೆಂದು ಹಲವಾರು ಪಲ್ಲವ ಶಾಸನಗಳಲ್ಲಿ ಉಕ್ತವಾಗಿದೆ. 3ನೇ ಗೋವಿಂದನು ಈ ಶಾಸನವನ್ನು ಹೊರಡಿಸುವಾಗ ಮಯೂರಖಂಡಿ ಎಂಬಲ್ಲಿ ಬೀಡು ಬಿಟ್ಟಿದ್ದನು ಎಂದು ಶಾಸನದಲ್ಲಿಹೇಳಿದೆ. ಇವನ ವಾಣಿ–ದಿಂಡೋರಿ ಮತ್ತು ರಾಧನಪುರ ತಾಮ್ರ ಶಾಸನಗಳೂ ಸಹ ಇದೇ ಬೀಡನ್ನು ಹೆಸರಿಸುತ್ತವೆ. ಈ ತಾಮ್ರ ಶಾಸನವು ಚಾಲುಕ್ಯ ಮನೆತನದ ಬಲವರ್ಮನ ಮೊಮ್ಮಗ ಮತ್ತು ಯಶೋವರ್ಮನ ಮಗನಾದ ವಿಮಲಾದಿತ್ಯನನ್ನು ಹೆಸರಿಸುತ್ತದೆ. ಇವನು ಕುಣುಂಗಿಲ್ ದೇಶವನ್ನು ಆಳುತ್ತಿದ್ದನೆಂದು ಅದರಲ್ಲಿ ಹೇಳಲಾಗಿದೆ. ಕುಣುಂಗಿಲ್ ಎಂಬುದು ತುಮಕೂರು ಜಿಲ್ಲೆಯ ಈಗಿನ ಕುಣಿಗಲ್ಲು ಎಂಬುದು ಸ್ಪಷ್ಟವಿದೆ. ಬಿ.ಎಲ್.ರೈಸ್ ಈ ಶಾಸನವನ್ನು ಪ್ರಕಟಿಸಿ ಕುಣಿಂಗಿಲ್ ಎಂಬುದು ತುಮಕೂರು ಜಿಲ್ಲೆಯ ಕುಣಿಗಲ್ಲು ಎಂಬುದು ಎಂದು ನಿರ್ಣಯಿಸಿದ್ದಾರೆ[31]

ತುಮಕೂರು ತಾಲೂಕಿನ ಚಿಕ್ಕಸಾರಂಗಿಯಲ್ಲಿ ದೊರೆತಿರುವ ಕ್ರಿ.ಶ.903ರ ಶಾಸನವು ರಾಷ್ಟ್ರಕೂಟ ದೊರೆ 2ನೇ ಕೃಷ್ಣನ ಆಳ್ವಿಕೆಗೆ ಸಂಬಂಧಿಸಿದ ಶಾಸನವಾಗಿದೆ. ದಂಡನಾಯಕನೊಬ್ಬನು ಮತ್ತು ಕೆಲವು ಸ್ಥಾನಿಕ ಅಧಿಕಾರಿಗಳು ಒಂದು ದತ್ತಿಯನ್ನು ಕೊಟ್ಟ ವಿಷಯವು ಈ ಶಾಸನದಲ್ಲಿದೆ. ಈ ಕಾಲಕ್ಕೆ 2ನೇ ಕೃಷ್ಣನ ದಂಡನಾಯಕ ದಾಮಪಯ್ಯನು ಇಡೀ "ತೆಂಕಣ ದಿಶಾವರಕ್ಕೆಲ್ಲ" ಅಧಿಕಾರಿಯಾಗಿ ಮಣ್ಣೆ ಎಂಬಲ್ಲಿ ಬೀಡು ಬಿಟ್ಟಿದ್ದನೆಂದು ಶಾಸನದಲ್ಲಿ ಹೇಳಿದೆ.[32]

ಗುಬ್ಬಿ ತಾಲೂಕಿನ ಕಡಬದಲ್ಲಿ ದೊರಕಿರುವ ರಾಷ್ಟ್ರಕೂಟರ ಕಾಲದ ಶಾಸನವೊಂದು ಒಂದನೇ ಕೃಷ್ಣ ಎಲ್ಲೋರದಲ್ಲಿ ನಿರ್ಮಿಸಿದ ಕೈಲಾಸ ದೇವಾಲಯವನ್ನು ಪ್ರಸ್ತಾಪಿಸುತ್ತದೆ. ಕ್ರಿ.ಶ.781ರಲ್ಲಿ ರಾಷ್ಟ್ರಕೂಟರು ಗಂಗರ ಶಿವಮಾರನ್ನು ಸೆರೆ ಹಿಡಿದು ಗಂಗವಾಡಿ 96.000ದ ಮೇಲಿನ ಅಧಿಕಾರ ಪಡೆದಿದ್ದರು. ಈ ಗಂಗವಾಡಿಗೆ ರಾಷ್ಟ್ರಕೂಟ ಚಾಕಿರಾಜ ಎಂಬ ಮಾಂಡಳಿಕರನ್ನು ನೇಮಿಸಿದರು ಎಂದು ಶಾಸನವು ತಿಳಿಸುತ್ತದೆ. ಇದರಿಂದ ಈ ತುಮಕೂರು ಪ್ರದೇಶದಲ್ಲಿ ಮೊದಲ ಬಾರಿಗೆ ರಾಷ್ಟ್ರಕೂಟರ ಆಳ್ವಿಕೆ ಆರಂಭವಾಯಿತ್ತೆಂದು ಊಹಿಸಬಹುದು. ರಾಷ್ಟ್ರಕೂಟ 2ನೇ ಕೃಷ್ಣನ (ಕ್ರಿ.ಶ.903) ಆಳ್ವಿಕೆಯ ಕಾಲದ ಒಂದು ಶಾಸನವು ರಾಷ್ಟ್ರಕೂಟ

ದಳಪತಿ ಪ್ರಚಂಚ ದಂಡನಾಯಕ ದಾಮಪಯ್ಯನು ಬೆಂಗಳೂರು ಜಿಲ್ಲೆಯ ನೆಲಮಂಗಲ ತಾಲೂಕಿನ ಮಣ್ಣೆನಗರದಿಂದ ಗಂಗವಾಡಿಯನ್ನು ಆಳುತ್ತಿದ್ದನೆಂದು ತಿಳಸುತ್ತದೆ ಆದ್ದರಿಂದ ಆಗಲೂ ಈ ಪ್ರದೇಶ ರಾಷ್ಟ್ರಕೂಟರ ಸಾಮ್ರಾಜ್ಯದ ಒಂದು ಭಾಗವಾಗಿತ್ತೆಂದು ಹೇಳಬಹುದು.[33]

**ಚಾಲುಕ್ಯರು**

ಬಾದಾಮಿ ಚಾಳುಕ್ಯ ಸಾಮ್ರಾಜ್ಯ ಸ್ಥಾಪನೆ ದಕ್ಷಿಣಭಾರತ ಹಾಗೂ ಕರ್ನಾಟಕದ ರಾಜಕೀಯ ಮತ್ತು ಸಾಂಸ್ಕೃತಿಕ ಇತಿಹಾಸದಲ್ಲಿ ಒಂದು ಹೊಸ ಅಧ್ಯಾಯವನ್ನು ಸ್ಥಾಪಿಸಿತು. ಚಾಳುಕ್ಯರ ಪರಮಾಧಿಕಾರ ಉತ್ತರದಲ್ಲಿ ನರ್ಮದಾ ತೀರದಿಂದ ದಕ್ಷಿಣದಲ್ಲಿ ಕಾವೇರಿ ಬಯಲಿನವರೆಗೂ ವ್ಯಾಪಸಿತ್ತು. ಇಡೀ ದಖನ್ ಪ್ರಸ್ಥಭೂಮಿ ಅವರ ಆಳ್ವಿಕೆಗೆ ಒಳಪಟ್ಟಿತ್ತಲ್ಲದೆ ಆಂಧ್ರಪ್ರದೇಶ ಮತ್ತು ಗುಜರಾತ್ ಪ್ರದೇಶಗಳ ಮೇಲೂ ಅವರ ಸಾರ್ವಭೌಮತ್ವ ಸ್ಥಾಪನೆಯಾಗಿತ್ತು. ಅಲ್ಲದೆ ಗುಜರಾತ್ ಮತ್ತು ಆಂಧ್ರ ಪ್ರದೇಶಗಳಲ್ಲಿ ಚಾಳುಕ್ಯ ಸಂತತಿಯ ಶಾಖೆಗಳೂ ಸ್ಥಾಪನೆಯಾದವು. ಹಿರಿದಾದ ಸಾಮ್ರಾಜ್ಯವನ್ನು ಕಟ್ಟಿ ವ್ಯವಸ್ಥಿತ ಆಡಳತ ಪದ್ಧತಿಯನ್ನು ಸ್ಥಾಪಿಸಿ ಚಾಳುಕ್ಯ ಸಾರ್ವಭೌಮರು ಮತ, ಸಾಹಿತ್ಯ ಮತ್ತು ಕಲೆಗೆ ವಿಶೇಷ ಪ್ರೋತ್ಸಾಹ ಕೊಟ್ಟರು. ವೈಷ್ಣವ, ಶೈವ ಮತ್ತು ಜೈನ ಪಂಥಗಳಗೆ ಚಾಳುಕ್ಯರು ಪ್ರೋತ್ಸಾಹ ನೀಡಿದರು.ಈ ಪಂಥಗಳ ನೂರಾರು ಸುಂದರ ದೇವಾಲಯಗಳು ನಿರ್ಮಿತವಾದವು. ಚಾಳುಕ್ಯರ ಪ್ರೋತ್ಸಾಹದಿಂದ ವಿಕಾಸವಾದ ವಾಸ್ತುಶಿಲ್ಪ ವೇಸರ ಶೈಲಿಯೆಂದು ಭಾರತೀಯ ವಾಸ್ತುಶಿಲ್ಪ ಇತಿಹಾಸದಲ್ಲಿ ಸುಪ್ರಸಿದ್ಧವಾಗಿದೆ. ಈ ಮನೆತನದ ಸಾರ್ವಭೌಮರು ವಲ್ಲಭ, ಪರಮ ಭಾಗವತ ಮೊದಲಾಧ ಬಿರುದುಗಳನ್ನು ಹೊಂದಿದ್ದು ವೈಷ್ಣವ ಮತ್ತು ಶೈವ ಪಂಥಾವಲಂಬಿಗಳಾಗಿದ್ದರು. ಆದಿವರಾಹ ಈ ಸಂತತಿಯ ರಾಜಚಿಹ್ನೆಯಾಗಿತ್ತು.[34]

ತುರುವೇಕೆರೆ ತಾಲೂಕಿನ ಸೂಳೆಕೆರೆಯ ಈಶ್ವರ ದೇವಾಲಯದ ಮುಂದಿರುವ ವೀರಗಲ್ಲು ಶಾಸನ ಪಾಠವನ್ನು ಒಳಗೊಂಡಿದೆ. ಇದು ಚಾಲುಕ್ಯರ ಗೊಗ್ಗಿ ರಾಜನ ಆಳ್ವಿಕೆಯ (ವೀರರಾಜೇಂದ್ರ) ಸಮಯದಲ್ಲಿ ಗೋಕಳ್ಳರಿಂದ ಗೋವುಗಳನ್ನು ರಕ್ಷಿಸಿ ನೀರಗುಂದ ನಾಡಿನ ತುರುವೇಕೆರೆಯಲ್ಲಿ ಮಡಿದನೆಂದು ತಿಳಸುತ್ತದೆ. ಈ ಶಾಸನವು ಕ್ರಿ.ಶ.1113ರಕ್ಕೆ ಸಂಬಂಧಿಸಿದೆ. ಶಕವರುಷ 1052ನೇ ವಿಜಯಸಂವತ್ಸರ ಸೋಮವಾರ ನೀರ್ಗುಂದನಾಡಿನ ತುರುವೇಕೆರೆ ಸೀಮೆಯ ಬಂಗವಾಡಿಯ ನಾಗವುಂಡನ ಮಗ ಗೋಕಳ್ಳರ ವಿರುದ್ಧ ಮಡಿದ ವಿಷಯವನ್ನು ಪ್ರಸ್ತಾಪಿಸುತ್ತದೆ.[35] ಪಾವಗಡ ತಾಲೂಕಿನ ನಿಡುಗಲ್ಲು ಬೆಟ್ಟದ ಮೇಲಿರುವ ನಗರೇಶ್ವರ

ದೇವಾಲಯದ ಪ್ರಾಕಾರದಲ್ಲಿರುವ ವೀರಗಲ್ಲಿನ ಬಲಭಾಗದಲ್ಲಿ ಪೆರುಮಾಳು ದೇವನ ಉಲ್ಲೇಖವಿದ್ದು ವೀರನೊಬ್ಬ ಮಡಿದುದರ ಬಗ್ಗೆ ತಿಳಿಸುತ್ತದೆ.[36]

ಗುಬ್ಬಿ ತಾಲೂಕು ಕೋಡಿಗೇನಹಳ್ಳಿ ಕೆ.ಎಸ್.ರಾಜಣ್ಣ ಅವರ ಬಳಿ ಇರುವ ಅಪ್ರಕಟಿತ ತಾಮ್ರಶಾಸನವೊಂದು ಕ್ರಿ.ಶ.677ಕ್ಕೆ ಸಂಬಂಧಪಟ್ಟಿದ್ದು ಅದರಲ್ಲಿ ಬಾದಾಮಿ ಚಾಲುಕ್ಯರ ವಂಶಾವಳಿಯನ್ನು ಒಂದನೇ ವಿಕ್ರಮಾದಿತ್ಯನವರೆಗೆ ತಿಳಿಸಲಾಗಿದ್ದು ಇಮ್ಮಡಿ ಪುಲಕೇಶಿ ಮತ್ತು ಹರ್ಷನ ನಡುವಿನ ಯುದ್ಧ ಮತ್ತು ಚಾಲುಕ್ಯರಿಗೂ ಪಲ್ಲವರಿಗೂ ನಡೆದ ಕದನಗಳನ್ನು ಉಲ್ಲೇಖಿಸುತ್ತದೆ. ಇದು ಒಂದು ಜಿನ ಶಾಸನವಾಗಿದು ಜೈನ ಶ್ರಾವಕರಾದ ವೀರನಂದಾ ಚಾರ್ಯರ ಉಲ್ಲೇಖವಿದ್ದು ಜಿನಮಂದಿರ ಪೂಜೆಗೆ ದಾನಕೊಟ್ಟ ಬಗ್ಗೆ ತಿಳಿಸುತ್ತದೆ. ಈ ಅಪ್ರಕಟಿತ ಶಾಸನದಿಂದ ತುಮಕೂರು ಪ್ರದೇಶವು ಬಾದಾಮಿ ಚಾಲುಕ್ಯರ ನಿಯಂತ್ರಣಕ್ಕೆ ಒಳಪಟ್ಟಿತ್ತೆಂದು ಹೇಳಬಹುದು.[37]

**ಹೊಯ್ಸಳರು**

ಕರ್ನಾಟಕದ ಇತಿಹಾಸದಲ್ಲಿ ಹೊಯ್ಸಳರ ಕಾಲವು ಒಂದು ಸುವರ್ಣಯುಗ. ಇದು ಅವರ ಆಡಳಿತ, ರಾಜಕೀಯ, ಆರ್ಥಿಕ, ಸಾಮಾಜಿಕ ಮತ್ತು ಧಾರ್ಮಿಕ ಹಾಗೂ ಸಾಹಿತ್ಯಿಕ ವಿಷಯಗಳ ಸಾಂಸ್ಕೃತಿಕ ದೃಷ್ಟಿಕೋನದಿಂದ ಹೆಚ್ಚಿನ ಮಹತ್ವವನ್ನು ಹೊಂದಿದೆ. ಹೀಗಾಗಿ ಕ್ರಿ.ಶ.11ನೇ ಶತಮಾನದಿಂದ 14ನೇ ಶತಮಾನದವರೆಗೆ ಆಡಳಿತ ನಡೆಸಿದ ಪ್ರಮುಖ ಮನೆತನವಾಗಿದೆ. ಆರಂಭದಲ್ಲಿ ಕಲ್ಯಾಣಿ ಚಾಲುಕ್ಯರ ಸಾಮಂತರಾಗಿ ಆಳ್ವಿಕೆ ಆರಂಭಿಸಿದ ಇವರು ಅವರ ಅವನತಿಯ ನಂತರದಲ್ಲಿ ಸ್ವತಂತ್ರರಾಗಿ ಕರ್ನಾಟಕದ ದಕ್ಷಿಣ ಭಾಗಗಳನ್ನು ಮತ್ತು ತಮಿಳುನಾಡಿನ ಕೆಲವು ಭಾಗಗಳನ್ನು ಆಳಿದರು.

ಹೊಯ್ಸಳ ವಂಶದಲ್ಲಿ ವಿಷ್ಣುವರ್ಧನ, ಇಮ್ಮಡಿ ಬಲ್ಲಾಳ ಮತ್ತು ಮುಮ್ಮಡಿ ಬಲ್ಲಾಳರಂತಹ ಸಮರ್ಥ ದೊರೆಗಳಿದ್ದರು. ಇವರ ಕಾಲದಲ್ಲಿ ಕರ್ನಾಟಕದ ಧಾರ್ಮಿಕ ಮತ್ತು ಸಾಂಸ್ಕೃತಿಕ ಇತಿಹಾಸವು ಅತ್ಯಂತ ಮಹತ್ವಪೂರ್ಣ ಕಾಲವಾಗಿದ್ದು ಇವರ ಕಾಲದಲ್ಲಿ ಜೈನಧರ್ಮ ಮತ್ತು ಶ್ರೀ ವೈಷ್ಣವ ಧರ್ಮಗಳು ಉಚ್ಛ್ರಾಯಸ್ಥಿತಿಯನ್ನು ತಲುಪಿದವು. ಕರ್ನಾಟಕದ ಮತ್ತು ಭಾರತೀಯ ವಾಸ್ತುಶಿಲ್ಪ ಹಾಗೂ ಶಿಲ್ಪಕಲೆಯಲ್ಲಿ ಹೊಯ್ಸಳರ ಕಾಲ ಸ್ಮರಣೀಯ. ಹೊಯ್ಸಳರು ಸ್ವತಂತ್ರ ರಾಜಕೀಯ ಆಳ್ವಿಕೆಯನ್ನು ಪ್ರಾರಂಭಿಸಿದಾಗ ದಕ್ಷಿಣ ಭಾರತದ ಎಲ್ಲೆಡೆಯಲ್ಲೂ ಹಲವಾರು ರಾಜಮನೆತನಗಳು ಅಧಿಕಾರಕ್ಕಾಗಿ ಹೋರಾಟ ಮಾಡುತ್ತಿದ್ದವು. ರಾಷ್ಟ್ರಕೂಟರು ಮತ್ತು ಚೋಳರು ಮತ್ತು ಅಧಿಕಾರ ವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳಲು ಹಲವಾರು

ಯುದ್ಧಗಳನ್ನು ಮಾಡುತ್ತಿದ್ದರು. ಅಂದಿನ ಪ್ರಮುಖ ರಾಜಮನೆತನಗಳಾದ ತಲಕಾಡಿನ ಗಂಗರು ಮತ್ತು ನೊಳಂಬರು, ತಮ್ಮ ಬಣಗಳನ್ನು ಆಗಾಗ ಬದಲಿಸುತ್ತಾ ರಾಜಕೀಯವಾಗಿ ಅಸ್ಥಿರವಾಗಿದ್ದರು. ಆದರೂ ಸಹ ಇವರು ಹೆಚ್ಚು ಕಾಲ ರಾಷ್ಟ್ರಕೂಟರ ಮಾಂಡಲೀಕ ಅರಸರಾಗಿಯೇ ಆಡಳಿತ ನಡೆಸುತ್ತಿದ್ದರು. ಇಂತಹ ರಾಜಕೀಯ ಅಸ್ಥಿರತೆಯನ್ನು ಉಪಯೋಗಿಸಿಕೊಂಡು ಹೊಯ್ಸಳರು ಪ್ರಾರಂಭದಲ್ಲಿ ಒಂದು ಸಣ್ಣ ಸಾಮ್ರಾಜ್ಯವನ್ನು ಕಟ್ಟಿ ರಾಜ್ಯಾಡಳಿತವನ್ನು ಪ್ರಾರಂಭಿಸಿದರು.

ಪ್ರಾರಂಭದಿಂದ ಹಿಡಿದು ವಿಷ್ಣುವರ್ಧನನ ತಂದೆಯಾದ ಎರೆಯಂಗನ ಕಾಲದವರೆಗೂ ಸಹ ರಾಷ್ಟ್ರಕೂಟರ ಮತ್ತು ಕಲ್ಯಾಣಿ ಚಾಲುಕ್ಯರ ಮಾಂಡಲೀಕರಾಗಿಯೆ ಮುಂದುವರೆದರು. ಅಂದಿನ ಪರಿಸ್ಥಿತಿಯಲ್ಲಿ ಬಹಳ ಪ್ರಬಲವಾಗಿದ್ದಂತಹ ಕಲ್ಯಾಣಿ ಚಾಲುಕ್ಯರ ಆಡಳಿತದಲ್ಲಿ ಹೊಯ್ಸಳರು ಪ್ರಾರಂಭಿಕ ಅರಸರಾದರು.ಅವರ ಜೊತೆಗೂಡಿ ಹೊಯ್ಸಳರು ಹಲವಾರು ಯುದ್ಧಗಳಲ್ಲಿ ಭಾಗವಹಿಸಿ ನಿರ್ಣಾಯಕ ಪಾತ್ರವಹಿಸಿದರೆಂದು ಹಲವಾರು ಶಾಸನಗಳಿಂದ ತಿಳಿದುಬರುತ್ತದೆ. ಈ ಯುದ್ಧಗಳಿಂದಲೇ ಅವರು ಸಾಮ್ರಾಜ್ಯದಲ್ಲಿ ತಮ್ಮ ಬದ್ರಬುನಾದಿಯನ್ನು ಹಾಕುತ್ತಾ ತಮ್ಮ ದಾರಿಯನ್ನು ಸುಗಮಗೊಳಿಸಿಕೊಂಡರು. ಇದರಿಂದ ಅವರ ರಾಜಕೀಯ ಅನುಭವದಿಂದ ಯುದ್ಧಗಳಲ್ಲಿ ಹಿಡಿತ ಸಾಧಿಸುವ ಕಲೆಯು ಅವರಿಗೆ ಬಂದಿತು.

ಹೊಯ್ಸಳರ ಮೂಲಪುರುಷ ಸಳ ಅಥವಾ ನೃಪಕಾಮ. ಇವರ ಪ್ರಾರಂಭದ ರಾಜಕೀಯ ಇತಿಹಾಸದ ಬಗ್ಗೆ ಐತಿಹಾಸಿಕವಾದಂತಹ ಸ್ಪಷ್ಟನೆ ನೀಡುವ ದಾಖಲೆಗಳಿಲ್ಲ. ಆದರೆ ಇವರ ಕಾಲದ ಶಾಸನಗಳಲ್ಲಿ ಸಳನೇ ಅವರ ಮೂಲ ಪುರುಷ ಎಂದು ಉಲ್ಲೇಖಿಸಿವೆ ಹಾಗೂ ಇವರು ಯಾದವ ವಂಶಕ್ಕೆ ಸೇರಿದವರೆಂದು ಹೇಳಿಕೊಂಡಿದ್ದಾರೆ. ಲೂಯಿಸ್ ರೈಸ್ ಹಾಗೂ ಮತ್ತಿತರು ಹೇಳುವಂತೆ ಇವರ ಮೂಲನೆಲೆ ಶಶಾಕಪುರ ಅಥವಾ ಸೊಸೆವೂರು. ಅದನ್ನು ಚಿಕ್ಕಮಗಳೂರು ಜಿಲ್ಲೆ ಮೂಡಿಗೆರೆ ತಾಲೂಕಿನ ಈಗಿನ ಅಂಗಡಿ ಎಂಬ ಸ್ಥಳ ಎಂದು ಗುರುತಿಸಲಾಗಿದೆ. ಪ್ರಾಚೀನ ಕಾಲದಲ್ಲಿ ಇದೊಂದು ವ್ಯಾಪಾರ ಕೇಂದ್ರವಾಗಿದ್ದಿತು. ಈ ಸೊಸೆವೂರನ್ನು ಉಲ್ಲೇಖಿಸುವ ಅನೇಕ ಶಾಸನಗಳಿವೆ. ಕ್ರಿ.ಶ.1060ರ ಶಾಸನವೊಂದು ಸೊಸೆಯೂರಿನ ವ್ಯಾಪಾರಸ್ಥರು ಸೇರಿ ಲೋಕಜತನಿಗೆ ಸ್ಮಾರಕವನ್ನು ನಿರ್ಮಿಸಿದರೆಂದು ಹೇಳಿದೆ.ಆದುದರಿಂದ ಇದೊಂದು ಜೈನ ಕೇಂದ್ರವಾಗಿತ್ತು ಎಂದು ತಿಳಿಯುತ್ತದೆ. ಅಲ್ಲದೆ ಕ್ರಿ..ಶ.1040ರ ಒಂದು ಶಾಸನ ಜೈನ ಆಚಾರ್ಯನಾದ ವಜ್ರಪಾಣಿ ಭರತೇಶ್ವರನು ಇಲ್ಲಿಯೇ ಕಾಲವಾದನು ಎಂದು ಉಲ್ಲೇಖಿಸುತ್ತದೆ. ಸೊಸೊವೂರೆ ಅಂಗಡಿ ಎಂದು ಹೇಳಲು ಪುರಾವೆಯಾಗಿ ವಿಜಯನಗರದ ಅರಸರು ಅಚ್ಯುತರಾಯನ ಶಾಸನವೊಂದರಲ್ಲಿ ಅಂಗಡಿಯ ಉಲ್ಲೇಖ.ಅದರ ಭೌಗೋಳಿಕ ವರ್ಣನೆಯು

ಕಂಡುಬರುತ್ತದೆ. ಇದರಿಂದ ಅಂಗಡಿಯೆ ಸೊಸೆವೂರು ಎಂದು ಸ್ಪಷ್ಟಪಡಿಸಲು ಉತ್ತಮ ಆಧಾರಗಳಾಗಿವೆ. ಅವರಿಗಿದ್ದ ಮಲೆಪರೋಳ್‌ಗಂಡ ಎಂಬ ಬಿರುದು ಮತ್ತು ತಮ್ಮ ಶಾಸನಗಳಲ್ಲಿ ತಮ್ಮ ಅಂಕಿತವನ್ನು ಕನ್ನಡದಲ್ಲಿಯೇ ಹಾಕಿರುವುದರಿಂದ ಇವರನ್ನು ಇಲ್ಲಿಯವರೆಂದು ಹೇಳಲಾಗಿದೆ. ಕಾಲಾನುಕ್ರಮದಲ್ಲಿ ಇವರು ಹಲವಾರು ಮುಖಂಡರ ಮೇಲೆ ಪ್ರಭುತ್ವ ಸ್ಥಾಪಿಸಿ ಮಲೆಪರೋಳ್‌ಗಂಡ ಎಂದು ಮಾರ್ಪಟ್ಟರೆಂದು ಹೇಳಲಾಗಿದೆ.

ಹೊಯ್ಸಳ ರಾಜ್ಯ ಸ್ಥಾಪನೆಗೆ ಕಾರಣವಾದ ರೋಚಕ ಘಟನೆಯೊಂದು ಅತ್ಯಂತ ಜನಪ್ರಿಯವಾಗಿ ಅಂದಿನಿಂದ ಇಂದಿನವರೆಗೂ ಜನಮನದಲ್ಲಿ ಸ್ಥಿರವಾಗಿ ಉಳಿದಿದೆ. ಇವರ ಕಾಲದ ಶಾಸನಗಳು ಸಳ ಈ ವಂಶದ ಮೂಲ ಪುರುಷನೆಂದು ಉಲ್ಲೇಖಿಸಿವೆಯಾದರೂ ಈತ ಐತಿಹಾಸಿಕ ವ್ಯಕ್ತಿಯೇ ಅಥವಾ ಕಾಲ್ಪನಿಕ ವ್ಯಕ್ತಿಯೇ ಎಂಬುದು ಸ್ಪಷ್ಟವಾಗಿಲ್ಲ. ಸಳನು ಸೊಸೆಯೂರಿನಲ್ಲಿ ಗುರುಕುಲದ ಸುದತ್ತಾಚಾರ್ಯರೆಂಬ ಜೈನ ಗುರುಗಳ ಹತ್ತಿರ ವ್ಯಾಸಂಗ ಮಾಡುತ್ತಿದ್ದಾಗ ಹುಲಿಯೊಂದು ಅಲ್ಲಿಗೆ ಪ್ರವೇಶಿಸಿತು. ಆಗ ಸುದತ್ತಾಚಾರ್ಯರು ಸಳನಿಗೆ ಪೊಯ್ ಸಳ ಎಂದು ಆಜ್ಞೆ ಮಾಡಿದರು.ಗುರುವಿನ ಆಜ್ಞೆಯ ಮೇರೆಗೆ ಸಳನು ಹುಲಿಯನ್ನು ಕೊಂದು ತನ್ನ ಶೌರ್ಯ ಮೆರೆದನು.ಈ ಘಟನೆಯಿಂದಲೇ ಪ್ರಾಯಶಃ ಸಳನು ಹೊಯ್-ಸಳ ಹೊಯ್ಸಳನಾದನು.ಇದೇ ಹೆಸರು ಈ ರಾಜಮನೆತನದ ಅನ್ವರ್ಥವಾಯಿತು.

ಹೊಯ್ಸಳರು ಪ್ರಾರಂಭದಲ್ಲಿ ಪಶ್ಚಿಮ ಘಟ್ಟಗಳಲ್ಲಿ ಸಾಮಾನ್ಯವಾದ ಮುಖ್ಯಸ್ಥರಂತೆ ಪ್ರಾಯಶಃ ಸಳ-ನೃಪಕಾಮನ ಕಾಲದಲ್ಲಿ ಅಧಿಕಾರದ ವ್ಯಾಪ್ತಿಯನ್ನು ವೃದ್ಧಿಸಿಕೊಳ್ಳಲು ಪ್ರಾರಂಭಿಸಿದ್ದಂತೆ ಕಂಡುಬರುತ್ತದೆ. ಈತನು ಚೋಳರ ವಿರುದ್ಧವೂ ಹೋರಾಡಿದನೆಂದು ಹೇಳಲಾಗಿದೆ.

**ವಿನಯಾದಿತ್ಯ (1046-1098)**

ನೃಪಕಾಮನ ಮಗ ವಿನಯಾದಿತ್ಯನು ಅಧಿಕಾರ ವಹಿಸಿಕೊಂಡು ಸುಮಾರು 50 ವರ್ಷಗಳ ಕಾಲ ರಾಜ್ಯವನ್ನಾಳಿದನು. ಇವನ ಕಾಲದಲ್ಲಿಯೇ ಸೊಸೆಯೂರಿನಿಂದ ಅವರ ರಾಜಕೀಯ ಕಾರ್ಯಕ್ಷೇತ್ರವು ಬೇಲೂರಿಗೆ ವರ್ಗವಾಯಿತು, ನಂತರದಲ್ಲಿ ಹಳೇಬೀಡಿಗೆ ಸ್ಥಳಾಂತರಿಸಲಾಯಿತು. ಇವನ ಕಾಲವು ಅತ್ಯಂತ ಮಹತ್ವದ ಕಾಲಘಟ್ಟವಾಗಿದೆ. ಚೋಳರು ತಲಕಾಡನ್ನು ಆಕ್ರಮಿಸಿಕೊಂಡು ಗಂಗರನ್ನು ತಲಕಾಡಿನಿಂದ ಓಡಿಸಿದರು. ಇತ್ತ ಕಡೆ ಚೋಳರು ಮತ್ತು ಕಲ್ಯಾಣಿ ಚಾಲುಕ್ಯರು ತಮ್ಮ ತಮ್ಮ ರಾಜ್ಯವಿಸ್ತಾರಕ್ಕಾಗಿ ಯುದ್ಧಗಳಲ್ಲಿ ತೊಡಗಿದ್ದರು. ವಿನಯಾದಿತ್ಯನು ಕಲ್ಯಾಣಿ ಚಾಲುಕ್ಯರ ಮಾಂಡಲೀಕನಾಗಿದ್ದರಿಂದ ಅವರೊಡನೆ ಸೇರಿ ಚೋಳರೊಂದಿಗೆ ಹಲವಾರು ಯುದ್ಧಗಳಲ್ಲಿ ಭಾಗವಹಿಸಿದರು. ನಂತರದಲ್ಲಿ ಈತನು

ಚೆಂಗಾಳ್ವರು, ಕೊಂಗಾಳ್ವರು, ಹೊಂಬುಜದ ಶಾಂತರಸರು ಮತ್ತು ಬಯಲುನಾಡಿನ (ಮಲೆನಾಡಿನ) ಕದಂಬರನ್ನು ಸೋಲಿಸಿ ರಾಜ್ಯವನ್ನು ವಿಸ್ತರಿಸಿದನು.

**ಎರೆಯಂಗ (1098-1102)**

ವಿನಯಾದಿತ್ಯನ ಮಗನಾದ ಎರೆಯಂಗನು ಹೆಚ್ಚು ವರ್ಷಗಳ ಕಾಲ ರಾಜ್ಯಭಾರ ಮಾಡಲಿಲ್ಲ. ಈತನು ತನ್ನ ತಂದೆಯ ಕಾಲದಲ್ಲಿಯೇ ಒಬ್ಬ ಶ್ರೇಷ್ಠ ದಂಡನಾಯಕನಾಗಿದ್ದು ಚಾಲುಕ್ಯರ ದೊರೆ ವಿಕ್ರಮಾದಿತ್ಯನ ಜೊತೆ ಉತ್ತರದ ದಂಡಯಾತ್ರೆಗಳಲ್ಲಿ ಭಾಗವಹಿಸಿ ಚಿತ್ರಕೂಟ, ಕಳಿಂಗ ಮತ್ತು ಧಾರಾ ರಾಜರನ್ನು ಸೋಲಿಸಿ ಹೆಸರುಗಳಿಸಿದ್ದನು. ಅಲ್ಲದೆ ಯುವರಾಜನಾಗಿದ್ದಾಗಲೇ ತನ್ನ ತಂದೆಯೊಂದಿಗೆ ಕೂಡಿಕೊಂಡು ರಾಜಕೀಯದಲ್ಲಿ ಅನುಭವ ಪಡೆದಿದ್ದನು ಹಾಗೂ ಹಲವಾರು ಯುದ್ಧಗಳಲ್ಲಿ ಭಾಗವಹಿಸಿದನು. ಈ ಹೊತ್ತಿಗಾಗಲೇ ಹೊಯ್ಸಳರ ಈ ರಾಜರುಗಳು ಹಲವಾರು ಬಿರುದುಗಳನ್ನು ಸಹ ಹೊಂದಲು ಪ್ರಾರಂಭಿಸಿದರು. ಕೆಲವು ಶಾಸನಗಳು ಇವನನ್ನು ಮಹಾಮಂಡಲೇಶ್ವರನೆಂದು ಕರೆದು ಇವನು ದ್ವಾರಾವತಿಯಿಂದ ಆಳುತ್ತಿದ್ದನೆಂದೂ ಹೇಳುತ್ತದ್ದನೆಂದೂ ಹೇಳುತ್ತವೆ.[38] ಎರೆಯಂಗನ ಮೊದಲ ಮಗ ಒಂದನೆ ಬಲ್ಲಾಳನು ಕ್ರಿ..ಶ.1102ರಲ್ಲಿ ಅಧಿಕಾರ ವಹಿಸಿಕೊಂಡು ಈತನು ಕ್ರಿ.ಶ.1104ರಲ್ಲಿ ಚೆಂಗಾಳ್ವರ ಮೇಲೆ ಯಶಸ್ವಿಯಾಗಿ ದಾಳಿ ಮಾಡಿದನು. ನಂತರ ತನ್ನ ಸಹೋದರ ವಿಷ್ಣುವರ್ಧನ ಜೊತೆಗೂಡಿ ನೊಳಂಬವಾಡಿಯನ್ನು ಆಕ್ರಮಣ ಮಾಡಿಕೊಂಡು ಕ್ರಿ.ಶ.1106ರವರೆಗೆ ಆಳಿದನು. ಇವನು ಅಕಾಲ ಮರಣಕ್ಕೆ ತುತ್ತಾದ ನಂತರದಲ್ಲಿ ಕ್ರಿ.ಶ.1106ರಲ್ಲಿ ಇವನ ತಮ್ಮನಾದ ಬಿಟ್ಟಿಗ, ಬಿಟ್ಟಿದೇವ ಎಂಬ ಹೆಸರಿನಿಂದ ಕರೆಯುತ್ತಿದ್ದ ವಿಷ್ಣುವರ್ಧನನು ಅಧಿಕಾರಕ್ಕೆ ಬಂದನು.

**ವಿಷ್ಣುವರ್ಧನ (ಕ್ರಿ.ಶ.1106-1142)**

ಈತನು ತನ್ನ ರಾಜ್ಯವನ್ನು ವಿಸ್ತರಿಸಲು ತಲಕಾಡನ್ನು ಆಕ್ರಮಿಸಿಕೊಂಡಿದ್ದ ಚೋಳರನ್ನು ಎದುರಿಸಿದ. ರಾಜೇಂದ್ರ ಚೋಳನ ಅಧಿಕಾರಿಗಳಾದ ಆಧಿಯಮ, ದಾಮೋದರ, ನರಸಿಂಹ ಎಂಬುವವರನ್ನು ಸೋಲಿಸಿ ತಲಕಾಡನ್ನು ಮರಳಿ ಪಡೆದು ವೀರಗಂಗ ಮತ್ತು ತಲಕಾಡುಗೊಂಡ ಎಂಬ ಬಿರುದನ್ನು ಧರಿಸಿದ. ಈ ಯುದ್ಧವು ಅವನ ಮಹತ್ಸಾಧನೆಯಾಗಿತ್ತು. ಈ ವಿಜಯದ ಜ್ಞಾಪಕಾರ್ಥವಾಗಿ ತಲಕಾಡಿನಲ್ಲಿ ಕೀರ್ತಿನಾರಾಯಣ[39] ದೇವಾಲಯ ಬೇಲೂರಿನ ವಿಜಯನಾರಾಯಣ ಅಥವಾ ಚನ್ನಕೇಶವ ದೇವಾಲಯಗಳನ್ನು ನಿರ್ಮಿಸಿದನು.[40] ಚೋಳರಿಂದ ನೊಲಂಬವಾಡಿಯನ್ನು ಮರಳಿಪಡೆದು ನೊಳಂಬವಾಡಿಗೊಂಡ ಎಂಬ ಬಿರುದನ್ನು ಧರಿಸಿದ್ದ ಇವನ ಕಾಲದಲ್ಲಿ ಸಂಪೂರ್ಣವಾಗಿ ಚೋಳರ ಆಡಳಿತ ತಪ್ಪಿಹೋಯಿತು. ತದನಂತರ

ವಿಷ್ಣುವರ್ಧನನು ಕಲ್ಯಾಣಿ ಚಾಲುಕ್ಯ ದೊರೆ 6ನೇ ವಿಕ್ರಮಾದಿತ್ಯನನ್ನು ಕ್ರಿ.ಶ.1118ರಲ್ಲಿ ಎದುರಿಸಿದ ಈ ಯುದ್ಧದಲ್ಲಿ ಚಾಲುಕ್ಯರು ಸೋಲೋಪ್ಪಬೇಕಾಯಿತು. ಅನಂತರದಲ್ಲಿ ಗೋವೆಯ ಕದಂಬರು, ಹಾನಗಲ್ಲಿನ ಕದಂಬರು ಸೋತು ಶರಣಾದರು. ದಕ್ಷಿಣದಲ್ಲಿ ರಾಜ್ಯವಿಸ್ತಾರ ಮಾಡಿ ತನ್ನ ಬಲವನ್ನು ವೃದ್ಧಿಮಾಡಿಕೊಂಡ ಮೇಲೆ ಚಾಲುಕ್ಯರ ಆರನೇ ವಿಕ್ರಮಾದಿತ್ಯನಿಗೆ ಸೇರಿದ್ದ ಪ್ರದೇಶಗಳ ಮೇಲೆ ದಾಳಿಯನ್ನು ಆರಂಭಿಸಿದನು. ತುಂಗಭದ್ರಾ ನದಿಯನ್ನು ದಾಟಿ ಈಗಿನ ಬಳ್ಳಾರಿ ಮತ್ತು ಧಾರವಾಡ ಜಿಲ್ಲೆಯ ಪ್ರದೇಶಗಳನ್ನು ಗೆದ್ದು ಕೃಷ್ಣಾನದಿಯವರೆಗೆ ಮುನ್ನೆಡೆಸಿದನು.

ವಿಷ್ಣುವರ್ಧನನ ವ್ಯಕ್ತಿತ್ವ ಬಹುಮುಖ್ಯವಾದದು. ಈತನು ಒಬ್ಬ ಧೀಮಂತ ಹಾಗೂ ಮುತ್ಸದ್ಧಿಯೂ ಆಗಿದ್ದನು. ಇವನ ಮೂಲ ನಾಮಾಂಕಿತ ಬಿಟ್ಟಿದೇವ ರಾಮಾನುಜರ ಪ್ರಭಾವದಿಂದಾಗಿ ಶ್ರೀವೈಷ್ಣವ ಧರ್ಮವನ್ನು ಸ್ವೀಕರಿಸಿ ವಿಷ್ಣುವರ್ಧನನಾದ. ಕರ್ನಾಟಕ ಇತಿಹಾಸದಲ್ಲಿ ಇದೇ ಹೆಸರಿನಿಂದ ಖ್ಯಾತನಾಮನಾಗಿದ್ದಾನೆ. ಇವನ ಕಾಲದಲ್ಲಿ ತಮಿಳುನಾಡಿನಿಂದ ಅವನ ಆಶ್ರಯ ಅರಸಿಬಂದ ಶ್ರೀ ರಾಮಾನುಜಾಚಾರ್ಯರಿಗೆ ರಾಜಾಶ್ರಯ ನೀಡಿ ಅವರು ಸ್ಥಾಪಿಸಿದ ಶ್ರೀವೈಷ್ಣವ ಧರ್ಮದ ಅನುಯಾಯಿಯಾಗಿ ಶ್ರೀವೈಷ್ಣವ ಧರ್ಮಕ್ಕೆ ಅಪಾರವಾದ ಸಹಾಯ ಮಾಡಿದನು. ಇವನ ಹೆಂಡತಿಯಾದ ಶಾಂತಲಾದೇವಿಯೂ ಸೇರಿದಂತೆ ಅವನ ದಂಡನಾಯಕ ಗಂಗರಾಜ ನಿಷ್ಠಾವಂತ ಜಿನಭಕ್ತರಾಗಿದ್ದರು. ಇವರ ರಾಣಿಯಾದ ಶಾಂತಲಾದೇವಿಯು ನಾಟ್ಯಸರಸ್ವತಿ ಎಂದು ಹೆಸರು ಪಡೆದಿದ್ದಳು. ಅವಳೂ ಕೂಡ ಸುಸಂಸ್ಕೃತಳು, ವಿದ್ಯಾವಂತಳೂ ಆಗಿದ್ದಳು.

ಈತನು ವೈಷ್ಣವ ಧರ್ಮವನ್ನು ಅಂಗೀಕರಿಸಿದ್ದರೂ ಸರ್ವಧರ್ಮ ಸಹಿಷ್ಣುವಾಗಿದ್ದನು. ಇವನ ಕಾಲದಲ್ಲಿ ವೈಷ್ಣವ, ಶೈವ ಮತ್ತು ಜೈನ ದೇವಾಲಯಗಳು ನಿರ್ಮಾಣವಾದವು. ಈತನ ಕಾಲದಲ್ಲಿ ತಲಕಾಡು, ಬೇಲೂರಿ, ಮೇಲುಕೋಟೆ, ದೊಡ್ಡಗದ್ದವಳ್ಳಿ, ಮರಳೆ ಮುಂತಾದ ಕಡೆಗಳಲ್ಲಿ ದೇವಾಲಯಗಳನ್ನು ಬಸದಿಗಳನ್ನು ನಿರ್ಮಿಸಿದನು ಹಾಗೂ ತನ್ನ ಹಿರಿಯರು ನಿರ್ಮಿಸಿದ ದೇವಾಲಯಗಳನ್ನು ಪುನರುಜ್ಜೀವನಗೊಳಸಿ ದಾನದತ್ತಿಗಳನ್ನು ನೀಡಿದನು.

**ಒಂದನೇ ನರಸಿಂಹ (ಕ್ರಿ.ಶ.1142–1173)**

ವಿಷ್ಣುವರ್ಧನನ ಮಗ ಒಂದನೆಯ ನರಸಿಂಹನು ಕ್ರಿ.ಶ.1142ರಲ್ಲಿ ಸಿಂಹಾಸನಕ್ಕೆ ಬಂದನು. ಇವನು ಪಟ್ಟಕ್ಕೆ ಬಂದಾಗ ಇನ್ನೂ ಎಂಟು ವರ್ಷದ ಬಾಲಕ. ಈತನಿಗೆ ವಿಷ್ಣುವರ್ಧನನ ನಿಷ್ಠಾವಂತ ದಂಡನಾಯಕರು ಮತ್ತು ಮಂತ್ರಿಗಳು ಇವನಿಗೆ ಆಡಳಿತದಲ್ಲಿ ನೆರವಾದರು. ಇವರಂತೆಯೇ ಗುರುಡರೆಂಬ ರಾಜಭಟರು ರಾಜನಿಗೆ ನಿಷ್ಠೆಯಿಂದ ಸೇವೆ

ಸಲ್ಲಿಸುತ್ತಿದ್ದರು. ಗರುಡ ಪದ್ಧತಿ ಹೊಯ್ಸಳ ಕಾಲದ ಒಂದು ವಿಶಿಷ್ಟ ಪದ್ಧತಿ. ಇವರೆಲ್ಲರ ಅವಿರತ ಸೇವೆಯಿಂದಾಗಿ ಒಂದನೇ ನರಸಿಂಹನು ಸುಮಾರು ಮೂವತ್ತು ವರ್ಷಗಳ ಕಾಲ ರಾಜ್ಯವಾಳದನು. ಈತನು ತಂದೆಯಷ್ಟು ಸಮರ್ಥನಾಗಿರಲಿಲ್ಲ. ಭೋಗ ವಿಲಾಸಿ ಜೀವನಕ್ಕೆ ಮಾರುಹೋಗಿ ತನ್ನೆಲ್ಲ ಶಕ್ತಿ ಸಾಮಾರ್ಥ್ಯಗಳನ್ನು ನಂದಿಸಿಕೊಂಡಿದ್ದನು. ಇವನ ಪಟ್ಟದರಾಣಿ ಏಚಲಾದೇವಿ ಮತ್ತು ಯುವರಾಜ ಬಲ್ಲಾಳನನ್ನು ಆಡಳಿತದಲ್ಲಿ ನೇಮಿಸಿಕೊಂಡು ತಾನು ಮಾತ್ರ ಅಧಿಕಾರಕ್ಕೆ ಅಂಟಿಕೊಂಡಿದ್ದನು. ಸಂಧ್ಯಾಕಾಲದಲ್ಲಿ ರಾಜ್ಯದಲ್ಲಿ ಗೊಂದಲಮಯ ಪರಿಸ್ಥಿತಿ ತಲೆದೋರಿತ್ತು. ರಾಜ್ಯ ರಕ್ಷಣೆಯ ದೃಷ್ಟಿಯಿಂದ ಕುಮಾರ ಇಮ್ಮಡಿ ಬಲ್ಲಾಳನು ತಂದೆಯ ವಿರುದ್ಧ ಸಿಡಿದೆದ್ದು ಕ್ರಿ.ಶ.1173ರಲ್ಲಿ ಅಧಿಕಾರವಹಿಸಿಕೊಂಡನು. ಈತನು ತಂದೆಯಂತೆಯೇ ಹಲವಾರು ದೇವಾಲಯಗಳನ್ನು ನಿರ್ಮಿಸಿದನು. ಹಳೇಬೀಡಿನ ಹೊಯ್ಸಳೇಶ್ವರ, ಕಿಕ್ಕೇರಿಯ ಬ್ರಹ್ಮೇಶ್ವರ, ಹೊನ್ನಾವರದ ಕೇಶವೇಶ್ವರ, ಕೋರಮಂಗಲ, ಹುಲ್ಲೇಕೆರೆ, ತೆಂಗಿನಗಟ್ಟು ಮತ್ತು ನಾಗಮಂಗಲದಲ್ಲಿ ಚನ್ನಕೇಶವ ದೇವಾಲಯಗಳನ್ನು ನಿರ್ಮಿಸಿದ್ದು ಇದರ ಜೊತೆಯಲ್ಲಿ ಕೆಲವು ಜೈನಬಸದಿಗಳು ಕೂಡ ಇವನ ಕಾಲದಲ್ಲಿ ನಿರ್ಮಾಣವಾದವು.

**ಇಮ್ಮಡಿ ಬಲ್ಲಾಳ (ಕ್ರಿ.ಶ.1173-1220)**

ನರಸಿಂಹನ ಮಗ ಇಮ್ಮಡಿ ಬಲ್ಲಾಳನು ಕ್ರಿ.ಶ.1173ರಲ್ಲಿ ಅಧಿಕಾರಕ್ಕೆ ಬಂದನು.[41] ಇವನು ಹೊಯ್ಸಳ ವಂಶದ ಅತ್ಯಂತ ಸಮರ್ಥ ಮತ್ತು ಶ್ರೇಷ್ಠ ದೊರೆಗಳಲ್ಲಿ ಒಬ್ಬನಾಗಿದ್ದನು. ಇವನ ಕಾಲದಲ್ಲಿಯೇ ಚಾಲುಕ್ಯರ ಸಾಮಂತಿಕೆಯನ್ನು ಕಿತ್ತೊಗೆದು ಸ್ವತಂತ್ರನಾದುದು ಮತ್ತು ಹೊಯ್ಸಳ ಸಾಮ್ರಾಜ್ಯವನ್ನು ವಿಸ್ತರಿಸಿ ದಕ್ಷಿಣ ಸಾರ್ವಭೌಮ ಎಂಬ ಬಿರುದನ್ನು ಪಡೆದನು. ಚಂಗಾಳ್ವ, ಕೊಂಗಾಳ್ವ, ಉಚ್ಚಂಗಿಯ ಪಾಂಡ್ಯರು, ಯಾದವರು ಹೀಗೆ ಹಲವಾರು ರಾಜರುಗಳನ್ನು ಸೋಲಿಸಿ ತನ್ನ ರಾಜ್ಯವನ್ನು ವಿಸ್ತರಿಸಿದ. ಚೋಳರ ರಾಜಕೀಯದಲ್ಲಿ ತನ್ನ ಕೈ ಹಾಕಿ ಪಾಂಡ್ಯರು ಚೋಳರೊಂದಿಗೆ ಯುದ್ಧಮಾಡಿ ಅವರನ್ನು ಸೋಲಿಸಿದನು ಮತ್ತೆ ಕುಲೋತ್ತುಂಗನಿಗೆ ಚೋಳ ರಾಜ್ಯವನ್ನು ಮರಳಿಸಿದ. ಇದರಿಂದ ಇವನಿಗೆ ಚೋಳ ರಾಜ್ಯ ಪ್ರತಿಷ್ಠಾಪನಚಾರ್ಯ ಎಂಬ ಬಿರುದು ಬಂದಿತು. ಕ್ರಿ.ಶ.1193ರಲ್ಲಿ ಧಾರವಾಡ ಜಿಲ್ಲೆಯ ಸೊರಟೂರಿನ ಹತ್ತಿರ ಭೀಕರ ಯುದ್ಧ ನಡೆಯಿತು. ಬಲ್ಲಾಳನು ಸೊರಟೂರು ಯುದ್ಧದಲ್ಲಿ ಅಪ್ರತಿಮನಾಗಿ ಜಯಗಳಿಸಿದ.ಸೇವುಣ ಸೈನ್ಯವನ್ನು ಸಂಪೂರ್ಣವಾಗಿ ಸೋಲಿಸಿ ಭಿಲ್ಲಮನನ್ನು ಗದಗ ಮತ್ತು ಬಾದಾಮಿಯವರೆಗೆ ಓಡಿಸಿದನು ಮುಂದೆ ಉತ್ತರಕ್ಕೆ ಹೊಯ್ಸಳರು ಪ್ರತಿಷ್ಠಿತರಾದರು. ನೊಳಂಬವಾಡಿ ಪ್ರಾಂತ್ಯವು ಬಲ್ಲಾಳನ ನೇರವಾದ ಆಡಳಿತಕ್ಕೆ ಸೇರಿತು.ಅವನು ಸಮಸ್ತ ಭುವನತ್ರಯ, ಶ್ರೀ ಪೃಥ್ವಿವಲ್ಲಭ, ಮಹಾರಾಜಾಧಿರಾಜ, ಪರಮಭಟ್ಟಾರಕ, ಪರಮೇಶ್ವರ,

ಪ್ರತಾಪ ಚಕ್ರವರ್ತಿ, ಯಾದವ ಚಕ್ರವರ್ತಿ ಎಂಬ ಬಿರುದನ್ನು ಹೊಂದಿದ್ದನು. ಹೊಯ್ಸಳ ಇತಿಹಾಸದಲ್ಲಿ ಸ್ವಾರಸ್ಯಕರ ವಿಷಯೆಂದರೆ ಅವರು ತಮಿಳು ದೇಶಕ್ಕೆ ಯಶಸ್ವಿಯಾಗಿ ಪ್ರವೇಶಿಸಿ ತಮ್ಮ ಪ್ರಭಾವವನ್ನು ಹರಡಿದ್ದು ಕೊಯಮತ್ತೂರು, ಮಧುರೈ ಮತ್ತು ಸೇಲಂಜಿಲ್ಲೆಗಳಲ್ಲಿ ದೊರೆತ ಹಲವಾರು ಹೊಯ್ಸಳ ಶಾಸನಗಳಲ್ಲಿ ಮಾಹಿತ ಲಭ್ಯವಿದೆ. ಈತನು ಸರ್ವಧರ್ಮಗಳಿಗೆ ಸಮಾನ ಪ್ರೋತ್ಸಾಹ ನೀಡಿದನು. ಕಲೆ ಮತ್ತು ಸಾಹಿತ್ಯಗಳ ಉದಾರ ಪೋಷಕ. ಇವನ ಆಸ್ಥಾನ ಕವಿ ಜನ್ನ ಮತ್ತು ರಾಘವಾಂಕ, ನೇಮಿಚಂದ್ರ, ಕಂತಿ ಹಾಗೂ ನಾಗಚಂದ್ರ ಇತ್ಯಾದಿ ಕವಿಗಳು ಇವನ ರಾಜ್ಯದಲ್ಲಿದ್ದರು. ಇವನ ಕಾಲದಲ್ಲಿಯೂ ಸಹ ದೇವಾಲಯಗಳ ನಿರ್ಮಾಣ ಕಾರ್ಯವು ಮುಂದುವರೆಯಿತು. ಗದುಗಿನ ವೀರನಾರಾಯಣ ಮತ್ತು ಬೆಳವಾಡಿಯ ವೀರನಾರಾಯಣ ತ್ರಿಕೂಟೇಶ್ವರ ದೇವಾಲಯಗಳಿಗೆ ಹಲವಾರು ದಾನದತ್ತಿಗಳನ್ನು ನೀಡಿದನೆಂದು ತಿಳಿದುಬರುತ್ತದೆ.

**ಇಮ್ಮಡಿ ನರಸಿಂಹ (ಕ್ರಿ.ಶ.1220-1235)**

ಇಮ್ಮಡಿ ನರಸಿಂಹನು ತನ್ನ ತಂದೆಯಾದ ಇಮ್ಮಡಿ ಬಲ್ಲಾಳನ ತರುವಾಯ ಕ್ರಿ.ಶ.1220ರಲ್ಲಿ ಹೊಯ್ಸಳ ಸಿಂಹಾಸನವನ್ನೇರಿದ. ಯುವರಾಜನಾಗಿದ್ದಾಗಲೇ ನರಸಿಂಹನು ಚೋಳರ ವಿರುದ್ಧ ದಂಡಯಾತ್ರೆಯಲ್ಲಿ ಭಾಗವಹಿಸಿದನು. ಇವನ ಕಾಲದಲ್ಲಿ ಚೋಳ ಮತ್ತು ಹೊಯ್ಸಳ ಸಂಬಂಧಗಳು ಸಾಕಷ್ಟು ಅಭಿವೃದ್ಧಿ ಹೊಂದಿದವು. ವಿಶೇಷವಾಗಿ ತಮಿಳುನಾಡಿನಲ್ಲಿ ಹೊಯ್ಸಳ ಪ್ರಭಾವವನ್ನು ಬೀರಿದ ಕೀರ್ತಿ ನರಸಿಂಹನಿಗೆ ಸಲ್ಲಬೇಕು. ಚೋಳರೊಡಗೂಡಿ ಪಾಂಡ್ಯರೊಂದಿಗೆ ಹಲವಾರು ಯುದ್ಧಗಳಲ್ಲಿ ಗೆದ್ದನು. ಈತನ ಮಗ ಸೋಮೇಶ್ವರನು ತನ್ನ ಹೆಚ್ಚಿನ ಸಮಯವನ್ನು ತಮಿಳುನಾಡಿನಲ್ಲಿಯೇ ಕಳೆದ. ನರಸಿಂಹನು ತಮಿಳುನಾಡಿನ ತಂಜಾವೂರಿನವರೆಗೂ ರಾಜ್ಯ ವಿಸ್ತರಿಸಿ ಶ್ರೀರಂಗಂ ಹತ್ತಿರದ ಕಣ್ಣಾನೂರಿನಲ್ಲಿ ಹೊಯ್ಸಳರ ದಕ್ಷಿಣದ ರಾಜಧಾನಿಯನ್ನು ಸ್ಥಾಪಿಸಿದ. ಇಲ್ಲಿಗೆ ತನ್ನ ಮಗನಾದ ಸೋಮೇಶ್ವರನನ್ನು ಆಡಳಿತ ನಡೆಸಲು ನೇಮಿಸಿದ. ಸೋಮೇಶ್ವರನ ಕಾಲದಲ್ಲಿ ಕಣ್ಣಾನೂರು ದಕ್ಷಿಣದಲ್ಲಿ ಹೊಯ್ಸಳರ ಪ್ರಮುಖ ರಾಜಕೀಯ ಕಾರ್ಯಕ್ಷೇತ್ರವಾಯಿತು, ನರಸಿಂಹನು ತನ್ನ ಕಾಲದಲ್ಲಿ ಹರಿಹರದ ಹರಿಹರೇಶ್ವರ, ಬೇಲೂರಿನ ಮೂಲ ಸಂಗಮೇಶ್ವರ, ಹೆಗ್ಗರೆಯ ಕಲ್ಲೇಶ್ವರ ಮತ್ತು ಗಳಗೇಶ್ವರ, ಹಾರನಹಳ್ಳಿಯ ಸೋಮೇಶ್ವರ ಮತ್ತು ಕೇಶವ, ಬಸರಾಳಿನ ಮಲ್ಲಿಕಾರ್ಜುನ, ಭದ್ರಾವತಿಯ ಲಕ್ಷ್ಮೀನರಸಿಂಹ ಇನ್ನೂ ಮುಂತಾದ ದೇವಾಲಯಗಳು ನಿರ್ಮಾಣವಾದವು. ಇವನ ಕಾಲದಲ್ಲಿ ಜೈನ ಬಸದಿಗಳು ಸಹ ನಿರ್ಮಾಣಗೊಂಡವು.

**ಸೋಮೇಶ್ವರ (ಕ್ರಿ.ಶ.1235–1253)**

ಸೋಮೇಶ್ವರ ಅಥವಾ ಸೋವಿದೇವನು ಇಮ್ಮಡಿ ನರಸಿಂಹನ ನಂತರ ಕ್ರಿ.ಶ.1235ರಲ್ಲಿ ಅಧಿಕಾರಕ್ಕೆ ಬಂದನು. ಇವನು ತನ್ನ ಆಳ್ವಿಕೆಯ ಬಹು ಸಮಯವನ್ನು ತಮಿಳುನಾಡಿನ ಕಣ್ಣಾನೂರಿನಲ್ಲಿ ಕಳೆದನು.ದಕ್ಷಿಣದಲ್ಲಿ ಖಾಯಂ ರಾಜಧಾನಿಯನ್ನು ಬೆಳೆಸಿದ ಕೀರ್ತಿ ಮತ್ತು ತಮಿಳುನಾಡಿನಲ್ಲಿ ಹೊಯ್ಸಳರ ವಾಸ್ತುಕಲೆಯನ್ನು ಹಾಗೂ ಸಂಸ್ಕೃತಿಯನ್ನು ಹರಡಿದ ಕೀರ್ತಿಯು ಸೋಮೇಶ್ವರನಿಗೆ ಸಲ್ಲಬೇಕು. ಈತನು ಚೋಳ ಸಂಬಂಧಿಗಳನ್ನು ರಕ್ಷಿಸಲೋಸುಗ ಕಾಕತೀಯರ, ತೆಲುಗು ಚೋಳರ ಮತ್ತು ಪಾಂಡ್ಯರ ವಿರುದ್ಧ ಹಲವಾರು ಯುದ್ಧ ಕೈಗೊಂಡಿದ್ದನು. ಕೊನೆಯಲ್ಲಿ ಇವನು ಜಾತವರ್ಮ ಸುಂದರಪಾಂಡ್ಯನ ವಿರುದ್ಧ ಹೋರಾಡುತ್ತಿರುವಾಗಲೇ ಮಡಿದನು. ಕಾಕತೀಯರ ದೊರೆ ಗಣಪತಿ ಮತ್ತು ರಾಣಿ ರುದ್ರಮದೇವಿಯರು ತೆಲುಗು ಪ್ರದೇಶಗಳನ್ನು ವಶಪಡಿಸಿಕೊಂಡರು. ಇದೇ ಕಾಲಕ್ಕೆ ಸೇವುಣರು ತುಂಗಭದ್ರಾ ನದಿಯನ್ನು ದಾಟಿ ಇವನ ರಾಜ್ಯದ ಉತ್ತರ ಭಾಗಗಳನ್ನು ವಶಪಡಿಸಿಕೊಂಡರು.

ಸೋಮೇಶ್ವರ ರಾಜಕೀಯದ ಮುಖ್ಯ ಘಟನೆ ಎಂದರೆ, ಹೊಯ್ಸಳರ ಆಡಳಿತ ಕೇಂದ್ರವನ್ನು ದೋರಸಮುದ್ರದಿಂದ ತಮಿಳುನಾಡಿನ ಕಣ್ಣಾನೂರಿಗೆ ಬದಲಾಯಿಸಿದ. ಕ್ರಿ.ಶ.1229ರ ನಂತರದಲ್ಲಿ ಕಣ್ಣಾನೂರು ಕ್ರಿಯಾತ್ಮಕ ಮತ್ತು ರಾಜಕೀಯದ ಅಧಿಕಾರ ಕೇಂದ್ರವಾಗಿ ಬೆಳೆಯಿತು. ಸೋಮೇಶ್ವರನು ಚೋಳರ ದೊರೆ ಮೂರನೇ ರಾಜರಾಜನು ಪದಚ್ಯುತಗೊಂಡಾಗ ಅವನಿಗೆ ಪುನಃ ರಾಜ್ಯಗಳಿಸುವಲ್ಲಿ ಸಹಾಯ ಒದಗಿಸಿದ. ಇದರಿಂದ ಈತನು ಚೋಳರಾಜ್ಯ ಪ್ರತಿಷ್ಠಾಪನಾಚಾರ್ಯ ಎಂಬ ಬಿರುದನ್ನು ಹೊಂದಿದ. ಈತನು ಕಣ್ಣಾನೂರಿನಲ್ಲಿದ್ದುಕೊಂಡು ರಾಜ್ಯಭಾರ ಮಾಡಿದರೂ ಕರ್ನಾಟಕದಲ್ಲಿ ದೇವಾಲಯಗಳ ಮತ್ತು ಜಿನಾಲಯಗಳ ನಿರ್ಮಾಣ ಕಾರ್ಯವನ್ನು ಮಾಡಿದನು. ಇವನ ಕಾಲದಲ್ಲಿಯೂ ಸಹ ಅತ್ಯಂತ ಉತ್ತಮ ವಾಸ್ತು ಮತ್ತು ಶಿಲ್ಪ ರಚನೆಗಳುಳ್ಳ ದೇವಾಲಯಗಳ ರಚನೆಯಾದವು. ಸೋಮೇಶ್ವರನ ಕಾಲದಲ್ಲಿ ರಚನೆಯಾದ ನುಗ್ಗೆಹಳ್ಳೀಯಲ್ಲಿಯ ಲಕ್ಷ್ಮೀನರಸಿಂಹ ಮತ್ತು ಸದಾಶಿವ ದೇವಾಲಯ, ಹೊಸಹೊಳಲಿನ ಲಕ್ಷ್ಮೀನಾರಾಯಣ, ಜಾವಗಲ್ಲಿನ ಲಕ್ಷ್ಮೀನರಸಿಂಹ, ಹೊಸಬೂದನೂರಿನ ಪದ್ಮನಾಭ ಮತ್ತು ಈಶ್ವರ, ಗೋವಿಂದನಹಳ್ಳಿಯ ಪಂಚಲಿಂಗ ದೇವಾಲಯ ಇನ್ನೂ ಮುಂತಾದ ದೇವಾಲಯಗಳೂ ನಿರ್ಮಾಣವಾದವು. ಸೋಮೇಶ್ವರನು ಕ್ರಿ.ಶ.1255ರ ಸುಮಾರಿಗೆ ದೋರಸಮುದ್ರಕ್ಕೆ ತನ್ನ ಮೊದಲ ಮಗ ಮುಮ್ಮಡಿ ನರಸಿಂಹನನ್ನು ಮತ್ತು ಕಣ್ಣಾನೂರಿನಲ್ಲಿ ಮತ್ತೊಬ್ಬ ಮಗ ರಾಮನಾಥನನ್ನು ಅಧಿಕಾರ ನಡೆಸಲು ನೇಮಿಸಿದನು. ವಿಶಾಲವಾದ ಹೊಯ್ಸಳ ಸಾಮ್ರಾಜ್ಯವನ್ನು ವ್ಯವಸ್ಥಿತವಾಗಿ ನಡೆಸಿಕೊಂಡು ಹೋಗಲು ಅಧಿಕಾರ ವಿಕೇಂದ್ರಿಕರಣ

ಅವಶ್ಯಕವಾಗಿದ್ದರೂ ಸೋಮೇಶ್ವರನ ಕಾಲದ ನಂತರ ದಾಯಾದಿ ಕಲಹಕ್ಕೆ ಇದು ನಾಂದಿ ಹಾಡಿತು.ಆದರೆ ಇಲ್ಲಿ ಶ್ರೀಮಂತನಾದ ದೋರಸಮುದ್ರವನ್ನು ಪಡೆಯುವ ಉದ್ದೇಶದಿಂದ ರಾಮನಾಥನು ನರಸಿಂಹನ ಮೇಲೆ ಹಲವಾರು ಯುದ್ಧಗಳನ್ನು ಕೈಗೊಂಡನು. ಈ ಸಮಯದಲ್ಲೇ ಕಾಯುತ್ತಿದ್ದ ವೈರಿಗಳು ಹೊಯ್ಸಳರ ಮೇಲೆ ಯುದ್ಧ ಸಾರಿದರು. ಸೇವುಣರ ರಾಮಚಂದ್ರ ಇದೇ ಸಮಯದಲ್ಲಿ ನರಸಿಂಹನ ಮೇಲೆ ಯುದ್ಧ ಸಾರಿದ ಸೇವುಣರನ್ನು ಮೂರನೇ ನರಸಿಂಹನ ವೀರದಂಡನಾಯಕನು ಸೋಲಿಸಿದನು. ರಾಮನಾಥನು ಅತ್ತ ಕಣ್ಣಾನೂರನ್ನು ಆಕ್ರಮಿಸಿಕೊಂಡನು. ಆದಾಗ್ಯೂ ರಾಮನಾಥನು ನರಸಿಂಹನ ಮೇಲೆ ಹಗೆ ಸಾಧಿಸುವದನ್ನು ಮುಂದುವರೆಸಿದಂತೆ ತೋರುತ್ತದೆ.

ಹೀಗಾಗಿ ದಾಯಾದಿ ಕಲಹದಲ್ಲಿ ಹೊಯ್ಸಳರ ಸಾಮ್ರಾಜ್ಯದಲ್ಲಿ ಅಶಾಂತಿ ತಲೆದೋರಲು ಪ್ರಾರಂಭವಾಯಿತು. ಇದೇ ಸಂದರ್ಭದಲ್ಲಿ ಮೂರನೇ ನರಸಿಂಹನು ಹೆಚ್ಚು ಸಮಯವನ್ನು ಯುದ್ಧದಲ್ಲಿಯೇ ಕಳೆದರೂ ಸಹ ಹಲವಾರು ದೇವಾಲಯಗಳನ್ನು ನಿರ್ಮಿಸಿದನು. ಇವನ ಕಾಲದ ದೇವಾಲಯಗಳೆಂದರೆ ತುರುವೇಕೆರೆಯ ಚನ್ನಕೇಶವ ಅಥವಾ ಚೆನ್ನಿಗರಾಯ ಮತ್ತು ಮೂಲೆ ಶಂಕರೇಶ್ವರ, ಸೆಟ್ಟಿಕೆರೆಯ ಯೋಗಮಾಧವ, ಸೋಮನಾಥಪುರದ ಕೇಶವ, ವಿಘ್ನಸಂತೆಯ ಲಕ್ಷ್ಮೀನರಸಿಂಹ ಇನ್ನೂ ಮುಂತಾದ ದೇವಾಲಯಗಳನ್ನು ಹಾಗೂ ಬಸದಿಗಳನ್ನು ಕಟ್ಟಿಸಿದನು. ಈತನು ಸರ್ವಧರ್ಮಸಹಿಷ್ಣು ಆಗಿದ್ದು ಶೈವ, ವೈಷ್ಣವ ಮತ್ತು ಜೈನ ದೇವಾಲಯಗಳನ್ನು ಕಟ್ಟಿಸಿದನು. ಮೂರನೇ ನರಸಿಂಹನ ಮಗನಾದ ಮೂರನೇ ಬಲ್ಲಾಳನು ಕ್ರಿ.ಶ.1291ರಲ್ಲಿ ಹೊಯ್ಸಳ ಸಾಮ್ರಾಜ್ಯದ ಅಧಿಕಾರದ ಚುಕ್ಕಾಣಿ ಹಿಡಿದನು. ಆ ಕಾಲದಲ್ಲಿ ಸುತ್ತಮುತ್ತಲಿನ ನೆರೆ ರಾಜರು ಕ್ರಮೇಣವಾಗಿ ಬಲಿಷ್ಠರಾಗಿ ಬೆಳೆಯತೊಡಗಿದ್ದರು. ದೇವಗಿರಿಯ ಸೇವುಣ ದೊರೆ ರಾಮಚಂದ್ರನು ಹೊಯ್ಸಳ ಬಲ್ಲಾಳನ ಮೇಲೆ ಯುದ್ಧ ಸಾರಿದನು. ಇಬ್ಬರಿಗೂ ನಡೆದ ಯುದ್ಧದಲ್ಲಿ ಅಪಾರ ಹಾನಿಗಳಾದವು. ಕೊನೆಗೆ ರಾಮಚಂದ್ರನು ಸೋಲನ್ನೊಪ್ಪಿ ಕೊಂಡನು. ಇಂತಹ ಪರಿಸ್ಥಿತಿಯಲ್ಲಿ ಭಾರತಾದ್ಯಂತ ರಾಜಕೀಯ ಸಂದಿಗ್ಧ ಪರಿಸ್ಥಿತಿ ಉಂಟಾಗಿತ್ತು. ಅದೆಂದರೆ ರಾಜಕೀಯವಾಗಿ ಹಲವಾರು ವಿದೇಶಿ ರಾಜರು ಭಾರತದಲ್ಲಿ ಬುನಾದಿ ಹಾಕಲು ಪ್ರಾರಂಭಿಸಿದ ಕಾಲವಾಗಿತ್ತು. ಉತ್ತರ ಭಾರತದಲ್ಲಿ ಮುಸ್ಲಿಂ ದೊರೆಗಳು ಪ್ರಬಲರಾಗುತ್ತಿದ್ದರು. ದಕ್ಷಿಣದಲ್ಲಿ ಎಲ್ಲಾ ಹಿಂದೂ ರಾಜಮನೆತನಗಳು ಆಂತರಿಕ ಕಲಹಗಳಲ್ಲಿ ತೊಡಗಿದ್ದವು. ಇದರಿಂದ ಪ್ರಭಾವಿತರಾದ ಖಿಲ್ಜಿ ಮನೆತನದ ಅರಸು ಅಲ್ಲಾವುದ್ದೀನ್ ಖಿಲ್ಜಿಯು ದಕ್ಷಿಣ ಭಾರತದ ಸಂಪತ್ತನ್ನು ಲೂಟಿ ಮಾಡಲು ಯೋಚಿಸಿದನು. ಅದರಲ್ಲೂ ಹೊಯ್ಸಳದ ಸಂಪದ್ಭರಿತ ರಾಜ್ಯ ಅವನ ಗಮನಸೆಳೆಯಿತು. ಅಲ್ಲಾವುದ್ದೀನ್ ಖಿಲ್ಜಿಯ ಮಹಾದಂಡ ನಾಯಕನಾದ ಮಲ್ಲಿಕಾಫ಼್ರನ ನೇತೃತ್ವದಲ್ಲಿ ದಕ್ಷಿಣ ಭಾರತದ ಮೇಲೆ ದಾಳಿ ನಡೆಯಿತು.

ಮೊದಲಿಗೆ ಬಲ್ಲಾಳನೇ ಖಿಲ್ಜಿಯ ಜೊತೆ ರಾಜಿ ಮಾಡಿಕೊಂಡು ಧನ ಕನಕಗಳನ್ನು ನೀಡಿದನು. ದಕ್ಷಿಣ ಭಾರತದ ರಾಜರನ್ನು ಒಂದೂಗೂಡಿಸಿ ಮುಸ್ಲಿಂ ಆಕ್ರಮಣಕಾರರ ವಿರುದ್ಧ ಹೋರಾಡಬೇಕೆಂಬ ಅವನ ಉದ್ದೇಶವನ್ನು ಉದ್ದೇಶವನ್ನು ಸ್ಥಳೀಯ ರಾಜರ ದ್ವೇಷಾ ಸೂಯೆಗಳೇ ಕಾರಣವಾಗಿ ಅದು ಫಲಿಸಲಿಲ್ಲ. ಇದು ಅವನ ವಿಫಲ ಹೋರಾಟಕ್ಕೆ ಪ್ರಮುಖ ಕಾರಣವಾಯಿತು.

ತನ್ನ ರಾಜ್ಯ ಮತ್ತು ಜನತೆಯನ್ನು ಪರಕೀಯರ ದಬ್ಬಾಳಿಕೆ ಮತ್ತು ಹಿಂಸೆಗಳಿಂದ ರಕ್ಷಿಸಲು ಇವನು ನಡೆಸಿದ ಹೋರಾಟ ಅನುಪಮ. ಆದರೆ ಇವನ ಹೋರಾಟ ಅತಿಶಯ ವಾಗಿದ್ದರೂ ಇವನು ತನ್ನ ಗುರಿಸಾಧನೆಯಲ್ಲಿ ಯಶಸ್ವಿಯಾಗದೇ ಹೋದದ್ದು ಒಂದು ದುರಂತ. ಹೊಯ್ಸಳರ ನಂತರದಲ್ಲಿ ಪ್ರವರ್ಧಮಾನಕ್ಕೆ ಬರುತ್ತಿದ್ದ ವಿಜಯನಗರದ ಅರಸರು ಕ್ರಮೇಣ ಹೊಯ್ಸಳರ ಕೇಂದ್ರ ಸ್ಥಾನಗಳ ಮೇಲೆ ತಮ್ಮ ಹತೋಟಿಯನ್ನು ಸ್ಥಾಪಿಸುವುದರೊಂದಿಗೆ ಹೊಯ್ಸಳ ರಾಜಮನೆತನ ಇತಿಹಾಸದಲ್ಲಿ ಮರೆಯಾಗಿ ಹೋಯಿತು. ಈ ಮೇಲೆ ತಿಳಿಸಿದ ಎಲ್ಲಾ ಅಂಶಗಳನ್ನು ಗಮನಿಸಿದಾಗ ಹೊಯ್ಸಳ ರಾಜರು ರಾಜಕೀಯದ ಜೊತೆಗೆ ಆಡಳಿತಾತ್ಮಕವಾಗಿ ಏರಿಳಿತಗಳನ್ನು ಸಾಧಿಸುವುದರ ಮೂಲಕ ಆರ್ಥಿಕ, ಸಾಮಾಜಿಕ, ಧಾರ್ಮಿಕ ಮತ್ತು ಶೈಕ್ಷಣಿಕ ರಂಗಗಳ ಜೊತೆಯಲ್ಲೇ ಸಾಂಸ್ಕೃತಿಕ ಬೆಳವಣಿಗೆಗೆ ಹೆಚ್ಚು ಒತ್ತು ನೀಡಿ ಇಡೀ ಹೊಯ್ಸಳ ಸಾಮ್ರಾಜ್ಯವನ್ನೇ ಕಲೆ ಮತ್ತು ವಾಸ್ತುಶಿಲ್ಪವನ್ನೊಳಗೊಂಡಂತೆ ಇತಿಹಾಸದ ಪುಟಗಳಲ್ಲಿ ಅವರ ಸಾಧನೆ ಮತ್ತು ಸಾಂಸ್ಕೃತಿಕ ಕೊಡುಗೆಗಳೂ ರಾರಾಜಿಸುವಂತೆ ಇತಿಹಾಸಕ್ಕೆ ಸ್ಪಷ್ಟವಾದ ಮಾಹಿತಿಯನ್ನು ಈ ಅಧ್ಯಾಯದಲ್ಲಿ ನಿರೂಪಿಸಲಾಗಿದೆ.

ತುರುವೇಕೆರೆಯ ತಂಡಗ ಗ್ರಾಮದ ಮಧ್ಯಭಾಗದಲ್ಲಿ ಪೂರ್ವಾಭಿಮುಖವಾಗಿ ಮಲ್ಲೇಶ್ವರ ದೇವಾಲಯ ನಿರ್ಮಾಣವಾಗಿದೆ. ಈ ಈಶ್ವರ ದೇವಾಲಯದ ಪ್ರಾಕಾರದಲ್ಲಿ ಒಂದು ಶಾಸನ ಕಂಡುಬರುತ್ತದೆ. ಕ್ರಿ.ಶ.1102ರ ಕಾಲಮಾನಕ್ಕೆ ಸಲ್ಲುವ ಈ ಶಾಸನ ಹೊಯ್ಸಳ 1ನೇ ಬಲ್ಲಾಳನ ಆಳ್ವಿಕೆಗೆ ಸಂಬಂಧಿಸಿದೆ. ಭೀಮಣ್ಣ ಎಂಬುವನು ಈ ಮೂಲಸ್ಥಾನೇಶ್ವರ ದೇವಾಲಯಕ್ಕೆ ದಾನ ನೀಡಿದ ಅಂಶ ಬೆಳಕಿಗೆ ಬರುತ್ತದೆ.[42]

ಕ್ರಿ.ಶ.1130ರ ಚಿಕ್ಕನಾಯಕನಹಳ್ಳಿ ತಾಲೂಕು ಭಟ್ಟರಹಳ್ಳಿಯ ಈಶ್ವರ ದೇವಾಲಯದ ಬಳಿ ಇರುವ ವೀರಗಲ್ಲು ಬಲ್ಲಾಳ, ವಿಷ್ಣು, ವಿನಯಾದಿತ್ಯ ಎಚಲಾದೇವಿಯ ಮಕ್ಕಳು ಎಂದು ಇದರಲ್ಲಿ ಹೇಳಿದೆ. [43]ಅದೇ ಹೋಬಳಿಯ ಬೆಂಕಿಕೆರೆ ಗ್ರಾಮದ ಈಶ್ವರ ದೇವಾಲಯದ ಕ್ರಿ.ಶ.1137ರ ಹೊಯ್ಸಳ ದೊರೆಯಾದ ತಲಕಾಡುಗೊಂಡ ಬಿರುದಾಂಕಿತ ವಿಷ್ಣುವರ್ಧನನ ಆಳ್ವಿಕೆಯಲ್ಲಿ ಬೀರನಾಯಕ ಎಂಬುವನು ತುರುವೇಕೆರೆಯ ಕಾಡಸೂರಿನಿಂದ ಹಾಗೂ

ಮಲ್ಲಗೌಡನ ತಮ್ಮ ಬಮ್ಮಗೌಡನು ತುರುವೇಕೆರೆಯ ಬೆಂಕಿಕೆರೆಯನ್ನು ಆಳುತ್ತಿದ್ದ ಮಹಾದೇವರನ್ನು ಪ್ರತಿಷ್ಠಾಪಿಸಿ ಭೂಮಿಯನ್ನು ದಾನ ನೀಡಿದುದರ ಬಗ್ಗೆ ತಿಳದುಬರುತ್ತದೆ. [44]

ತುಮಕೂರು ಜಿಲ್ಲೆಯ ಕುಣಿಗಲ್ ತಾಲೂಕಿನ ಕಾಮನಹಳ್ಳಿ ಎಂಬ ಗ್ರಾಮದ ರಾಮಲಿಂಗೇಶ್ವರ ದೇವಾಲಯದ ದಕ್ಷಿಣದಲ್ಲಿ ಒಂದು ಶಾಸನ ದೊರೆತಿದೆ. ಇದು ಹೊಯ್ಸಳ ವಿಷ್ಣುವರ್ಧನನ ಶಾಸನವಾಗಿದ್ದು ಕ್ರಿ.ಶ.1138ರ ಕಾಲಕ್ಕೆ ಸೇರುತ್ತದೆ. ಇದರಲ್ಲಿ ತ್ರಿಭುವನಮಲ್ಲ ತಳಕಾಡುಗೊಂಡ ಭುಜಬಲ ವೀರಗಂಗ ಹೊಯ್ಸಳದೇವ ಎಂಬುವನ ಉಲ್ಲೇಖವಿದ್ದು ಇವನು ಹೊಯ್ಸಳ ವಿಷ್ಣುವರ್ಧನನೇ ಎಂದು ಶಾಸನ ಕಾಲದ ಆಧಾರದ ಮೇಲೆ ನಿರ್ಧರಿಸಬಹುದು.[45]

ತುರುವೇಕೆರೆ ತಾಲೂಕು ದಬ್ಬೇಘಟ್ಟ ಗ್ರಾಮದಲ್ಲಿ ಬೈರೇದೇವರ ದೇವಾಲಯದ ಹಿಂದೆ ಕ್ರಿ.ಶ.1140ರ ಶಾಸನವೊಂದು ದೊರೆತಿದ್ದು ಮಹಮಂಡಲೇಶ್ವರ ತ್ರಿಭುವನಮಲ್ಲ ಹೊಯ್ಸಳ ದೇವ ಕೆರೆ ನಿರ್ಮಿಸಿ ದಾನ ನೀಡಿದ ಬಗ್ಗೆ ಮಾಹಿತಿ ನೀಡುತ್ತದೆ. [46]

ತುರುವೇಕೆರೆ ತಾಲೂಕು ಕಾಡಸೂರು ಗ್ರಾಮದ ಪಶ್ಚಿಮಕ್ಕೆ ಬಂಡೇಕಲ್ಲಿನಲ್ಲಿ ಹೊಯ್ಸಳ ದೊರೆ ವಿಷ್ಣುವರ್ಧನನ ಕ್ರಿ.ಶ.1143ರ ಶಾಸನ ದೊರೆತಿದ್ದು ವಿಷ್ಣುವರ್ಧನನ ಕಾಲಕ್ಕೆ ಸಂಬಂಧಿಸಿದ ಆತನ ಆಡಳತದ ಮೇಲೆ ಬೆಳಕು ಚೆಲ್ಲುತ್ತದೆ.[47]

ಕುಣಿಗಲ್ ತಾಲೂಕಿನ ಕೊತ್ತಗೆರೆಯ ಶಾಸನವು ಕ್ರಿ.ಶ.1157ನೇ ಇಸವಿಗೆ ಸೇರಿದ್ದು ಈ ಶಾಸನವು ವಿಷ್ಣುವರ್ಧನನು ಬೇರೆ ಬೇರೆ ಕಾಲಗಳಲ್ಲಿ ರಾಮ, ಕೃಷ್ಣ, ಬುದ್ಧ ಮತ್ತು ಮತ್ಸ್ಯನಾಗಿ ಅವತರಿಸಿ ಅನ್ಯಾಯವನ್ನು ಅಳಸಿ ಹಾಕಲು ಕಲಿಯುಗದಲ್ಲಿ ಹುಟ್ಟಿದನೆಂದು ಬಣ್ಣಿಸುತ್ತದೆ. (ಕಲಿಯುಗದೊಳ್ ಅನ್ಯಾಯವಂ ಮಾಣಿಸಲು) ಇವನು ಕೊತ್ತಂಗೆರೆ ಎಂಬ ಗ್ರಾಮವನ್ನು ಅದಕ್ಕೆ ಶ್ರೀಧರಪುರವೆಂಬ ಹೆಸರಿಟ್ಟು ತನ್ನ ನಿತ್ಯಭೂಮಿಧಾನದ ವ್ರತಕ್ಕನುಗುಣವಾಗಿ ಮಹಾರಾಜರಿಗೆ ದಾನ ಮಾಡಿದನೆಂದು ಇದರಲ್ಲಿ ಹೇಳಿದೆ.[48]

ಕ್ರಿ.ಶ.1169ರ ಗುಬ್ಬಿಯ ಹಾಗಲವಾಡಿ ಗ್ರಾಮದ ವೀರಗಲ್ಲು ಹೊಯ್ಸಳ ಅರಸ 2ನೇ ವೀರಬಲ್ಲಾಳನ ಆಳ್ವಿಕೆಯನ್ನು ಉಲ್ಲೇಖಿಸುತ್ತಾ ಇವನ ಆಳ್ವಿಕೆಯ ಕಾಲದಲ್ಲಿ ಕೆಳದಿಯ ದೇಮಣ್ಣನೆಂಬುವನು ನಾಮಿಯ ದಂಡನಾಯಕನೆಂಬುವನು ಘಟ್ಟದ ಮೇಲೆ ದಂಡೆತ್ತಿ ಹೋದಾಗ ಮಾಚಿಯ ನಾಯಕನೆಂಬುವನ ಮಗನೆಂದು ಕರೆಯಲ್ಪಟ್ಟ ವೀರಯೋಧನೊಬ್ಬನು ಯುದ್ಧದಲ್ಲಿಮಡಿದ ವಿಷಯವಿದೆ. "ಹೊಯ್ಸಳ ಪರಿವಾರ ಮೆಚ್ಚಲು" ಈ ವೀರನು

ಹೋರಾಡಿದನೆಂದು ಶಾಸನವು ಬಣ್ಣಿಸುತ್ತದೆ. ಘಟ್ಟದನಾಡು ಎಂಬ ಪ್ರದೇಶವನ್ನು ಖಚಿತವಾಗಿ ಗುರುತಿಸಲಾಗಿಲ್ಲ.[49]

ತುರುವೇಕೆರೆ ತಾಲೂಕಿನ ತಂಡಗ ಗ್ರಾಮದ ಮಲ್ಲೇಶ್ವರ ದೇವಾಲಯದ ಪ್ರಾಕಾರದಲ್ಲಿ ಎರಡು ವೀರಗಲ್ಲುಗಳು ಕಂಡುಬರುತ್ತದೆ. ಮೊದಲನೆಯ ವೀರಗಲ್ಲು ಕ್ರಿ.ಶ.1193ರಲ್ಲಿ ಈ ಪ್ರದೇಶದಲ್ಲಿ ಆಳ್ವಿಕೆ ನಡೆಸುತ್ತಿದ್ದಂತಹ ಹೊಯ್ಸಳ ಅರಸ 2ನೇ ವೀರ ಬಲ್ಲಾಳನ ಆಳ್ವಿಕೆಯನ್ನು ಉಲ್ಲೇಖಿಸುತ್ತದೆ. ಪ್ರಾಚೀನ ಕಾಲದಲ್ಲಿ ತಂಡಗ ಗ್ರಾಮವನ್ನು ಶಂಕರ ನಾರಾಯಣಪುರವೆಂದು ಕರೆಯಲಾಗುತಿತ್ತು. ಈ ವೀರಗಲ್ಲು ತುರುಗೋಳ್ ವೀರಗಲ್ಲು ಆಗಿದ್ದು ವೀರನೊಬ್ಬ ಗೋಕಳ್ಳರ ವಿರುದ್ಧ ಹೋರಾಡಿ ಮಡಿದ ಸಂಗತಿಯನ್ನು ತಿಳಿಸುತ್ತದೆ.[50]

ತುರುವೇಕೆರೆಯ ಹಿಂಡುಮಾರನಹಳ್ಳಿಯ ಕ್ರಿ.ಶ.1198ರ ಶಾಸನವು ಹೊಯ್ಸಳ ಅರಸ 2ನೇ ವೀರಬಲ್ಲಾಳನ ಆಳ್ವಿಕೆಯ ಬಗ್ಗೆ ಉಲ್ಲೇಖ ನೀಡುತ್ತದೆ. ಈ ಶಾಸನವು ಬಹುಪಾಲು ತೃಟಿತವಾಗಿದ್ದು ಅಸ್ಪಷ್ಟವಾಗಿದೆ.[51]

ತುರುವೇಕೆರೆ ತಾಲೂಕಿನ ಪುರ ಗ್ರಾಮದಲ್ಲಿ 2ನೇ ನರಸಿಂಹನ ಶಾಸನವೊಂದು ಕಲ್ಲೇಶ್ವರ ದೇವಾಲಯದಲ್ಲಿ ದೊರೆತಿದೆ. ಈ ಶಾಸನವು ಕ್ರಿ.ಶ. 1227ಕ್ಕೆ ಸಲ್ಲುವ ಶಾಸನವಾಗಿದ್ದು ನಿಟ್ಟೂರಿನ ಕಲಿದೇವ ದೇವಾಲಯಕ್ಕೆ ದಾನ ಬಿಟ್ಟ ಬಗ್ಗೆ ತಿಳಿಸುತ್ತದೆ. ಗಂಗವಾಡಿ 96000 ಕ್ಕೆ ತೆಂಕಣದಲ್ಲಿರುವ ಮಹಾಪಟ್ಟಣವಾದ ನಿಟ್ಟೂರು ಸ್ಥಳದ ಸಕಲ ಧರ್ಮ ಶರಣರು ಮಹಾಪ್ರಭು ಮಸಣಗೌಡ ಕಾಳೇಗೌಡರು ಕಲಿದೇವರ ರಂಗಭೋಗಕ್ಕೆ ಗದ್ದೆ ಬೆದ್ದಲು ದಾನ ನೀಡಿದ ಬಗ್ಗೆ ತಿಳಿಸುತ್ತದೆ.[52] ತುರುವೇಕೆರೆ ಕಾಡಸೂರು ಗ್ರಾಮದ ಬೈರೇದೇವರ ದೇವಾಲಯದ ಮುಂದೆ ಕ್ರಿ.ಶ.1237ರ ವೀರಸೋಮೇಶ್ವರನ ಆಳ್ವಿಕೆಯ ವೀರಗಲ್ಲು ಕಂಡುಬರುತ್ತದೆ. ಈ ವೀರಗಲ್ಲು ಶಾಸನಪಾಠ ಹೊಂದಿದ್ದು ಕಾವಗೌಡನ ಮಗ ಕೇತಯ್ಯನು ಕುದುರೆ ಕಾಳಗದಲ್ಲಿ ಮರಣ ಹೊಂದಿದ್ದನೆಂದು ತಿಳಿದು ಬರುತ್ತದೆ.[53]

ಅದೇ ಸ್ಥಳದಲ್ಲಿ ಮೂರನೆಯ ವೀರಗಲ್ಲು ದೊರೆತಿದ್ದು ಹೊಯ್ಸಳರ ಅರಸ ವೀರಸೋಮೇಶ್ವರನ ಕ್ರಿ.ಶ.1246ರ ಶಾಸನಪಾಠ ಹೊಂದಿದೆ. ವೀರಸೋಮೇಶ್ವರನ ಆಳ್ವಿಕೆಸಮಯದಲ್ಲಿ ಕಾಡಸೂರ ಅಪ್ಪಯ್ಯ ನಾಯಕ, ಕಾಡನಾಯಕ ಮಲೆಯನಾಯ್ಕ ಎಂಬುವರು ಕಾಳಗದಲ್ಲಿ ಮಡಿದ ಮಾಹಿತಿ ನೀಡುತ್ತದೆ.[54] ತುರುವೇಕೆರೆ ತಾಲೂಕು ಕೊಂಡಜ್ಜಿ ಅಗ್ರಹಾರದಲ್ಲಿನ ತ್ರಿಕೂಟ ಸೋಮೇಶ್ವರ ದೇವಾಲಯದ ಒಳಗೆ ಶಾಸನವು ಕಂಡುಬರುತ್ತದೆ. ಈ ಶಾಸನವು ಕ್ರಿ.ಶ.1252ರ ಕಾಲಮಾನಕ್ಕೆ ಸೇರಿದ್ದು ಹೊಯ್ಸಳ ವೀರಸೋಮೇಶ್ವರನ ಬಗ್ಗೆ

ಉಲ್ಲೇಖಿಸುತ್ತದೆ. ಸೋಮೇಶ್ವರನ ದಂಡನಾಯಕ ಸಂಧಿವಿಗ್ರಹಿ ಬೊಮ್ಮಣ ದಂಡನಾಯಕನು ಊರಿನ ಹಿರಿಯ ಸಮ್ಮುಖದಲ್ಲಿ ಕೊಂಡಜ್ಜಿ ಗ್ರಾಮವನ್ನು ದೇವದೀಕ್ಷ ಪುತ್ರನಾದ ಚಿಕ್ಕದೇವರು ಆ ಶಿವಪುರವನ್ನು ಮೂವತ್ತೆರಡು ಗಣಗಳಾಗಿ ವಿಂಗಡಿಸಿ ತ್ರಿಕೂಟ ಸೋಮೇಶ್ವರ ದೇವಾಲಯಕ್ಕೆ ದಾನ ನೀಡಿದುದರ ಬಗ್ಗೆ ತಿಳಿಸುತ್ತದೆ.[55]

ತುರುವೇಕೆರೆಯ ಮಾಯಿಸಂದ್ರ ಹೋಬಳಿಯ ತುಂಬೇಪುರದ ಮಲ್ಲೇಶ್ವರ ಗುಡಿಯ ಮುಂದೆ ಸುಮಾರು ಕ್ರಿ.ಶ.1253ರ ಶಾಸನ ದೊರೆತಿದ್ದು ಹೊಯ್ಸಳ ಅರಸ ವೀರ ಸೋಮೇಶ್ವರನನ್ನು ಉಲ್ಲೇಖಿಸುತ್ತದೆ. ಅಮ್ಮೆಯನಾಯ್ಕ ಎಂಬುವನು ಸೋಮೇಶ್ವರ ದೇವರನ್ನು ಪ್ರತಿಷ್ಠಾಪಿಸಿ ಆ ಗ್ರಾಮವನ್ನು ಗಣವಿತ್ತೀಯಗಳಾಗಿ ವಿಂಗಡಿಸಿ ಆಚಾರವಂತ ದೇವನಿಗೆ ಆರುವಿತ್ತಿ ಮಠದ ಮಲ್ಲಯ್ಯನಿಗೆ ಒಂದು ವಿತ್ತಿ ಬಿಟ್ಟಿಯಣ್ಣ ಎಂಬುವನಿಗೆ ಎರಡು ವೃತ್ತಿ ಇನ್ನೂ ಮುಂತಾದ ಭಕ್ತರಿಗೆ ವಿತ್ತಿಯಗಣಗಳನ್ನು ದಾನ ನೀಡಿದ ಬಗ್ಗೆ ಬೆಳಕುಚೆಲ್ಲುತ್ತದೆ.[56]

ಚಿಕ್ಕನಾಯಕನ ಹಳ್ಳಿಯ ಬ್ಯಾಲಕೆರೆ ಗ್ರಾಮದಲ್ಲಿ ದೊರೆತ ಕ್ರಿ.ಶ.1260ರ ಶಾಸನವು ಮೂರನೇ ನರಸಿಂಹನ ಆಡಳಿತದ ಬಗ್ಗೆ ಮಾಹಿತಿ ನೀಡುತ್ತದೆ. ಹುಳಿಯಾರಿನ ಲಕುಮೆಯನಾಯಕ ಮತ್ತು ಕಪ್ಪೆಯ ನಾಯಕ ಎಂಬುವರು ಜನರಿಗೆ ದಾನ ನೀಡಿದ ಮಾಹಿತಿಯನ್ನು ತಿಳಿಸುತ್ತದೆ.[57]

ತುರುವೇಕೆರೆಯ ಚನ್ನಕೇಶವ ದೇವಾಲಯದ ಮುಖಮಂಟಪದ ತೊಲೆಕಲ್ಲಿನ ಮೇಲೆ ಕ್ರಿ.ಶ.1263ರ ಹೊಯ್ಸಳ ದೊರೆ 3ನೇ ನರಸಿಂಹನ ಮಹಾಪ್ರಧಾನ ಸಂಧಿವಿಗ್ರಹಿ ಸೋಮಣ್ಣ ದಂಡನಾಯಕನು ತುರುವೇಕೆರೆಯನ್ನು ಸರ್ವಜ್ಞ ಶ್ರೀ ವಿಜಯನರಸಿಂಹಪುರ ಎಂದು ನಾಮಕರಣ ಮಾಡಿ ಜೊತೆಗೆ ಅಗ್ರಹಾರವನ್ನಾಗಿ ಮಾಡಿ ದೇವಾಲಯಕ್ಕೆ ದಾನ ನೀಡಿದ ಬಗ್ಗೆ ತಿಳಿಸುತ್ತದೆ. [58] ತುರುವೇಕೆರೆಯ ಕಾಡಸೂರು ಗ್ರಾಮದಲ್ಲಿ ಎರಡನೆಯ ವೀರಗಲ್ಲು ಹೊಯ್ಸಳ ಚಕ್ರವರ್ತಿ ವೀರನರಸಿಂಹನ ಕ್ರಿ.ಶ.1265ಕ್ಕೆ ಸಲ್ಲುವ ಶಾಸನ ಹೊಂದಿದ್ದು ಕಾಡಸೂರ ಕಾಡನಾಯಕನನ್ನು ನರಸಿಂಹದೇವನು ದಾಳಿ ಮಾಡಿದ ವಿಷಯವನ್ನು ಪ್ರಸ್ಥಾಪಿಸುತ್ತದೆ. ಆದರೆ ಮುಂದಿನ ಶಾಸನಪಾಠಗಳು ಅಲ್ಲಲ್ಲಿ ಅಳಿಸಿ ಹೋಗಿದ್ದು ಹೆಚ್ಚಿನ ಮಾಹಿತಿ ಕಂಡುಬರುವುದಿಲ್ಲ.[59]ಅದೇ ಸ್ಥಳದಲ್ಲಿ ನಾಲ್ಕನೆಯ ವೀರಗಲ್ಲು ದೊರೆಯುತ್ತದೆ. ಕ್ರಿ.ಶ.1325ರ ವೀರಬಲ್ಲಾಳನ ಕಾಲದ ಶಾಸನಪಾಠ ಹೊಂದಿದ್ದು ಅಲ್ಲಲ್ಲಿ ಶಾಸನಪಾಠ ಅಳಿಸಿಹೋಗಿದ್ದು ಅಸ್ಪಷ್ಟವಾಗಿದೆ. ಬೇಟೆಯ ದಂಡನಾಯ್ಕ, ಸಿಂಗೆಯ ದಂಡನಾಯಕ ಮುಂತಾದವರು ಮಡಿದ ವಿಷಯ ಬೆಳಕಿಗೆ ಬರುತ್ತದೆ.[60] ಚಿಕ್ಕನಾಯಕನ ಹಳ್ಳಿಯ ವೋಟಕೆರೆ ಗ್ರಾಮದ ಕ್ರಿ.ಶ.1235ರ

ಶಾಸನವು ಹೊಯ್ಸಳ ದೊರೆ ವೀರಸೋಮೇಶ್ವರನ ಆಳ್ವಿಕೆಯನ್ನು ಉಲ್ಲೇಖಿಸುತ್ತಾ ಊರಿನ ಹಿರಿಯರ ಸಮ್ಮುಖದಲ್ಲಿ ದೇವಾಲಯಕ್ಕೆ ದಾನ ನೀಡಿದ್ದನ್ನು ಉಲ್ಲೇಖಿಸುತ್ತದೆ. ಈ ಶಾಸನವು ಹೊಯ್ಸಳ ವಂಶಾವಳಿಯ ಸಂಪೂರ್ಣ ಮಾಹಿತಿಯನ್ನು ನೀಡುತ್ತದೆ.[61]

ಮಾಯಸಂದ್ರ ಹೋಬಳಿ ಜಡೇಯದ ಈಶ್ವರ ದೇವಾಲಯದ ಮುಂದೆ ಶಾಸನ ದೊರೆಯುತ್ತದೆ. ಹೊಯ್ಸಳ ದೇವ 2ನೇ ನರಸಿಂಹನ ಕ್ರಿ.ಶ.1259ರ ಶಾಸನ ಪಾಠವಾಗಿದ್ದು ವೀರಗಂಗ ಹೊಯ್ಸಳ ಸಾಮಂತ ಕಡಬ ಕಂಠೀರವನು ಮರುಗಲನಾಡನ್ನು ಆಳುತ್ತಿರಲು ಕ್ರಿ.ಶ.1259ರಲ್ಲಿ ಸೋಮನಾಥ ದೇವರನ್ನು ಪ್ರತಿಷ್ಠೆಮಾಡಿ ಆ ದೇವರಿಗೆ ಅಮೃತಪಡಿಸಿ ಈ ಕಾರ್ಯಕ್ಕೆ ಜಡೇಯದ ಕೆರೆಯ ಕೆಳಗಿನ ಗದ್ದೆ ಮುಂತಾದವನ್ನು ದಾನ ನೀಡಿದುದರ ಬಗ್ಗೆ ಬೆಳಕು ಚೆಲ್ಲುತ್ತದೆ.[62]

ತಿಪಟೂರಿನ ನೊಣವಿನಕೆರೆಯ ಮತ್ತಿಗಟ್ಟ ಶಾಸನವು ಕ್ರಿ.ಶ.1291 ಇಸವಿಗೆ ಸೇರಿದ್ದು ಮೂರನೇ ಬಲ್ಲಾಳನು ಗೋಕಳ್ಳರ ವಿರುದ್ಧ ಹೋರಾಡಿ ಮಡಿದ ಮುದ್ದಗೌಡನ ಮಗ ಮಾರಾಗೌಡನ ಸ್ಮರಣಾರ್ಥವಾಗಿ ಮೂರನೇ ಬಲ್ಲಾಳನು ಅವರ ಕುಟುಂಬಕ್ಕೆ ದಾನನೀಡಿದುದರ ಬಗ್ಗೆ ವಿವರಿಸುತ್ತದೆ.[63]ತುಮಕೂರು ತಾಲೂಕಿನ ಹಾಲನೂರು ಗ್ರಾಮದಲ್ಲಿ ದೊರೆತಿರುವ ಕ್ರಿ.ಶ.1306ರ ಶಾಸನವು ಮೂರನೇ ಬಲ್ಲಾಳನನ್ನು ಉಲ್ಲೇಖಿಸುತ್ತಾ ದಂಡನಾಯಕ ಲೋಕಪ್ಪ ದಂಡನಾಯಕನು ಹಾಲನೂರನ್ನು ದಾನಬಿಟ್ಟ ವಿಷಯವನ್ನು ಪ್ರಸ್ತಾಪಿಸುತ್ತದೆ. [64]

ಚಿಕ್ಕನಾಯಕನಹಳ್ಳಿ ಹೆಣ್ಣೆಗೆರೆ ಗ್ರಾಮದ ಕಲ್ಲೇಶ್ವರ ಗುಡಿಯಲ್ಲಿ ಶಾಸನ ದೊರೆತಿದ್ದು ದುರದೃಷ್ಟಾವಶಾತ್ ಕಾಲಮಾನ ಉಲ್ಲೇಖವಾಗಿಲ್ಲ. ಈ ಶಾಸನವು ತೃಟಿತವಾಗಿದ್ದು ಮಹಮಂಡಲೇಶ್ವರ ಬಹುಭುಜ ವೀರಗಂಗ ವಿಷ್ಣುವರ್ಧನ ಹೊಯ್ಸಳ ದೇವ ಗಂಗವಾಡಿ 96,000ವನ್ನು ಆಳುತ್ತಿದ್ದುಬ್ರಾಹ್ಮಣರಿಗೆ ಭೂಮಿಯನ್ನು ದಾನ ನೀಡಿದರ ಬಗ್ಗೆ ಉಲ್ಲೇಖಿಸುತ್ತದೆ.[65]

ತಂಡಗ ಗ್ರಾಮದ ಮಲ್ಲೇಶ್ವರ ದೇವಾಲಯದ ಪ್ರಾಕಾರದಲ್ಲಿ ಕಂಡು ಬರುವ ಎರಡನೇ ವೀರಗಲ್ಲು ಹೊಯ್ಸಳ ದೊರೆ ವೀರನರಸಿಂಹನ ಆಳ್ವಿಕೆಯಲ್ಲಿ ಹೊನ್ನವ್ವೆಯ ಸುಪುತ್ರ ಗೋಕಳ್ಳರ ವಿರುದ್ಧ ಹೋರಾಡಿ ಮಡಿದ ಸಂಗತಿಯನ್ನು ಪ್ರಸ್ಥಾಪಿಸುತ್ತಾ ಆತನ ಅಣ್ಣನ ಹೆಂಡಂತಿಯಾದ ಕೇತವ್ವೆ ಈ ಶಾಸನವನ್ನು ಹಾಕಿಸಿದಳು ಎಂಬ ಮಾಹಿತಿ ಇದೆ.[66]ತುರುವೇಕೆರೆ ತಾಲೂಕಿನ ಬಿಗನೇನಹಳ್ಳಿಯ ಮಲ್ಲೇಶ್ವರ ದೇವಾಲಯದ ಬಲಭಾಗದಲ್ಲಿ ಶಾಸನವು ದೊರೆತಿದ್ದು ವೀರಬಲ್ಲಾಳನ ನಾಮಾಂಕಿತವನ್ನು ಉಲ್ಲೇಖಿಸುತ್ತದೆ. ಕಾಲಮಾನ ತೃಟಿತವಾಗಿದ್ದು

ದೇವಾಲಯಕ್ಕೆ ದಾನ ನೀಡಿದುದರ ಬಗ್ಗೆ ಮಾಹಿತಿ ನೀಡುತ್ತದೆ.[67] ಚಿಕ್ಕನಾಯಕನಹಳ್ಳಿ ಹಿಂದಿನ ಕೆರೆ ಗ್ರಾಮದಲ್ಲಿ 2ನೇ ನರಸಿಂಹನ ಆಳ್ವಿಕೆಗೆ ಸಂಬಂಧಿಸಿದ ಶಾಸನವು ದೊರೆತಿದ್ದು ಬಹುಪಾಲು ಭಾಗ ತೃಟಿತವಾಗಿದೆ.[68]

ತುರುವೇಕೆರೆ ಹೋಬಳಿ ಗೊಟ್ಟಕೆರೆಯ ಈಶ್ವರ ದೇವಾಲಯದ ಬಳಿ ಶಾಸನ ದೊರೆತಿದ್ದು ಈ ಶಾಸನವು ಕ್ರಿ.ಶ.1285ರ ಕಾಲಕ್ಕೆ ಸಲ್ಲುತ್ತದೆ. ಈ ಶಾಸನವು ವೀರನರಸಿಂಹನ ಕಾಲಕ್ಕೆ ಸೇರಿದ್ದು ಈಶ್ವರಲಿಂಗ ಪ್ರತಿಷ್ಠಾಪನೆ ಮಾಡಿ ದಾನ ನೀಡಿದ ಬಗ್ಗೆ ತಿಳಿಸುತ್ತದೆ.[69]

ತುರುವೇಕೆರೆಯ ಬೆನಕನಕೆರೆಯ ಕ್ರಿ.ಶ.1277ರ ಶಾಸನವು ಮೂರನೇ ನರಸಿಂಹನ ಆಡಳಿತದ ಮಾಹಿತಿಯನ್ನು ನೀಡುತ್ತದೆ. ಮಾಂಡಲಿಕರ ಬಗ್ಗೆ ಉಲ್ಲೇಖಿಸುತ್ತಾ ಕಂಬೆಯ ನಾಯಕನ ಮಗ ಬೆನೆಯ ನಾಯಕ ಮತ್ತು ಬೊಮ್ಮೆಯ ನಾಯಕ ಎಂಬುವರು ಗ್ರಾಮವನ್ನು ಉಳಿಸಲು ಹೋರಾಡಿದರು ಎಂಬ ಅಂಶ ಗಮನಕ್ಕೆ ಬರುತ್ತದೆ.[70]

ತುರುವೇಕೆರೆ ಮೂಲೆಶಂಕೇಶ್ವರ ದೇವಾಲಯದಲ್ಲಿ ಕ್ರಿ.ಶ.1318ರ ಹೊಯ್ಸಳ ದೊರೆ 3ನೇ ನರಸಿಂಹರ ಶಾಸನವೊಂದರಲ್ಲಿ ಮಹಾದಂಡನಾಯಕ ಸೋಮಣ್ಣ ದಂಡನಾಯಕನು ಶ್ರೀವಿಜಯ ನರಸಿಂಹಪುರವಾದ ತುರುವೇಕೆರೆಯ ಅಗ್ರಹಾರದ ಸುತ್ತಮುತ್ತಲ ಗ್ರಾಮಗಳಾದ ತಾಳಕೆರೆ, ಡೊಂಕಿಯಹಳ್ಳಿ, ಶೆಟ್ಟಿಯಹಳ್ಳಿ, ಗೊಟಿಯಕೆರೆ ಮುಂತಾದ ಸಮಸ್ತ ಹಳ್ಳಿಯ ಹಿರಿಯರ ಸಮ್ಮುಖದಲ್ಲಿ ದೇವಾಲಯಕ್ಕೆ ದಾನನೀಡಿದ ಬಗ್ಗೆ ಮಾಹಿತಿ ಇದೆ. [71]

**ನೊಳಂಬ**

ಆಗ್ನೇಯ ಕರ್ನಾಟಕದಲ್ಲಿ ಕ್ರಿ.ಶ.8ನೇ ಶತಮಾನದಿಂದ 11ನೇ ಶತಮಾನದವರೆಗೆ ಆಳ್ವಿಕೆ ನಡೆಸಿದ ನೊಳಂಬರು ಅಥವಾ ನೊಳಂಬ ಪಲ್ಲವರು ದಕ್ಷಿಣ ಭಾರತದ ಇತಿಹಾಸದಲ್ಲಿ ಬಹುಮುಖ್ಯ ಪಾತ್ರವಹಿಸಿದ್ದರು. ಇವರ ರಾಜಧಾನಿ ಈಗಿನ ಆಂಧ್ರಪ್ರದೇಶದ ಎಲ್ಲೆಯ ತುಮಕೂರು ಜಿಲ್ಲೆ ಮಡಕಶಿರಾ ತಾಲೂಕಿನಲ್ಲಿರುವ ಹೆಂಜೇರು ಅಥವಾ ಹೇಮಾವತಿ ಆಗಿತ್ತು. ಆನಂತರ ಕ್ರಿ.ಶ.11ನೇ ಶತಮಾನದಲ್ಲಿ ಇವರು ತಮ್ಮ ರಾಜಧಾನಿಯನ್ನು ತುಂಗಭದ್ರ ತೀರದಲ್ಲಿರುವ ಕಂಪಲಿಗೆ ವರ್ಗಾಯಿಸಿಕೊಂಡರು. ಪ್ರಾರಂಭದಲ್ಲಿ ನೊಳಂಬಳಿಗೆ ಸಾಸಿರ ಎಂಬ ಪ್ರಾಂತ್ಯದ ಮೇಲೆ ಅಧಿಪತ್ಯ ನಡೆಸುತ್ತಿದ್ದರು. ಈ ಪ್ರಾಂತ್ಯವು ಇಂದಿನ ಚಿತ್ರದುರ್ಗ ಜಿಲ್ಲೆ ಮತ್ತು ಅದರ ಸುತ್ತಮುತ್ತಲ ಪ್ರದೇಶಗಳನ್ನು ಒಳಗೊಂಡಿತ್ತು. ಕಾಲಕ್ರಮೇಣ ಕ್ರಿ.ಶ.9-10ನೇ ಶತಮಾನದಲ್ಲಿ ಇವರ ಪ್ರಾಬಲ್ಯವು ವರ್ಧಿಸಿ ಇವರ ರಾಜ್ಯವು ಸಹ ಬಹಳ ಮಟ್ಟಿಗೆ

ವಿಸ್ತಾರಗೊಂಡು ನೊಳಂಬವಾಡಿ 32000 ಎಂಬ ವಿಸ್ತಾರ ಪ್ರಾಂತ್ಯವಾಯಿತು. ಈ ಪ್ರಾಂತ್ಯವು ಈಗಿನ ಕರ್ನಾಟಕದ ಕೋಲಾರ, ತುಮಕೂರು, ಚಿತ್ರದುರ್ಗ ಮತ್ತು ಅದಕ್ಕೆ ಸೇರಿದಂತೆ ಇರುವ ಸುತ್ತಮುತ್ತಲಿನ ಪ್ರದೇಶಗಳು ಅಂದರೆ ಬೆಂಗಳೂರು, ಕಡೂರು, ಬಳ್ಳಾರಿ, ಅನಂತಪುರ ಮತ್ತು ಧರ್ಮಪುರಿ ಜಿಲ್ಲೆಗಳನ್ನು ಒಳಗೊಂಡಿತ್ತು. ನೊಳಂಬರ ಕೀರ್ತಿಯು ಉಚ್ಛ್ರಾಯ ಸ್ಥಿತಿಯಲ್ಲಿ ಅವರ ರಾಜ್ಯವು ಆಗ್ನೇಯದಲ್ಲಿ ತಮಿಳುನಾಡಿನ ಧರ್ಮಪುರಿಯವರೆಗೂ ನೈರುತ್ಯದಲ್ಲಿ ಮಂಡ್ಯ ಜಿಲ್ಲೆಯ ತಾಯಲೂರಿನವರೆಗೆ ವ್ಯಾಪಿಸಿತ್ತು.[72] ಗಂಗರ ಕೈಕೆಳಗೆ ತಮ್ಮ ಆಡಳಿತವನ್ನು ಪ್ರಾರಂಭಿಸಿದ ನೊಳಂಬರು ಕಾಲಕ್ರಮೇಣ ರಾಷ್ಟ್ರಕೂಟರು, ಕಲ್ಯಾಣಿ ಚಾಲುಕ್ಯರ ಮಾಂಡಲೀಕ ರಾಗಿಯೂ ಆಳ್ವಿಕೆ ನಡೆಸಿದರು. ತೆಲಗು ಚೋಳರು, ಪಲ್ಲವರು, ವೆಂಗಿಯ ಚಾಲುಕ್ಯರು ಮುಂತಾದ ಅರಸು ಮನೆತನಗಳ ಜೊತೆ ಯುದ್ಧಗಳನ್ನು ಮಾಡಿ ಅನೇಕ ಪ್ರದೇಶಗಳನ್ನು ವಶಪಡಿಸಿಕೊಂಡರು.[73]ನೊಳಂಬರಲ್ಲಿ ಮಂಗಳ, ಸಿಂಹಪೋತ, ಚಾರುಪೊನ್ನೇರ, ಒಂದನೆಯ ಪೊಳಲ್ಚೋರ, ಮಹೇಂದ್ರ, ಅಯ್ಯಪ್ಪದೇವ, ಬೀರನೊಳಂಬ ಅಣ್ಣಿಗ ಮುಂತಾದ ನೊಳಂಬ ರಾಜರು ಆಳ್ವಿಕೆ ನಡೆಸುತ್ತಿದ್ದರು.[74]ತುಮಕೂರು ಜಿಲ್ಲೆಯ ಮಧುಗಿರಿ ತಾಲೂಕಿನ ಶ್ರಾವಂಡನಹಳ್ಳಿಯಲ್ಲಿ ದೊರೆತಿರುವ ಕ್ರಿ.ಶ.8ನೇ ಶತಮಾನದ ನೊಳಂಬ ರಾಜ ಪೊನ್ನೇರನ ಬಗೆ ಉಲ್ಲೇಖವಿದೆ. [75]ತುಮಕೂರು ತಾಲೂಕಿನ ಹಿರೇಗುಂಡಗಲ್ಲು ಗ್ರಾಮದ 15ನೇ ವೀರಗಲ್ಲಿನಲ್ಲಿ ನೊಳಂಬರಾಜ ಅಣ್ಣಿಗನ ನಾಮಾಂಕಿತವಿದೆ.[76] ಶಾಸನದಲ್ಲಿ ಮದುಗಿರಿಯ ಚನ್ನರಾಯದುರ್ಗದ ಹೋಬಳಿ ಬರಕ ಗ್ರಾಮದ ಹಳೆಕೆರೆಯ ಏರಿಯ ಮೇಲೆ ಕ್ರಿ.ಶ.950ರ ಶಾಸನವೊಂದು ದೊರಕಿದ್ದು ನೊಳಂಬರಾಜ ದಿಲೀಪ ಅರಸನ ಆಡಳಿತದ ಬಗ್ಗೆ ತಿಳಿಸುತ್ತದೆ.[77]

**ಚೋಳರು**

ಕ್ರಿ.ಶ.9ನೇ ಶತಮಾನದ ಅಂತ್ಯಭಾಗದಲ್ಲಿ ಪಲ್ಲವ ಅರಸ ಅಪರಾಜಿತನನ್ನು ಸೋಲಿಸುವುದರ ಮೂಲಕ ಚೋಳ ಅರಸನಾದ ವಿಜಯಾಲಯ ಮತ್ತು ಒಂದನೇ ಆದಿತ್ಯರಿಬ್ಬರೂ ದಕ್ಷಿಣ ಭಾರತದಲ್ಲಿ ಚೋಳ ಮನೆತನ ಪ್ರಖ್ಯಾತವಾಗಲು ಕಾರಣರಾದರು. ಇದಕ್ಕೂ ಪೂರ್ವದಲ್ಲಿ ಅಂದರೆ ಕ್ರಿ.ಪೂ.2ನೇ ಶತಮಾನದಲ್ಲಿ ಉರೆಯೂರು ಅಥವಾ ಉರುಗಪುರದಲ್ಲಿ ಪ್ರಾಮುಖ್ಯತೆಯನ್ನು ಪಡೆದುಕೊಂಡು ನಂತರದಲ್ಲಿ ಪುಹಾರ್ ಅಥವಾ ಕಾವೇರಿ ಪಟ್ಟಣಂನ್ನು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದರು. ಇದಕ್ಕೆ ಪೂರಕವಾಗಿ ನಮಗೆ ಅಶೋಕನ ಶಾಸನಗಳಲ್ಲಿ ಚೋಳರು ಸ್ವತಂತ್ರ ಅಸ್ಥಿತ್ವವನ್ನು ಹೊಂದಿದ್ದ ಅಂಶ ತಿಳಿದುಬರುತ್ತದೆ. ಅದೇ ರೀತಿ ಶ್ರೀಲಂಕಾದ ವೃತ್ತಾಂತವಾದ ಮಹಾವಂಶ ಕೆಲವು ಚೋಳ ಅರಸರನ್ನು

ಉಲ್ಲೇಖಿಸುತ್ತದೆ. ಪೆರಿಪ್ಲಸ್ ಆಫ್ ಎರಿತ್ರಿಯನ್ ಸಿ, ಟಾಲಮಿಯ ಜಿಯೋಗ್ರಫಿ, ಮಹಾಭಾರತ ಹಾಗೂ ಮೆಗಾಸ್ತಾನಿಸನ್ ಇಂಡಿಕಾ ಚೋಳ ಅರಸರ ಮೇಲೆ ಬೆಳಕು ಚೆಲ್ಲುತ್ತದೆ.[78]

ತುಮಕೂರಿನ ಕುಣಿಗಲ್ ತಾಲೂಕಿನ ಕೊತ್ತಗೆರೆ ಗ್ರಾಮದ ಅಶ್ವತ್ಥಕಟ್ಟೆ ಬಳಿ ಇರುವ ಶಾಸನವು ಚೋಳರಿಗೆ ಸಂಬಂಧಿಸಿದ್ದು ವೀರಪಾಂಡ್ಯರಾಜನ ಉಲ್ಲೇಖವಿದೆ. ಇದು ತಮಿಳು ಲಿಪಿ ಮತ್ತು ತಮಿಳು ಭಾಷೆಯಲ್ಲಿ ಬರೆಯಲ್ಪಟ್ಟಿದೆ. ಈ ಅರಸನಿಗೆ ಕೋವ್-ಇ ರಾಜಕೇಸರಿ ಪನ್ಮರ್ ಅಂದರೆ ಕೋ-ರಾಕೇಸರಿವರ್ಮ ಎಂಬ ಬಿರುದು ಇದೆ. ಇವನು ವೀರಪಾಂಡ್ಯ ಶಾಲೈ ಮತ್ತು ಇಲಂಗೈ (ಸಿಲೋನ್) ಅರಸರ ತಲೆಯನ್ನು ತೆಗೆದುಕೊಂಡನೆಂದು ವರ್ಣಿಸಲಾಗಿದೆ ವಿಕ್ರಮ-ಶೋಳ-ಮಂಡಳದ ಕುಣಿಂಗಿಲ್ ನಾಡಿನಲ್ಲಿಯ ಕುಣಿಂಗಿಲ್ ಗ್ರಾಮದ ನಾಗರಿಕರು ರಾಜೇಂದ್ರ-ಶೋಳ-ಈಶ್ವರ-ಮುಡೈಯ ರಾಜಾಧಿರಾಜ-ವಿಡನಗರ್ ಎಂಬ ದೇವತೆಗೆ ಒಂದು ದತ್ತಿಯನ್ನು ಕೊಟ್ಟರು ಎಂಬ ಉಲ್ಲೇಖವಿದೆ.[79]

**ವಿಜಯನಗರ ಸಾಮ್ರಾಜ್ಯ**

ವಿಜಯನಗರ ಸಾಮ್ರಾಜ್ಯದ ಸ್ಥಾಪನೆ ದಕ್ಷಿಣ ಭಾರತದ ಅದರಲ್ಲೂ ಕರ್ನಾಟಕದ ಇತಿಹಾಸದಲ್ಲಿ ಅದ್ವಿತೀಯವಾದ ಘಟನೆ ಹೊಯ್ಸಳ ಸಾಮ್ರಾಜ್ಯದ ಅವನತಿಯ ತರುವಾಯ ಉಂಟಾಗಿದ್ದ ರಾಜಕೀಯದ ಅಂತ್ಯವು ವಿಜಯನಗರ ಸಾಮ್ರಾಜ್ಯದ ಸ್ಥಾಪನೆಯೊಂದಿಗೆ ಒಂದು ಹೊಸ ಅಧ್ಯಾಯವನ್ನು ಉಂಟುಮಾಡಿತು.

ಸಂಗಮನ ಮಕ್ಕಳಾದ ಹರಿಹರ, ಬುಕ್ಕ, ಕಂಪಣ, ಮಾರಪ್ಪ ಮತ್ತು ಮುದ್ದಪ್ಪ ಎಂಬ ಐದು ಜನ ಸಹೋದರರಿದ್ದರು. ಇವರಲ್ಲಿ ಹರಿಹರ ಮತ್ತು ಬುಕ್ಕ ಎಂಬ ಸಹೋದರರು ಪ್ರಮುಖರಾಗಿದ್ದಾರೆ.[80]ವಿಜಯನಗರ ಹರಿಹರನು ತನ್ನ ಮಗಳನ್ನು ಹೊಯ್ಸಳ ಅಧಿಕಾರಿ ಸೋಮಯ್ಯ ದಂಡನಾಯಕನ ಮಗ ಬಲ್ಲಪ್ಪ ದಂಡನಾಯಕನಿಗೆ ವಿವಾಹ ಮಾಡಿದ್ದನು. ಮುಮ್ಮಡಿ ಬಲ್ಲಾಳನ ಸೋದರ ಮಗಳು ಹರಿಹರನ ಅಳಿಯನಾಗಿದ್ದನು. ಸೋಮನಾಥಪುರ (ಟಿ.ನರಸೀಪುರ,ತಾ) ದ ದೇವಾಲಯವನ್ನು ನಿರ್ಮಿಸಿದ ಸೋಮಯ್ಯ ದಂಡನಾಯಕನು ಸೋಮಯ್ಯ ದಂಡನಾಯಕನ ಮೊಮ್ಮಗನೆಂದು ಹಲವಾರು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಸಂಗಮವಂಶ ಮತ್ತು ಹರಿಹರನು ಬೇಲೂರು ಕೇಶವ (ವಿಜಯ ನಾರಾಯಣ) ದೇವಾಲಯದೊಡನೆ ಹೊಂದಿದ್ದ ಸಂಬಂಧಗಳು ಹಾಗೂ ಹಂಪಿಯ ವಿರೂಪಾಕ್ಷ ದೇವಾಲಯದಲ್ಲಿ ಕಂಡುಬರುವ ಸಿಂಹ ಶಿಲ್ಪಗಳು ಮತ್ತು ಅವರು ಧರಿಸಿದ್ದ ಬಿರುದುಗಳಾದ ಭಾಷೆಗೆ ತಪ್ಪದ ರಾಯರಗಂಡ ಹಾಗೂ ಮೂರು ರಾಯರಗಂಡ ಇವುಗಳು ಸಂಸ್ಕೃತ

ಶಾಸನಗಳಲ್ಲಿ ಕಂಡುಬರುವುದರಿಂದ ವಿಜಯನಗರದ ಅರಸರು ಮೂಲತಃ ತೆಲುಗು ದೇಶದವರಲ್ಲದೇ ಕನ್ನಡ ಮೂಲದವರೆಂಬ ವಾದವು ಪುಷ್ಟಿ ಪಡಯುತ್ತದೆ. ಮುಮ್ಮಡಿ ಬಲ್ಲಾಳನು ತನ್ನ ಸಾಮ್ರಾಜ್ಯದ ಉತ್ತರ ಭಾಗದ ರಾಜಧಾನಿಯನ್ನು ವಿರೂಪಾಕ್ಷ ಹೊಸ ಪಟ್ಟಣ ಎಂದು ಕರೆದಿದ್ದು, ಇದು ಹಂಪಿ ಇರಬೇಕೆಂದು ವ್ಯಕ್ತವಾಗುತ್ತದೆ. ಈ ಹೊಸ ಪಟ್ಟಣದ ಆಡಳತವನ್ನು ನಿರ್ವಹಿಸಲು ಬಲ್ಲಾಳನು ಹರಿಹರನನ್ನು ನೇಮಿಸಿದ್ದನೆಂದು ಅಭಿಪ್ರಾಯವಿದೆ. ವಿಜಯನಗರ ಸಾಮ್ರಾಜ್ಯದ ಸ್ಥಾಪನೆ ಸಂಗಮ ವಂಶದ ಹಕ್ಕಬುಕ್ಕರಿಂದ ಕ್ರಿ.ಶ.1336ರಲ್ಲಿ ಸ್ಥಾಪನೆಯಾಯಿತು.[81] ಇದು ಸಂಗಮ, ಸಾಳ್ವ, ತುಳುವ ಮತ್ತು ಅರವೀಡು ಎಂಬ ನಾಲ್ಕು ಮನೆತನದವರು ಆಳ್ವಿಕೆ ಮಾಡಿರುವುದು ಕಾಣಬಹುದು. ಈ ಸಾಮ್ರಾಜ್ಯದ ಸ್ಥಾಪನೆಗೆ ಸಂಬಂಧಿಸಿದಂತೆ ವಿದ್ಯಾರಣ್ಯರ ಪಾತ್ರವು ಸ್ಪಷ್ಟತೆಯನ್ನು ಹೊಂದಿಲ್ಲ. ಹೀಗಾಗಿ ಶ್ರೀ ವಿದ್ಯಾರಣ್ಯರು ಶೃಂಗೇರಿ ಮಠದ ಪೀಠಾಧಿಪತಿಗಳಾಗಿದ್ದು ವಿಜಯನಗರದ ಸಾಮ್ರಾಜ್ಯದ ಸ್ಥಾಪನೆಗೆ ನೆರವಾದರೆಂದು ಹಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಆದರ ಈ ವಿಷಯವನ್ನು ಸಮರ್ಥಿಸಲು ನಿಖರವಾದ ಯಾವುದೇ ದಾಖಲೆಗಳಲ್ಲ. ಆದರೆ 1346ರಲ್ಲಿ ಸಂಗಮ ಸಹೋದರರು ಶೃಂಗೇರಿಗೆ ಭೇಟನೀಡಿ ದಾನಧರ್ಮ ನೀಡಿದರು. ವಿಜಯನಗರ ಸಾಮ್ರಾಜ್ಯದ ಸ್ಥಾಪನೆಯಾದ ಸುಮಾರು ಎರಡು ದಶಕಗಳ ಅನಂತರ ಕಾಶಿಯಲ್ಲಿದ್ದ ವಿದ್ಯಾರಣ್ಯರು ಶೃಂಗೇರಿಗೆ ಬಂದರು. ಕ್ರಿ.ಶ.1375ರ ನಂತಗರ ಶೃಂಗೇರಿ ಪೀಠವನ್ನು ಅಲಂಕರಿಸಿದರೆಂದು ಅಲ್ಲಿನ ಶಾಸನಗಳಂದ ತಿಳದುಬರುತ್ತದೆ. ಕ್ರಿ.ಶ.1356ರ ಶಾಸನದಲ್ಲಿ ಬುಕ್ಕನು ಆಳತಕ್ಕೆ ಬಂದ ಹತ್ತು ವರ್ಷಗಳ ತರುವಾಯ ಶೃಂಗೇರಿಗೆ ಭೇಟನೀಡಿ ಪೀಠಾಧಿಪತಿಗಳ ಆಶೀರ್ವಾದವನ್ನು ಪಡೆದುಕೊಂಡನೆಂದು ಉಲ್ಲೇಖಸಲಾಗಿದೆ.[82]ಆದುದರಿಂದ ಕಾಲಘಟ್ಟದಲ್ಲಿ ವಿದ್ಯಾರಣ್ಯರಿಗಿಂತ ಹಿಂದೆ ವಿದ್ಯಾತೀರ್ಥರು ಇದ್ದರೆಂದು ತಿಳಯುತ್ತದೆ. ಕ್ರಿ.ಶ.1346ರಲ್ಲಿ ಒಂದನೇ ಹರಿಹರನ ಕಾಲದಲ್ಲಿ ಭಾರತೀತೀರ್ಥ ಶ್ರೀ ಪಾದರು ಕ್ರಿ.ಶ.1356ರಲ್ಲಿ ಒಂದನೇ ಬುಕ್ಕನ ಆಳ್ವಿಕೆಯಲ್ಲಿ ವಿದ್ಯಾತೀರ್ಥರು ಕ್ರಿ.ಶ.1384ರಲ್ಲಿ ಎರಡನೇ ಹರಿಹರನ ಕಾಲದಲ್ಲಿ ವಿದ್ಯಾರಣ್ಯ ಶ್ರೀಪಾದರು ಅನಂತರದಲ್ಲಿ ಒಂದನೇ ನರಸಿಂಹ ಭಾರತಿ ತೀರ್ಥರು ಶೃಂಗೇರಿ ಪೀಠದ ಪೀಠಾಧೀಪತಿಗಳಾಗಿ ಬಂದರೆಂದು ಹೇಳಬಹುದು. ಈ ವಿಷಯಕ್ಕೆ ಸಂಬಂಧಿಸಿದಂತೆ ಡಾ.ಬಿ.ಎ.ಸಾಲೆತೊರೆಯವರು ವಿದ್ಯಾರಣ್ಯರು ವಿಜಯನಗರದ ಸಾಮ್ರಾಜ್ಯದ ಸ್ಥಾಪನೆಗೆ ಕಾರಣರಾದರೆಂಬ ಅಂಶವು ಚಾರಿತ್ರಿಕವಲ್ಲದ್ದೆಂದು ಹಾಗೂ ಈ ಸಂತತಿಯು ಕೇವಲ ಪುರಾಣ ಕಥೆಯನ್ನು ಆಧರಿಸಿರುವುದೆಂದು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. [83]

**ಒಂದನೇ ಹರಿಹರ (ಕ್ರಿ.ಶ.1336-1356)**

ಸಂಗಮ ವಂಶದ ದೊರೆಗಳಲ್ಲಿ ಒಂದನೇ ಹರಿಹರ ಕ್ರಿ.ಶ.1336ರಲ್ಲಿ ಆಳ್ವಿಕೆಯನ್ನು ನಡೆಸಿದ್ದು ಇವನು ತನ್ನ ಸಹೋದರರಾದ ಬುಕ್ಕ, ಕಂಪಣ, ಮಾರಪ್ಪ ಮತ್ತು ಮುದ್ದಪ್ಪರ ನೆರವಿನಿಂದ ವಿಜಯನಗರ ಸಾಮ್ರಾಜ್ಯ ಸ್ಥಾಪಿಸಿದನು. ಈತನಿಗೆ ಸಮುದ್ರಾಧಿಪತಿ, ಅರಿರಾಯ ವಿಭಾಡ, ಭಾಷೆಗೆ ತಪ್ಪದ ರಾಯರಗಂಡ ಎಂಬ ಬಿರುದುಗಳಿದ್ದವು.

**ಒಂದನೇ ಬುಕ್ಕ (ಕ್ರಿ.ಶ.1356-1377)**

ಒಂದನೇ ಹರಿಹರನ ತರುವಾಯ ಒಂದನೇ ಬುಕ್ಕರಾಯನು ಅಧಿಕಾರಕ್ಕೆ ಬಂದನು. ಈತನು ಕ್ರಿ.ಶ.1356 ರಿಂದ 1377ರವರೆಗೆ ಆಳ್ವಿಕೆಯನ್ನು ನಡೆಸಿದನು. ಹರಿಹರನ ಕಾಲದಲ್ಲಿಯೇ ಈತನು ಯುವರಾಜನಾಗಿ ರಾಜ್ಯವಿಸ್ತಾರ ಹಾಗೂ ಆಡಳಿತದಲ್ಲಿ ಭಾಗವಹಿಸುತ್ತಿದ್ದನು.

**ಎರಡನೇ ಹರಿಹರ (ಕ್ರಿ.ಶ.1377-1404)**

ಒಂದನೇ ಬುಕ್ಕರಾಯನ ತರುವಾಯ ಎರಡನೇ ಹರಿಹರರಾಯನು ಅಧಿಕಾರಕ್ಕೆ ಬಂದನು.ಈತನು ಕ್ರಿ.ಶ.1377 ರಿಂದ 1404ರವರೆಗೆ ಸಾಮ್ರಾಜ್ಯವನ್ನು ಆಳಿದನು. ಈತ ತನ್ನ ತಂದೆಯ ಅಧಿಕಾರದ ಅವಧಿಯಲ್ಲೇ ಯುವರಾಜನಾಗಿದ್ದನು. ಆದ್ದರಿಂದ ಈತನು ಆಳ್ವಿಕೆಯಲ್ಲಿ ಅಪಾರ ಅನುಭವವನ್ನು ಹೊಂದಿದ್ದು ವಿಜಯನಗರ ಅರಸರಲ್ಲೇ ಚಕ್ರವರ್ತಿ ಎಂಬ ಬಿರುದು ಪಡೆದಿದ್ದನು.ನಂತರ ತನ್ನ ಸ್ವಂತ ಮಕ್ಕಳಾದ ವಿರೂಪಾಕ್ಷ ದೇವರಾಯ ಮತ್ತು ಇಮ್ಮಡಿ ಬುಕ್ಕರಾಯನನ್ನು ಪ್ರಾಂತ್ಯಾಧಿಕಾರಿಗಳನ್ನಾಗಿ ನೇಮಿಸುವುದರ ಮೂಲಕ ಮುಮ್ಮಡಿ ಹರಿಹರನು ರಾಜ್ಯದ ಆಡಳಿತದಲ್ಲಿ ಪ್ರಮುಖ ಬದಲಾವಣೆಗಳನ್ನು ಜಾರಿಗೆ ತಂದನು. ರಾಜನೀತಿಯಲ್ಲೂ ಆಧ್ಯಾತ್ಮಿಕ ಜೀವನದಲ್ಲೂ ಈತನಿಗೆ ಕಾಳಮುಖ ಪಂಥದ ಗುರುಗಳಾಗಿದ್ದ ಕ್ರಿಯಾಶಕ್ತಿ ವಿದ್ಯಾರಣ್ಯರು ಮಾರ್ಗದರ್ಶಕರಾಗಿದ್ದರು. ಇವನ ನಂತರ ಎರಡನೇ ಬುಕ್ಕರಾಯನು ಕ್ರಿ.ಶ.1405 ರಿಂದ 1406ರವರೆಗೆ ಆಳ್ವಿಕೆ ನಡೆಸಿದನು. ಈತನ ತರುವಾಯ ಮೂವರು ಸಹೋದರರಾದ ಇಮ್ಮಡಿ ಬುಕ್ಕ ಇಮ್ಮಡಿ ವಿರೂಪಾಕ್ಷ ಮತ್ತು ಒಂದನೇ ದೇವರಾಯರಲ್ಲಿ ಅಧಿಕಾರಕ್ಕಾಗಿ ಆಂತರಿಕ ಕಲಹವೇರ್ಪಟ್ಟಿತ್ತು. ಇದು ಸುಮಾರು ಎರಡು ವರ್ಷಗಳ ಕಾಲ ಮುಂದುವರಿದು ಕೊನೆಗೆ ಮೊದಲನೆ ದೇವರಾಯನು ಕ್ರಿ.ಶ.1406ರಲ್ಲಿ ಅಧಿಕಾರಕ್ಕೆ ಬಂದನು. ಕ್ರಿ.ಶ.1422ರವರೆಗೆ ಆಳ್ವಿಕೆ ಮಾಡಿದನು. ಈತನ ನಂತರ ವೀರವಿಜಯರಾಯನು ಎರಡು ವರ್ಷಗಳ ಕಾಲ ಅಧಿಕಾರ ನಡೆಸಿದನು. (1422 ರಿಂದ 1424) ಈತನ ತರುವಾಯ ಎರಡನೇ

ದೇವರಾಯನು ಅಧಿಕಾರಕ್ಕೆ ಬಂದನು. (ಕ್ರಿ.ಶ.1424-1446) ಈತನ್ನು ಪ್ರೌಢದೇವರಾಯ, ಅಭಿನವವೀರ, ದೇವರಾಯ ಮತ್ತು ಪ್ರತಾಪದೇವರಾಯ ಎಂಬ ನಾಮಾಂಕಿತದಿಂದಲೂ ಕರೆಯಲಾಗುತ್ತಿತು.

ಈತನು ಸರ್ವಧರ್ಮ ಸಹಿಷ್ಣುವಾಗಿದ್ದು ಶೈವ, ವೈಷ್ಣವ ಮತ್ತು ಇನ್ನಿತರ ಧರ್ಮಗಳಗೆ ಮನ್ನಣೆ ನೀಡಿದನು. ತನ್ನ ರಾಜಧಾನಿಯಲ್ಲಿ ಮುಸ್ಲಿಂರಿಗಾಗಿ ಒಂದು ಮಸೀದಿಯನ್ನು ಕಟ್ಟಿಸಿ, ವಿಜಯನಗರದಲ್ಲಿ ಅನೇಕ ಭವ್ಯವಾದ ಕಟ್ಟಡಗಳನ್ನು ಕಟ್ಟಿಸಿದನು. ಅವುಗಳಲ್ಲಿ ಮುಖ್ಯವಾದವುಗಳು ಎಂದರೆ ಹಜಾರ ರಾಮಸ್ವಾಮಿಯ ದೇವಾಲಯ ಒಂದು ಪ್ರಮುಖ ವಾಸ್ತು ರಚನೆ ಎಂದರೆ ತಪ್ಪಾಗಲಾರದು. ಇಮ್ಮಡಿ ದೇವರಾಯನ ಮರಣಾನಂತರ ಆತನ ಮಗನಾದ ಮಲ್ಲಿಕಾರ್ಜುನನು ಅಧಿಕಾರಕ್ಕೆ ಬಂದನು. (1446-65) ಈತನು ಅಸಮರ್ಥನು, ದುರ್ಬಲನು ಆಗಿದ್ದುದರಿಂದ ವಿಜಯನಗರ ಸಾಮ್ರಾಜ್ಯ ಕ್ಷೀಣಿಸಿತು.ತುಳುವ ವಂಶದ ನರಸನಾಯಕನ ಮಗ ವೀರನರಸಿಂಹನು ಕ್ರಿ.ಶ.1505ರಿಂದ ಕ್ರಿ.ಶ.1509ರವರೆಗೆ ಆಳ್ವಕೆ ಮಾಡಿದನು.[84]ಇವನ ಆಳ್ವಿಕೆಯೊಡನೆ ತುಳುವ ಮನೆತನದ ಆಡಳತವು ಪ್ರಾರಂಭವಾಯಿತು. ಈತನು ಬಹುಮನಿ ಸುಲ್ತಾನರನ್ನು ಎದುರಿಸಲು ಹಾಗೂ ವಿಜಯನಗರದ ಸೇನೆಯ ಪ್ರಾಬಲ್ಯತೆಯನ್ನು ಹೆಚ್ಚಿಸಿಕೊಳ್ಳಲು ಪೋರ್ಚುಗೀಸರೊಡನೆ ಸ್ನೇಹದಿಂದ ಇದ್ದನು ಹಾಗೂ ಇವರಿಂದ ಕುದುರೆಗಳನ್ನು ಖರೀದಿಸಿದನು ಕೊನೆಗೆ ಕ್ರಿ.ಶ.1509ರಲ್ಲಿ ಮರಣ ಹೊಂದಿದನು. ವೀರಸಿಂಹನ ಮರಣಾನಂತರ ಅವನ ಮಲತಾಯಿಯಾದ ನಾಗಲದೇವಿಯ ಮಗನಾದ ಕೃಷ್ಣದೇವರಾಯ ಅಧಿಕಾರಕ್ಕೆ ಬಂದನು

**ಶ್ರೀಕೃಷ್ಣದೇವರಾಯ (ಕ್ರಿ.ಶ.1509-1529)**

ಶ್ರೀಕೃಷ್ಣದೇವರಾಯನು ವಿಜಯನಗರ ಅರಸರಲ್ಲಿ ಅತಿ ಶ್ರೇಷ್ಠ ಆಡಳತಗಾರ, ಅಪ್ರತೀಮ ವೀರ, ಚತುರ ರಾಜನೀತಿಜ್ಞ ಹಾಗೂ ಕಲೆ ಸಾಹಿತ್ಯ ಧರ್ಮಗಳ ಆರಾಧಕನಾಗಿದ್ದು ಈತನ ಕಾಲವು ದಕ್ಷಿಣ ಭಾರತದ ಇತಿಹಾಸದಲ್ಲಿ ಅಪೂರ್ವ ಕಾಲವಾಗಿದ್ದು ಇದನ್ನು ದಕ್ಷಿಣ ಭಾರತದ ಸಾಂಸ್ಕೃತಿಕ ಸಮ್ಮಿಲಕಾಲ ಎಂದು ಕರೆಯಲಾಯಿತು.[85]

ಈತನು ತುಳುವ ವಂಶದಲ್ಲೇ ಬಹಳ ಪ್ರಸಿದ್ಧಿಯಾಗಿದ್ದನು. ಕೃಷ್ಣದೇವರಾಯನ ಮಹಾಮಂತ್ರಿಯಾದ ತಿಮ್ಮರಸುವಿನ ನೆರವಿನೊಂದಿಗೆ ಕ್ರಿ.ಶ.1509ರ ಕೃಷ್ಣ ಜನ್ಮಾಷ್ಟಮಿಯಂದು ಸಿಂಹಾಸನ್ನೇರಿದನು. ರಾಜತಂತ್ರದ ಪ್ರತಿಭೆ, ಆಡಳತ ದಕ್ಷತೆ ಹಾಗೂ ಸಮರ್ಥ ಸೇನೆಯ ಬೆಳವಣಿಗೆಗೆ ಶ್ರಮಿಸಿದನು. ಕಲಾರಾಧಕ, ಪ್ರಜಾಪಾಲಕ, ಸಾಹಿತ್ಯಸಕ್ತಕ, ಕವಿ ವಿದ್ವಾಂಸ ಬಹು

ವೈವಿಧ್ಯಮಯ ವ್ಯಕ್ತಿತ್ವ ಹೊಂದಿದ್ದ ಈತನು ಸೈನಿಕ ದಂಡನಾಯಕನಾಗಿದ್ದು ಉತ್ತಮ ಆಡಳಿತಗಾರನಾಗಿದ್ದನು ಹಾಗೂ ಸ್ವತಃ ಸಾಹಿತಿಯಾಗಿದ್ದು ಅಮುಕ್ತ ಮೌಲ್ಯದ ಕೃತಿಯನ್ನು ರಚಿಸಿದ್ದಾನೆ. ಈತನ ಆಡಳಿತದಲ್ಲಿ ನಗರಗಳು, ಕಾಲುವೆಗಳು, ಕೆರೆಗಳು, ಅಣೆಕಟ್ಟುಗಳು, ದೇವಾಲಯಗಳು ಮತ್ತು ಜನೋಪಯುಕ್ತ ಲೌಕಿಕ ಮತ್ತು ಧಾರ್ಮಿಕ ಕಟ್ಟಡಗಳ ರಚನೆಗೆ ಸಂಬಂಧಿಸಿದ ಚಟುವಟಿಕೆಗಳು ಈತನ ಕಾಲದಲ್ಲಿ ಪರಾಕಾಷ್ಠತೆಯನ್ನು ಕಂಡವು. ಜೊತೆಗೆ ದಕ್ಷ ಆಡಳಿತಗಾರನಾಗಿ ಕನ್ನಡರಾಜ್ಯ ರಮಾರಮಣ ಯವನರಾಜ್ಯ ಪ್ರತಿಷ್ಠಾಪನಾಚಾರ್ಯ, ಆಂಧ್ರಭೋಜ ಎಂಬ ಬಿರುದುಗಳನ್ನು ಪಡೆದನು ಹಾಗೂ ತನ್ನ ಆಸ್ಥಾನದಲ್ಲಿ ಬಹುಭಾಷಾ ಕವಿ ಪಂಡಿತರಿಗೆ ಆಶ್ರಯ ನೀಡಿದ್ದನು. ಕನ್ನಡ, ತೆಲುಗು, ತಮಿಳು ಸಂಸ್ಕೃತಕ್ಕೆ ಹೆಚ್ಚಿನ ಪ್ರಾಶಸ್ತ್ಯ ನೀಡಿದ್ದನು. ವಿದ್ವಾಂಸರುಗಳು, ಧರ್ಮಗುರುಗಳು, ತತ್ವಜ್ಞಾನಿಗಳು, ಸನ್ಯಾಸಿಗಳಿಗೂ ಆಶ್ರಯ ನೀಡಿದನು. ಕೃಷ್ಣದೇವರಾಯನು ಉದಯಗಿರಿ ಕೋಟೆಯನ್ನು ಜಯಿಸಿದ ತರುವಾಯ ರಾಜಧಾನಿಯಲ್ಲಿ ಕೃಷ್ಣಸ್ವಾಮಿ ದೇವಾಲಯವನ್ನು ಕಟ್ಟಿಸಿ ಈ ಕೋಟೆಯಿಂದ ವಿಜಯದ ಸಂಕೇತವಾಗಿ ತಂದ ಕೃಷ್ಣ ವಿಗ್ರಹವನ್ನು ಅದರಲ್ಲಿ ಪ್ರತಿಷ್ಠಾಪಿಸಿದನು. ಹಜಾರ ರಾಮಸ್ವಾಮಿ ಮತ್ತು ವಿಠಲಸ್ವಾಮಿ ದೇವಾಲಯಗಳು ಈತನ ಕಾಲದಲ್ಲಿ ನಿರ್ಮಿಸಲಾದವುಗಳಾಗಿವೆ. ವಿಜಯ ವಿಠಲಸ್ವಾಮಿ ದೇವಾಲಯವು ವೈಜ್ಞಾನಿಕ ನೈಪುಣ್ಯತೆಯ ಉತ್ತಮ ಧ್ಯೋತಕವಾಗಿ ಕರ್ನಾಟಕ ಸಂಗೀತಕ್ಕೆ ಸಮರ್ಪಿಸಲ್ಪಟ್ಟಿರುವ ವಾಸ್ತು ರಚನೆಯಾಗಿದೆ. ಇದರ ತಳವಿನ್ಯಾಸ ಹಾಗೂ ಕಂಬದೊಳಗಿನ ಕಿರುಕಂಬಗಳು ವಿಶಿಷ್ಟ ರಚನೆಯಾಗಿದ್ದು ಸಂಗೀತದ ಸಪ್ತಸ್ವರಗಳನ್ನು ಪ್ರತಿಧ್ವನಿಸುತ್ತದೆ ಎಂದು ಹೇಳಬಹುದು.[86]

**ಅಚ್ಯುತರಾಯ (1529–1542)**

ಕೃಷ್ಣದೇವರಾಯನ ನಂತರ ಆತನ ಮಲ ಸೋದರನಾದ ಅಚ್ಯುತರಾಯನು ಕ್ರಿ.ಶ.1529ರಲ್ಲಿ ಸಿಂಹಾಸನವನ್ನೇರಿದನು. ಈತನಿಗೆ ತಿರುಪತಿಯಲ್ಲಿ ಕಿರೀಟಧಾರಣೆಯನ್ನು ನೆರವೇರಿಸಿಕೊಂಡು ಅಧಿಕಾರ ವಹಿಸಿಕೊಂಡು ಪ್ರಬಲನಾಗಿ ಆಳ್ವಿಕೆ ನಡೆಸಿದನು.[87] ಇವನ ಆಳ್ವಿಕೆಯ ಉತ್ತರಾರ್ಧದಲ್ಲಿ ಅಧಿಕಾರ ಕಲಹಗಳು ತಲೆದೋರಿದ್ದವು. ಈತನು ಕ್ರಿ.ಶ.1537ರಲ್ಲಿ ಸಾವನ್ನಪಿದಾಗ ಮತ್ತೊಮ್ಮೆ ಅಧಿಕಾರಕ್ಕಾಗಿ ಕಚ್ಚಾಟಗಳು ಆರಂಭವಾದವು. ಅಚ್ಯುತರಾಯನ ಮಗನಾದ ವೆಂಕಟನು ಚಿಕ್ಕ ವಯಸ್ಸಿನವನಾಗಿದ್ದನು. ಈತ ಸಿಂಹಾಸನಕ್ಕೆ ಬಂದ ಸನಿಹದಲ್ಲೇ ಪಿತೂರಿಯಿಂದ ಕೊಲೆಯಾದನು. ಅಂದಿನ ರಾಜಮಾತೆಯು ತನ್ನ ಸೋದರನ ಉದ್ದೇಶಗಳನ್ನು ಸಂಶಯಿಸಿ ವಿಜಾಪುರದ ಆದಿಲ್‌ಷಾನನ್ನು ಮಧ್ಯ ಪ್ರವೇಶಿಸುವಂತೆ ಯಾಚಿಸಿದಳು. ಅಳಿಯ ರಾಮರಾಯನು ಸದಾಶಿವನ ಪಕ್ಷವನ್ನು ಎತ್ತಿ ಹಿಡಿದು ಆತನನ್ನು ಗುತ್ತಿಯ ಸೆರೆಮನೆಯಿಂದ

ಮುಕ್ತಗೊಳಿಸಿ ತಾನೂ ಆದಿಲ್‌ಷಾನ ನೆರವನ್ನು ಕೋರಿದನು. ಈತನ್ಮಧ್ಯೆ ತಿರುಮಲನು ಯುವರಾಜನಾಗಿದ್ದ ವೆಂಕಟನನ್ನು ಕೊಂದನು.ಇದರ ಪರಿಣಾಮವಾಗಿ ನಡೆದ ಕದನದಲ್ಲಿ ತಿರುಮಲನು ಯುದ್ಧಭೂಮಿಯಲ್ಲಿಯೇ ಕೊಲ್ಲಲ್ಪಟ್ಟನು. ಹೀಗೆ ಸದಾಶಿವರಾಯನ ಹಾದಿಯು ಸುಗಮವಾಗಿ ಕ್ರಿ.ಶ.1542ರಲ್ಲಿ ಪಟ್ಟಕ್ಕೆ ಬಂದನು. ಕ್ರಿ.ಶ.1543ರಿಂದ 1572ರವರೆಗೆ ನಾಮಾಂಕಿತ ರಾಜನಾಗಿದ್ದನು. ಆದರೆ ಸದಾಶಿವರಾಯನನ್ನು ಸಂಪೂರ್ಣವಾಗಿ ಬಂಧನದಲ್ಲಿರಿಸಿ ಅಳಿಯ ರಾಮರಾಯನೇ ರಾಜ್ಯಭಾರ ಮಾಡಿದನು.[88] ನಂತರ ಅಚ್ಯುತರಾಯ ಮತ್ತು ಸದಾಶಿವರಾಯ ಅಧಿಕಾರಕ್ಕೆ ಬಂದ ಮೇಲೆ ಉಂಟಾದ ಗೊಂದಲಮಯ ಪರಿಸ್ಥಿತಿಯನ್ನು ಉಪಯೋಗಿಸಿ ಕೊಂಡು ಕ್ರಿ.ಶ.1543ರಲ್ಲಿ ಪೋರ್ಚುಗೀಸರ ಅಧಿಕಾರಿಯಾಗಿದ್ದ ಮಾರ್ಟಿನ್ ಆಲ್‌ಫನ್ಸೊ ಡಿಸೌಜನು ಕಾಂಚಿ ದೇವಾಲಯವನ್ನು ಕೊಳ್ಳೆ ಹೊಡೆಯಲು ಪ್ರಯತ್ನಿಸಿದನು. ಆಗ ರಾಮರಾಯನು ಬಹಮನಿ ಸುಲ್ತಾನರು ಹಾಗೂ ಇತರೆ ಮಹಮದೀಯರ ಬಗ್ಗೆ ಅನುಸರಿಸಿದ ಧೋರಣೆ ಹೆಚ್ಚು ಗಮನ ಸೆಳೆಯುವಂತ ಅಹಮದ್ ನಗರದ ನಿಜಾಮ್‌ಷಾನು ವಿಜಾಪುರದ ಆದಿಲ್ ಷಾನು ಈ ಘರ್ಷಣೆಯಲ್ಲಿ ಪ್ರಮುಖಪಾತ್ರ ವಹಿಸಿದುದುದೇ ಅಲ್ಲದೇ ಬಿದರೆಯ ಬರೀದ್ ಷಾ ಮತ್ತು ಗೋಲ್ಕೊಂಡಾದ ಕುತುಬ್ ಷಾಯಿ ನೆರವು ನೀಡಿದರು. ಅಂತಿಮವಾಗಿ ಈ ಐದು ಸುಲ್ತಾನರು ರಾಮರಾಯನ ವಿರುದ್ಧ ಗೋಪ್ಯವಾಗಿ ಒಂದು ಸೈನಿಕ ಒಕ್ಕೂಟವನ್ನು ರಚಿಸಿಕೊಂಡು ಅತಿಹೆಚ್ಚು ಸಂಖ್ಯೆಯ ಸೈನ್ಯವನ್ನು ಕೂಡಿಸಿಕೊಂಡು ವಿಜಯನಗರದ ವಿರುದ್ಧ ಕ್ರಿ.ಶ.1564ರ ಡಿಸೆಂಬರ್ 25ರಂದು ವಿಜಾಪುರದಿಂದ ದಂಡೆತ್ತಿ ಬಂದರು. ರಾಮರಾಯನು ರಾಯಚೂರು ಮತ್ತು ಮುದ್ಗಲ್ಲುಗಳನ್ನು ಹಿಂದಿರುಗಿಸಲು ನಿರಾಕರಿಸಿದ್ದುದು ಯುದ್ಧಕ್ಕೆ ತತ್‌ಕ್ಷಣದ ಕಾರಣವಾಗಿ ಪರಿಣಿಮಿಸಲ್ಪಟ್ಟಿತು. ಸೂಕ್ಷ್ಮಮತಿಯಾದ ರಾಮರಾಯನು ಇಂತಹ ಒಂದು ಚಲನೆಯನ್ನು ನಿರೀಕ್ಷಿಸಿದ್ದು ಯುದ್ಧಕ್ಕೆ ಹತೋಟಿಯಲ್ಲಿದ್ದು ಕೊಳ್ಳಬಹುದಾದ ಪರಮಾವಧಿ ಸಂಖ್ಯೆಯ ಸೈನ್ಯವನ್ನು ಜಮಾಯಿಸಿದ್ದನು. ವಿದೇಶಿ ಇತಿಹಾಸಕಾರ ಫೆರಿಸ್ತಾನ ಪ್ರಕಾರ ವಿಜಯನಗರದ ಸೈನ್ಯ 70,000 ಅಶ್ವಗಳು, 90,000 ಕಾಲಾಳುಗಳು ಮತ್ತು 2000 ಆನೆಗಳ ಬಲವನ್ನು ಹೊಂದಿದ್ದರೆ ಹುಸೇನ್ ನಿಜಾಮ್ ಷಾ 600 ಫಿರಂಗಿ ಗಾಡಿಗಳನ್ನು ಒಟ್ಟುಗೂಡಿಸಿದನು.

ಒಕ್ಕೂಟದ ಸೈನ್ಯವು 50,000 ಕುದುರೆಗಳ ಮತ್ತು 30,000 ಕಾಲಾಳುಗಳ ಬಲವುಳ್ಳದಾಗಿತ್ತೆಂದು ಪೋರ್ಚುಗೀಸ್ ಆಧಾರಗಳು ಸೂಚಿಸುತ್ತವೆ. ಈ ಕದನವು ರಕ್ಕಸಗಿ ಮತ್ತು ತಂಗಡಿಗಿ ಪ್ರದೇಶದಲ್ಲಿ ನಡೆಯಿತು. ಇದನ್ನು ತಾಳಿಕೋಟೆಯ ಕದನವೆಂದು ಕರೆಯಲಾಗಿತ್ತು. ಮಹಮ್ಮದೀಯ ಮಿತ್ರಕೂಟದ ಅಶ್ವ ಸೈನ್ಯದ ಆಘಾತ ಮತ್ತು ಫಿರಂಗಿಗಳ ಜ್ವಾಲೆ ಅಪಾರ ಧ್ವಂಸವನ್ನೆಸಗಿತು. ಇದರಿಂದಾಗಿ ವಿಜಯನಗರದ ಸೈನಿಕರಲ್ಲಿ ಗೊಂದಲ

ಉಂಟಾಯಿತು. ಆ ಯುದ್ಧದಲ್ಲಿ ರಾಮರಾಯನು ಸೆರೆಯಾದನು. ನಿಜಾಂಷಾನು ರಾಮರಾಯನ ಶಿರಚ್ಛೇಧನ ಮಾಡಿ ಅದನ್ನು ಭರ್ಜಿಯ ತುದಿಗೆ ಸಿಕ್ಕಿಸಿ ಹಿಂದೂ ಸೈನ್ಯದಲ್ಲಿ ಭಯವನ್ನುಂಟು ಮಾಡಿದನು.[89] ವಿಜಯನಗರದ ಸೈನ್ಯವು ಚೆಲ್ಲಾಪಿಲ್ಲಿಯಾಗಿ ಓಡಿ ಹೋಯಿತು ನಂತರ ಸುಲ್ತಾನರು ಜಯಗಳಿಸಿದರು. ಈ ಯುದ್ಧವು ಇತಿಹಾಸದ ಗತಿಯನ್ನೇ ಬದಲಾಯಿಸಿದ ಕದನಗಳಲ್ಲಿ ಒಂದಾಗಿ ಪರಿಣಮಿಸಿತು. ತಾಳಿಕೋಟೆಯ ಯುದ್ಧದ ತರುವಾಯ ರಾಮರಾಯನ ಸೋದರನಾಧ ತಿರುಮಲನು ರಾಜಧಾನಿಗೆ ಹಿಂದಿರುಗಿ ಅರಮನೆಯ ಬಂಗಾರ, ರತ್ನಾಭರಣ ಗಳನ್ನು, ರತ್ನಖಚಿತ ಸಿಂಹಾಸನ್ನೊಳಗೊಂಡಂತೆ ಎಲ್ಲಾ ಭಂಡಾರವನ್ನು 500 ಆನೆಗಳ ಮೇಲೆ ಹೇರಿಕೊಂಡು ಚಂದ್ರಗಿರಿಗೆ ಹೋದನು.

ವಿಜಯನಗರದ ರಾಜಧಾನಿಯಾದ ಹಂಪಿಯನ್ನು ಮಹಮ್ಮದೀಯರು ಸುಮಾರು 6 ತಿಂಗಳ ಪರ್ಯಂತ ದಾಳಿಮಾಡಿ ನಾಶ ಮಾಡಿದವು. ವಿಜಯನಗರದ ಕೊನೆಯ ಆಡಳಿತ ವಂಶವಾದ ಅರವೀಡು ವಂಶವು ಕ್ರಿ.ಶ.1565ರ ತರುವಾಯ ಪೆನುಗೊಂಡೆ ಪ್ರದೇಶಕ್ಕೆ ಸೀಮಿತವಾಗಿ ದುರ್ಬಲತೆಯಿಂದ ಮುಂದುವರೆಯಿತು. ಮೂರನೇ ರಂಗರಾಜಯ್ಯ ದೇವನು ವಿಜಯನಗರದ ಕೊನೆಯ ರಾಜನಾಗಿದ್ದು ಈತನು ಗೋಪಾಲ ರಾಚಯ್ಯನ ಮಗನೆಂದು ರಂಗರಾಜಪ್ಪಯ್ಯನ ಮೊಮ್ಮಗನೆಂದು ಹೇಳಿದೆ.ಆದರೆ ಈ ರಂಗರಾಜಯ್ಯ ದೇವನು ವಾಸ್ತವಿಕವಾಗಿ ಗೋಪಾಲ ರಾಚಯ್ಯನ ದತ್ತು ಮಗ. ಈತನ ತಂದೆ ಚೆನ್ನವೆಂಕಟ ಅರಸನು ಘನಗಿರಿ (ಪೆನುಗೊಂಡೆ) ಯಲ್ಲಿ ಆಳುತ್ತಿದ್ದನೆಂದು ತಿಳಿಸುತ್ತದೆ. ಒಟ್ಟಾರೆ ವಿಜಯನಗರದ ಅವಸಾನದೊಂದಿಗೆ ಮೈಸೂರು ಒಡೆಯರ ಆಳ್ವಿಕೆಯ ಪ್ರಬಲಗೊಂಡಿತು.

ತುಮಕೂರು ಜಿಲ್ಲೆಯಲ್ಲಿ ವಿಜಯನಗರ ಅರಸರ ಪ್ರಾಚೀನ ಶಾಸನವೆಂದರೆ ಕುಣಿಗಲ್ಲಿನ ಕ್ರಿ.ಶ.1380ರ 2ನೇ ಹರಿಹರನಶಾಸನ ಈ ಶಾಸನವು ಹರಿಹರನ ಆಡಳಿತ ಮತ್ತು ಆತನ ಸೋದರರ ಬಗ್ಗೆ ಬೆಳಕನ್ನು ಚೆಲ್ಲುತ್ತದೆ.[90] ಕ್ರಿ.ಶ.1434ರ ಎರಡನೇ ದೇವರಾಯನ ಚಿಕ್ಕನಾಯಕನಹಳ್ಳಿ ತಾಲೂಕಿನ ಬಿಳುಗಲಿಯ ಶಾಸನವು ಹಿರಿಯ ಚೌಡನಾಯಕನ ಮಗನಾದ ಮಾದಿನಾಯಕ ಹೊನ್ನಮರಡಿ ಗುಡ್ಡದಲ್ಲಿ ತಿರುಮಲ ದೇವಾಲಯವನ್ನು ನಿರ್ಮಿಸಿದ್ದರ ಬಗ್ಗೆ ಬೆಳಕು ಚೆಲ್ಲುತ್ತದೆ.[91]

ತುಮಕೂರು ತಾಲೂಕಿನ ಬಿಟ್ಟಕುರಿಕೆ ಗ್ರಾಮದ ಕ್ರಿ.ಶ.1505ರ ವೀರನರಸಿಂಹನ ಶಾಸನವು ದೊರೆತಿದೆ. ಈ ಶಾಸನವು ಬಿಟ್ಟಕುರಿಕೆ ಗ್ರಾಮವನ್ನು ಮಾಚಿನಾಯಕ ಎಂಬುವನು ಜಗನ್ನಾಥ ರಾಜಯ್ಯ ಅರಸು ಮಹಾನಾಡ ಪ್ರಭು ಕೆಂಪವೀರಪ್ಪಗೌಡರಿಗೆ ದಾನ ನೀಡಿದ ಬಗ್ಗೆ

ಬೆಳಕು ಚೆಲ್ಲುತ್ತದೆ.[92] ತಿಪಟೂರು ತಾಲೂಕಿನ ಬಜಗೂರು ಗ್ರಾಮದ ಕ್ರಿ.ಶ.1561ರ ಸದಾಶಿವರಾಯನ ಶಾಸನವು ರಾಮಾನುಜಾಚಾರ್ಯ ಗುಣಗಾನ ಮಾಡುವ ಶಾಸನ ಪಾಠವಾಗಿದೆ. ಶ್ರೀಪತಿರಾಜಯ್ಯ ದೇವ ಸಮರ್ಪಿಸಿದ ಕೈಂಕರ್ಯದ ಧರ್ಮ ಸಾಧನ ಎಂದಿದೆ.[93]

ತುಮಕೂರು ತಾಲೂಕಿನ ಕೆಂಚನಪಾಳ್ಯದ ಕ್ರಿ.ಶ.1520ರ ಶಾಸನವು ಕೃಷ್ಣದೇವರಾಯನನ್ನು ಕುರಿತದ್ದಾಗಿದ್ದು, ಕೆಂಚ ಸೋಮಣ್ಣ ಎಂಬುವನು ಕೃಷ್ಣದೇವರಾಯರಿಗೆ ಪುಣ್ಯ ಪ್ರಾಪ್ತಿಯಾಗಲೆಂದು ಕೆಲವು ಗ್ರಾಮಗಳನ್ನು ದಾನಬಿಟ್ಟ ವಿಷಯ ತಿಳಸುತ್ತದೆ.[94] ಪಾವಗಡತಾಲೂಕಿನ ರಂಗಪುರ ಗ್ರಾಮದ ರಂಗಸ್ವಾಮಿ ದೇವಾಲಯದಲ್ಲಿ ಕಂಡುಬರುವ ಕ್ರಿ.ಶ.1542ರ ಅಚ್ಯುತದೇವರಾಯನ ಶಾಸನವೊಂದರಲ್ಲಿ ಸರ್ವಪ್ರಧಾನ ರಾಮಭಟ್ಟಯ್ಯನವರ ತಮ್ಮಂದಿರಾದ ಎಲ್ಲಪ್ಪಯ್ಯ ಕೇತಗೌಡನ ಕೆರೆಯನ್ನು ಹಾಗೂ ತಿಮ್ಮಣ್ಣ ದಾಸ ಎಂಬುವನಿಗೆ ಗೊಪಗೊಂಡನ ಹಳ್ಳಿಯನ್ನು ಶ್ರೀ ವೆಂಕಟಸಮುದ್ರವೆಂದು ಪುನರ್ ನಾಮಕರಣ ಮಾಡಿ ದಾನ ನೀಡಿದರೆಂಬ ಮಾಹಿತಿ ದೊರೆಯುತ್ತದೆ.[95]

ತುರುವೇಕೆರೆ ಪಟ್ಟಣದ ಚನ್ನಕೇಶವ ದೇವಾಲದ ಬಾಗಿಲ ಬಲಗಡೆ ಕ್ರಿ.ಶ.1549ರ ವೆಂಕಟಾದ್ರಿ ಅರಸರ ಕಾಲದ ಶಾಸನವನ್ನು ಕಾಣಬಹುದು. ತಿಮ್ಮರಾಜಯ್ಯ ಮತ್ತು ಸಂಗದಾಸಯ್ಯ ಎಂಬುವರು ತಮ್ಮ ಮಹಾರಾಜರಿಗೆ ಪುಣ್ಯ ಪ್ರಾಪ್ತಿಯಾಗಲೆಂದು ಮಾಯಸಂದ್ರ ಸೀಮೆಯ ತಂಡಗ ಗ್ರಾಮವನ್ನು ದತ್ತಿಬಿಟ್ಟ ಬಗ್ಗೆ ಬೆಳಕು ಚೆಲ್ಲುತ್ತದೆ.[96]

ತುಮಕೂರು ತಾಲೂಕು ಮೇಳಕೋಟೆ ಗ್ರಾಮದ ನರಸಿಂಹ ದೇವಾಲಯದ ಕ್ರಿ.ಶ.1554ರ ಸದಾಶಿವರಾಯನ ಶಾಸನ ದೊರೆತಿದ್ದು ಶ್ರೀರಾಮಾನುಜಾನಮಃ ಎಂಬ ಸ್ತುತಿಯೊಂದಿಗೆ ಪ್ರಾರಂಭವಾಗಿ ದೇವಾಲಯಕ್ಕೆ ದಾನ ನೀಡಿದುದರ ಬಗ್ಗೆ ಮಾಹಿತಿ ನೀಡುತ್ತದೆ. ಶಾಸನಪಾಠಗಳು ಅಲ್ಲಲ್ಲಿ ನಶಿಸಿ ಹೋಗಿವೆ.[97] ಚಿಕ್ಕನಾಯಕನ ಹಳ್ಳಿಯ ಪಂಕಜಹಳ್ಳಿಯಲ್ಲಿರುವ ಮಲ್ಲಿಕಾರ್ಜುನ ದೇವಾಲಯದ ಕ್ರಿ.ಶ.1529 ಕೃಷ್ಣದೇವರಾಯನ ಶಾಸನವು ಕೃಷ್ಣದೇವರಾಯನಿಗೆ ಸಕಲಭ್ಯುದಯವಾಗಲೆಂದು ಬಾನವಾಡಿಯ ಚೆನ್ನಿಶೆಟ್ಟಿ ಎಂಬುವನು ಮಲ್ಲಿಕಾರ್ಜುನ ದೇವಾಲಯದಲ್ಲಿ ಅಮೃತಪಡಿಸಿ ಆ ಗ್ರಾಮದ ಚತುರ್ಸ್ಸಿಮೇಗಳನ್ನು ದಾನ ನೀಡಿದುದರ ಬಗ್ಗೆ ಬೆಳಕನ್ನು ಚಲ್ಲುತ್ತದೆ.[98] ತುರುವೇಕೆರೆಯ ದಬ್ಬೇಘಟ್ಟ ಹೋಬಳಿ ಹೊಸಹಳ್ಳಿಯ ಕುಳವಾಡಿ ದೊಡ್ಡನ ಹೊಲದಲ್ಲಿ ವಿಜಯನಗರದ ಅರಸ ಅಚ್ಯುತರಾಯನ ಸುಮಾರು ಕ್ರಿ.ಶ.1535ರ ಶಾಸನ ದೊರೆತ್ತಿದ್ದು ಅಚ್ಯುತರಾಯನ ಅಳಿಯ ರಘುಪತಿ ರಾಜಮಹಾ

ಅರಸುಗಳಿಗೆ ಪುಣ್ಯ ಪ್ರಾಪ್ತಿಯಾಗಲೆಂದು ದೇವರಸ ಎಂಬುವನು ಮತ್ತು ಗೌಡಪ್ರಜೆಗಳು ಬಿನ್ನಹ ಮಾಡಿದುದರ ಬಗ್ಗೆ ಈ ಶಾಸನವು ಬೆಳಕು ಚೆಲ್ಲುತ್ತದೆ.[99] ತಂಡಗ ಗ್ರಾಮದ ಚನ್ನಕೇಶವ ದೇವಾಲಯದ ಮುಂದೆ ನಿಲ್ಲಿಸಲಾಗಿರುವ ಕ್ರಿ.ಶ.1549ರ ಶಾಸನವು ವಿಜಯನಗರ ಅರಸ ರಾಮರಾಯ ಆಳ್ವಿಕೆ ನಡೆಸುತ್ತಿರುವ ಸಂದರ್ಭದಲ್ಲಿ ತಂಡಗದ ಚನ್ನಿಗರಾಯ ದೇವಾಲಯಕ್ಕೆ ದಾನ ನೀಡಿದ ಬಗ್ಗೆ ಮಾಹಿತಿಯನ್ನು ನೀಡುತ್ತದೆ.[100]ಚಿಕ್ಕನಾಯಕನ ಹಳ್ಳಿ ಜೋಗಿ ಹಳ್ಳಿ ಮಠದಲ್ಲಿ ಕ್ರಿ.ಶ.1623ರ ರಾಮರಾಯನ ಶಾಸನ ದೊರೆತಿದ್ದು ರಾಮರಾಯನು ಗನಗಿರಿ ನಗರದಲ್ಲಿ ಅಂದರೆ ಪೆನುಕೊಂಡೆಯಲ್ಲಿ ಆಳ್ವಿಕೆ ನಡೆಸುತ್ತಿದ್ದು ಚಿಕ್ಕನಾಯಕನ ಹಳ್ಳಿ ಕೇಂದ್ರವನ್ನು ಆತನ ಸಾಮಂತ ಹಾಗಲವಾಡಿ ನಾಯಕ ಮುದಿಯಪ್ಪ ನಾಯಕನು ಆಳ್ವಿಕೆ ಮಾಡುತ್ತಿದ್ದು ದಳವಾಯಿ ಪರಮಪ್ಪ ಎಂಬುವನು ಮಠಕ್ಕೆ ದಾನ ನೀಡಿದ ವಿಷಯ ತಿಳಿದುಬರುತ್ತದೆ. [101]

**ಮೈಸೂರು ಒಡೆಯರು**

ವಿಜಯನಗರದ ಆಳ್ವಿಕೆಯ ಕೊನೆಕೊನೆಗೆ ತಲೆ ಎತ್ತಿದ ಸಂಸ್ಥಾನಿಕರಲ್ಲಿ ಕೆಳದಿಯ ನಾಯಕರು ಮತ್ತು ಮೈಸೂರು ಒಡೆಯರು ಪ್ರಮುಖರು. ಕೆಳದಿಯ ಸಂಸ್ಥಾನ ಬಹುಕಾಲ ನಿಲ್ಲಲಿಲ್ಲ. ಆದರೆ ಮೈಸೂರು ಸಂಸ್ಥಾನವು ಈಚಿತ್ತೀಚಿನ 1950ರಲ್ಲಿ ಭಾರತದ ಒಕ್ಕೂಟದೊಡನೆ ವಿಲೀನವಾಗುವವರೆಗೂ ಅಸ್ತಿತ್ವದಲ್ಲಿದ್ದಿತು.ಈ ಅರಸರು ವಿಜಯನಗರ ಸಾಮ್ರಾಜ್ಯದ ನಿಜವಾದ ವಾರಸದಾರರಾಗಿ ಅಂದಿನ ರಾಜ್ಯಾಡಳಿತದ ಮದಾತ್ತ ತತ್ವಗಳನ್ನು ಮತ್ತು ಸಾಂಸ್ಕೃತಿಕ ಮೌಲ್ಯಗಳನ್ನು ನಡೆಸಿಕೊಂಡು ಬರುವಲ್ಲಿ ಸಫಲರಾದರು. ವಿಜಯನಗರದ ಅವನತಿಯಿಂದ ಕಳೆದುಕೊಂಡದ್ದನ್ನು ಈ ಸಂಸ್ಥಾನದ ಪ್ರಜ್ಞಾವಂತ ಅರಸರು, ಎಷ್ಟೇ ಸೀಮಿತವಾಗಿ ಆದರೂ, ಉಳಿಸಿ ಬೆಳೆಸುವಲ್ಲಿ ಸಫಲರಾದರು. ಈ ಸಂಸ್ಥಾನದ ಮೂಲವನ್ನು ಕುರಿತು ಅಭ್ಯಸಿಸಲು ಸಾಹಿತ್ಯ ಮತ್ತು ಶಾಸನಗಳನ್ನೊಳಗೊಂಡ ಹಲವಾರು ಸಾಮಗ್ರಿಗಳು ದೊರೆಯುತ್ತವೆ. ಇವು ಈ ಮನೆತನದ ಮೂಲ ಪುರುಷರನ್ನು ಪುರಾಣ ಕಾಲದವರೆಗೂ ಕೊಂಡೊಯ್ಯುತ್ತವೆ. ಕ್ರಿ.ಶ. 1663ರ ಕುಣಿಗಲ್ ಶಾಸನವು ಮೈಸೂರು ಒಡೆಯರ ವಂಶಾವಳಿಯನ್ನು ವಿವರವಾಗಿ ಕೊಡುತ್ತಾ ಮಹತ್ವದ ಮಾಹಿತಿಗಳನ್ನು ಒದಗಿಸುತ್ತದೆ. ಇದರ ಪ್ರಕಾರ ಈ ಮನೆತನದ ಆರಂಭವು ಅತ್ರಿ ಮುನಿಯಿಂದ ಆರಂಭವಾಗಿ ಯದುವಿನವರೆಗೂ ಬರುತ್ತದೆ.ಈ ವಂಶದಲ್ಲಿ ಹುಟ್ಟಿದ ಕೆಲವರು ಯದುಗಿರಿಯಲ್ಲಿಯ ತಮ್ಮ ಕುಲದೈವತದ ದರ್ಶನಕ್ಕೆಂದು ಕರ್ನಾಟಕಕ್ಕೆ ಬಂದು ಅಲ್ಲಿಯ ಸೌಂದರ್ಯಕ್ಕೆ ಮೋಹಗೊಂಡು ಆ ದೇಶವನ್ನು ಆಳಲು ಮಹಿಷನಗರದಲ್ಲಿ ನೆಲೆನಿಂತರು. ಅಲ್ಲಿಂದ ಈ ರಾಜಮನೆತನ ಪ್ರಾರಂಭವಾಯಿತು. ಅವರಲ್ಲಿ ಪ್ರಮುಖನು ತಿಮ್ಮರಾಜೇಂದ್ರನು ಅವನಿಂದ ಈ ವಂಶ ಹೀಗೆ ಬೆಳೆಯಿತು. ಹಿರಿಯನಾದ ಎರಡನೇ

ದೇವರಾಜನನ್ನು ಎಲ್ಲಾ ಸಹೋದರರು ಶ್ರೀರಾಮನನ್ನು ಪೂಜಿಸುತ್ತಿದ್ದರು. ಎರಡನೆಯವನಾದ ಮೂರನೇ ದೇವರಾಜನು ಲಕ್ಷ್ಮಣನ ಮಾತಿನಿಂದ ದೇಹದಿಂದ, ಮನಸ್ಸಿನಿಂದ ಅಣ್ಣನನ್ನು ಪೂಜಿಸುತ್ತಿದ್ದನು. ನಾಲ್ಕನೇ ದೇವರಾಜನು ಈ ಶಾಸನದ ಮಾತಿನಲ್ಲಿ ಹೇಳಬೇಕೆಂದರೆ ಎಲ್ಲಾ ಸದ್ಗುಣಗಳ ಗಣಿ.ಇವನು ವಿಶ್ವೇಶ್ವರ ಎಂಬ ಹೆಸರಿನ ವಿದ್ವಾಂಸನಾದ ಬ್ರಾಹ್ಮಣರಿಗೆ ಹೊಯ್ಸಳ ನಾಡಿನಲ್ಲಿ ನಾಗಮಂಗಲ ಮತ್ತು ಉಮ್ಮತ್ತೂರು ನಗರಗಳ ಸಮೀಪದ ಹಾಲಗೆರೆಯನ್ನು ದಾನವಾಗಿ ಕೊಟ್ಟನು ಎಂದು ಈ ಶಾಸನ ತಿಳಸುತ್ತದೆ.[102] ಕ್ರಿ.ಶ. 1664ರ ಕುಣಿಗಲ್‌ನ 7ನೇ ಶಾಸನವು ಅರೇವೀಡು ಶ್ರೀರಂಗನಿಗೆ ಸೇರಿದ್ದು ಮೈಸೂರು ದೇವರಾಜನು ಅವನ ಅಧೀನನಾಗಿದ್ದನೆಂದು ಹೇಳಿದೆ. ಈ ದೇವರಾಜನ ಮಗನು ಮತ್ತು ರಾಜಒಡೆಯರ ಮೊಮ್ಮಗನು ಎಂದು ಹೇಳಲಾಗಿದೆ. ಈ ದೇವರಾಜನ ಸೈನ್ಯಾಧಿಕಾರಿಯಾಗಿದ್ದ ನಂದಿನಾಥಯ್ಯನು ಇಕ್ಕೇರಿ ಅರಸರ ಮೇಲೆ ದಂಡೆತ್ತಿ ಹೋಗಿ ವಿಜಯವನ್ನು ಸಾಧಿಸಿದಿದು ಮತ್ತು ದೇವರಾಜನು ಈ ವಿಜಯಕ್ಕಾಗಿ ತೋಂಟದ ಸಿದ್ದೇಶ್ವರ ಸ್ವಾಮಿಗೆ ಕಗ್ಗೆರೆ ಎಂಬ ಗ್ರಾಮವನ್ನು ದಾನವಾಗಿ ನೀಡಿದನೆಂದು ಈ ಶಾಸನದ ವಸ್ತು ವಿಷಯವಾಗಿದೆ.[103] ತುರುವೇಕೆರೆಯಲ್ಲಿ ಮೈಸೂರು ಒಡೆಯರ ಆಳ್ವಿಕೆಗೆ ಸಂಬಂಧಿಸಿದಂತೆ ನಮಗೆ ಹಲವಾರು ಮಾಹಿತಿಗಳು ದೊರೆಯುತ್ತವೆ. ಬಿಜಾಪುರದ ಸುಲ್ತಾನರ ಸಾಮಂತ ಮಲ್ಲಿಕ್ ರಿಹಾನ್ ಶಿರಾವನ್ನು ಆಳ್ವಿಕೆ ನಡೆಸುತ್ತಿದ್ದು ನಂತರದ ಕಾಲದಲ್ಲಿ ತುರುವೇಕೆರೆ ಮೈಸೂರು ರಾಜರಾದ ಕಂಠೀರವ ನರಸರಾಜ ಒಡೆಯರ್ ಆಳ್ವಿಕೆಗೆ ಒಳಪಟ್ಟಿತ್ತು.[104] ಈ ಕಂಠೀರವ ನರಸರಾಜ ಒಡೆಯರು ದೇವಾಲಯಗಳಿಗೆ ಕ್ರಿ.ಶ. 1680ರವರೆಗೂ ದಾನ ದತ್ತಿಗಳನ್ನು ನೀಡಿದರು. ಕ್ರಿ.ಶ.1705ರಲ್ಲಿ ತಿರುಮಲ ಅಯ್ಯಂಗಾರ್ ಪೆರುಮಾಳಯ್ಯ ಎಂಬುವರು ಮೈಸೂರು ರಾಣಿಗೆ ಛಿನ್ನವತ್ತಳೆಯನ್ನು ಸಲ್ಲಿಸಲಾಗಿ ಬೇಟೆರಾಯ ದೇವಾಲಯಕ್ಕೆ ಮತ್ತೆ ದಾನದತ್ತಿಗಳನ್ನು ನೀಡಲು ಪ್ರಾರಂಭಿಸಿದರು.ನಂತರ ತುರುವೇಕೆರೆ 1831ರಲ್ಲಿ ಮೂರನೇ ಕೃಷ್ಣರಾಜ ಒಡೆಯರ ಆಳ್ವಿಕೆಗೆ ಒಳಪಟ್ಟಿತು. ಕ್ರಿ.ಶ.1784ರಲ್ಲಿ ಟಿಪ್ಪುಸುಲ್ತಾನ್ ದೇವಾಲಯಗಳಿಗೆ ದಾನಬಿಟ್ಟ ವಿಷಯ ಪ್ರಾಚೀನ ದಾಖಲೆಗಳಿಂದ ತಿಳಿದುಬರುತ್ತದೆ.[105]

**ಹಾಗಲವಾಡಿ ನಾಯಕರು**

ಹಾಗಲವಾಡಿ ಸಂಸ್ಥಾನ ತುಮಕೂರು ಜಿಲ್ಲೆಯ ಬಹುಭಾಗವನ್ನಾಳಿದ ಒಂದು ಪ್ರಮುಖ ಅರಸು ಮನೆತನವಾಗಿದೆ. ಈ ಸಂಸ್ಥಾನ ಇಂದಿನ ಆಧುನಿಕ ತಾಲೂಕುಗಳಾದ ಚಿಕ್ಕನಾಯಕನಹಳ್ಳಿ, ಗುಬ್ಬಿ, ತಿಪಟೂರು, ತುರುವೇಕೆರೆ ಹಾಗೂ ತುಮಕೂರು ತಾಲೂಕಿನ ಕೆಲಭಾಗಗಳಲ್ಲಿ ತನ್ನ ಆಳ್ವಿಕೆ ನಡೆಸಿತ್ತು.[106] ಕೆಲವು ಆಕರಗಳಲ್ಲಿ ಈ ವಂಶದ ಮೂಲಪುರುಷ

ಬೇಡಜಾತಿಗೆ ಸೇರಿದ್ದು ಪ್ರಾಣಿಗಳನ್ನು ಭೇಟೆಯಾಡಿ ಜೀವನ ಸಾಗಿಸುವ ವೃತ್ತಿಯನ್ನು ಪಾಲಿಸುತ್ತಿದ್ದನು ಎಂಬುದಾಗಿ ತಿಳಿದುಬರುತ್ತದೆ. ಈ ಹಾಗಲವಾಡಿ ನಾಯಕರ ಮೂಲಪುರುಷ ಯೆರಿಮಾದಿನಾಯಕ ಎಂಬುವನು ಈ ವಂಶದ ಮೂಲಪುರುಷ. ತುಂಮಳ ಸಂಸ್ಥಾನದಿಂದ ವಲಸೆ ಬಂದನೆಂದು ದಾಖಲೆಗಳಲ್ಲಿ ಸ್ಪಷ್ಟವಾಗಿದ್ದರೂ ಇತಿಹಾಸಕಾರ ಎ.ವಿ.ವೆಂಕಟರತ್ನಂ ಅವರು ವಾಸ್ತವಾಗಿ ಈ ಜನ ಚಿಕ್ಕನಾಯಕನಹಳ್ಳಿ ಪ್ರದೇಶದವರು ಎಂದು ಅಭಿಪ್ರಾಯ ಪಟ್ಟಿದ್ದಾರೆ.[107] ಇವರ ಮೂಲಕ್ಕೆ ಸಂಬಂಧಿಸಿದಂತೆ ಇರುವ ಮತ್ತೆರಡು ಅಭಿಪ್ರಾಯಗಳನ್ನು ಇಲ್ಲಿ ಪರಿಶೀಲಿಸಬಹುದು.ಒಂದು ಅಭಿಪ್ರಾಯದಂತೆ ಯೆರಿಮಾದಿನಾಯಕನ ಪೂರ್ವಜರು ಹೊಯ್ಸಳ ಸಾಮ್ರಾಜ್ಯಕ್ಕೆ ಸೇರಿದ್ದ ತುಂಮಳ ಸಂಸ್ಥಾನದ ಪಾಳೆಯಗಾರರಾಗಿದ್ದರು. ಮಲ್ಲಿಕಾಫರನ ದಂಡಯಾತ್ರೆ ಪರಿಣಾಮವಾಗಿ ರಾಜ್ಯ ಕೋಶಗಳನ್ನು ಕಳೆದುಕೊಂಡು ಕೇವಲ ಕೊತ್ವಾಲರ ಸ್ಥಿತಿಗೆ ಇಳಿದರು ಮತ್ತು ಅವರ ವಂಶಜರು ಎರೆಕಟ್ಟೆ ಹೊನ್ನವಳ್ಳಿ, ತುರುವೇಕೆರೆ, ನೊಣವಿನ ಕೆರೆಗಳಲ್ಲಿ ತಳವಾರಿಕೆ ಮಾಡಿಕೊಂಡು ಹೀನಸ್ಥಿತಿಯಲ್ಲಿದ್ದರು. ಆದರೆ ಈ ಹೇಳಿಕೆ ಆಧಾರಗಳು ಸ್ಪಷ್ಟವಾಗಿಲ್ಲ. ಪಾಳೆಯಗಾರ ಎಂಬ ನುಡಿಗಟ್ಟು ಹೊಯ್ಸಳರ ಕಾಲದಲ್ಲಿ ಅವರ ದಾಖಲೆಗಳಲ್ಲಿ ಕಂಡುಬರುವುದಿಲ್ಲ.[108]ಬಿ.ಎಲ್.ರೈಸ್‌ರವರೂ ಸಹ ಹಾಗಲವಾಡಿ ನಾಯಕರ ಮೂಲ ಪುರುಷನನ್ನು ಎರ್ರಕಟ್ಟೆಯ ತಳಾರಿ ಅಥವಾ ತಳವಾರ ವೃತ್ತಿಯಲ್ಲಿ ಗುರ್ತಿಸುತ್ತಾರೆ. ಬಿ.ಎಲ್. ರೈಸ್‌ರವರು ಇದಕ್ಕೆ ಆಧಾರವನ್ನು ಕೊಟ್ಟಿಲ್ಲ. ಈಗ ನಮಗೆ ದೊರೆತಿರುವ ಆಧಾರಗಳಲ್ಲಿ ಈ ವಿಷಯ ಪ್ರಸ್ತಾಪವಾಗಿಲ್ಲ. ಆದ್ದರಿಂದ ನಾವು ಯೆರಿಮಾದಿನಾಯಕರು ತುಂಮಳ ಸಂಸ್ಥಾನದಿಂದ ಕನ್ನಡನಾಡಿಗೆ ವಲಸೆ ಬಂದುದಕ್ಕೆ ಮೇಲೆ ಸೂಚಿಸುವ ಅಭಿಪ್ರಾಯಗಳನ್ನೇ ಇಟ್ಟುಕೊಳ್ಳ ಲಾಗಿದೆ.[109] ಗೋದಾವರಿ ನದಿಗೆ ದಕ್ಷಿಣದಲ್ಲಿರುವ ದೇಶಗಳಲ್ಲಿ ದೊಡ್ಡದಾದ ರಾಜ್ಯವು ವಿಜಯನಗರ ಚಕ್ರಾಧಿಪತ್ಯಕ್ಕೇ ಸೇರಿತ್ತು. ಈ ಮನೆತನದ ಚಕ್ರವರ್ತಿಗಳಿಗೆ ಅಧೀನರಾಗಿ ಸಣ್ಣ ಸಣ್ಣ ಭಾಗಗಳನ್ನು ಆಳಿಕೊಂಡು ಪಾಳೆಯಗಾರರೆಂದು ಖ್ಯಾತರಾಗಿದ್ದರು. ಇಂತಹ ಪಾಳೇಯ ಪಟ್ಟುಗಳಲ್ಲಿ ಹಾಗಲವಾಡಿಯೂ ಒಂದಾಗಿತ್ತು. ಇಂತಹ ಸಂಸ್ಥಾನದ ಮೊದಲ ದೊರೆಯಾಗಿದ್ದ ಯೆರಿಮಾದಿ ನಾಯಕನು ಕ್ರಿ.ಶ.1496 ರಿಂದ 1516ರವರೆಗೆ ಆಳ್ವಿಕೆ ಮಾಡಿ ಮರಣ ಹೊಂದಿದನು ನಂತರ ಇವನ ಮಗನಾದ ಸಾಲಿನಾಯಕ ಅಧಿಕಾರಕ್ಕೆ ಬಂದನು.

**ಸಾಲಿನಾಯಕ (ಕ್ರಿ.ಶ.1516 ರಿಂದ ಕ್ರಿ.ಶ.1552)**

ಇವನು ಎರೆಕಟ್ಟೆಯೆಂಬ ಗ್ರಾಮವನ್ನು ಸ್ಥಾಪಿಸಿ ಅದನ್ನು ತನ್ನ ಆಡಳಿತ ಕೇಂದ್ರವನ್ನಾಗಿ ಮಾಡಿಕೊಂಡನು. ಇವನು ವಿಜಯನಗರದ ತುಳುವಂಶದ ಕೃಷ್ಣದೇವರಾಯನ ಸಮಕಾಲೀನನಾಗಿದ್ದನು. ಕ್ರಿ.ಶ.1526ರಲ್ಲಿ ಕೃಷ್ಣದೇವರಾಯನು ಮರಣ ಹೊಂದಿದನು.

ವಿಜಯನಗರದಲ್ಲಿ ಸಿಂಹಾಸನಕ್ಕಾಗಿ ಅಂತಃಕಲಹ ಆರಂಭವಾಯಿತು.[110] ಈ ಸಂದರ್ಭವನ್ನು ಚೆನ್ನಾಗಿ ಬಳಸಿಕೊಂಡ ಸಲಿನಾಯಕ ಪೆನುಗೊಂಡೆಯ ಸರ್ಕಾರ ಹಾಗಲವಾಡಿಯ ಸಂಸ್ಥಾನದ ಸೈನಿಕ ಸಹಾಯ ಬೇಡಿದಾಗ ಕೆಲವು ಷರತ್ತುಗಳನ್ನು ಹಾಕಿ ಕಂದಿಕೆರೆ, ಶೆಟ್ಟಿಕೆರೆ, ಮೊದಲಾದವುಗಳನ್ನು ತನಗೆ ಖಾಯಂ ಆಗಿ ಕೂಡಬೇಕೆಂದು ಹಾಗೂ ಪೆನುಗೊಂಡೆಯ ಸೈನ್ಯ ಯುದ್ಧದಲ್ಲಿ ಸೋತಾಗ ಸಲಿನಾಯಕನು ಈ ಅವಕಾಶ ಬಳಸಿಕೊಂಡು ಹನ್ನೆರಡು ಆನೆ ಮತ್ತು ಅನೇಕ ರೀತಿಯ ಸೂರೆಗಳನ್ನು ಮಾಡಿ ದೊರೆತ ಹಣದಿಂದ ಪ್ರಾದೇಶಿಕವಾಗಿ ವಿಸ್ತಾರಗೊಳಿಸುವ ಪ್ರಯತ್ನ ಮಾಡಿದನು. ಬಲವಾದ ಸೈನ್ಯಗಳನ್ನು ಕಟ್ಟಿ ಹೊನ್ನವಳ್ಳಿ, ನೊಣವಿನಕೆರೆ ಮತ್ತು ತುರುವೇಕೆರೆಗಳ ಮೇಲೆ ದಾಳಿಮಾಡಿ ಅವುಗಳನ್ನು ವಶಪಡಿಸಿಕೊಂಡನು. ತುರುವೇಕೆರೆಯನ್ನು ಗೆದ್ದುಕೊಂಡ ನಂತರ ಅದನ್ನು ತನ್ನ ಸಹೋದರರಾದ ಚಿಕ್ಕನಾಯಕ ಮತ್ತು ಅಣ್ಣೆನಾಯಕರಿಗೆ ಬಳುವಳಿಯಾಗಿ ನೀಡಿದರು.[111]

**ಬೈರಪ್ಪ ನಾಯಕ (ಕ್ರಿ.ಶ.1552 ರಿಂದ ಕ್ರಿ.ಶ.1591)**

ಸಾಲಿನಾಯಕನ ಮರಣ ನಂತರ ಆತನ ಮಗನಾದ ಬೈರಪ್ಪನಾಯಕ ಅಧಿಕಾರಕ್ಕೆ ಬಂದನು. ಈತ ಸಾಕಷ್ಟು ಪ್ರಸಿದ್ಧನಾದವನು. ಕ್ರಿ.ಶ.1561ರಲ್ಲಿ ಹೊಯ್ಸಳರ ಕಾಲದಲ್ಲಿ ಪ್ರಮುಖ ಪಟಟಣವಾಗಿದ್ದ ಸೆಟ್ಟಿಕೆರೆ ಮೇಲೆ ದಾಳಿ ನಡೆಸಿ ಅದನ್ನು ವಶಪಡಿಸಿಕೊಂಡನು ನಂತರ ಕ್ರಿ.ಶ.1564ರಲ್ಲಿ ಕಂದಿಕೆರೆ ಎಂಬ ಸ್ಥಳದ ಮೇಲೆ ದಾಳಿಮಾಡಿ ಅದನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಅಲ್ಲಿ ಕೋಟೆ ಕಟ್ಟಿಸಿದನು.[112]ಇವನು ಸಂಸ್ಥಾನವನ್ನು ವಿಸ್ತರಿಸುವ ಮಹದಾಕಾಂಕ್ಷೆಯಿಂದ ಹೊನ್ನವಳ್ಳಿ, ನುಗ್ಗೆಹಳ್ಳಿ ಎಂಬ ಸ್ಥಳಗಳ ಮೇಲೆ ದಾಳಿಮಾಡಿ ವಶಪಡಿಸಿಕೊಂಡನು. ಬೈರಪ್ಪನಾಯಕ ಎಡೆಯೂರು ಸಿದ್ಧಲಿಂಗೇಶ್ವರರ ಪರಮಭಕ್ತನಾಗಿದ್ದು ಅವರು ನಿಟ್ಟೂರಿಗೆ ಆಗಮಿಸಿದಾಗ ಅವರನ್ನು ರಾಜಧಾನಿಗೆ ಕರೆದುಕೊಂಡು ಹೋಗಿ ಅವರಿಂದ ಪುತ್ರ ಸಂತಾನ ಆಶೀರ್ವಾದ ಪಡೆದನು. ತತ್ಫಲವಾಗಿ ಪುತ್ರೋತ್ಸವವಾಯಿತು. ಆ ಮಗುವಿಗೆ ಲಿಂಗಧಾರಣೆ ಮಾಡಿ ಮುದಿಯಪ್ಪ ಎಂದು ನಾಮಕರಣ ಮಾಡಲಾಯಿತು, ಬೈರಪ್ಪನಾಯಕ 1591ರಲ್ಲಿ ಮರಣ ಹೊಂದಿದನು.[113]

**ಮುದಿಯಪ್ಪ ನಾಯಕ (ಕ್ರಿ.ಶ.1591 ರಿಂದ ಕ್ರಿ.ಶ.1626)**

ಬೈರಪ್ಪನಾಯಕನ ನಂತರ ಅವನ ಮಗ ಮುದಿಯಪ್ಪ ನಾಯಕನ ಆಳ್ವಿಕೆ ಆರಂಭವಾಗುತ್ತದೆ. ಈತ ಸಾಕಷ್ಟು ಪರಾಕ್ರಮಶಾಲಿಯಾಗಿದ್ದನು. ಇವನ ಕಾಲದಲ್ಲಿ ಹಾಗಲವಾಡಿ ಸಂಸ್ಥಾನ ಮತ್ತಷ್ಟು ವಿಸ್ತಾರವಾಯಿತು. ಆನೆಗೊಂದಿ ರಾಜ್ಯದ ಕರಿಯಪ್ಪ ನಾಯಕ,

ನಲ್ಲೂರಿನಾಯಕ, ಮೂಗಿನಾಯಕ ಮುಂತಾದ ಪಾಳೇಯಗಾರರ ಮೇಲೆ ದಾಳಿಮಾಡಿ ಹಾಗಲದಹಳ್ಳಿ, ಹೊಸಕೆರೆ, ಅಳಲಘಟ್ಟ ಮುಂತಾದ ಕಡೆ ಯುದ್ಧ ಮಾಡಿ ಅವರನ್ನು ಜಯಿಸಿ ಆ ಪ್ರದೇಶಗಳನ್ನು ಗೆದ್ದುಕೊಂಡನು.[114] ಮುದಿಯಪ್ಪ ನಾಯಕನು ಹಲವು ವೀರಶೈವ ಮಠಗಳಿಗೆ ಸಹಾಯಮಾಡಿ ಸೋಸಲೆ ರೇವಣ್ಣಾಚಾರ್ಯ ಎಂಬ ವೀರಶೈವ ಕವಿಗೆ ಆಶ್ರಯ ನೀಡಿ ಹಲವಾರು ಕೃತಿಗಳನ್ನು ಬರೆಸಿದನು. ಇವನು ಕ್ರಿ.ಶ.1626ರಲ್ಲಿ ಮರಣ ಹೊಂದಿದನು.[115]

**ಇಮ್ಮಡಿ ಬೈರಪ್ಪ ನಾಯಕ**

ಇವನ ಆಳ್ವಿಕೆಯು ಕ್ರಿ.ಶ.1627ರಲ್ಲಿ ಚಿಕ್ಕನಾಯಕನಹಳ್ಳಿಯಲ್ಲಿ ಆರಂಭವಾಯಿತು.ಈ ಸಂಸ್ಥಾನದ ಮೇಲೆ ದಕ್ಷಿಣ ಕರ್ನಾಟಕದಲ್ಲಿ ದಿನದಿಂದ ದಿನಕ್ಕೆ ಪ್ರಬಲರಾಗುತ್ತಿದ್ದ ಮೈಸೂರು ಒಡೆಯರು ದೃಷ್ಟಿ ಹಾಯಿಸಿದರು. ಆಗ ಮೈಸೂರಿನಲ್ಲಿ ಕ್ರಿ.ಶ.1617ರಲ್ಲಿ ಚಾಮರಾಜ ಒಡೆಯರ್ ಆಳ್ವಿಕೆ ನಡೆಸುತ್ತಿದ್ದರು. ಕ್ರಿ.ಶ.1631ರಲ್ಲಿ ಒಡೆಯರ್ ಸೈನ್ಯ ಬೆಳ್ಳೂರಿನ ಮೇಲೆ ಆಕ್ರಮಣ ಮಾಡಿತು.ಇಮ್ಮಡಿ ಬೈರಪ್ಪನಾಯಕನ ದಳವಾಯಿ ಪರಮರಾವುತ ಗುರುವಣ್ಣ ಯುದ್ಧದಲ್ಲಿ ಸೋತು ಗಾಯಗೊಂಡನು. ಒಡೆಯರ್ ಸೇನೆಯನ್ನು ಎದುರಿಸಲು ಸಾಧ್ಯವಾಗದೆ ಬೈರಪ್ಪನಾಯಕ ಶರಣಾಗತನಾದನು.[116] ನಂತರ ಚಾಮರಾಜ ಒಡೆಯರೊಂದಿಗೆ ಒಪ್ಪಂದ ಮಾಡಿಕೊಂಡನು ನಂತರ ಕರಿಚೆನ್ನಬಸಪ್ಪ ನಾಯಕ, ಪ್ರಸನ್ನ ರಾಯಪ್ಪ ನಾಯಕ ಮುಂತಾದವರು ಹಾಗಲವಾಡಿ ಸಂಸ್ಥಾನವನ್ನು ಆಳಿದರು.

ಮೂರನೇ ಚನ್ನಬಸಪ್ಪ ನಾಯಕನು ಹಾಗಲವಾಡಿ ದೊರೆಯಾದಾಗ ಹೈದರಾಲಿಯು ಮೈಸೂರಿಗೆ ಕರೆಸಿಕೊಂಡು ಐವತ್ತು ಸಾವಿರ ರೂಪಾಯಿಗಳನ್ನು ಕಾಣಿಕೆಯಾಗಿ ನೀಡಬೇಕೆಂದು ಒತ್ತಾಯಪಡಿಸಿದನು. ಅವನು 18,000 ರೂಪಾಯಿಗಳನ್ನು ಕಾಣಿಕೆಯಾಗಿ ಕೊಡಲು ಒಪ್ಪಿ ಹಾಗಲವಾಡಿಗೆ ಹಿಂದಿರುಗಿದನು. ಆಗ ಅವನ ಆಳ್ವಿಕೆಯಲ್ಲಿ ಚೇಳೂರು, ಬಿದಿರೆ, ತುಮಕೂರು, ಕಡಬ, ಕಂದಿಕೆರೆ, ಚಿಕ್ಕನಾಯಕನಹಳ್ಳಿ, ತುರುವೇಕೆರೆ, ಹೊನ್ನವಳ್ಳಿ, ನುಗ್ಗೇಹಳ್ಳಿ ಮೊದಲಾದ ಪ್ರದೇಶಗಳು ಅವನ ಆಳ್ವಿಕೆಗೆ ಒಳಪಟ್ಟಿದ್ದವು. ಹೈದರ್ ಅಲಿಗೆ ಕಾಣಿಕೆಯನ್ನು ಕೊಡಲು ಸಾಧ್ಯವಾಗದ ಕಾರಣ ಹೈದರ್ ಆಲಿ ಚನ್ನಬಸಪ್ಪ ನಾಯಕನನ್ನು ಬಂಧಿಸಿ ಶ್ರೀರಂಗಪಟ್ಟಣದ ಸೆರೆಮನೆಯಲ್ಲಿ ಇರಿಸಿದನು. ಅವನು ಕ್ರಿ.ಶ.1775ರಲ್ಲಿ ಮರಣ ಹೊಂದಿದನು.[117]

## ಅಡಿ ಟಿಪ್ಪಣಿಗಳು

1. ನರಸಿಂಹಮೂರ್ತಿ.ಎ.ವಿ. (ಸಂ) ಆಕಿಯಾಲಾಜಿಕಲ್ ಆಫ್ ಕರ್ನಾಟಕ, ಪು.ಸಂ.1–30
2. ಡಾ.ಬಿ.ಕೆ. ಗುರುರಾಜನ್. ಪು.ಸಂ.6
3. ಪೂರ್ವೋಕ್ತ
4. ಕರ್ನಾಟಕ ರಾಜ್ಯ ಗ್ಯಾಸೆಟಿಯರ್. 1969, ಪು.ಸಂ.26
5. ಸ್ಲೇಟರ್.ಎಚ್.ಕೆ. ಮೈಸೂರು ಭೂಗರ್ಭಶಾಸ್ತ್ರ ಇಲಾಖೆ ದಾಖಲೆಗಳು, ಪು.ಸಂ.72
6. ಡಾ.ಕೆ.ಬಿ. ಶಿವತಾರಕ್. ಕರ್ನಾಟಕ ಪುರಾತತ್ವ ನೆಲೆಗಳು, 2001, ಪು.ಸಂ.270–314
7. ಪೂರ್ವೋಕ್ತ
8. ಪಾಟೀಲ ಪುಟ್ಟಪ್ಪ, ನನ್ನದು ಈ ಕನ್ನಡ ನಾಡು. ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ, 1975, ಪು.ಸಂ.122
9. ಸಿ.ಹಯವದನರಾವ್. ಮೈಸೂರು ಗ್ಯಾಸಿಟಿಯರ್, ಸಂ.5, 1984, ಪು.ಸಂ.491
10. ಶ್ರೀನಿವಾಸ ಪಾಡಿಗಾರ್. ಭಾರತೀಯ ಇತಿಹಾಸ ಶಾಸನ ಆಕರಗಳು, ಪು.ಸಂ.72–77
11. ಪೂರ್ವೋಕ್ತ. ಪು.ಸಂ.81–87
12. ಡಾ.ಸೂರ್ಯನಾಥ ಕಾಮತ್. ಪು.ಸಂ.34
13. ಜಿ.ಆರ್.ರಂಗಸ್ವಾಮಯ್ಯ. ಬಿ.ಷೇಕ್ ಆಲಿ, ಪು.ಸಂ.63–64
14. ಪೂರ್ವೋಕ್ತ, ಪು.ಸಂ.64
15. ಎ.ಕ.ಸಂ.24, ಪೀಠಿಕೆ
16. ಎ.ಕ.ಸಂ.6. ಶ್ರೀರಂಗಪಟ್ಟಣ, ಪು.ಸಂ.66
17. ಎಂ.ಎಸ್.ಕೃಷ್ಣಮೂರ್ತಿ. ದಿ ನೊಳಾಂಬಾಸ್, ಪು.ಸಂ.9–13
18. ಎ.ಕ.ಸಂ.24, ಶಾ.ಸಂ.22, ಪು.ಸಂ.285
19. ಎ.ಕ.ಸಂ.16. ಶಾ.ಸಂ.86, ಪು.ಸಂ.80
20. ಎ.ಕ.ಸಂ.16. ತುಮಕೂರು ಶಾ.ಸಂ.103, ಪು.ಸಂ.83
21. ಎ.ಕ.ಸಂ.16. ಶಾ.ಸಂ.98, ಪು.ಸಂ.82
22. ಎ.ಕ.ಸಂ.16. ಶಾ.ಸಂ.91, ಪು.ಸಂ.81
23. ಎ.ಕ.ಸಂ.16. ಶಾ.ಸಂ.88, ಪು.ಸಂ.80
24. ಎ.ಕ.ಸಂ.16. ಶಾ.ಸಂ.89, ಪು.ಸಂ.81
25. ಎ.ಕ.ಸಂ.16. ಶಾ.ಸಂ.90, ಪು.ಸಂ.81
26. ಎ.ಕ.ಸಂ.16. ಶಾ.ಸಂ.64, ಪು.ಸಂ.31

27. ಎ.ಕ.ಸಂ.16. ಶಾ.ಸಂ.65, ಪು.ಸಂ.31

28. ಎ.ಕ.ಸಂ.16. ಶಾ.ಸಂ.140, ಪು.ಸಂ.67

29. ಎ.ಕ.ಸಂ.16. ಶಾ.ಸಂ.124, ಪು.ಸಂ.64

30. ಭಾರತದ ಪ್ರೌಢ ಇತಿಹಾಸ, ಮಜುಮ್‌ದಾರ್ ರಾಯ್ ಚೌದರಿ ದತ್ತ. ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 2003, ಪು.ಸಂ.147

31. ಎ.ಕ.ಸಂ.24, ಪೀಠಿಕೆ

32. ಎ.ಕ.ಸಂ.24, ಪೀಠಿಕೆ

33. ಡಿ.ಎನ್. ಯೋಗೀಶ್ವರಪ್ಪ, ಹಾಗಲವಾಡಿ ನಾಯಕರು, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, 1999, ಪು.ಸಂ.22

34. ಪ್ರೊ.ಜಿ.ಆರ್. ರಂಗಸ್ವಾಮಯ್ಯ, ಪ್ರೊ.ಬಿ.ಷೇಕ್ ಅಲಿ, ದಕ್ಷಿಣ ಭಾರತದ ಇತಿಹಾಸ, ಚೇತನ್ ಬುಕ್ ಹೌಸ್, 2001, ಪು.ಸಂ.135

35. ಎ.ಕ.ಸಂ.16. ಶಾ.ಸಂ.158, ಪು.ಸಂ.73

36. ಎ.ಕ.ಸಂ.16. ಶಾ.ಸಂ.111, ಪು.ಸಂ.60

37. ಡಿ.ಎನ್. ಯೋಗೀಶ್ವರಪ್ಪ, ಹಾಗಲವಾಡಿ ನಾಯಕರು, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, 1999, ಪು.ಸಂ.21

38. ಎ.ಕ.ಸಂ.4, ಪ್ರಸ್ತಾವನೆ

39. ಎ.ಕ.ಸಂ.4, ತಿ.ನರಸೀಪುರ, 151

40. ಎ.ಕ.ಸಂ.5, ಬೇಲೂರು, 24

41. ಡೆರೆಟ್. ಜೆ.ಎಂ. ದಿ ಹೊಯ್ಸಳಾಸ್ ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯ, ಮದ್ರಾಸ್. 1957

42. ಎ.ಕ.ಸಂ.12, ಶಾ.ಸಂ.30, ಪು.ಸಂ.133

43. ಎ.ಕ.ಸಂ.16, ಶಾ.ಸಂ.105, ಪು.ಸಂ.29

44. ಎ.ಕ.ಸಂ.12, ಶಾ.ಸಂ. 14, ಪು.ಸಂ.126-127

45. ಎ.ಕ.ಸಂ.24, ಪೀಠಿಕೆ

46. ಎ.ಕ.ಸಂ.16, ಶಾ.ಸಂ.162, ಪು.ಸಂ.75

47. ಎ.ಕ.ಸಂ.12, ಶಾ.ಸಂ.25, ಪು.ಸಂ.130

48. ಎ.ಕ.ಸಂ.24, ಪೀಠಿಕೆ

49. ಎ.ಕ.ಸಂ.24, ಪೀಠಿಕೆ

50. ಎ.ಕ.ಸಂ.12. ಶಾ.ಸಂ.31, ಪು.ಸಂ.133

51. ಎ.ಕ.ಸಂ.12. ಶಾ.ಸಂ.37, ಪು.ಸಂ.135

52. ಎ.ಕ.ಸಂ.24.ಶಾ.ಸಂ.56, ಪು.ಸಂ.319

53. ಎ.ಕ.ಸಂ.12. ಶಾ.ಸಂ.21, ಪು.ಸಂ.128-129

54. ಎ.ಕ.ಸಂ.12. ಶಾ.ಸಂ.23, ಪು.ಸಂ.129

55. ಎ.ಕ.ಸಂ.24. ಶಾ.ಸಂ.23, ಪು.ಸಂ.292

56. ಎ.ಕ.ಸಂ.12. ಶಾ.ಸಂ.13,ಪು.ಸಂ.126

57. ಎ.ಕ.ಸಂ.16.ಶಾ.ಸಂ.58,ಪು.ಸಂ.6

58. ಎ.ಕ.ಸಂ.12.ಶಾ.ಸಂ.2,ಪು.ಸಂ.117

59. ಎ.ಕ.ಸಂ.12.ಶಾ.ಸಂ.22,ಪು.ಸಂ.129

60. ಎ.ಕ.ಸಂ.12.ಶಾ.ಸಂ.24,ಪು.ಸಂ.130

61. ಎ.ಕ.ಸಂ.16.ಶಾ.ಸಂ.69,ಪು.ಸಂ.12-13

62. ಎ.ಕ.ಸಂ.12.ಶಾ.ಸಂ.28,ಪು.ಸಂ.131-132

63. ಎ.ಕ.ಸಂ.16.ಶಾ.ಸಂ.39,ಪು.ಸಂ.65-66

64. ಎ.ಕ.ಸಂ.16.ಶಾ.ಸಂ.77,ಪು.ಸಂ.77

65. ಎ.ಕ.ಸಂ.16.ಶಾ.ಸಂ.75,ಪು.ಸಂ.17

66. ಎ.ಕ.ಸಂ.12.ಶಾ.ಸಂ.32,ಪು.ಸಂ.134

67. ಎ.ಕ.ಸಂ.16.ಶಾ.ಸಂ.157,ಪು.ಸಂ.72

68. ಎ.ಕ.ಸಂ.16.ಶಾ.ಸಂ.63,ಪು.ಸಂ.10

69. ಎ.ಕ.ಸಂ.12.ಶಾ.ಸಂ.12,ಪು.ಸಂ.125

70. ಎ.ಕ.ಸಂ.16.ಶಾ.ಸಂ.160,ಪು.ಸಂ.74

71. ಎ.ಕ.ಸಂ.12.ಶಾ.ಸಂ.8,ಪು.ಸಂ.122

72. ನೊಳಂಬರ ಇತಿಹಾಸ ದರ್ಶನ, ನೊಳಂಬ ಇತಿಹಾಸ ಪರಿಷತ್, ತಿಪಟೂರು, 1976, ಪು.ಸಂ.20-21

73. ಪೂರ್ವೋಕ್ತ, ಪು.ಸಂ.21

74. ಪೂರ್ವೋಕ್ತ, ಪು.ಸಂ.24-59

75. ಎ.ಕ.ಸಂ.16. ಶಾ.ಸಂ.118, ಪು.ಸಂ.51

76. ಎ.ಕ.ಸಂ.16. ಶಾ.ಸಂ.101, ಪು.ಸಂ.83

77. ಎ.ಕ.ಸಂ.16 ಶಾ.ಸಂ.29, ಪು.ಸಂ.49

78. ಟಿ.ಜಿ.ಚಂದ್ರಶೇಖರಪ್ಪ, ಭಾರತದ ಇತಿಹಾಸ (ಆರಂಭದಿಂದ 1707ರವರೆಗೆ) ಪೂರ್ಣ ಪ್ರಕಾಶನ, ಶಿವಮೊಗ್ಗ, 2003, ಪು.ಸಂ.273

79. ಎ.ಕ.ಸಂ.24, ಪೀಠಿಕೆ

80. ಎ.ಕ.ಸಂ.24, ಪೀಠಿಕೆ

81. ರಾಬರ್ಟ್ ಸೆವೆಲ್, ಮರೆತು ಹೋದ ಮಹಾ ಸಾಮ್ರಾಜ್ಯ ವಿಜಯನಗರ, ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು, 2015, ಪು.ಸಂ.31-32

82. ಎ.ಕ.ಸಂ.11. ಶೃಂಗೇರಿ, ಶಾ.ಸಂ.9

83. ಸಾಲೆತೊರೆ.ಬಿ.ಎ. ಸೋಷಿಯಲ್ ಅಂಡ್ ಪೊಲಿಟಿಕಲ್ ಲೈಫ್ ಇನ್ ದಿ ವಿಜಯನಗರ ಎಂಪೈರ್, 157-160

84. ಕೆ.ಎ.ನೀಲಕಂಠಶಾಸ್ತ್ರಿ. ಇಸ್ಟರಿ ಆಫ್ ಸೌತ್ ಇಂಡಿಯ, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, 1958, ಪು.ಸಂ.284, 251

85. ಸೂರ್ಯನಾಥ್ ಕಾಮತ್, ಪು.ಸಂ.158

86. ರಾಬರ್ಟ್ ಸೆವೆಲ್, ಪು.ಸಂ.128-129

87. ಕೆ.ಎ.ನೀಲಕಂಠಶಾಸ್ತ್ರಿ, ಇಸ್ಟರಿ ಆಫ್ ಸೌತ್ ಇಂಡಿಯ, ಪು.ಸಂ.256-260

88. ಪೂರ್ವೋಕ್ತ, ಪು.ಸಂ.263

89. ಟಿ.ಜಿ.ಚಂದ್ರಶೇಖರಪ್ಪ, ಪೂರ್ಣಪ್ರಕಾಶನ, 2003, ಪು.ಸಂ.112-113, ಭಾರತದ ಇತಿಹಾಸ (ಆರಂಭದಿಂದ 1707ರವರೆಗೆ)

90. ಎ.ಕ.ಸಂ.24. ಪೀಠಿಕೆ

91. ಎ.ಕ.ಸಂ.16. ಶಾ.ಸಂ.73, ಪು.ಸಂ.17

92. ಎ.ಕ.ಸಂ.16. ಶಾ.ಸಂ.107, ಪು.ಸಂ.84

93. ಎ.ಕ.ಸಂ.16.ಶಾ.ಸಂ.53,ಪು.ಸಂ.66-67

94. ಎ.ಕ.ಸಂ.16.ಶಾ.ಸಂ.108,ಪು.ಸಂ.84

95. ಎ.ಕ.ಸಂ.16.ಶಾ.ಸಂ.102,ಪು.ಸಂ.59

96. ಎ.ಕ.ಸಂ.16.ಶಾ.ಸಂ.5,ಪು.ಸಂ.65

97. ಎ.ಕ.ಸಂ.16.ಶಾ.ಸಂ.80,ಪು.ಸಂ.78-79

98. ಎ.ಕ.ಸಂ.16.ಶಾ.ಸಂ.83,ಪು.ಸಂ.20

99. ಎ.ಕ.ಸಂ.12.ಶಾ.ಸಂ.29,ಪು.ಸಂ.132-133

100. ಎ.ಕ.ಸಂ.12. ಶಾ.ಸಂ.33, ಪು.ಸಂ.134

101. ಎ.ಕ.ಸಂ.16. ಶಾ.ಸಂ.1, ಪು.ಸಂ.1

102. ಎ.ಕ.ಸಂ.24, ಪೀಠಿಕೆ

103. ಪೂರ್ವೋಕ್ತ

104. ಎಂ.ಎ.ಆರ್.1916, ಪು.ಸಂ.3

105. ಪೂರ್ವೋಕ್ತ

106. ಡಿ.ಎನ್. ಯೋಗೀಶ್ವರಪ್ಪ, ಹಾಗಲವಾಡಿ ನಾಯಕರು, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ವಿದ್ಯಾರಣ್ಯ, 1999, ಪು.ಸಂ.18

107. ಪೂರ್ವೋಕ್ತ. ಪು.ಸಂ.32

108. ಪೂರ್ವೋಕ್ತ.

109. ಪೂರ್ವೋಕ್ತ. ಪು.ಸಂ.33

110. ಪೂರ್ವೋಕ್ತ. ಪು.ಸಂ.33

111. ಅದೇ, ಪು.ಸಂ.34

112. ಅದೇ, ಪು.ಸಂ.35

113. ಅದೇ

114. ಅದೇ, ಪು.ಸಂ.36

115. ಅದೇ, ಪು.ಸಂ.37

116. ಅದೇ,

117. ಡಿ.ಎನ್.ಯೋಗೀಶ್ವರಪ್ಪ, 'ಕಲ್ಪಶೋಧ' (ತುಮಕೂರು ಜಿಲ್ಲಾ ಸಂಶೋಧನಾ ಲೇಖನಗಳು) ಪ್ರಗತಿಗ್ರಾಫಿಕ್ಸ್, ಬೆಂಗಳೂರು, 2012, ಪು.ಸಂ.114

# ಅಧ್ಯಾಯ–3

## ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ

ದಕ್ಷಿಣ ಭಾರತದಲ್ಲಿ ಕಲೆ ಮತ್ತು ವಾಸ್ತುಶಿಲ್ಪದ ಬಗ್ಗೆ ಅಧ್ಯಯನ ಮಾಡಿ ನೋಡುವುದಾದರೆ ಅದರಲ್ಲೂ ಕರ್ನಾಟಕದ ದೇವಾಲಯಗಳ ಪ್ರಾಚೀನತೆಯನ್ನು ಸೂಕ್ಷ್ಮವಾಗಿ ಗಮನಹರಿಸಿ ನೋಡಿದಾಗ ನಮಗೆ ಕ್ರಿಸ್ತಶಕದ ಪ್ರಾರಂಭದ ಶತಮಾನಗಳಲ್ಲಿ ಕನ್ನಡನಾಡಿನಲ್ಲಿ ದೇವಾಲಯಗಳು ಇದ್ದವೆಂಬುದಕ್ಕೆ ಪ್ರಾಚ್ಯವಸ್ತು, ಅವಶೇಷಗಳು ಅಲ್ಲದೇ ಲಭ್ಯವಾಗಿರುವ ಶಾಸನಾಧಾರಗಳಿಂದ ಸ್ಪಷ್ಟವಾಗಿ ತಿಳಿದುಬರುತ್ತದೆ. ಕನ್ನಡ ನಾಡಿನ ಗುಲ್ಬರ್ಗಾ ಜಿಲ್ಲೆಯ ಸನ್ನತಿಯು ಕ್ರಿ.ಶ.2ನೇ ಶತಮಾನದ ವೇಳೆಗಾಗಲೇ ಬೌದ್ಧಧರ್ಮದ ಬಹುಮುಖ್ಯ ನೆಲೆಯಾಗಿತ್ತು. ಅದಕ್ಕೆ ಸಾಕ್ಷಿಯಾಗಿ ಸ್ತೂಪ ಮತ್ತು ಇಟ್ಟಿಗೆಯ ಕಟ್ಟಡಗಳ ಅವಶೇಷಗಳು ಲಭ್ಯವಾಗಿವೆ.[1] ಅಲ್ಲದೇ ಇಲ್ಲಿ ಶಿಲ್ಪಾಲಂಕೃತ ಶಿಲಾಶಾಸನಗಳು, ಮೂರ್ತಿಶಿಲ್ಪಗಳ ಅವಶೇಷಗಳು ಅಪಾರ ಸಂಖ್ಯೆಯಲ್ಲಿ ದೊರೆತಿವೆ. ಅಲ್ಲದೇ ಇದಕ್ಕೆ ಪೂರಕವಾಗಿ ಬನವಾಸಿಯಲ್ಲಿ ದೊರೆತಿರುವ ಪ್ರಾಕೃತ ಭಾಷೆಯಲ್ಲಿರುವ ಎರಡು ಶಾಸನಗಳು ಇದಕ್ಕೆ ಸಾಕ್ಷಿಯಾಗಿವೆ.

ಒಂದನೇ ವಿನ್ಹಿ ಚುಟುಕುಲಾನಂದ ಶಾತಕರ್ಣಿಯ ಮಗಳಾದ ಶಿವಸ್ಕಂದ ನಾಗಶ್ರೀ ಎಂಬುವಳು ಮುಚಲಿಂಗನಾಗ ಪ್ರತಿಮೆ, ತಟಾಕ ಮತ್ತು ವಿಹಾರಗಳನ್ನು ನಿರ್ಮಾಣ ಮಾಡಿಸಿದಳೆಂದು ತಿಳಿದುಬರುತ್ತದೆ. ಕ್ರಿ.ಶ.ಸುಮಾರು 150ರಲ್ಲಿ ಬರೆಸಲಾದ ಕದಂಬರ ಪ್ರಾಕೃತ ಶಾಸನದಲ್ಲಿ[2] ಶಾತವಾಹನ ರಾಜನೋರ್ವನು ಮಟ್ಟಪಟ್ಟಿ ದೇವರಿಗೆ ದತ್ತಿಯನ್ನು ಬಿಟ್ಟುಕೊಟ್ಟ ವಿಷಯವನ್ನು ತಿಳಿಸುತ್ತದೆ. ಅಲ್ಲದೆ ಇದು ಮಹಾಮುನಿಗಳ ವಾಸಸ್ಥಾನವಾಗಿತ್ತೆಂದು ಉಲ್ಲೇಖಿತ ಗೊಂಡಿದೆ. ಗದಗ ಜಿಲ್ಲೆಯ ನರಗುಂದ ತಾಲೂಕಿನಲ್ಲಿರುವ ವಾಸನದಲ್ಲಿ ಶಾತವಾಹನ ದೊರೆಯಾದ ವಾಸಿಷ್ಟಪುತ್ರ ಶ್ರೀ ಪುಳುಮಾವಿಯು ಬರೆಸಲಾಗಿರುವ ಪ್ರಾಕೃತ ಶಾಸನವೊಂದು ಲಭ್ಯವಾಗಿದ್ದು (ಕ್ರಿ.ಶ.ಒಂದು ಅಥವಾ ಎರಡನೇ ಶತಮಾನ) ಅದರಲ್ಲಿ ಪುಳುಮಾವಿಯು ಚಂಡಶಿವ ದೇವಾಲಯವನ್ನು ನಿರ್ಮಾಣ ಮಾಡಿದ ಬಗ್ಗೆ ಉಲ್ಲೇಖವಿದೆ.[3]ಈ ದೇವಾಲಯವನ್ನು ಕರ್ನಾಟಕದಲ್ಲಿ ಇದುವರೆಗೆ ತಿಳಿದಿರುವ ಅತೀ ಪ್ರಾಚೀನ ಶೈವ ದೇವಾಲಯವೆಂದು ಉಲ್ಲೇಖವಾಗಿದೆ. ಇದರಂತೆಯೇ ಅಂಕೋಲಾದ ಸಮೀಪವಿರುವ ಬೊಳೆಯಲ್ಲಿ ದೊರೆತಿರುವ ಶಿವನ ಲಿಂಗವು ಮೂರು ಭಾಗಗಳಿಂದ ಕೂಡಿದ್ದು (ಬ್ರಹ್ಮ, ವಿಷ್ಣು, ಮಹೇಶ್ವರ) ಬ್ರಹ್ಮಸೂತ್ರವನ್ನು ಹೊಂದಿದೆ.[4] ಕ್ರಿ.ಶ.ಸುಮಾರು 450ರಲ್ಲಿ ಬರೆಸಲಾದ ತಾಳಗುಂದ ಶಾಸನವು ಪ್ರಣವೇಶ್ವರ ದೇವಾಲಯದ ಬಗ್ಗೆ ಮಾಹಿತಿಯನ್ನು ಒದಗಿಸುತ್ತದೆ. ಶಾತವಾಹನರು ಈ ದೇವರನ್ನು

ಆರಾಧಿಸುತ್ತಿದ್ದರೆಂದು ಶಾಸನದಲ್ಲಿ ತಿಳಿಸಲಾಗಿದೆ. ಇದು ಕದಂಬ ಮೃಗೇಶವರ್ಮನ ಕಾಲದಲ್ಲಿಯೂ ಸಹ ರಾಜಗೌರವ ಪಡೆದಿತ್ತು.

ಬನವಾಸಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ಮಾಡಿದ ಬನವಾಸಿ ಕದಂಬರ (ಕ್ರಿ.ಶ.325-540) ದೇವಾಲಯಗಳು ಈಗ ಕಾಣಬರುವುದಿಲ್ಲವಾದರೂ ದೇವಾಲಯಗಳು ಇಲ್ಲಿ ನಿರ್ಮಾಣಗೊಂಡ ಬಗ್ಗೆ ಶಾಸನಗಳು ಸ್ಪಷ್ಟ ಮಾಹಿತಿಯನ್ನು ಒದಗಿಸುತ್ತವೆ. ಹಲಸಿಯ ತಾಮ್ರಶಾಸನಗಳು ಮೃಗೇಶವರ್ಮನು ಶ್ರೀವಿಜಯ ಶಿಲಾಶಿಲಕದಲ್ಲಿ ಜಿನಾಲಯವೊಂದನ್ನು ನಿರ್ಮಿಸಿದನೆಂದು ತಿಳಿಸುತ್ತದೆ.[5] ಶಿರಸಿಯ ತಾಮ್ರಪಟಗಳು ರವಿವರ್ಮನ ವೇದ್ಯನೀಲಕಂಠ ದೇಶಮಾತ್ಯನು ಬನವಾಸಿಯಲ್ಲಿ ಮಹಾದೇವಾಲಯವನ್ನು ನಿರ್ಮಿಸಿದನೆಂದು ಹೇಳುತ್ತವೆ.[6] ರವಿವರ್ಮನ ಗುಡ್ನಾಪುರ ಶಾಸನವೊಂದು ಮನ್ಮಥ ಜಿನಾಲಯವೊಂದರ ನಿರ್ಮಾಣವನ್ನು ತಿಳಿಸುತ್ತದೆ.[7] ಪಟ್ಟದಕಲ್ಲಿನ ಸುತ್ತಮುತ್ತ ಶೋಧನೆ ನಡೆಸಿ ಕದಂಬರ ಕಾಲದ ಕೆಲವು ದೇವಾಲಯಗಳ ಕಟ್ಟಡದ ಅವಶೇಷಗಳನ್ನು ಪ್ರೊ.ಅ.ಸುಂದರರವರು ಪತ್ತೆಹಚ್ಚಿದ್ದಾರೆ.[8] ಇದೇ ವೇಳೆಯಲ್ಲಿ ದಕ್ಷಿಣ ಕರ್ನಾಟಕದಲ್ಲಿ ರಾಜ್ಯವಾಳಿದ ಗಂಗರ ಕಾಲದ ಶಾಸನಗಳಲ್ಲಿಯೂ ಕೂಡ ಗಂಗರು ಕಟ್ಟಿಸಿದ ದೇವಾಲಯ ಮತ್ತು ಬಸದಿಗಳ ಉಲ್ಲೇಖಗಳಿವೆ. ಹರಿವರ್ಮನ ಕಾಲದ "ಮೂಲಸ್ಥಾನೇಶ್ವರ", ಅವನೀತ ಕಟ್ಟಿಸಿದ "ವಿನಿತೇಶ್ವರ", ಮಾಧವ ಅನವೀತರ ಕಾಲದ ಅರ್ಹದಾಯತನ, "ನೀತಿಮಾರ್ಗೇಶ್ವರ", "ಶಿವಮಾರೇಶ್ವರ", ಶಿವಮಾರನ ಬಸದಿಗಳನ್ನು ಉದಾಹರಣೆಯಾಗಿ ನೀಡಬಹುದು. ಇವುಗಳಲ್ಲಿ ಬಹಳಷ್ಟು ಶಿಥಿಲಗೊಂಡಿದ್ದು ಕೆಲವು ಜೀರ್ಣೋದ್ಧಾರವಾಗಿವೆ.[9]

ಬಾದಾಮಿ ಚಾಲುಕ್ಯರು ಕ್ರಿ.ಶ.6ನೇ ಶತಮಾನದಲ್ಲಿ ಗುಹಾಲಯಗಳನ್ನಲ್ಲದೇ ರಚನಾತ್ಮಕ ದೇವಾಲಯಗಳ ನಿರ್ಮಾಣವನ್ನು ಪ್ರಾರಂಭಿಸಿ ಚಾಲುಕ್ಯ ವಾಸ್ತುರಚನೆಗೆ ಕಾರಣರಾದರು. ಇವರ ಕಾಲದಲ್ಲಿ ಪ್ರಮುಖ ವಾಸ್ತುಶಿಲ್ಪ ಕೇಂದ್ರವಾದ ಐಹೊಳೆಯನ್ನು ದೇವಾಲಯಗಳ ನಗರವೆಂದೂ ಭಾರತೀಯ ದೇವಾಲಯಗಳ ವಾಸ್ತುಶಿಲ್ಪದ ತೊಟ್ಟಿಲು ಎಂದು ಕರೆಯಲಾಗಿದೆ.[10]

ಮೊದಲನೇ ಹಂತವು ಗುಹಾಂತರ ದೇವಾಲಯಗಳ ನಿರ್ಮಾಣವಾಗಿದ್ದು ಇದು ಬಾದಾಮಿ ಮತ್ತು ಐಹೊಳೆಯಲ್ಲಿ ಎರಡನೇ ಹಂತವು ನಿರ್ಮಿತ ವಾಸ್ತುಶಿಲ್ಪದ ಕಲೆಯು ಇಲ್ಲಿ ಶಿಲ್ಪಗಳ ಲಾಲಿತ್ಯ, ಗಾಂಭೀರ್ಯ ಮತ್ತು ನವ್ಯತೆಗಳು ಬೆಳಕಿಗೆ ಬಂದವು. ಐಹೊಳೆ, ಪಟ್ಟದಕಲ್ಲು ಮತ್ತು ಆಂಧ್ರಪ್ರದೇಶದ ಆಲಂಪುರಗಳಲ್ಲಿ ಇವುಗಳನ್ನು ನಾವು ವಿಶೇಷವಾಗಿ ಕಾಣಬಹುದಾಗಿದೆ.

ಬಾದಾಮಿ ಚಾಲುಕ್ಯರು ಪ್ರತಿಮಾ ಪೂಜೆಯನ್ನಲ್ಲದೆ ವೈದಿಕ ಮತದ ಯಜ್ಞಯಾಗಗಳ ಆಚರಣೆ ಮತ್ತು ಪ್ರತಿಮಾ ಪೂಜೆಯನ್ನಪ್ಪುವ ಪುರಾಣಗಳ ಆಸರೆ ಪಡೆದ ಅದೇ ವೈದಿಕ ಧರ್ಮದ ಪ್ರತಿಮೆಗಳ ಪ್ರತಿಷ್ಠೆ ಹಾಗೂ ಅವುಗಳಿಗೆ ದೇವಾಲಯ ನಿರ್ಮಾಣವಾದಂತಹ ಚಟುವಟಿಕೆಯ ಕಾರ್ಯಕ್ರಮಗಳು ಏಕಕಾಲದಲ್ಲಿಯೇ ನಡೆಯುತ್ತಾ ಸಮನ್ವಯತೆಯನ್ನು ಸಾಧಿಸುವ ಪ್ರಯತ್ನ ಮಾಡಿದರು. ಇದು ಕ್ರಿ.ಶ.578ರಲ್ಲಿ ಬರೆಸಲಾದ ಬಾದಾಮಿಯ ಗುಹಾಶಾಸನದಿಂದ ನಮಗೆ ಸ್ಪಷ್ಟವಾಗಿ ತಿಳಿದುಬರುತ್ತದೆ.[11] ಬಾದಾಮಿ, ಐಹೊಳೆ, ಪಟ್ಟದ ಕಲ್ಲುಗಳಲ್ಲಿರುವ ದೇವಾಲಯಗಳ ರಚನೆಗಳನ್ನು ವಿಶ್ಲೇಷಿಸಿ ದೇವಾಲಯಗಳು ಬೆಳೆದು ಬಂದ ದಾರಿಯನ್ನು ಗುರ್ತಿಸಲು ಹಲವಾರು ಪ್ರಯತ್ನಗಳು ಇದುವರೆಗೂ ನಡೆಯುತ್ತಲೇ ಇವೆ. ಐಹೊಳೆಯ ಲಾಡಖಾನ್ ದೇವಾಲಯ ಗೌಡರಗುಡಿ ಕೊಂತಿಗುಡಿಗಳನ್ನು ಆರಂಭಿಕ ದೇವಾಲಯಗಳೆಂದು ಗುರ್ತಿಸಲಾಗಿದೆ. ಇವುಗಳ ಪ್ರಾಚೀನತೆಯ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಐಹೊಳೆಯಲ್ಲಿ ಕಂಡುಬರುವಷ್ಟು ದೇವಾಲಯಗಳ ವೈವಿಧ್ಯತೆ ಬೇರೆ ಯಾವುದೇ ಸ್ಥಳಗಳಲ್ಲೂ ಕಂಡುಬರುವುದಿಲ್ಲ. ಬಾದಾಮಿ ಚಾಲುಕ್ಯರ ಕಾಲದಲ್ಲಿ ಸಾಂದಾರ ಹಾಗೂ ನಿರಾಂದರ ಎರಡು ರೀತಿಯ ದೇವಾಲಯಗಳು ನಿರ್ಮಾಣಗೊಂಡವು. ಬಾದಾಮಿ ಚಾಲುಕ್ಯರು ಅವರ ಕಾಲದ ಶಿಲ್ಪಗಳು ರೇಖಾ ನಾಗರ, ಕದಂಬ ನಾಗರ ಮತ್ತು ದ್ರಾವಿಡ ಶಿಖರಗಳನ್ನು ತಮ್ಮ ದೇವಾಲಯಗಳಲ್ಲಿ ಅಳವಡಿಸಿಕೊಂಡರು. ಐಹೊಳೆ, ಪಟ್ಟದಕಲ್ಲು, ಬಾದಾಮಿ ಇವುಗಳು ಶಾತವಾಹನರ ಕಾಲದಿಂದ ಕಲ್ಯಾಣ ಚಾಲುಕ್ಯರ ಕಾಲದವರೆಗೂ ನಿರಂತರವಾಗಿ ದೇವಾಲಯಗಳ ನಿರ್ಮಾಣದ ಕೇಂದ್ರಗಳಾಗಿರುವುದಕ್ಕೆ ಶಾಸನಗಳು ಮತ್ತು ಇದುವರೆಗೂ ಉಳಿದಿರುವ ದೇವಾಲಯದ ಅವಶೇಷಗಳು ಸಾಕ್ಷಿಯಾಗಿವೆ.

ಬಾದಾಮಿ ಚಾಲುಕ್ಯರಿಂದ ಕರ್ನಾಟಕದ ವಾಸ್ತುಶಿಲ್ಪ ರಚನೆಗೆ ನಿರ್ದಿಷ್ಟವಾದ ನೆಲೆಯೊಂದು ದೊರಕಿದಂತಾಯಿತು. ಇವರ ವಾಸ್ತುಶಿಲ್ಪ ಕ್ರಮವನ್ನು ಅನುಸರಿಸಿ ಮುಂದೆ ಬಂದಂತಹ ರಾಷ್ಟ್ರಕೂಟರು ಕಲ್ಯಾಣದ ಚಾಲುಕ್ಯರು, ಹೊಯ್ಸಳರು ಹಾಗೂ ವಿಜಯನಗರ ಸಾಮ್ರಾಜ್ಯದ ಅರಸರು ಕರ್ನಾಟಕದಲ್ಲಿರುವ ವಾಸ್ತುಶಿಲ್ಪಕ್ಕೆ ತಮ್ಮದೆಯಾದ ಕೊಡುಗೆಯನ್ನು ನೀಡಿ ಕೃತಾರ್ಥರಾಗಿದ್ದಾರೆ.

**ವಾಸ್ತುಶಿಲ್ಪ**: ಶಿಲ್ಪ ಎನ್ನುವುದು ಮೊದಲು ಬಹಳ ವಿಶಾಲವಾದಂತಹ ಅರ್ಥವನ್ನು ಪಡೆದಿತ್ತು. ಅದು ಪ್ರಸಿದ್ಧವಾದ ಅರವತ್ತನಾಲ್ಕು ಕಲೆಗಳಿಗೆಲ್ಲ ಶಿಲ್ಪ ಎನ್ನುವ ಹೆಸರೇ ಅನ್ವಯವಾಗುತ್ತಿತ್ತು.[12] ವಾಸ್ತುಶಿಲ್ಪ ಅದರಲ್ಲಿನ ಒಂದು ಭಾಗವೆಂದು ಹೇಳಬಹುದು. ಮಯಮತ ಗ್ರಂಥವು ವಾಸ್ತು ವಿಷಯದ ಕುರಿತು ಮರ್ತ್ಯರು ಮತ್ತು ಅಮರ್ತ್ಯರು ವಾಸಿಸುವ ಸ್ಥಳಕ್ಕೆ 'ವಸ್ತು' ಎಂದು ಹಾಗೂ

ವಸ್ತುವನ್ನು ಆಶ್ರಯಿಸಿದ್ದು "ವಾಸ್ತು" ಎಂದು ಹೇಳಿದೆ. ಮುಂದೆ ಪ್ರಸಾದ, ಹರ್ಮ್ಯ, ಸೌದ ಇತ್ಯಾದಿಗಳು ವಸ್ತುವನ್ನು ಆಶ್ರಯಿಸಿದ್ದು, ವಾಸ್ತು ಎಂದೆನಿಸಿಕೊಳ್ಳುತ್ತದೆ.[13] ಈ ನಮ್ಮ ಭೂಮಿಯನ್ನು ಒಂದು ವಾಸ್ತು ಎಂದು ಪರಿಗಣಿಸಿ ಅದರ ಮೇಲೆ ನಿರ್ಮಿಸಲಾದ, ಗ್ರಾಮಗಳು, ನಗರಗಳು, ಕೋಟೆಗಳು, ಪಟ್ಟಣಗಳು, ಮಠಗಳು ಸಹ ವಾಸ್ತುಗಳೆಂದು ಗರುಡ ಪುರಾಣದಲ್ಲಿಯೂ ಹೇಳಲಾಗಿದೆ.[14]

ವಾಸ್ತುಶಾಸ್ತ್ರಕ್ಕೆ ಸಂಬಂಧಿಸಿದ ಗ್ರಂಥಗಳು ಪ್ರಾಚೀನ ಶಾಸ್ತ್ರಗಳಲ್ಲಿ ಒಂದೆಂದು ಪರಿಗಣಿತವಾಗಿದೆ. ಈ ಗ್ರಂಥಗಳನ್ನು ಶಿಲ್ಪಶಾಸ್ತ್ರಗ್ರಂಥಗಳೆಂದು ಕರೆಯಲಾಗಿದೆ.[15] ಶಿಲ್ಪ ಶಾಸ್ತ್ರವನ್ನು ಒಂದು ಉಪಪಂಥವೆಂದೂ ಹೇಳಲಾಗುತ್ತಿದೆ. ಋಗ್ವೇದಕ್ಕೆ ಆಯುರ್ವೇದವು, ಯಜುರ್ವೇದಕ್ಕೆ ಧನುರ್ವೇದವು, ಸಾಮವೇದಕ್ಕೆ ಗಾಂಧರ್ವವೇದವು ಉಪವೇದಗಳಿದ್ದಂತೆ ಅಥರ್ವಣವೇದಕ್ಕೆ ಸ್ಥಾಪತ್ಯವೇದವು ಉಪವೇದವಾಗಿದೆ.[16] ಸುಮಾರು 6-7ನೇ ಶತಮಾನದ ವರಾಹ ಮಿಹಿರ್‌ನ ಬೃಹತ್ಸಂಹಿತೆ ಎಂಬ ಗ್ರಂಥವು ವಾಸ್ತುಶಿಲ್ಪಾ ಚಾರ್ಯರೆನಿಸಿದ ಮಯ, ಗಾರ್ಗಿ, ವಿಶ್ವಕರ್ಮ ರೂಪಿಸಿದ ಪ್ರಮಾಣ ವಾಕ್ಯಗಳನ್ನು ಒಳಗೊಂಡ ಗ್ರಂಥಗಳಾಗಿವೆ. ಕ್ರಿ.ಶ.7ನೇ ಶತಮಾನದವುಗಳೆನ್ನಲಾದ ಹಯಶೀರ್ಷ, ಪಂಚರಾತ್ರ, ತಂತ್ರ ಸಾಹಿತ್ಯವು ಪುರಾಣದ ಸಾಹಿತ್ಯಗಳಾದ ವಿಷ್ಣುಧರ್ಮೋತ್ತ್ರ, ಮತ್ಸ್ಯ, ಗರುಡ, ಪುರಾಣಗಳು, ಸುಪ್ರಭೇಧಾಗಮ, ಕಾಮಿಕಾಗಮ, ಕಾರಣಾಗಮ, ರೌರವಾಗಮ, ಅಜಿತಾಗಮ, ವೈಖಾನಸಾಗಮ ಮುಂತಾದ ಆಗಮ ಗ್ರಂಥಗಳು ವಾಸ್ತುಶಿಲ್ಪಶಾಸ್ತ್ರದ ವಿಷಯಗಳನ್ನು ಒಳಗೊಂಡಿವೆ.

ಪ್ರತ್ಯೇಕವಾಗಿ ವಾಸ್ತುಶಿಲ್ಪಕ್ಕೆ ಸಂಬಂಧಿಸಿದಂತಹ ಆಧಾರ ಗ್ರಂಥಗಳನ್ನು ಮತ್ತು ಔತ್ತರೇಯ ಗ್ರಂಥಗಳೆಂದು ವಿಭಾಗಿಸಲಾಗಿದೆ. ಕ್ರಿ.ಶ.11ನೇ ಶತಮಾನದ ಭುವನ ಪ್ರದೀಪನ ಅಪರಾಜಿತ ಪೃಚ್ಛಾ ಕ್ರಿ.ಶ.ಸು.10-11ನೇ ಶತಮಾನದಲ್ಲಾದ ಭೋಜನ ಸಮರಾಂಗಣ ಸೂತ್ರಧಾರ, ಮತ್ಸ್ಯ ಪುರಾಣಕ್ಕೂ ಮೊದಲಿನ ಕಾಲವೆನ್ನಲಾದ ವಿಶ್ವಕರ್ಮನ, ವಿಶ್ವಕರ್ಮ ಪ್ರಕಾಶ, ಕ್ರಿ.ಶ.10ನೇ ಶತಮಾನದ ಮಂಡನನ ರೂಪಮಂಡನಾ ಗ್ರಂಥಗಳು ಔತ್ತರೇಯ ಗ್ರಂಥಗಳು ಅದರಂತೆ ಕ್ರಿ.ಶ.9ನೇ ಶತಮಾನದ ಮಯಮತ, ಕ್ರಿ.ಶ.5ನೇ ಶತಮಾನದ ಮಾನಸಾರ ಕ್ರಿ.ಶ.15ನೇ ಶತಮಾನದ ತಂತ್ರಸಮುಚ್ಚಯ, ಕಾಶ್ಯಪಶಿಲ್ಪ, ವಿಮಾನಾರ್ಚನ ಕಲ್ಪ, ಪದ್ಮಸಂಹಿತಾ, ಪ್ರಯೋಗ ಮಂಜರಿಲ ಕ್ರಿಶ.16ನೇ ಶತಮಾನದ ವಾಸ್ತುವಿದ್ಯಾ, ಶ್ರೀಕುಮಾರನ ಶಿಲ್ಪರತ್ನ ಮುಂತಾದ ಗ್ರಂಥಗಳು ದಕ್ಷಿಣಾತ್ಯ ಗ್ರಂಥಗಳೆಂದು ವಿದ್ವಾಂಸರು ಗುರುತಿಸಿದ್ದಾರೆ.

**ದೇವಾಲಯದ ವಾಸ್ತು:–** ತಮಗಾಗಿ ನಿರ್ಮಿಸಿಕೊಂಡ ಮನೆ ಗೃಹವಾಸ್ತು ಶಿಲ್ಪವೆನಿಸಿಕೊಂಡರೆ ದೇವರಿಗಾಗಿ ಕಟ್ಟಿದ ಆಲಯವು "ದೇವಾಲಯದ ವಾಸ್ತುಶಿಲ್ಪ" ಎನಿಸಿಕೊಂಡರು. ದೇವಾಲಯ ಗಳನ್ನು ನಿರ್ಮಾಣ ಮಾಡುವ ಮುನ್ನ ಅದಕ್ಕೆ ಉತ್ತಮವಾದಂತಹ ಸ್ಥಳವನ್ನು ಆಯ್ಕೆ ಮಾಡಿಕೊಳ್ಳಲಾಗುತ್ತದೆ. ಸಾಮಾನ್ಯವಾಗಿ ಎಲ್ಲಾ ಶಿಲ್ಪಶಾಸ್ತ್ರಗಳಲ್ಲಿ ಭೂಪರೀಕ್ಷೆ ಎಂಬ ಶೀರ್ಷಿಕೆಯ ಪ್ರತ್ಯೇಕ ಅಧ್ಯಾಯವು ಪ್ರಾರಂಭದಲ್ಲಿಯೇ ಇರುತ್ತದೆ. ಇದರ ಬಗ್ಗೆ ವಿಸ್ತಾರವಾದಂತಹ ವಿವರಣೆಗಳು ದೊರೆಯುತ್ತವೆ. ಶತಪಥ ಬ್ರಾಹ್ಮಣದಲ್ಲಿ ಭೂಮಿ ಆಯ್ಕೆಯ ಬಗ್ಗೆ ಬಹಳಷ್ಟು ಮಹತ್ವವಾದಂತಹ ಅಂಶಗಳನ್ನು ಹೇಳಲಾಗಿದೆ.[17] ಈ ಸ್ಥಳದ ಆಯ್ಕೆಯ ತರುವಾಯ ಕಟ್ಟಡದ ತಳನಕ್ಷೆಯನ್ನು ತಯಾರಿಸಲಾಗುತ್ತದೆ. ಇದೇ ವಾಸ್ತುಪುರುಷ ಮಂಡಲ, ಭಾರತೀಯ ಕಟ್ಟಡ ರಚನಾ ವಿನ್ಯಾಸದ ಮೂಲ ಸ್ವರೂಪವು ಚಚೌಕಾಕೃತಿ ಇದೇ ಅದರ ಮುಖ್ಯ ರೂಪ ಇದನ್ನು ತ್ರಿಕೋನ, ಷಟ್ಕೋನ, ಅಷ್ಟಕೋನ, ವೃತ್ತವಾಗಿಯೂ ಪರಿವರ್ತಿಸಬಹುದು. ವೇದಗಳ ಕಾಲದಲ್ಲಿ ಯಜ್ಞಕುಂಡಗಳು ಚೌಕಾಕಾರ ಹಾಗೂ ಇತರ ಜ್ಯಾಮಿತಿಯ ಆಕಾರಗಳಲ್ಲಿ ಇರುತ್ತಿದ್ದವು. ಅದೇ ರೀತಿಯಾಗಿ ಯಜ್ಞವೇದಿಗಳು ಮಾತ್ರ ಚೌಕಾಕಾರದಲ್ಲಿಯೇ ಇರುತ್ತಿದ್ದವು. ಇದರ ಬಗ್ಗೆ ಪ್ರೊ.ಸ್ಟೆಲ್ಲಾ ಕ್ರಮ್ರಿಶ್ ಅವರು,[18]ಯಜ್ಞ ಮತ್ತು ದೇವಾಲಯಗಳ ಶಿಲ್ಪಗಳ ಮೂಲಭೂತ ಸಂಕೇತವಾಗಿ ಚೌಕವಿದೆ. ಬೌದ್ಧಾಯನನ್ನು ಮೊದಲು ರಥಚಕ್ರ ಚಿತಿಯನ್ನು ನಿರ್ಮಾಣ ಮಾಡುವುದರ ಬಗ್ಗೆ ಹೇಳಿರುವುದನ್ನು ವ್ಯಾಖ್ಯಾನಕಾರನು ವಿಸ್ತರಿಸುತ್ತಾ ಮೊದಲಿಗೆ ನಾಲ್ಕು ಇಟ್ಟಿಗೆಗಳಿಂದ ಸಣ್ಣಚಭಕವನ್ನು ಅಗ್ನಿಕ್ಷೇತ್ರದ ಮಧ್ಯೆ ನಿರ್ಮಿಸುವುದನ್ನು ಹೇಳುತ್ತಾನೆ. ಇದನ್ನೇ ಹಿಗ್ಗಿಸಿ ಹದಿನಾರು ಇಟ್ಟಿಗೆಗಳನ್ನು ಬಳಸುವ ಕ್ರಮವನ್ನು ಹೇಳುತ್ತಾನೆ. ವಾಸ್ತುಶಾಸ್ತ್ರದಲ್ಲಿ ಈ ರೀತಿಯಾಗಿ 1, 2, 3, 4 ಮುಂತಾಗಿ ಚೌಕಗಳು ಇರುವಂತೆ ಅನುಕ್ರಮ ಶ್ರೇಣಿಯಲ್ಲಿ ವಾಸ್ತುಮಂಡಲದ ಚೌಕಗಳ ಸಂಖ್ಯೆ ಏರುತ್ತಾ ಸಾಗುತ್ತದೆ. ಇವುಗಳಲ್ಲಿ 64 ಚೌಕಗಳ ವಾಸ್ತುಮಂಡಲವು ಬಹುಶ್ರೇಷ್ಠ ಎಂದು ಪರಿಗಣಿತವಾಗಿದೆ. ಇದು ವೇದಿ ನಿರ್ಮಾಣದ 64 ಇಟ್ಟಿಗೆಗಳೊಂದಿಗೆ ಸಂಬಂಧ ಇರಿಸಿಕೊಂಡು ಪಾವನವೆಂದು ಗ್ರಹಿಸಲಾಗಿದೆ ಎಂದು ಹೇಳಿದ್ದಾರೆ. ವಾಸ್ತುಪುರುಷ ಮಂಡಲವು ವಾಸ್ತುಪುರುಷನ ರೂಪ ಹಾಗೂ ಯಂತ್ರವಾಸ್ತು ಪುರುಷನನ್ನು ಮಾನವಾಕಾರದಲ್ಲಿ ಚಿತ್ರಿಸಲಾಗಿದೆ. 64 ಚೌಕಗಳ ಮಂಡಲದಲ್ಲಿ ಈತನ ಶಿರಸ್ಸು ಪೂರ್ವಾಭಿಮುಖವಾಗಿದ್ದು ಪಾದಗಳು ಪಶ್ಚಿಮಕ್ಕಿರುತ್ತವೆ. ಈತನ ಅಂಗಗಳ ಮೇಲೆ 44 ದೇವತೆಗಳಿರುತ್ತಾರೆ. ಹೊರ ಅಂಚಿನ ಭಾಗದಲ್ಲಿ ವಾಸ್ತುಮಂಡಲದ ಪರಿಧಿಯಲ್ಲಿ 32 ದೇವತೆಗಳು ಮತ್ತು ಮಧ್ಯಭಾಗದ ಸುತ್ತಲೂ ಒಳಅಂಚಿನಲ್ಲಿ 12 ದೇವತೆಗಳು, 32 ದೇವತೆಗಳನ್ನು ಪ್ರಾಕಾರ ದೇವತೆಗಳೆಂದು ಕರೆಯಲಾಗಿದೆ.[19] ದೇವಾಲಯಗಳನ್ನು ನಿರ್ಮಾಣ ಮಾಡಲು ಮಣ್ಣು, ಇಟ್ಟಿಗೆ, ಮರ ಮತ್ತು ಶಿಲೆಗಳೇ

ಪ್ರಧಾನವಾದ ವಸ್ತುಗಳು. ಮಹಾನಿರ್ಮಾಣ ತಂತ್ರವು ಶಿಲೆಗಳಿಂದ ನಿರ್ಮಿಸಿದ ಕಟ್ಟಡವು ಹೆಚ್ಚು ಶ್ರೇಯಸ್ಕರ ಎಂದು ಹೇಳಲಾಗಿದೆ. ಇಟ್ಟಿಗೆಯಿಂದ ನಿರ್ಮಿಸಿದ ಕಟ್ಟಡವು ಮರದ ನಿರ್ಮಾಣಕ್ಕಿಂತ ನೂರುಪಟ್ಟು ಉತ್ತಮವಾದರೆ ಶಿಲಾ ನಿರ್ಮಿತಿಗಳು ಹತ್ತು ಸಾವಿರದಷ್ಟು ಶ್ರೇಯಸ್ಕರ ಎಂದು ವಿವರಿಸಲಾಗಿದೆ.[20] ಶಾಸ್ತ್ರಗ್ರಂಥಗಳು ಈ ಪ್ರಧಾನ ವಸ್ತುಗಳ ಬಗ್ಗೆ ಸಾಕಷ್ಟು ವಿವರಣೆಯನ್ನು ನೀಡುತ್ತವೆ. ನೆಲದಲ್ಲಿರುವ ಮಣ್ಣನ್ನು ಹೊರತೆಗೆದು ಅದನ್ನು ಬಲವರ್ಧನೆಗೊಳಿಸಲು ಹಲವು ಮಾರ್ಗಗಳನ್ನು ಶತಪಥ ಬ್ರಾಹ್ಮಣದಲ್ಲಿ ಬೌದ್ಧಾಯನ ಕಲ್ಪ ಸೂತ್ರದಲ್ಲಿ ಅಪರಾಜಿತ–ಪೃಚ್ಛ ಮುಂತಾದ ಶಾಸ್ತ್ರಗ್ರಂಥಗಳು ಹೇಳುತ್ತವೆ.[21] ಇಟ್ಟಿಗೆಯನ್ನು ಸಂಸ್ಕೃತದಲ್ಲಿ ಇಷ್ಟಕ ಎನ್ನುತ್ತಾರೆ, ಇದರ ಪ್ರಯೋಗವು ಯಜುರ್ವೇದದಲ್ಲಿಯೇ ಇದೆ. ಇಷ್ಟಕಗಳನ್ನು ತಯಾರಿಸುವ ಕ್ರಮವನ್ನು ಶಿಲ್ಪರತ್ನದಲ್ಲಿ ಹೇಳಿದೆ. ಕಲ್ಪಸೂತ್ರದಲ್ಲಿ ಶೌತ್ರಸೂತ್ರ, ಗೃಹಸೂತ್ರ, ಧರ್ಮಸೂತ್ರ ಮತ್ತು ಕಲ್ಪ ಸೂತ್ರಗಳೆಂಬ ನಾಲ್ಕು ಭಾಗಗಳಿವೆ. ಶೌತ್ರಸೂತ್ರ ವಿವರಿಸುವ ಯಜ್ಞವೇದಿ–ಕುಂಡಗಳ ನಿರ್ಮಾಣ ಮತ್ತು ಯಜ್ಞಸಿದ್ಧಿಗೆ ಬೇಕಾಗಿರುವ ಇಟ್ಟಿಗೆ ಮತ್ತಿತರ ಪರಿಕರಣಗಳನ್ನು ತಯಾರಿಸುವ ಕ್ರಮವನ್ನು ಕಲ್ಪಸೂತ್ರ ವಿವರಣೆ ನೀಡುತ್ತದೆ.[22] ಇದೇ ರೀತಿ ಮರದ ಬಗ್ಗೆ ಸಾಕಷ್ಟು ವಿವರಣೆಯನ್ನು ನೀಡುವ ಶಾಸ್ತ್ರಗ್ರಂಥಗಳು ಮರವನ್ನು ವಯೋಮಾನ, ದೋಷಗಳು ಮತ್ತು ಲಿಂಗ ಇವುಗಳ ಆಧಾರದಿಂದ ವರ್ಗೀಕರಿಸಿದೆ. ಹಾಗೆಯೇ ಶಿಲೆಗಳ ಸ್ವೀಕಾರ ನಿರಾಕರಣೆಯನ್ನು ಅವುಗಳ ಬಣ್ಣ, ಲಿಂಗ ಮತ್ತು ವಯೋಮಾನಗಳ ಆಧಾರಗಳಿಂದ ತೀರ್ಮಾನಿಸಬಹುದಾಗಿದೆ.[23]

**ಪ್ರಸಾದ ವಿಮಾನ**:– ದೇವಾಲಯಗಳನ್ನು ಪ್ರಸಾದ ಅಥವಾ ವಿಮಾನ ಎಂದು ಕರೆಯಲಾಗಿದೆ ತನ್ನ ಸೌಂದರ್ಯದಿಂದ ದೇವರನ್ನು ಮನುಷ್ಯರನ್ನು ಆಹ್ಲಾದಗೊಳಿಸುತ್ತದೆ ಎಂಬ ಕಾರಣದಿಂದ ಅದನ್ನು ಪ್ರಸಾದವೆನ್ನಲಾಗಿದೆ. ಪ್ರಸಾದ ಎಂಬ ಮಾತು ದೇವರ ಮೂರ್ತಿ ಇರಬೇಕಾದ ಚೌಕಾಕಾರದ ನಾಲ್ಕು ದಪ್ಪನಾದ ಗೋಡೆಗಳ ನಡುವಣ ಕಿರಿದಾದ ಗರ್ಭಗೃಹ, ಅದರ ಕೆಳಗಿನ ಅಧಿಷ್ಠಾನ ಅಥವಾ ಉಪಪೀಠ ಹಾಗೂ ಶಿಖರಕ್ಕೆ ಆಸರೆಯಾಗಿರುವಂಥ ಮೇಲು ಕಟ್ಟಡವನ್ನೊಳಗೊಂಡ ಭಾಗಕ್ಕೆ ಅನ್ವಯಿಸುತ್ತದೆ. ಈ ರೀತಿ ಸಮಗ್ರ ಪಾದವು ಒಂದು ಭಿತ್ತಿಯನ್ನು ಸೂಚಿಸುವಂತೆ ಇದೆ. ಪ್ರಸಾದ, ಸದ್ಮ, ಸದನಮ್ ಎಂಬ ಹೆಸರುಗಳು ಸಾಧನಮ್ ವೇದಿಯನ್ನು ಒಟ್ಟುಗೂಡಿಸುವಿಕೆ ಎಂಬ ಮೂಲ ಶಬ್ದದಿಂದಲೇ ಬಂದಿರುವಂತಹವುಗಳು.[24] ವಿಮಾನ ಎಂಬುದಕ್ಕೂ ದೇವಾಲಯವೆಂಬ ಅರ್ಥವಿದೆ. "ಮಾನ" ಎಂದರೆ ಅಳತೆಗೋಲು "ಮಾ" ಎಂಬುದಕ್ಕೆ ಒಂದು ವಸ್ತುವಿಗೆ ರೂಪ ಕೊಡುವುದು ಎಂಬ ಅರ್ಥವಿದೆ. ಅದ್ಯಂತವಾಗಿ ಪ್ರಮಾಣಬದ್ಧವಾಗಿ ಅಳೆದು ಶಾಸ್ತ್ರೋಕ್ತವಾಗಿ ಕಟ್ಟಿ ಅದರಲ್ಲಿ ದೇವರನ್ನು ನೆಲೆಗೊಳಿಸಿದ ಆಲಯ ಇಲ್ಲೂ ಇದು ಗರ್ಭಗೃಹಕ್ಕೆ ಮಾತ್ರ ಅನ್ವಯವಾಗುವಂತಹದ್ದು.[25]

**ದೇವಾಲಯದ ಪ್ರಭೇದಗಳು**:- ವಿಮಾನಗಳ ಆಕೃತಿಯನ್ನು ಅವಲಂಭಿಸಿ ದೇವಾಲಯಗಳ ಪ್ರಭೇದಗಳನ್ನು ವಿಂಗಡಿಸಲಾಗಿದೆ. ಶಾಸ್ತ್ರಗ್ರಂಥಗಳು ದೇವಾಲಯಗಳ ಹಲವಾರು ಮಾದರಿಗಳನ್ನು ಹೆಸರಿಸಿವೆ. ಅವುಗಳಲ್ಲಿ ಇಪ್ಪತ್ತು ಮಾದರಿಗಳು ಪ್ರಮುಖವಾಗಿವೆ. ಮೇರು, ಮಂದಾರ, ಕೈಲಾಸ, ವಿಮಾನಚ್ಛಂಧ, ನಂದನ, ಸಮುದ್ರ, ಪದ್ಮ, ಗರುಡ, ನಂದಿವರ್ಧನ, ಗಜ, ಗೃಹರಾಜ, ವೃಷ್ಣಹಂಸ, ಕುಂಭ, ಸರ್ವತೋಭಂದ್ರ, ಮೃಗರಾಜ, ವರ್ತುಲ, ಚತುರ್ರಸ, ಷೋಡಶಾಸ್ತ್ರ ಮತ್ತು ಅಷ್ಟಾಸ್ತ್ರ ಇವುಗಳಲ್ಲಿ ಮೊದಲು ಮೂರು ದೇವಾಲಯಗಳಾದ ಮೇರು, ಮಂದಾರ, ಕೈಲಾಸಗಳು, ಹೆಸರುಗಳು ಪೃಥ್ವಿಯ ಅಕ್ಷರೇಖೆಯ ಮೇಲಿರುವ ಮೇರು ಪರ್ವತ, ವಿಷ್ಣುವಿನ ವಾಸಸ್ಥಾನವಾದ ಮಂದಾರ, ಕೈಲಾಸವು ಶಿವನ ಸ್ಥಳ. ಈ ಮಾದರಿಗಳಲ್ಲಿ ಹಲವು ಅಂತಸ್ತುಗಳು (ಭೂಮಿಗಳು) ಇರುತ್ತವೆ.[26] ವಿಮಾನಗಳಲ್ಲಿ ಐದು ವಿಧಗಳನ್ನು ಗುರ್ತಿಸಲಾಗಿದೆ. ವೈರಾಜ, ಪುಷ್ಪಕ, ಕೈಲಾಸ, ಮಣಿಕ ಮತ್ತು ತ್ರಿವಿಷ್ಟಕ ವಿಮಾನ ಎಂಬುದಕ್ಕೆ ರಥ ಎಂಬ ಅರ್ಥವೂ ಇದೆ. ಇವುಗಳನ್ನು ಕ್ರಮವಾಗಿ ಬ್ರಹ್ಮ, ಕುಬೇರ, ಶಿವ, ವರುಣ ಹಾಗೂ ಇಂದ್ರರು ಬಳಸಿದ ರಥಗಳು ಇವುಗಳ ಆಕಾರವೂ ಕ್ರಮವಾಗಿ ಚೌಕ, ಆಯತ, ಅಂಡಾವೃತ ಹಾಗೂ ಅಷ್ಟಕೋನ ಆಕಾರ ಹೊಂದಿವೆ. ಇವುಗಳನ್ನು ವಾದ್ಯಪ್ರಸಾದಗಳೆಂದೂ ಕರೆಯಲ್ಪಟ್ಟಿವೆ.[27]

ದೇವಾಲಯಗಳನ್ನು ವಿಭಾಗಿಸುವಲ್ಲಿ ಶಿಖರವನ್ನು ಮುಖ್ಯವಾಗಿ ಪರಿಗಣಿಸಿ ಶಾಸ್ತ್ರ ಗ್ರಂಥಗಳು ಭಿನ್ನ ಭಿನ್ನ ಪದ್ಧತಿಗಳನ್ನು ಸೂಚಿಸುತ್ತವೆ. ಸಮರಾಂಗಣ ಸೂತ್ರಧಾರ, ಕಾಮಿ ಕಾಗಮ ಸ್ವಪ್ರಭೇದಾಗಮಗಳು ದೇವಾಲಯಗಳ ಶೈಲಿಗಳನ್ನು ಆಧರಿಸಿ ನಾಗರ, ದ್ರಾವಿಡ, ಹಾಗೂ ವೇಸರ ಎಂದು ವರ್ಗೀಕರಿಸಲಾಗಿದೆ.[28]ಕುತೂಹಲಕಾರಿ ಅಂಶವೆಂದರೆ 10-12ನೇ ಶತಮಾನಗಳ ಕೆಲವು ಶಾಸನಗಳಲ್ಲಿಯೂ ನಾಗರ, ದ್ರಾವಿಡ, ವೇಸರ ಮುಂತಾದ ಶೈಲಿಗಳ ಪ್ರಸ್ತಾಪವನ್ನು ಕಾಣುತ್ತೇವೆ.[29]

ವಾಸ್ತುಶಾಸ್ತ್ರಕ್ಕೆ ಸಂಬಂಧಿಸಿದ ಗ್ರಂಥಗಳಲ್ಲಿ ದೇವಾಲಯಗಳ ವರ್ಗೀಕರಣವನ್ನು ಭೌಗೋಳಿಕವಾಗಿಯೂ ಮಾಡಲಾಗಿದೆ. ಹಿಮಾಲಯ ಮತ್ತು ವಿಂದ್ಯಪರ್ವತಗಳ ನಡುವಿನ ಪ್ರದೇಶಗಳಲ್ಲಿ ಕಂಡುಬರುವ ದೇವಾಲಯಗಳು ನಾಗರ ಮಾದರಿ ಎಂದು ವಿಂಧ್ಯಾ ಪರ್ವತದಿಂದ ಕೃಷ್ಣನದಿ ತೀರದವರೆಗೆ ಬಳಕೆಯಲ್ಲಿರುವುದು ವೇಸರ ಹಾಗೂ ಕೃಷ್ಣ ನದಿಯಿಂದ ಕನ್ಯಾಕುಮಾರಿಯವರೆಗೆ ದ್ರಾವಿಡ ಮಾದರಿಯ ದೇವಾಲಯಗಳೆಂದೂ ಈ ಭೌಗೋಳಿಕ ವರ್ಗೀಕರಣವನ್ನು ಕ್ರಮವಾಗಿ ಸಾತ್ವಿಕ, ರಾಜಸ, ತಾಮಸ ವಲಯಗಳೆಂದೂ ಹೇಳಲಾಗಿದೆ. ಕಾಶ್ಯಪ ಶಿಲ್ಪಗ್ರಂಥದಲ್ಲಿನ ಈ ಕೆಳಗಿನ ಶ್ಲೋಕವನ್ನು ಗಮನಿಸಬಹುದು.[30]

ಹಿಮಾದ್ರಿ ವಿಂಧ್ಯಯೋರಂತರ್ಗತಾ ಸಾತ್ವಾದಸ್ಯಂಥರಾ
ವಿದ್ಯಾದಿ ಕೃಷ್ಣವೇಣ್ಯಂತಾ ರಾಜಸಂಖ್ಯಾ ಮಹೀಮತಾ
ಕೃಷ್ಣವೇಣ್ಯಾದಿ ಕನ್ಯಾಂತಂ ತಾಮಸಂ ಭೂತಸಂ ಭೂತಲಂ ಭವೇತ್
ನಾಗರಂ ಸತ್ವಿಕೇ ದೇಶೀ ತಾಮಸೇ ವೇಸರಾಲಯೌ
ರಾಜಸ್ಯೆ ದ್ರಾವಿಡ್ಯೆರ್ಹರ್ಮ್ಯಂ ಕ್ರಮತ್ ಪುಂಡಶಿಯೋಷಿತಃ

ಈ ಆಲಯಗಳಿಗೆ ಕ್ರಮವಾಗಿ ವಿಷ್ಣು, ಮಹೇಶ್ವರ, ಬ್ರಹ್ಮಾದಿ ದೇವತೆಗಳನ್ನು ಹರ್ಮ್ಯ ದೇವತೆಗಳೆಂದು ಹೆಸರಿಸಿವೆ.[31]

ದೇವಾಲಯಗಳ ರಚನಾ ವಿನ್ಯಾಸದ ಮೇಲಿಂದ ನಾಗರವು ಮೂಲದಿಂದ ಸ್ತೂಪಿಯವರೆಗೂ ಆಯತಾಸ್ರವಾಗಿದ್ದು ವೇಸರವು ವೃತ್ತಾಕಾರವಾಗಿಯೂ ದ್ರಾವಿಡವು ಅಷ್ಟಸ್ರ ಅಥವಾ ಷಡಸ್ರವಾಗಿದೆ.

ಉದಾಹರಣೆಗೆ ಸುಪ್ರಭೇದಾಗಮದಲ್ಲಿನ ಈ ಕೆಳಗಿನ ಶಲೋಕವನ್ನು ಗಮನಿಸಬಹುದು.[32]

ನಾಗರಂ ದ್ರಾವಿಡಂ ವೆಸರಂ ಚತ್ರಿಧಾ ಮತಮ್
ಕಂಠಾದಾರಭ್ಯ ವೃತ್ತಂ ಯದ್ ವೇಸರ ಇತಿ ಶೃತಮ್||
ಗ್ರೀವಮಾರಭ್ಯಂ ಬೌಷ್ಟಂಶಂ ವಿಮಾನಂ ದ್ರಾವಿಡಾಖ್ಯಕಮ್
ಸರ್ವಂ ಚತುರಶ್ರಂ ಯತ್ಪ್ರಾಸಾದಂ ನಾಗರಾಂತ್ವಿದಮ್||

**ನಾಗರಶೈಲಿ**:– ಮೇಲೆ ಹೇಳಿದ "ಸುಪ್ರಭೇದಾಗಮ" ಗ್ರಂಥದ ವಿವರದಂತೆ ತುಸು ಭಿನ್ನರೀತಿಯಲ್ಲಿ ಉಳಿದ ಗ್ರಂಥಗಳು ವಿವರಿಸುತ್ತವೆ.

ಆಸ್ತೂಪೀ ಕರ್ಣಮಾರಭ್ಯ ಚರುರಶ್ರಂ ಪ್ರಕಲ್ಪಿತಂ
ಧಾಮಾಯತಾಶ್ರಮಥವಾ ನಾಗರಂ ತುದದಾಹೃತಂ

ಎಂದು ಪದ್ಮ ಸಂಹಿತೆಯು ಕರ್ಣದಿಂದ (ಪುಸ್ತಕದ ಮೇಲ್ಭಾಗ) ಸ್ತೂಪಿಯವರೆಗೆ ಚತುರಶ್ರ ಅಥವಾ ಆಯತಾಶ್ರಕಾರವಾಗಿರುವುದು ನಾಗರಶೈಲಿ ಎಂದಿದೆ. ಕಾಶ್ಯಪಶಿಲ್ಪ ಗ್ರಂಥವು ಜನ್ಮಾದಿ ಸ್ತೂಪಿ ಪರ್ಯಂತಂ ಯುಗಾಶ್ರಂ ನಾಗರಂ ಭವೇತ್ ಎಂದು ಜನ್ಮದಿಂದ ಸ್ತೂಪಿಯವರೆಗೆ ಚತುರಶ್ರವಿದ್ದರೆ ಅದು ನಾಗರ ಶೈಲಿ ಎಂದು ವಿವರಿಸುತ್ತದೆ.

**ದ್ರಾವಿಡ ಶೈಲಿ**:– ಮಾನಸಾರ ಗ್ರಂಥವು ದ್ರಾವಿಡ ಶೈಲಿಯ ಬಗ್ಗೆ ಸವಿಸ್ತಾರವಾಗಿ ವಿವರಿಸಿದೆ.
ಮೂಲಗ್ರಾತ್ ಸ್ತಯಾಪಿ ಪರ್ಯಂತಂ ಚತುಷ್ಟಾಶ್ರಕಂ ವಾ ಷಡಶ್ರಕಂ
ತದಗ್ರಂ ಚಾಯತಂ ವಾಪಿ ಗ್ರೀವಸ್ಯಾಧೋ ಯುಗಂಶ್ರಕಂ
ಪೂರ್ವವತ್ ಊರ್ಧ್ವದೇಶಂ ಸ್ಯಾತ್ ದ್ರಾವಿಡಂ ಪರಿಕೀರ್ತಿತಂ

ಮೂಲದಿಂದ ಸ್ತೂಪಿಯವರೆಗೆ ಎಂಟು ಅಥವಾ ಆರು ಕೋನವುಳ್ಳದ್ದಾಗಿದ್ದು, ಅಥವಾ ಕೆಳಗೆ ಆರು ಅಥವಾ ಎಂಟು ಕೋನಗಳು ಮೇಲೆ ಆಯಾತಾಕಾರ ಅಥವಾ ಚತುಶ್ರವಾಗಿದ್ದು ಅಥವಾ ಗ್ರೀವದಿಂದ ಕೆಳಗೆ ಚತುರಶ್ರವಾಗಿದ್ದು ಕಂಠದಿಂದ ಮೇಲಕ್ಕೆ ಆರು ಅಥವಾ ಎಂಟು

ಕೋನವುಳ್ಳದ್ದು ದ್ರಾವಿಡಶೈಲಿ ಎಂದು ವಿವರಿಸಿದೆ. “ಸುಪ್ರಭೇದಾಗಮ” ಮತ್ತು “ಕೌಶ್ಯಪಶಿಲ್ಪ” ಗ್ರಂಥಗಳು.

ಗ್ರೀವಮಾರಭ್ಯ ಅಷ್ಟಾಶ್ರಂ ವಿಮಾನಂ ದಾವಿಳ್ಹಾಖ್ಯಕಂ ಕಂಠದಿಂದ ಆರಂಭಗೊಂಡ ಎಂಟು ಕೋನಗಳ ರಚನೆಯು ದ್ರಾವಿಡಶೈಲಿ ಎಂದು ಗುರುತಿಸುತ್ತದೆ.

**ವೇಸರ ಶೈಲಿ**:–“ಕಾಶ್ಯಪ ಶಿಲ್ಪ” ಗ್ರಂಥವು ವೃತ್ತಗ್ರೀವ ಶಿರೋಪೀತಂ ವೇಸರಂ ಹರ್ಮ್ಯ ಮೀರಿತಂ

ಕಂಠ ಹಾಗೂ ಶಿರೋಭಾಗವು ವೃತ್ತಾಕಾರವಿದ್ದಲ್ಲಿ ಅದು ವೇಸರ ಶೈಲಿ ಎಂದಿದೆ. “ಸುಪ್ರಭೇದಾಗಮ” ಗ್ರಂಥವು ಇದನ್ನೇ ಅನುಮೋದಿಸಿದೆ. ಗರ್ಭಗೃಹವು ವೃತ್ತಾಕಾರವಿದ್ದರೆ ವೇಸರವೆಂದೇ “ಕಾಶ್ಯಪಶಿಲ್ಪ” ಗ್ರಂಥವು ಗುರ್ತಿಸುತ್ತದೆ. “ಮಾನಸಾರ” ಗ್ರಂಥದ ಪ್ರಕಾರ ಮೂಲ ಅಥವಾ ಕೆಳಭಾಗದಲ್ಲಿ ವೃತ್ತಾಕಾರ ಅಥವಾ ವೃತ್ತಾಯತ ಕಂಠದಿಂದ ಮೇಲಕ್ಕೆ ಚತುರಶ್ರ ರಚನೆಯೂ ವೇಸರವೆಂದು ಗುರುತಿಸುತ್ತದೆ. ವೃತ್ತಾಕಾರದ ಮೂಲದೊಂದಿಗೆ ಲಾಳಾಕಾರದ ಮೇಲ್ಭಾಗದ ರಚನೆಯು ವೇಸರವೆನಿಸುತ್ತದೆ.

ವೇಸರವೆಂಬುದನ್ನು ದಕ್ಷಿಣಾತ್ಯ ಗ್ರಂಥಗಳು ಮಾತ್ರ ಉಲ್ಲೇಖಿಸುತ್ತವೆ. ಕಾಮಿಕಾಗಮವು “ವೇಸರ”ವನ್ನು ವಿಸ್ತಾರವಾಗಿ ವಿವರಿಸುತ್ತದೆ. ಸ್ಟೆಲ್ಲಾ ಕ್ರಮಿಶ್ ಅವರು ಈ ಬಗ್ಗೆ ಕಾಮಿಕಾಗಮದ ಸರವನ್ನು ಸಂಗ್ರಹಿಸಿ ವೇಸರವನ್ನು “ಹೇಸರಗತ್ತೆ” ಗಂಗರ ಮತ್ತು ದ್ರಾವಿಡರ ಮಿಶ್ರರೂಪ ಎಂದು ಹೇಳಿದ್ದಾರೆ.[33] ವೇಸರವೆಂಬುದಕ್ಕೆ ಸಂಕರ ಎಂಬ ಅರ್ಥವನ್ನೂ ಕಾಮಿಕಾಗಮವು ಹೇಳುತ್ತದೆ.[34] ಎಂ.ಎಸ್.ಪ್ರಭಾಕರ ಅವರು ಈ ವೇಸರ ಶೈಲಿಯನ್ನು ಔತರೇಯ ದ್ರಾವಿಡಶೈಲಿ ಎಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.[35]

ಮೇಲುಕಟ್ಟಡ ಅಥವಾ ಶಿಖರದ ವಿವಿಧ ಮಾದರಿಗಳ ಹಿನ್ನೆಲೆಯಲ್ಲಿ ಕಂಡುಬರುವ ಇತರ ಪ್ರಭೇದಗಳೆಂದರೆ ರೇಖಾನಾಗರ, ಲತಿನ, ವಿಮಾನನಾಗರ, ಕಳಿಂಗ, ವರಾಟ, ಭೂಮಿಜ ಮುಂತಾದವು ಶಿಖರಕ್ಕೆ ಅನ್ವಯಿಸಿ ಈ ಪ್ರಭೇದಗಳು ಉತ್ತರ ಭಾರತಕ್ಕೆ ಅನ್ವಯಿಸುತ್ತವೆ ಎಂದು ಹೇಳಿದರೂ ಇವು ಭಾರತದ ಇತರ ಕಡೆಗಳಲ್ಲೂ ಕಂಡುಬಂದು ಸ್ಥಳೀಯ ಪ್ರಭೇದಗಳಾಗಿ ಬೆಳೆದು ಬಂದಿದೆ. ಭೂಮಿಜ ಶೈಲಿಯು ಮಾಳ್ವ ದೇಶಕ್ಕೆ ಸೇರಿದ್ದು. ಅದು ಅಲ್ಲಿ ಆರಂಭಗೊಂಡಿತು ಎನ್ನಲಾದರೂ ಅದಕ್ಕೆ ಹೆಚ್ಚಿನ ಪ್ರೋತ್ಸಾಹ ದೊರೆತಿದ್ದು ಮಾಳ್ವದ ಪರಮಾರರುಕಲ್ಯಾಣದ ಚಾಲುಕ್ಯರ ಸಾಮಂತರಾಗಿದ್ದ ಯಾದವರಿಂದ ಅವರು ಈ ಶೈಲಿಯನ್ನು ತಮ್ಮ ಪ್ರದೇಶದಲ್ಲಿ

ಸ್ವೀಕರಿಸಿ ವಿಶೇಷವಾಗಿ ಬಳಸಿದರೆಂದು ವಿದ್ವಾಂಸರು ಗುರುತಿಸಿದ್ದಾರೆ.[36] ಸಮರಾಂಗಣ ಸೂತ್ರಧಾರ ಕಾಮಿಕಾಗಮ ಮತ್ತು ಅಪರಾಜಿತಪಚ್ಛದಲ್ಲಿ ವಾರಾಟವನ್ನು ವಿವರಿಸಲಾಗಿದೆ. ಸಮರಾಂಗಣ ಸೂತ್ರಧಾರದಲ್ಲಿ ವೇಸರಕ್ಕೆ ಬದಲು ವಾರಾಟ ಎಂಬ ಹೆಸರಿದೆ. ಈ ಎಲ್ಲ ಶಿಖರ ಮಾದರಿಯ ಜೊತೆಗೆ ಕದಂಭನಾಗರ ಶಿಖರ ರಚನೆಯನ್ನು ಕರ್ನಾಟಕದಲ್ಲಿ ಹೆಚ್ಚಾಗಿ ಕಾಣಬಹುದಾಗಿದೆ. ಕದಂಬ ನಾಗರ ಶಿಖರವನ್ನು ವಿದ್ವಾಂಸರ "ಫಾಂಸನಾ ಶಿಖರ" ಎಂದು ಗುರುತಿಸಿದ್ದಾರೆ.[37] ಈ ಶೈಲಿಯು ಕದಂಬರ ರಚನೆಯಲ್ಲಿ ಕಂಡುಬರುತ್ತಿದ್ದರೂ ಕಲ್ಯಾಣ ಚಾಲುಕ್ಯರ ದೇವಾಲಯಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಈ ರಚನೆಯಲ್ಲಿ ದೇವಾಲಯದ ಮೇಲುಕಟ್ಟಡವು ಕಂಠ, ಕಪೋತಗಳಿಂದ ಕೂಡಿದ್ದು ಹಂತಹಂತವಾಗಿ ಚಿಕ್ಕದಾಗುತ್ತಾ ಮೇಲೇರುತ್ತದೆ. ಅಂತ್ಯದಲ್ಲಿ ಗ್ರೀವ, ಶಿಖರ, ಸ್ತೂಪಿ ಭಾಗಗಳಿರುತ್ತವೆ.

**ದೇವಾಲಯದ ಪ್ರಮುಖ ಅಂಗಗಳು**:- ದೇವಾಲಯದಊರ್ಧ್ವಮುಖ ರಚನೆಯಲ್ಲಿ ಆರು ಅಂಗಗಳನ್ನು ಗುರುತಿಸಲಾಗಿದೆ. ಹೀಗೆ ಆರು ಅಂಗಗಳನ್ನು ಹೊಂದಿರುವಂತಹ ದೇವಾಲಯಗಳು ಷಡ್ವರ್ಗ ದೇವಾಲಯ ಎಂದೆನಿಸಿಕೊಳ್ಳುತ್ತದೆ.[38] ಸಾಮಾನ್ಯವಾಗಿ ದೇವಾಲಯದ ಎತ್ತರವು ಅದರ ಅಗಲದ ಎರಡರಷ್ಟು ಪ್ರಮಾಣದಲ್ಲಿ ಇರುತ್ತದೆ ಈ ಎತ್ತರವನ್ನು ಎಂಟು ಭಾಗಗಳಾಗಿ ಮಾಡಿದರೆ ಅದರಲ್ಲಿ ಒಂದು ಭಾಗ ಅಧಿಷ್ಠಾನಕ್ಕೆ ಎಡರು ಭಾಗ ಭಿತ್ತಿ ಪ್ರಸ್ತರ ಮತ್ತು ಗ್ರೀವಕ್ಕೆ ಒಂದೊಂದು ಭಾಗ ಶಿಖರಕ್ಕೆ ಎರಡು ಭಾಗ ಮತ್ತು ಸ್ತೂಪಿಗೆ ಒಂದು ಭಾಗ ಎಂದು ಷಡ್ವರ್ಗಗಳಾಗಿ ವಿವರಿಸಲಾಗಿದೆ.[39]

**ಉಪಪೀಠ**:-ಷಡ್ವರ್ಗದ ದೇವಾಲಯದ ಮೊದಲ ಅಂಗವಾದ ಅಧಿಷ್ಠಾನದ ಕೆಳಗೆ ಉಪಪೀಠವಿರುತ್ತದೆ. ಇದು ಐಚ್ಚಿಕವಾದ ಭಾಗ, ಕಡ್ಡಾಯವಾಗಿ ಇರಲೇಬೇಕೆಂಬ ನಿಯಮವಿಲ್ಲ. ಆದರೆ ದೇವಾಲಯದ ಉನ್ನತಿ, ಶೋಭೆ ಮತ್ತು ಹೆಚ್ಚಿನ ರಕ್ಷಣೆಗಾಗಿ ಇದನ್ನು ಅಳವಡಿಸಿಕೊಳ್ಳಲಾಗದೇ. ಅದಿಷ್ಠಾನ ಭಾಗದಲ್ಲಿ ಇರುವಂತೆ ಜನ್ಮನ್, ಕಂಪ, ಪದ್ಮ, ಕಂದರ, ಕಪೋತ, ಆಲಿಂಗ, ಆಂತರಿತ, ಪ್ರತಿ, ವಾಜನ, ಪಟ್ಟಿಕಾ ಎಂಬ ಅಂಗಗಳು ಇರುತ್ತವೆ. ಉಪಪೀಠವನ್ನು ಅದು ಹೊಂದಿದ ಅಂಗಗಳ ಸಂಖ್ಯೆಯ ಮೇಲಿಂದಲೂ ಮತ್ತು ಅದು ಯಾವ ಯಾವ ಅಂಗಗಳನ್ನು ಹೊಂದಿದೆ ಎಂಬ ಆಧಾರದಿಂದಲೂ ವಿಂಗಡಿಸಲಾಗಿದೆ. ಉದಾ:- ಪಂಚಾಂಗ, ಷಡ್ಯಂಗ, ಅಷ್ಟಾಂಗ ಮತ್ತು ವೇದಿಭದ್ರ, ಮಂಜಭದ್ರ ಇತ್ಯಾದಿ.

**ಅಧಿಷ್ಠಾನ**:-ಷಡ್ವರ್ಗ ಕ್ರಮದಲ್ಲಿ ಅಧಿಷ್ಠಾನವು ಮೊದಲ ಭಾಗವಾಗಿದ್ದರಿಂದ ಶಾಸ್ತ್ರಗ್ರಂಥಗಳು ಈ ಭಾಗವನ್ನು ಅದ್ಯಂಗ ಎಂದು ಕರೆದಿದೆ. ಮಸೂರಕ, ವಾಸ್ತ್ಯಾಧಾರ, ಧರಾತಲ, ತಲ, ಕುಟ್ಟಿಮ

ಇವುಗಳು ಅಧಿಷ್ಠಾನದ ಸಮಾನ ಪದಗಳು. ಅಧಿಷ್ಠಾನ, ಜಗತಿ, ಖರ, ಕುಂಭ, ಪದ್ಮ, ಕುಮುದ, ಗಳ, ಕಂಪ, ಆಲಿಂಗ, ಅಂತರಿತ, ಪ್ರತಿ, ವಾಜನ, ಕಪೋತ, ಮತ್ತು ಪಟ್ಟಿಕಾ ಭಾಗಗಳನ್ನು ಹೊಂದಿರುತ್ತವೆ. ಶಾಸ್ತ್ರಗ್ರಂಥಗಳು ಅಧಿಷ್ಠಾನವನ್ನು ಕುಮುದ ಅಂಗದ ಆಧಾರದ ಮೇಲಿಂದ ಪಾದಬಂಧ, ಪ್ರತಿಬಂಧ ಎಂದು ವಿಂಗಡಿಸಿದೆ. ಅಧಿಷ್ಠಾನದಲ್ಲಿ ಕುಮುದ ಅಂಗವೇ ಇರದಿದ್ದಲ್ಲಿ ಅದು ಮಂಚಕ ರೀತಿ ಎಂದು ಸೂಚಿಸಿವೆ. ಅಧಿಷ್ಠಾನ ಭಾಗವು ನಾಸಿಗಳಿಂದ ಬಳ್ಳಿ, ವ್ಯಾಳ, ಕುಬ್ಜ, ಕಮಲದ ದಳಗಳಿಂದ ಅಲಂಕೃತಗೊಂಡಿರಬಹುದು. ಕಟ್ಟಡದ ರಕ್ಷಣಾ ದೃಷ್ಟಿಯಿಂದ ಅಧಿಷ್ಠಾನದ ಭದ್ರತೆ ಬಹಳ ಮುಖ್ಯ. ಅಧಿಷ್ಠಾನವು ಒಂದರಿಂದ ಐದು ಅಡಿ ಎತ್ತರವಾಗಿ ಇರುತ್ತದೆ.

**ಭಿತ್ತಿ**:–ಅಧಿಷ್ಠಾನದ ಮೇಲಿನ ಭಾಗವೇ ಭಿತ್ತಿ. ಷಡ್ವರ್ಗ ಕ್ರಮದಲ್ಲಿ ಇದು ಎರಡನೆಯದು. ಇಲ್ಲಿ ದೇವಾಲಯದ ಮೇಲ್ಕಟ್ಟಡದ ಭಾಗವನ್ನು ಹೊರಲೆಂದು ನಿಶ್ಚಿತ ಅಂತರದಲ್ಲಿ ಕುಡ್ಯಸ್ತಂಭಗಳನ್ನು ಇಡಲಾಗಿರುತ್ತದೆ. ಅಧಿಷ್ಠಾನದ ರಚನೆಯನ್ನು ಅನುಸರಿಸಿ ದೇವಾಲಯದ ಭಿತ್ತಿಯು ರಚನೆಗೊಂಡಿರುತ್ತದೆ. ಅಧಿಷ್ಠಾನವು ಮುಂಚಾಚಿದಂತೆ ಒಳಸರಿದಂತೆ ನಿರ್ಮಾಣ ಮಾಡಲಾಗಿ ರುತ್ತದೆ. ಭಿತ್ತಿಯು ಅದನ್ನೇ ಅನುಸರಿಸುತ್ತದೆ. ಭಿತ್ತಿಯಲ್ಲಿ ಮುಂಚಾಚಿದ ಈ ಭಾಗವನ್ನು ಭದ್ರ, ಕರ್ಣ, ಪ್ರತಿಭದ್ರ, ಪ್ರತಿಕರ್ಣ, ಸುಭದ್ರ, ಉಪಭದ್ರ ಎಂದು ಹೆಸರಿಸಲಾಗಿದೆ. ಭಿತ್ತಿಯ ರಕ್ಷಣೆಗಾಗಿ ನಿರ್ಮಾಣಗೊಂಡಿದ್ದರೂ ಇಲ್ಲಿ ಅನೇಕ ರೀತಿಯ ಅಲಂಕರಣಗಳನ್ನು ಕಾಣುತ್ತೇವೆ. ಶಿಲ್ಪಿಗೆ ತನ್ನ ಕೈಚಳಕವನ್ನು ತೋರಿಸಲು ಭಿತ್ತಿಯಲ್ಲಿ ಬಹಳಷ್ಟು ಅವಕಾಶವಿದೆ. ಇಲ್ಲಿರುವ ವೇದಿವೇದಿಕಾ, ಕುಡ್ಯಸ್ತಂಭ ಕೋಷ್ಠ, ವಾತಾಯನ, ತೋರಣ, ಕುಂಭಲತಾ, ಸ್ತಂಭ ಶಿಖರದಂತಹ ಅಲಂಕರಣಗಳನ್ನು ಕಾಣುತ್ತೇವೆ. ಸಾಮಾನ್ಯವಾಗಿ ಭಿತ್ತಿಯ ಭದ್ರ ಭಾಗದಲ್ಲಿ ಕೋಷ್ಠಗಳಿರುತ್ತವೆ.

**ಪ್ರಸ್ತರ**:–ಇದು ಷಡ್ವರ್ಗ ಕ್ರಮದಲ್ಲಿ ಮೂರನೆಯ ಭಾಗವಾಗಿದೆ. ಮಂಚ, ಪ್ರಚ್ಛಾದನ, ಲೂಪಾ ಇವು ಪ್ರಸ್ತರದ ಸಾಮಾನ್ಯ ಪದಗಳು. ಇದನ್ನು ಮೇಲು ಪಾಯ ಎಂದು ಕರೆಯಬಹುದಾಗಿದೆ. ಪ್ರಸ್ತರದಲ್ಲಿ ಉತ್ತರ, ವಾಜನ, ವಲ್ಲಭಿ, ಕಪೋತ, ಆಲಿಂಗ, ಅಂತರಿತ, ಪ್ರತಿ ಮತ್ತು ವಾಜನ ಎಂಬ ಉಪಅಂಗಗಳು ಇರುತ್ತವೆ. ವಲ್ಲಭಿ ಭಾಗದಲ್ಲಿ ಮಕರ, ಭ್ರಮರ, ಭೂತಗಣ, ಯಕ್ಷ, ವಿದ್ಯಾಧಕ ಚಿತ್ರಗಳನ್ನು ಬಿಡಿಸಿರುತ್ತದೆ. ಕಪೋತದಲ್ಲಿ ಕ್ಷುದ್ರನಾಸಿಗಳ ಅಲಂಕರಣವೂ ಇರುತ್ತದೆ.

**ಗ್ರೀವ**:–ಷಡ್ವರ್ಗ ಕ್ರಮದಲ್ಲಿ ಗ್ರೀವವು ನಾಲ್ಕನೆಯದು. ಇದನ್ನು ಕಂದರ, ಕಂಠ ಎಂದೂ ಸಹ ಸಾಮಾನ್ಯವಾಗಿ ಕರೆಯಲಾಗಿದೆ. ಇದು ಪ್ರಸ್ತರ ಮತ್ತು ಶಿಖರದ ನಡುವಿನ ಭಾಗವಾಗಿದ್ದು ಕುತ್ತಿಗೆಯಂತೆ ಒಳಸರಿದಿರುತ್ತದೆ. ಗ್ರೀವವು ತನ್ನ ಮೇಲಿನ ಅಂಗವಾದ ಶಿಖರದ ಆಕಾರದಲ್ಲಿಯೇ ಇರುತ್ತದೆ. ಈ ಭಾಗದಲ್ಲಿ ಗ್ರೀವ ಕೋಷ್ಟಗಳಿದ್ದು ಅವುಗಳಲ್ಲಿ ಗ್ರೀವ ದೇವತೆಗಳ

ಉಬ್ಬು ಶಿಲ್ಪಗಳಿರುತ್ತವೆ. ಶಿಲ್ಪಶಾಸ್ತ್ರ ಗ್ರಂಥಗಳು ಹೇಳುವಂತೆ ಗ್ರೀವಾಧಾರದ ಮೇಲೆ ಗರ್ಭಗೃಹದಲ್ಲಿರುವ ದೇವರಿಗೆ ಸಂಬಂಧಿಸಿದ ವಾಹನವನ್ನು ಬಿಡಿಸಲಾಗಿರುತ್ತದೆ.

**ಶಿಖರ**:-ಶಿಖರವು ಷಡ್ವರ್ಗ ಕ್ರಮದಲ್ಲಿ ಐದನೆಯ ಭಾಗ. ಇದು ಇಡೀ ದೇವಾಲಯಕ್ಕೆ ಶೋಭಾಯಮಾನವಾಗಿ ಕಂಗೊಳಿಸುತ್ತದೆ. ದೇವಾಲಯದ ತಳವಿನ್ಯಾಸವನ್ನೇ ಅನುಸರಿಸಿ ಶಿಖರವು ಇರಬೇಕೆಂಬ ನಿಯಮವಿಲ್ಲ. ದೇವಾಲಯದ ತಳವಿನ್ಯಾಸವು ಚೌಕಾಕಾರವಾಗಿದ್ದರೂ ಶಿಖರವು ನಾಲ್ಕು ಮುಖ, ಎಂಟು ಮುಖ ಅಥವಾ ವೃತ್ತಾಕಾರದಲ್ಲಿಯೂ ರಚನೆಗೊಂಡಿರಬಹುದು. ಶಿಖರದ ಆಕಾರದ ಮೇಲಿಂದ ಕ್ರಮವಾಗಿ ಬ್ರಹ್ಮಛಂದ, ವಿಷ್ಣುಛಂದ, ರುದ್ರಛಂದ ಎಂದು ವರ್ಗೀಕರಿಸಲಾಗಿದೆ. ಶಿಖರವು ಯಾವ ಆಕರಾದಲ್ಲಿದ್ದರೂ ಅದು ನಾಸಿಗಳಿಂದ ಅಲಂಕೃತಗೊಂಡಿರುತ್ತದೆ.

**ಸ್ತೂಪಿ**:-ಷಡ್ವರ್ಗ ಕ್ರಮದಲ್ಲಿ ಆರನೆಯ ಹಾಗೂ ಕೊನೆಯ ಭಾಗವೇ ಸ್ತೂಪಿ. ಇದನ್ನು ಕಳಸ, ಘಟ, ಕುಂಭ ಎಂದೂ ಕರೆಯಲಾಗುತ್ತದೆ. ಸ್ತೂಪಿಯಲ್ಲಿ ಘಟ, ಗಳ ಮತ್ತು ಮುಕುಲ ಎಂಬವುಗಳನ್ನು ಶಿಖರದ ಮೇಲ್ಭಾದಲ್ಲಿರುವ ಮಹಾಪದ್ಮದ ಮಧ್ಯದಲ್ಲಿ ಇರಿಸಲಾಗಿರುತ್ತದೆ. ಸ್ತೂಪಿಯ ಪ್ರತಿ ಕೃತಿಯು ಗರ್ಭಗೃಹದ ಅಸ್ತಿಭಾರದಲ್ಲಿ ಇರುತ್ತದೆ.

**ತಲಗಳು**:-ಏಕತಲ ವಿಮಾನವು ಷಡ್ವರ್ಗಗಳನ್ನು ಹೊಂದಿದೆ. ಅಲ್ಪವಿಮಾನ ಎಂದೆನಿಸಿಕೊಳ್ಳುತ್ತದೆ. ಷಡ್ವರ್ಗ ದೇವಾಲಯಗಳನ್ನು ಏಕತಲ ಮಾತ್ರವಲ್ಲ ಹಲವು ತಲಗಳನ್ನು ಒಳಗೊಂಡಂತೆಯೂ ರಚಿಸಲಾಗಿದೆ. ಏಕತಲದ ಮೇಲೆ (ಗ್ರೀವ, ಪಸ್ರಸ್ತರ ಭಾಗಗಳ ಮಧ್ಯ) ಇನ್ನೊಂದು ಹರ್ಮ್ಯ-ಸಣ್ಣಗೋಪುರ ಮತ್ತು ಪ್ರಸ್ತರಗಳನ್ನು ಸೇರಿಸಿದ ಇನ್ನೊಂದು ಕಟ್ಟಡವನ್ನೇರಿಸಿದಾಗ ಅದು ದ್ವಿತಲವೆನಿಸಿಕೊಳ್ಳುತ್ತದೆ. ಇದೇ ರೀತಿ ಒಂದರ ಮೇಲೆ ಒಂದರಂತೆ ಹನ್ನೆರಡು ಅಂತಸ್ತುಗಳವರೆಗೂ ಏರಿಸಿಕೊಂಡು ಹೋಗಬಹುದು. ಪ್ರತಿ ತಲದಲ್ಲೂ ಅಂಗ ಪ್ರತ್ಯಂಗಗಳಿರುತ್ತವೆ. ಕೂಟ,ಪಂಜರ ಶಾಲಾಗಳೆಂಬ ಸಣ್ಣ ಗಾತ್ರದ ದೇವಾಲಯಗಳ ಸ್ತರವಿರುತ್ತದೆ. ಇದಕ್ಕೆ 'ಹಾರ' ಎಂದು ಹೆಸರು. ಪ್ರತಿಯೊಂದು ತಲಕ್ಕೂ ಪ್ರಸ್ತರವಿರುತ್ತದೆ. ಇದು 'ತಲಪ್ರಸ್ತರ' ಈ ರೀತಿ ಮುಖ್ಯ ಪ್ರಸ್ತರ ಮತ್ತು ಗ್ರೀವದ ನಡುವೆ ಸೇರಿಸುತ್ತಾ ಹೋಗುವ ತಲಗಳ ಸಂಖ್ಯೆ ಮೇಲಿಂದ ದೇವಾಲಯಗಳನ್ನು ವರ್ಗೀಕರಿಸಲಾಗಿದೆ. ಎರಡರಿಂದ ನಾಲ್ಕು ತಲಗಳನ್ನು ಹೊಂದಿದ ದೇವಾಲಯಗಳು "ಜತಿವಿಮಾನ" ಎಂದೂ ಐದರಿಂದ ಹನ್ನೆರಡು ತಲಗಳನ್ನು ಹೊಂದಿದ ದೇವಾಲಯಗಳು "ಮುಖ್ಯ ವಿಮಾನ"ಗಳೆಂದೂ ಗುರುತಿಸಿಕೊಳ್ಳಲಾಗಿದೆ.

**ಗರ್ಭಗೃಹ-ಅಂತರಾಳ**:-ಯಾವುದೇ ದೇವಾಲಯ ಎಷ್ಟೇ ದೊಡ್ಡದಾಗಿರಲಿ, ಎಷ್ಟೇ ಅಲಂಕೃತ ಮಂಟಪಗಳನ್ನು ಉಪಗುಡಿಗಳನ್ನು ಹೊಂದಿದ್ದರೂ ಸಹ ಗರ್ಭಗೃಹವೇ ಮೂಲ ಮುಖ್ಯ ಭಾಗ. ಗರ್ಭಗೃಹಕ್ಕೆ ಗರ್ಭಗೇಹ, ಮದ್ಯಕೋಷ್ಠ, ನಾಲಿಗೇಹ, ದೇವತಾಮಂಟಪ, ಪ್ರಸಾದ, ಮೂಲ ಪ್ರಸಾದ ಎಂಬ ಸಮಾನ ಪದಗಳಿವೆ. ಗರ್ಭಗೃಹದ ಆಕಾರವು ಅಲ್ಲಿ ಪ್ರತಿಷ್ಠಾಪಿಸಲಾಗಿರುವ ಮೂಲವಿಗ್ರಹದ ಮೇಲಿಂದ ಚೌಕಾಕಾರ, ಆಯತಾಕಾರವಾಗಿ ರೂಪುಗೊಳ್ಳುತ್ತದೆ. ಸಾಮಾನ್ಯವಾಗಿ ಶಿವಾಲಯಗಳು ಚೌಕಾಕಾರವಾಗಿರುತ್ತವೆ. ಅನಂತಶಯನ, ಸಪ್ತಮಾತೃಕೆ, ತ್ರಿಮೂರ್ತಿಗಳನ್ನು ಒಂದೇ ಗರ್ಭಗೃಹದಲ್ಲಿ ಇರಿಸಿದ್ದರೆ ಮತ್ತು 24 ತೀರ್ಥಂಕರರಿಗಾಗಿ ಕಟ್ಟಲಾದ ಗರ್ಭಗೃಹಗಳು ಆಯತಾಕಾರದಲ್ಲಿ ಇರುತ್ತವೆ. ಕೆಲವು ದೇವಾಲಯಗಳು ಗಜಪೃಷ್ಠಾಕಾರದಲ್ಲಿಯೂ ಇವೆ. ಸಾಮಾನ್ಯವಾಗಿ ಚೌಕಾಕಾರದ ಗರ್ಭಗೃಹಗಳನ್ನೇ ಹೆಚ್ಚಾಗಿ ಕಾಣುತ್ತೇವೆ. ಗರ್ಭಗೃಹವು ಕತ್ತಲೆಯಿಂದ ಕೂಡಿದ್ದು ಇಲ್ಲಿ ಯಾವ ವಿಧವಾದ ಕಿಟಕಿಗಳೂ ಇರುವುದಿಲ್ಲ. ಮಧ್ಯಭಾಗದಲ್ಲಿ ದ್ವಾರ ಮಾತ್ರವಿರುತ್ತದೆ. ಸಾಮಾನ್ಯವಾಗಿ ಗರ್ಭಗೃಹ ಪೂರ್ವಾಭಿ ಮುಖವಾಗಿಯೇ ಇರುತ್ತವೆ. ಅಪರೂಪವಾಗಿ ಇತರ ದಿಕ್ಕುಗಳಲ್ಲಿಯೂ ಇರುವುದನ್ನು ಕಾಣುತ್ತೇವೆ. ದೇವಾಲಯದ ಪ್ರವೇಶ ದ್ವಾರವು ಯಾವದಿಕ್ಕಿಗೆ ಇದ್ದರೂ ಗರ್ಭಗೃಹ ಮೂಲಕ ಮಾಡಿದ ದಿಕ್ಕನ್ನೇ ಮುಖ್ಯವೆಂದು ಪರಿಗಣಿಸಲಾಗುತ್ತದೆ.

ಮತ್ತೆ ಕೆಲವು ದೇವಾಲಯಗಳಲ್ಲಿ ಗರ್ಭಗೃಹಕ್ಕೆ ಪ್ರದಕ್ಷಿಣಾ ಪಥವನ್ನು ಒಳಗೆ ಅಳವಡಿಸಲಾಗಿರುತ್ತದೆ. ಇವುಗಳನ್ನು 'ಸಾಂಧಾರ' ದೇವಾಲಯಗಳು ಎಂದು ಕರೆಯ ಲಾಗುತ್ತದೆ. ಈ ಸಂದರ್ಭದಲ್ಲಿ ಗರ್ಭಗೃಹವು ಅಂತರ್ಭಿತ್ತಿ ಮತ್ತು ಬಾಹ್ಯಭಿತ್ತಿ ಎಂಬ ಎರಡು ಭಿತ್ತಿಗಳನ್ನು ಹೊಂದಿರುತ್ತದೆ. ಮತ್ತೆ ಕೆಲವು ದೇವಾಲಯಗಳು ಧಾರ್ಮಿಕ ಹಿನ್ನೆಲೆಯ ಉದ್ದೇಶದಿಂದ ಒಂದಕ್ಕಿಂತ ಹೆಚ್ಚು ಗರ್ಭಗೃಹಗಳನ್ನು ಹೊಂದಿರುತ್ತವೆ. ಒಂದೇ ಅಧಿಷ್ಠಾನದ ಮೇಲೆ ಎರಡು ಗರ್ಭಗೃಹಗಳಿದ್ದರೆ ಅದನ್ನು ದ್ವಿಕೂಟ ದೇವಾಲಯವೆಂದೂ ಒಂದೇ ಅಧಿಷ್ಠಾನದ ಮೇಲೆ ಮೂರು ಗರ್ಭಗೃಹಗಳಿದ್ದರೆ ತ್ರಿಕೂಟ ದೇವಾಲಯವೆಂದೂ ಇದೇ ರೀತಿ ಚತುಷ್ಕೂಟ ಮತ್ತು ಪಂಚಕೂಟ ದೇವಾಲಯಗಳನ್ನು ನಿರ್ಮಿಸಿರುವುದನ್ನು ನಾವು ಕಾಣುತ್ತೇವೆ.

ಗರ್ಭಗೃಹಕ್ಕೆ ಮುಂದೆ ಒಂದು ಮಂಟಪವನ್ನು ರಚಿಸಿ ಸೇರಿಸುವ ಭಾಗವು ಅಂತರಾಳವಾಗಿರುತ್ತದೆ. ಸಾಮಾನ್ಯವಾಗಿ ದೇವಾಲಯದ ಮೇಲ್ಕಟ್ಟಡದಲ್ಲಿನ ಶುಖನಾಸವು ಈ ಅಂತರಾಳದ ಮೇಲೆ ಇರುವುದರಿಂದಾಗಿ ಇದನ್ನು ಶುಖನಾಸಿ (ಸುಖನಾಸಿ) ಎಂದೂ ಸಹ ಕರೆಯಲಾಗುತ್ತದೆ. ದೇವಾಲಯವು 'ಸಾಂಧಾರ'ವಾಗಿದ್ದಲ್ಲಿ ಗರ್ಭಗೃಹದ ಪ್ರದಕ್ಷಿಣೆಗಾಗಿ ಈ ಅಂತರಾಳದ ಇಕ್ಕೆಲಗಳಲ್ಲಿ ಬಾಗಿಲುಗಳು ಮುಕ್ತವಾಗಿರುತ್ತವೆ.

**ಇತರ ಭಾಗಗಳು**:–ದೇವಾಲಯಗಳ ನಿರ್ಮಾಣದ ಪ್ರಾರಂಭದ ಶತಮಾನಗಳಲ್ಲಿ ಗರ್ಭಗೃಹ ಹಾಗೂ ಅಂತರಾಳ ಮಾತ್ರವಿದ್ದು ದೇವಾಲಯ ಎನಿಸಿಕೊಂಡಿದ್ದವು. ಆಗಮ ಶಾಸ್ತ್ರಗಳು ಮತ ಸಂಸ್ಕಾರಗಳು ವಿಸ್ತರಿಸಿದಂತೆಲ್ಲಾ ದೇವಾಲಯಗಳು ವಿಸ್ತರಿಸಲ್ಪಟ್ಟವು. ಅರ್ಧಮಂಟಪ, ನವರಂಗ ಮುಖಮಂಟಪ, ಅಗ್ರಮಂಟಪ, ಉತ್ಸವಮಂಟಪ, ಸ್ವಪ್ನಮಂಟಪ, ಅಲಂಕಾರಮಂಟಪ ಮುಂತಾದವು ನಿರ್ಮಾಣಗೊಂಡವು. ದಕ್ಷಿಣ ಭಾರತದ ದೇವಾಲಯ ಗಳಲ್ಲಿನ ಈ ಮಂಟಪಗಳು ಚಪ್ಪಟೆಯಾಕಾರದ ಮೇಲ್ಛಾವಣಿಯನ್ನು ಹೊಂದಿವೆ. ಗುಜರಾತ್, ಒರಿಸ್ಸಾ, ಮಧ್ಯ ಪ್ರದೇಶಗಳಲ್ಲಿಯ ದೇವಾಲಯಗಳಲ್ಲಿ ಈ ಮಂಟಪ ರಚನೆಗಳೂ ಸಹ ಗರ್ಭಗೃಹಕ್ಕೆ ಇರುವಂತೆ ಮೇಲು ಕಟ್ಟಡವನ್ನು ಹೊಂದಿವೆ. ಮಂಟಪಗಳು ಕಂಬಗಳ ಆಧಾರದ ಮೇಲೆ ನಿಂತಿರುತ್ತವೆ. ಮಂಟಪ ವಿಸ್ತಾರವಾದಂತೆಲ್ಲ ಕಂಬಗಳ ಸಂಖ್ಯೆಯೂ ಹೆಚ್ಚುತ್ತದೆ. ಶಿಲ್ಪಶಾಸ್ತ್ರ ಗ್ರಂಥಗಳು ಕಂಬಗಳ ಸಂಖ್ಯೆಯನ್ನು ಆಧರಿಸಿ ಹಿಮಜ, ನಿಕ್ಷದಜ, ವಿಜಯ, ಮಾಲ್ಯಜ, ಪಾರಿಯಾತ್ರ, ಗ್ರಂಥಮಾದನ ಮತ್ತು ಹೇಮಕೂಟಗಳೆಂಬ ಏಳು ಬಗೆಗಳನ್ನು ಗುರ್ತಿಸುತ್ತವೆ. ಈ ಮಂಟಪಗಳು ತೆರೆದ ಮುಚ್ಚಿದವೂ ಆಗಿರಬಹುದು. ಮಂಟಪದಲ್ಲಿ ದೇವಾಲಯದ ಉತ್ಸವಗಳಿಗೆ ಸಂಬಂಧಿಸಿದ ಸಭೆಯೋ, ಲಲಿತ ಕಲೆಗಳ ಕಾರ್ಯಕ್ರಮಗಳು ನಡೆಯುತ್ತಿದ್ದವು. ಇಂತಹ ಸಮಯಗಳಿಗೆ ಅನುಕೂಲವಾಗಲೆಂದು ಕಕ್ಷಾಸನಗಳನ್ನು ಸುತ್ತಲೂ ಅಳವಡಿಸಲಾಗಿದೆ. (ಉದಾ:– ಬೆಳವಾಡಿಯ ವೀರನಾರಾಯಣ ದೇವಾಲಯ) ದೇವಾಲಯ ಕೇವಲ ಪೂಜಾಗೃಹ ವಾಗಿರದೇ ಸಾಂಸ್ಕೃತಿಕ ಕೇಂದ್ರವಾಗಿಯೂ, ಧರ್ಮಪ್ರಸಾರದ ಕೇಂದ್ರವಾಗಿಯೂ ಮಾರ್ಪಟ್ಟು ದೇವಾಲಯದ ಪೂಜಾವಿಧಿಗಳಲ್ಲೂ ಹೊಸ ಹೊಸ ಉತ್ಸವಗಳನ್ನು ಅಳವಡಿಸಿಕೊಂಡವು. ಉತ್ಸವಕ್ಕೆ ಬಳಸಲಾಗುವ ವಾಹನಗಳನ್ನು ರಕ್ಷಿಸಲು ವಾಹನ ಮಂಟಪ, ಸಭೆ ಸಮಾರಂಭ ಗಳಿಗಾಗಿ ಸಭಾಮಂಟಪ, ಭೋಜನ ಶಾಲೆ, ಕಲ್ಯಾಣ ಮಂಟಪ ನೃತ್ಯಮಂಟಪ ಇತ್ಯಾದಿಗಳು ದೇವಾಲಯದ ಸುತ್ತಲೂ ರಚನೆಗೊಂಡವು. ಅಲ್ಲದೇ ಪರಿವಾರ ದೇವತೆಗಳಿಗಾಗಿ ಸಣ್ಣ ದೇವಾಲಯಗಳು ನಿರ್ಮಾಣಗೊಂಡವು. ಜೊತೆಗೆ ದೇವಾಲಯದ ಎದುರಿಗೆ ಬಲಿಪೀಠ, ಧ್ವಜಸ್ತಂಭ, ದೀಪಸ್ತಂಭಗಳು ಇರುವಂತೆ ಮಾಡಲಾಯಿತು. ಇವೆಲ್ಲವುಗಳನ್ನು ಒಳಗೊಂಡಂತೆ ಸುತ್ತಲೂ ಪ್ರಾಕಾರದ ಗೋಡೆಗಳನ್ನು ಕಟ್ಟಲಾಯಿತು. ಆ ಪ್ರಾಕಾರಕ್ಕೊಂದು ಮಹಾದ್ವಾರ ಅದರ ಮೇಲೆ ಗೋಪುರ ತಲೆ ಎತ್ತಿದವು. ಹೀಗೆ ಒಂದು ಪ್ರಾಕಾರ ಮಾತ್ರವಲ್ಲದೆ ಹಲವು ಪ್ರಾಕಾರ ಹೊಂದಿದ ದೇವಾಲಯಗಳಿವೆ. ಒಂದೊಂದು ಪ್ರಾಕಾರವನ್ನು ಬೇರೆ ಬೇರೆ ಹೆಸರಿನಿಂದ ಕರೆಯಲಾಗಿದೆ. ಮೊದಲನೇ ಪ್ರಾಕಾರ "ಅಂತರ್ಮಂಡಲ", ಎರಡನೆಯದು "ಅಂತರ್ನಿ ಹಾರ", ಮೂರನೆಯದು "ಮಧ್ಯಮ ಹಾರ", ನಾಲ್ಕನೆಯದು ಪ್ರಾಕಾರ, ಐದನೇಯದು ಹಾಗೂ ಕೊನೆಯದು "ಮಹಾಮರ್ಯಾದಾ" ಅದರಂತೆ ಪ್ರತಿಯೊಂದು ಪ್ರಾಕಾರಕ್ಕೂ ಮಹಾದ್ವಾರ

ಗೋಪುರಗಳಿರುತ್ತವೆ. ಆ ಗೋಪುಗಳನ್ನು ಕ್ರಮವಾಗಿ "ದ್ವಾರಶೋಭಾ", "ದ್ವಾರಶಾಲಾ", "ದ್ವಾರ ಪ್ರಸಾದ", "ದ್ವಾರ ಹರ್ಮ್ಯ" ಮತ್ತು ಕೊನೆಯದು "ಮಹಾಗೋಪುರ" ಎಂದು ಶಾಸ್ತ್ರ ಗ್ರಂಥಗಳಲ್ಲಿ ಗುರ್ತಿಸಿ ಹೇಳಲಾಗಿದೆ.

**ಶೈವ ದೇವಾಲಯಗಳು**

ಶೈವ ಧರ್ಮವು ಪ್ರಾಚೀನ ಕಾಲದಿಂದಲೂ ರೂಢಿಯಲ್ಲಿದ್ದು, ಇದು ವೇದಗಳಿಗಿಂತಲೂ ಹಿಂದಿನದ್ದಾಗಿದೆ. ಭಾರತದಲ್ಲಿ ಸಿಂಧೂ ಮತ್ತು ಹರಪ್ಪ ಸಂಸ್ಕೃತಿಯಲ್ಲಿ ಶಿವೋಪಾಸನೆ ಇದ್ದುದಕ್ಕೆ ಸಂಬಂಧಿಸಿದಂತೆ ಹಲವಾರು ಮುದ್ರೆಗಳ ಮೇಲಿರುವ ಚಿಹ್ನೆಗಳೇ ಸಾಕ್ಷಿಯಾಗಿದೆ. ಆ ಕಾಲದಲ್ಲಿ ರಚಿಸಲಾದ ಹಲವು ಮುದ್ರೆಗಳಲ್ಲಿ ಒಂಟಿಕೊಂಬಿನ ದೇವತೆ ಇರುವ ಚಿತ್ರಗಳು ಮತ್ತು ಲಿಂಗಗಳು ದೊರಕಿವೆ. ಅದು ಯೋಗ ಸಮಾಧಿಯ ಭಂಗಿಯಲ್ಲಿ ಕುಳಿತಿರುವ ಮಾನವ, ಅವನ ಸುತ್ತಲೂ ಪೀಠದ ಕೆಳಗೆ ಆನೆ, ಹುಲಿ, ಖಡ್ಗಮೃಗ, ಜಿಂಕೆ, ಮಹಿಷ ಸುತ್ತುವರಿದಿದ್ದು ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ ಆ ವಿಗ್ರಹವು ಶೈವಧರ್ಮದ ಮಹಾಯೋಗಿ ಪಶುಪತಿಯಾದ ಶಿವನ ಪ್ರಾಚೀನ ರೂಪ ಎಂದು ನಿರ್ಧರಿಸಬಹುದು. ಅಂದಿನಿಂದ ಶಿವನ ಆರಾಧನೆ ಮುಂದುವರೆದು ಇಂದಿನವರೆಗೂ ತನ್ನ ಧಾರ್ಮಿಕ ಪ್ರಾಬಲ್ಯವನ್ನು ಉಳಿಸಿಕೊಂಡು ಬಂದಿರುವಂತಹ ಧರ್ಮವಾಗಿದೆ.[40] ಹಾಗಾಗಿ ಪ್ರಸ್ತುತ ತುರುವೇಕೆರೆ ತಾಲೂಕಿನಲ್ಲೂ ಈ ಶೈವ ಧರ್ಮದ ಅನುಸರಣೆ ಇದ್ದು ಇದೊಂದು ಪ್ರಪಂಚದ ಜೀವಂತ ಧರ್ಮಗಳಲ್ಲಿ ಒಂದೆಂದು ಪರಿಗಣಿಸಬಹುದು. ವೇದಗಳನ್ನು ಅವಲೋಕಿಸಿದರೆ ಶಿವನ ಬಗ್ಗೆ ಮಹತ್ವದ ಅಂಶಗಳು ತಿಳಿಯುತ್ತವೆ. ಋಗ್ವೇದದಲ್ಲಿ ರುದ್ರನು ದುಷ್ಟ ಶಕ್ತಿಗಳಿಗೆ ಅಧಿಪತಿಯಂತೆ ವರ್ಣಿತನಾಗಿದ್ದಾನೆ. 'ರುದ್ರ' ಎಂಬ ಪದವು "ಗರ್ಜಿಸುವವನು" ಎಂಬರ್ಥವನ್ನು ಕೊಡುತ್ತದೆ. ಅಂದರೆ ಶಿವನಿಗೆ ಅನ್ವಿಯಸಲಾದ ಅನೇಕ ಲಕ್ಷಣಗಳನ್ನು ರುದ್ರನಿಗೆ ಅಳವಡಿಸಿ ವರ್ಣಿಸಿರುವುದು ಕಂಡುಬರುತ್ತದೆ. ಅಲ್ಲದೆ ರುದ್ರನ ನೆಲೆ ಪರ್ವತಗಳು, ಅವನು ಮುಡಿಯನ್ನು ಎತ್ತಿ ಕಟ್ಟಿರುವುದು, ಚರ್ಮವನ್ನು ಉಡುಗೆಯಾಗಿ ಧರಿಸಿರುವುದು ನೈಜವಾಗಿ ಆತನ ಅವಿಭಾಜ್ಯ ಲಕ್ಷಣಗಳಿಗೆ ಅವಿನಾಭಾವ ಸಂಬಂಧ ಕಲ್ಪಿಸಲಾಗಿದೆ.[41]

ಶೈವ ಧರ್ಮಕ್ಕೆ ಸಂಬಂಧಿಸಿದಂತೆ 'ಅಥರ್ವಶಿರಸ್' ಉಪನಿಷತ್‌ನಲ್ಲಿ ಶಿವನ ಕೃಪೆಗೆ ಪಾತ್ರರಾಗಿ ಸಾಕ್ಷಾತ್ಕಾರವನ್ನು ಹೊಂದುವ ಶಿವಭಕ್ತನು ತಾನು ಪಾಲಿಸಬೇಕಾದ ನಿಯಮ ನಿಷ್ಠೆಗಳನ್ನು ತಿಳಿಸಿದೆ. ಶಿವಭಕ್ತನು ತಾನು ಸೇವಿಸುವ ಆಹಾರ ವಿಷಯದಲ್ಲಿ ಸಂಯಮಿ ಯಾಗಿದ್ದು, ಶ್ರವಣ, ಮನನ ಇತ್ಯಾದಿಗಳಲ್ಲಿ ಸದಾ ನಿರತನಾಗಿರಬೇಕು. ಪರಮ ಹಂಸನಾಗಿ ಬದುಕಬೇಕು. ಪಾಶುಪತ ವ್ರತವನ್ನು ಪಾಲಿಸಬೇಕು ಅಂದರೆ ಅತಿಕೋಪ ಮತ್ತು

ದುರಾಸೆಯನ್ನು ತ್ಯಜಿಸಿ ಕ್ಷಮೆಯನ್ನು ಸಾಧಿಸಬೇಕು. 'ಓಂ' ಎಂಬ ಮಂತ್ರವನ್ನು ಪದೇಪದೇ ಪಠಿಸಬೇಕು. ಹೃದಯದ ಅಂತರಾಳದಲ್ಲಿ ಸೂಕ್ಷ್ಮ ಶರೀರವಿದ್ದು, ಅದರಲ್ಲಿ ದುರಾಸೆ, ಕ್ಷಮೆ, ಕೋಪಗಳು ನೆಲೆಸಿವೆ. ಮನುಷ್ಯನ ಅಧೋಗತಿಗೆ ಕಾರಣವಾಗುವ ದುರಾಸೆಯನ್ನು ನಾಶಗೊಳಿಸಿ ಸಮಚಿತ್ತದಿಂದ ಮನಸ್ಸನ್ನು ಕೇಂದ್ರೀಕರಿಸಿ ಆಹಾರ, ಪಾನೀಯಗಳ ವಿಷಯದಲ್ಲಿ ಸಂಯಮವನ್ನು ಸಾಧಿಸಬೇಕು. ಭಸ್ಮವೇ ಅಗ್ನಿ, ಭಸ್ಮವೇ ವರುಣ, ಭಸ್ಮವೇ ಭೂಮಿ, ಆತ್ಮ, ಮನಸ್ಸು, ಕಣ್ಣುಗಳು ಇತ್ಯಾದಿಗಳೆಲ್ಲವೂ ಭಸ್ಮವೇ ಎಂಬ ಪದಗಳನ್ನು ಉಚ್ಚರಿಸುತ್ತಾ ದೇಹಕ್ಕೆ ಭಸ್ಮಾಧಾರಣ ಮಾಡಬೇಕು. ಪಶುವಿನ ಪಾಶವನ್ನು ಕತ್ತರಿಸಿ ಹಾಕಲು ಸಮರ್ಥವಾದ ವ್ರತವೇ 'ಪಾಶುಪತವ್ರತ' ಎಂದು ಹೇಳಲಾಗಿದೆ.[42] ಶೈವಧರ್ಮಕ್ಕೆ ಸೇರಿದ ಜನತೆ ಶಿವನನ್ನು ಲಿಂಗದ ರೂಪದಲ್ಲಿರುವ ಶಿಲ್ಪಕ್ಕೆ ಪೂಜೆಗಳನ್ನು ಸಲ್ಲಿಸುವ ವಾಡಿಕೆ ಸಾಂಪ್ರದಾಯಿಕವಾಗಿತ್ತು. ಇದರ ಅನ್ವಯ ಲಿಂಗ ಪೂಜೆಯ ಪ್ರಾರಂಭವು ಆರಂಭವಾಗಿ ಇತ್ತೀಚಿನ ದಿನಗಳಲ್ಲಿ ಬಹುವ್ಯಾಪಕವಾಗಿ ಹರಡಿತು.[43] ಈ ಲಿಂಗವು ಶಿವನ ಸಂಕೇತವಾಗಿ ಬೆಳೆದು ಬಂದು ತದನಂತರದಲ್ಲಿ ಶಿವನ ವಿವಿಧ ಅವತಾರದ ಶಿಲ್ಪಗಳು ಬಳಕೆಗೆ ಬಂದವು. ಉದಾಹರಣೆಗೆ ಕರ್ನಾಟಕದಲ್ಲಿ ಅತ್ಯಂತ ಪ್ರಾಚೀನ ಶೈವ ದೇವಾಲಯಗಳಲ್ಲಿ ಒಂದಾದ ಬಾದಾಮಿಯಲ್ಲಿರುವ ಮಹಾಕೂಟೇಶ್ವರ ದೇವಾಲಯಕ್ಕೆ ದುರ್ಬಲದೇವಿ ಎಂಬುವವಳು ಅಲ್ಲಿರುವ ಮುಕುಟೇಶ್ವರನಿಗೆ ದತ್ತಿಯನ್ನು ನೀಡಿದ ಉಲ್ಲೇಖವು ಕ್ರಿ.ಶ.602ರಲ್ಲಿ ಬರೆಸಲಾದ ಮಂಗಳೇಶನ ಶಾಸನದಲ್ಲಿ ಕಂಡುಬರುತ್ತದೆ.[44] ದಕ್ಷಿಣ ಭಾರತದಲ್ಲಿ ಶೈವಧರ್ಮ ಪ್ರಾಚೀನ ಕಾಲದಲ್ಲಿಯೇ ಪ್ರಚಲಿತದಲ್ಲಿತ್ತೆಂದು ಪಾರಂಪರಿಕವಾಗಿ ತಿಳಿದು ಬರುತ್ತದೆ.[45] ಹೀಗೆ ದಕ್ಷಿಣ ಭಾರತದಲ್ಲಿ ನಟರಾಜನ ಮೂರ್ತಿಯನ್ನು ರೂಪಿಸಿ ಆತನ ಕೀರ್ತಿಯನ್ನು ಉತ್ತುಂಗಕ್ಕೇರಿಸಿದ ಹೆಗ್ಗಳಿಕೆಗೆ ಬಾದಾಮಿ ಚಾಲುಕ್ಯರು ಪಾತ್ರರಾಗಿದ್ದಾರೆ. ನಟರಾಜನ ಶಿಲ್ಪವಲ್ಲದೆ ಹರಿಹರ, ಅರ್ಧನಾರೀಶ್ವರ, ಮಹಿಷಮರ್ದಿನಿ ಮುಂತಾದ ಶಿಲ್ಪಗಳನ್ನು ಕೆತ್ತಿಸಿದ್ದಾರೆ.

ಬಾದಾಮಿ ಚಾಲುಕ್ಯರಿಂದ ಸ್ಫೂರ್ತಿಯನ್ನು ಪಡೆದ ರಾಷ್ಟ್ರಕೂಟರು, ಚೋಳರು, ಪಾಂಡ್ಯರು, ಪಲ್ಲವರು, ಕಲ್ಯಾಣಿಚಾಲುಕ್ಯರು, ಹೊಯ್ಸಳರು, ವಿಜಯನಗರದ ಅರಸರು ಶಿವನ ಮೂರ್ತಿಶಿಲ್ಪಗಳಿಗೆ ಹೆಚ್ಚಿನ ಪ್ರೋತ್ಸಾಹ ನೀಡಿದರು.[46] ಹೀಗೆ ಶಿವನ ಪೂಜೆಯು ಲಿಂಗ ಮತ್ತು ಮೂರ್ತಿರೂಪದಲ್ಲಿ ಪ್ರಚಲಿತಗೊಂಡು ಶಿವನ ಜೊತೆಯಲ್ಲಿ ಆತನ ಶಕ್ತಿದೇವತೆಯಾದ ಪಾರ್ವತಿ, ಸ್ಕಂಧ, ವೃಷಭ, ಗಣಪತಿ ಇವರಿಗೂ ಸಹ ಪೂಜೆ ಸಲ್ಲಿಸುವ ಪದ್ಧತಿ ರೂಢಿಗೆ ಬಂದಿತು. ಹೀಗೆ ಹತ್ತು ಹಲವು ವಿಷಯವನ್ನು ಮೈಗೂಡಿಸಿಕೊಂಡು ಜನ್ಮತಾಳಿದ ಶೈವ ದೇವಾಲಯಗಳು ಪ್ರಸಿದ್ಧತೆಯನ್ನು ಪಡೆದುಕೊಂಡಿವೆ. ಈ ಹಿನ್ನೆಲೆಯಲ್ಲಿ ಪ್ರಸ್ತುತವಾಗಿ ತುರುವೇಕೆರೆ ತಾಲೂಕಿನಲ್ಲಿ

ಗಂಗರ ಕಾಲದಿಂದ ಪ್ರಾರಂಭವಾಗಿ ವಿಜಯನಗರ ಕಾಲದವರೆಗೂ ಅನೇಕ ದೇವಾಲಯಗಳು ನಿರ್ಮಾಣವಾಗಿವೆ. ಇದರಿಂದಾಗಿ ಅವುಗಳ ಬಗ್ಗೆ ಈಗಾಗಲೇ ಕಂಡುಬರುವ ಮಾಹಿತಿಗಳ ಆಧಾರದ ಮೇಲೆ ಸಂಶೋಧನಾತ್ಮಕವಾಗಿ ಕ್ಷೇತ್ರಕಾರ್ಯವನ್ನು ಕೈಗೊಂಡು ಆ ಸ್ಥಳಗಳಲ್ಲಿರುವ ವಾಸ್ತುಶಿಲ್ಪ ಮತ್ತು ಕಲೆಯ ಬಗ್ಗೆ ಹೆಚ್ಚಿನ ಮಹಿತಿಯನ್ನು ಸಂಗ್ರಹಣೆ ಮಾಡಿ ವಿವರಣೆಯನ್ನು ನೀಡಿ ಜೊತೆಗೆ ಛಾಯಾಚಿತ್ರಗಳನ್ನು ಸಹ ತೆಗೆದು ಈ ಮಹಾಪ್ರಬಂಧದಲ್ಲಿ ನೀಡಲಾಗಿದೆ.

**ಹಂಸೇಶ್ವರ ಅಥವಾ ಸಂಗಮೇಶ್ವರ ದೇವಾಲಯ–ಹುಲಿಕಲ್**

ತುರುವೇಕೆರೆ ತಾಲೂಕು ಕೇಂದ್ರದಿಂದ ದಿಡಿಗಕ್ಕೆ ಹೋಗುವ ಮಾರ್ಗದಲ್ಲಿ 13 ಕಿ.ಮೀ ದೂರದಲ್ಲಿ ಹುಲಿಕಲ್ ಗ್ರಾಮ ಕಂಡುಬರುತ್ತದೆ. ಈ ಗ್ರಾಮದಲ್ಲಿ ಪ್ರಾಚೀನ ದೇವಾಲಯಗಳಾದ ಕಲ್ಲೇಶ್ವರ ದೇವಾಲಯ ಮತ್ತು ಸಂಗಮೇಶ್ವರ ದೇವಾಲಯ ಹಾಗೂ ಊರಿನ ಶಕ್ತಿದೇವತೆಯಾದ ಕೆಂಪಮ್ಮ ದೇವಾಲಯಗಳು ಕಂಡುಬರುತ್ತವೆ.

ಹುಲಿಕಲ್ಲು ಎನ್ನುವ ಗ್ರಾಮದ ಸ್ಥಳನಾಮದಲ್ಲಿ ಹುಲಿ ಮತ್ತು ಕಲ್ಲು ಎನ್ನುವ ಎರಡು ಘಟಕಗಳಿವೆ. ಇಲ್ಲಿ 'ಹುಲಿ' ಎಂಬುದು ಭಯಂಕರ ಕಾಡು ಪ್ರಾಣಿಯಾಗಿದೆ. ಇನ್ನು 'ಕಲ್ಲು' ಎಂಬುದು ಭೌತಿಕವಾದ ಗಟ್ಟಿಯಾದ ವಸ್ತುವಾಗಿದೆ. ಹಿಂದೆ ಕಾಡು ಬಹಳವಿದ್ದಾಗ ಕಾಡು ಪ್ರಾಣಿಗಳ ಸಂಖ್ಯೆಯು ಹೆಚ್ಚು ಇತ್ತು. ಅಂತಹ ಪ್ರಾಣಿಗಳಲ್ಲಿ ಶಕ್ತಿಯುತ ಕ್ರೂರ ಕಾಡು ಪ್ರಾಣಿಗಳಲ್ಲಿ ಹುಲಿಯು ಒಂದಾಗಿದ್ದು, ಹುಲಿಯು ಬಹಳಷ್ಟು ಸಮಯ ಕುಳಿತಿರುತ್ತಿದ್ದ ಕಲ್ಲು 'ಹುಲಿಕಲ್ಲು' ಎಂದು ಹೆಸರಾಗಿದೆ. ಕಾಲಾನಂತರ 'ಹುಲಿಕಲ್ಲು' ಬಳಿಯಲ್ಲಿ ಗ್ರಾಮವು ನಿರ್ಮಾಣವಾದಾಗ 'ಹುಲಿಕಲ್ಲು' ಎಂದು ಗ್ರಾಮದ ಸ್ಥಳನಾಮ ಉಂಟಾಗಿದೆ.[47] ಹುಲಿಕಲ್ಲು ಗ್ರಾಮದ ನೈರುತ್ಯ ಭಾಗದಲ್ಲಿ ಪೂರ್ವಾಭಿಮುಖವಾಗಿ ಸಂಗಮೇಶ್ವರ ದೇವಾಲಯ ನಿರ್ಮಾಣ ವಾಗಿದ್ದು, ಪ್ರಸ್ತುತ ಹಂಸೇಶ್ವರ ದೇವಾಲಯವೆಂದು ಕರೆಯಲ್ಪಡುತ್ತಿದೆ.

ಈ ಸಂಗಮೇಶ್ವರ ದೇವಾಲಯದ ನಿರ್ಮಾಣದ ಕಾಲಮಾನಕ್ಕೆ ಸಂಬಂಧಿಸಿದಂತೆ ನಮಗೆ ನೇರವಾದ ಯಾವುದೇ ಶಾಸನಾಧಾರಗಳು ದೊರಕುವುದಿಲ್ಲ. ದೇವಾಲಯದ ಕಂಬಗಳ ಲಕ್ಷಣದ ಆಧಾರದ ಮೇಲೆ, ಗಂಗರ ಕಾಲದ 16 ಮೂಲೆಯನ್ನು ಹೊಂದಿರುವ ಕಂಬಗಳಿದ್ದು, ಇವುಗಳ ಆಧಾರದ ಮೇಲೆ ಗಂಗರ ಕಾಲದಲ್ಲಿ ಈ ದೇವಾಲಯವು ನಿರ್ಮಾಣವಾಗಿದೆ ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.[48] ಹುಲಿಕಲ್ ಗ್ರಾಮದಲ್ಲಿ ಭಗ್ನಗೊಂಡಿದ್ದ ಪ್ರಾಚೀನ ದೇವಾಲಯವಾದ ಕಾಮತೇಶ್ವರ ದೇವಾಲಯದ ವಸ್ತುಗಳನ್ನು ಉಪಯೋಗಿಸಿ ಈ ದೇವಾಲಯವನ್ನು ನಿರ್ಮಿಸಲಾಗಿದೆ.[49]

**ಗರ್ಭಗೃಹ**

ಗರ್ಭಗೃಹವು 8X8 ಅಡಿ ಉದ್ದ ಮತ್ತು ಅಗಲ ಹೊಂದಿದ್ದು ಚೌಕಾಕಾರವಾಗಿದೆ. ಭಿತ್ತಿಯನ್ನು ಕಣಶಿಲೆಯ ಕಲ್ಲು ಚಪ್ಪಡಿಗಳನ್ನು ಜೋಡಿಸಿ ನಿರ್ಮಿಸಲಾಗಿದೆ. ಚೌಕಾಕಾರದ ನಾಲ್ಕು ಕಂಬಗಳನ್ನು ಗರ್ಭಗೃಹದ ಭಿತ್ತಿಗೆ ಸೇರಿಸಲಾಗಿದೆ. ಗರ್ಭಗೃಹದ ಮಧ್ಯಭಾಗದಲ್ಲಿ ನಕ್ಷತ್ರಾಕಾರದ ಪಾಣಿಪೀಠದ ಮೇಲೆ ಒಂದು ಅಡಿ ಎತ್ತರವಿರುವ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. **(ಚಿ.ಸಂ.1)** ಗರ್ಭಗೃಹದ ಮೇಲ್ಛಾವಣಿಯಲ್ಲಿ ಕಲ್ಲುಚಪ್ಪಡಿಗಳನ್ನು ಜೋಡಿಸಿ ಅರಳಿದ ಪದ್ಮಪುಷ್ಪದ ಭುವನೇಶ್ವರಿಯನ್ನು ಮಾಡಲಾಗಿದೆ. ಈ ಗರ್ಭಗೃಹದ ಮುಂದೆ ಅಂತರಾಳವಿದೆ. ಗರ್ಭಗೃಹದ ನೆಲಹಾಸನ್ನು ಇತ್ತೀಚಿಗೆ ಕಣಶಿಲೆಯನ್ನು ಸೇರಿಸಿ ಮಾಡಲಾಗಿದೆ.

**ನವರಂಗ**

ನವರಂಗವು ಸುಮಾರು 15X15 ಅಡಿ ಉದ್ದ ಮತ್ತು ಅಗಲವಾಗಿದ್ದು ಚೌಕಾಕಾರವಾಗಿದೆ. ನವರಂಗದ ಮಧ್ಯದಲ್ಲಿ ಗಂಗರ ಶೈಲಿಯ ನಾಲ್ಕು ಕಂಬಗಳಿದ್ದು 6 ಅಡಿ ಎತ್ತರವನ್ನು ಹೊಂದಿವೆ. ಈ ಕಂಬಗಳು 16 ಮುಖವನ್ನು ಹೊಂದಿದ್ದು, ಗಾಲಿ ಮತ್ತು ಘಟ (ಬ್ರಾಕೆಟ್ಸ್) ಹೊಂದಿವೆ. ಕಂಬಗಳ ಮೇಲ್ಭಾಗದಲ್ಲಿ ನಾಲ್ಕು ದಿಕ್ಕಿಗೂ ಚೌಕಾಕಾರದ ಕಪೋತನ್ನು ಮಾಡಲಾಗಿದೆ. ನವರಂಗದ ಮಧ್ಯಭಾಗದಲ್ಲಿ ಗರ್ಭಗೃಹದ ಶಿವಲಿಂಗಕ್ಕೆ ಅಭಿಮುಖವಾಗಿ ಶಿವನ ವಾಹನವಾದ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. **(ಚಿ.ಸಂ.2)** ಮೇಲ್ಛಾವಣಿಯ ಮಧ್ಯದಲ್ಲಿ ಅರಳಿದ ಪದ್ಮಪುಷವನ್ನು ಬಿಡಿಸಲಾಗಿದೆ. ಇದು ಎರಡು ಪಟ್ಟಿಕೆಗಳಿಂದ ಕೂಡಿದೆ. ನವರಂಗದ ಎಡಭಾಗದಲ್ಲಿ ಪೂರ್ವಾಭಿಮುಖವಾಗಿ ವೇಣಗೋಪಾಲನ ಮೂರ್ತಿಶಿಲ್ಪವನ್ನು ಪ್ರತಿಷ್ಠಾಪಿಸ ಲಾಗಿದೆ. **(ಚಿ.ಸಂ.3)** ಸುಂದರವಾಗಿ ಕೆತ್ತನೆಗೊಂಡಿರುವ ಶಿಲ್ಪವು 5 ಅಡಿ ಎತ್ತರವನ್ನು ಹೊಂದಿದ್ದು, ಕೊಳಲನೂದುತ ತ್ರಿಭಂಗಿಯಲ್ಲಿ ನಿಂತಿರುವಂತೆ ಕೆತ್ತಲಾಗಿದೆ. ಮೈಮೇಲೆ ಸುಂದರವಾದ ಆಭರಣಗಳಿಂದ ಕಂಠಾಹಾರ, ತೋಳುಬಂದಿ, ಕಾಲ್ಗೆಜ್ಜೆ, ವಿವಿಧ ಬಗೆಯ ಮಣಿಹಾರಗಳನ್ನು ಬಿಡಿಸಲಾಗಿದೆ. ಈ ದೇವನ ಹಿಂದೆ ಪ್ರಭಾವಳಿ ಇದ್ದು, ಬಳ್ಳಿ ಸುರುಳಿಗಳ ಅಲಂಕರಣೆಯನ್ನು ಹೊಂದಿದೆ. [50] ಪ್ರಭಾವಳಿಯ ಕೆಳಭಾಗದಲ್ಲಿ ಗೋವುಗಳು ತಮ್ಮ ಕತ್ತನ್ನು ಎತ್ತಿ ಕೊಳಲಿನ ನಾದವನ್ನು ಆಲಿಸುತ್ತಿರುವಂತೆ ಚಿತ್ರಿಸಲಾಗಿದೆ. ವೇಣುಗೋಪಾಲನ ಇಕ್ಕೆಲಗಳಲ್ಲಿ ಸ್ತ್ರೀ ದೇವತೆಗಳನ್ನು ಮತ್ತು ಪರಿಚಾರಿಕೆಯರನ್ನು ಇಲ್ಲಿ ಬಿಡಿಸಲಾಗಿದೆ.

ವೇಣುಗೋಪಾಲನ ಪಕ್ಕದಲ್ಲಿಯೇ ಮೂರು ಅಡಿ ಎತ್ತರವಿರುವ ನಾರಾಯಣ ಮತ್ತು ಸೂರ್ಯದೇವನ ಮೂರ್ತಿಶಿಲ್ಪಗಳನ್ನು ಪ್ರತಿಷ್ಠಾಪಿಸಲಾಗಿದೆ. ಚತುರ್ಭುಜವನ್ನು ಹೊಂದಿರುವ ಈ

ನಾರಾಯಣನು ಶಂಖ, ಚಕ್ರ, ಗದಾ ಮತ್ತು ಅಭಯಹಸ್ತ ಹೊಂದಿದ್ದು ಸಮಭಂಗಿಯಲ್ಲಿ ನಿಂತಿದ್ದಾನೆ. **(ಚಿ.ಸಂ.4)** ಹಿಂದೆ ಪ್ರಭಾವಳಿ ಕಂಡುಬರುವುದಿಲ್ಲ. ಈ ಮೂರ್ತಿಶಿಲ್ಪವು ಸಾಮಾನ್ಯ ಅಲಂಕರಣೆಯಿಂದ ಕೂಡಿದೆ. ನಾರಾಯಣ ದೇವನ ಪಕ್ಕದಲ್ಲಿಯೇ ಮೂರು ಅಡಿ ಎತ್ತರವಿರುವ ಸೂರ್ಯ ದೇವನಿದ್ದು ಕೈಗಳಲ್ಲಿ ಕಮಲದ ಪುಷ್ಪಗಳನ್ನು ಹಿಡಿದಿದ್ದಾನೆ. ಕಲಾದೃಷ್ಟಿಯಿಂದ ಈ ಎರಡೂ ಮೂರ್ತಿಶಿಲ್ಪಗಳು ಅಷ್ಟೇನೂ ಆಕರ್ಷಕವಾಗಿಲ್ಲ. ನಾರಾಯಣ ಮತ್ತು ಸೂರ್ಯದೇವನ ಎರಡೂ ಮೂರ್ತಿಶಿಲ್ಪಗಳನ್ನು ಹುಲಿಕಲ್ ಗ್ರಾಮದ ಪ್ರಾಚೀನ ಕಾಮಾತೇಶ್ವರ ದೇವಾಲಯವು ಸಂಪೂರ್ಣವಾಗಿ ನಾಶವಾದ ನಂತರ ಈ ಶಿಲ್ಪಗಳನ್ನು ಸಂಗಮೇಶ್ವರ ದೇವಾಲಯಕ್ಕೆ ತಂದು ಇಡಲಾಗಿದೆ.[51] ನವರಂಗದ ಬಲಭಾಗದ ಭಿತ್ತಿಯಲ್ಲಿ ಸಪ್ತಮಾತೃಕಾ ಶಿಲ್ಪಗಳು ಕಂಡುಬಂದಿದ್ದು ಎಲ್ಲಾ ದೇವತೆಗಳು ತಮ್ಮ ವಾಹನದ ಮೇಲೆ ಕುಳಿತಿರುವಂತೆ ರಚಿಸಿ ಪ್ರತಿಷ್ಠಾಪಿಸಲಾಗಿದೆ. **(ಚಿ.ಸಂ.5)** ಸಪ್ತಮಾತೃಕ ಶಿಲ್ಪವನ್ನು ಸಹ ಕಾಮಾತೇಶ್ವರ ದೇವಾಲಯದಿಂದ ತಂದು ಇಲ್ಲಿ ಪ್ರತಿಷ್ಠಾಪಿಸಲಾಗಿದೆ ಎಂದು ಅಭಿಪ್ರಾಯ ಪಡೆಬಹುದಾಗಿದೆ. ದೇವಾಲಯಕ್ಕೆ ಮುಖಮಂಟಪ ಕಂಡುಬರುವುದಿಲ್ಲ. ಚೌಕಾಕಾರದ ಅದಿಷ್ಠಾನದ ಮೇಲೆ ದೇವಾಲಯವು ನಿರ್ಮಾಣವಾಗಿದ್ದು, ಭಿತ್ತಿ ಮತ್ತು ಕಪೋತವನ್ನು ಇತ್ತೀಚಿಗೆ ಗಾರೆ ಮತ್ತು ಇಟ್ಟಿಗೆಯಿಂದ ನಿರ್ಮಾಣವಾಗಿದೆ. ದೇವಾಲಯದ ಗರ್ಭಗೃಹದ ಮೇಲೆ 8 ಅಡಿ ಎತ್ತರವಿರುವ ಏಕತಲ ಶಿಖರವಿದೆ. ಇದರ ಮೇಲ್ಭಾಗದಲ್ಲಿ ಸ್ತೂಪಿ ನಿರ್ಮಿಸಿ ನಾಲ್ಕು ಕಡೆಗಳಲ್ಲಿ ಕೀರ್ತಿಮುಖವನ್ನು ಮಾಡಲಾಗಿದೆ. ಶಿಖರದ ಮುಂಭಾಗ ಸುಖನಾಸವನ್ನು ನಿರ್ಮಿಸಲಾಗಿದೆ. ದೇವಾಲಯದ ಪ್ರವೇಶದ್ವಾರದ ಮೇಲ್ಭಾಗದ ಲಲಾಟಬಿಂಬದಲ್ಲಿ ಶಿವನು ತಪಸ್ಸು ಮಾಡುತ್ತಿರುವ ಶಿಲ್ಪವನ್ನು ಬಿಡಿಸಲಾಗಿದೆ. ಇತ್ತೀಚೆಗೆ ದೇವಾಲಯವನ್ನು ಜೀರ್ಣೋದ್ಧಾರ ಮಾಡಲಾಗಿದೆ.

**ಮಲ್ಲೇಶ್ವರ ದೇವಾಲಯ-ತಂಡಗ**

ತುರುವೇಕೆರೆ ತಾಲೂಕು ಕೇಂದ್ರದಿಂದ ದಬ್ಬೇಘಟ್ಟಕ್ಕೆ ಹೋಗುವ ರಸ್ತೆಯಲ್ಲಿ ಸುಮಾರು 11 ಕಿ.ಮೀ. ದೂರದಲ್ಲಿ ತಂಡಗ ಗ್ರಾಮವು ಕಂಡುಬರುತ್ತದೆ. ನೊಣವಿನ ಕೆರೆಯಿಂದ 5 ಕಿ.ಮೀ. ದೂರದಲ್ಲಿರುವ ಈ ಗ್ರಾಮವು ತನ್ನದೇ ಆದ ಸಾಂಸ್ಕೃತಿಕ ಮಹತ್ವವನ್ನು ಹೊಂದಿದೆ. ಹಳೇ ತಂಡಗವೆಂದು ಕರೆಯಲ್ಪಡುವ ಈ ಊರಿನಲ್ಲಿನ ಸ್ಥಳ ಪುರಾಣದಂತೆ ಕುಂಬಾರ ಕುಲದ ಮಹಿಳೆ ಮತ್ತು ಸ್ಥಳೀಯ ಬ್ರಾಹ್ಮಣನ ಸಮಾಗಮದಿಂದ ಒಂದು ಮಗುವು ಹುಟ್ಟಿ ಶಕಪುರುಷನೆಂದು ಪ್ರಸಿದ್ಧವಾದ ಶಾಲಿವಾಹನನು ಈ ಊರಿನಲ್ಲಿ ಜನಿಸಿದನು ಎಂಬ ಐತಿಹ್ಯವಿದೆ.[52] ಪ್ರಾಚೀನ ಕಾಲದಲ್ಲಿ ಈ ತಂಡಗ ಗ್ರಾಮವು ಬ್ರಾಹ್ಮಣರು ವಾಸಿಸುತಿದ್ದಂತಹ ಅಗ್ರಹಾರವಾಗಿದ್ದು, ಹಿಂದೆ ಇದು 'ಶಂಕರ ನಾರಾಯಣಪುರ' ಎಂದು ಕರೆಯಲ್ಪಡುತ್ತಿತ್ತು ಎಂಬ ಅಂಶಗಳು ನಮಗೆ

ಶಾಸನಾಧಾರಗಳಿಂದ ತಿಳಿದುಬರುತ್ತದೆ.[53] ತಂಡಗ ಗ್ರಾಮದಲ್ಲಿ ಚನ್ನಕೇಶವ ದೇವಾಲಯ ಕಾಣಬರುತ್ತದೆ. ಈ ಚನ್ನಕೇಶವ ದೇವಾಲಯದಲ್ಲಿ ಕ್ರಿ.ಶ.13ನೇ ಶತಮಾನದ ಹೊಯ್ಸಳ ಶೈಲಿಯ ಶಿಲ್ಪವನ್ನು ಕಾಣಬಹುದಾಗಿದೆ. ಈ ಗ್ರಾಮದಲ್ಲಿ ನಿರ್ಮಾಣವಾಗಿರುವ ಮತ್ತೊಂದು ದೇವಾಲಯವೆಂದರೆ ಮಲ್ಲೇಶ್ವರ ದೇವಾಲಯ. ಈ ದೇವಾಲಯವು ಗಾತ್ರದಲ್ಲಿ ಚಿಕ್ಕದು ಮತ್ತು ಪ್ರಾಚೀನವಾದಂತಹ ದೇವಾಲಯವಾಗಿದೆ. ತುರುವೇಕೆರೆ ಪಟ್ಟಣದಲ್ಲಿರುವ ಬೇಟೆರಾಯ ದೇವಾಲಯದ ಸ್ಥಾನಿಕ ವಂಶದವರ ವಶದಲ್ಲಿರುವ "ರಾಯರೇಖೆ" ಸುರುಳಿರೇಖೆಯಲ್ಲಿ ಶಾಲಿವಾಹನನು ಇಲ್ಲಿ ಹುಟ್ಟಿ ಕಲಿಯುಗದ 3170 ವರ್ಷಗಳಲ್ಲಿ ಉಜ್ಜೈಯನಿಯಲ್ಲಿ ಸಿಂಹಾಸನರೂಢನಾಗಿ ತನ್ನ ಆಳ್ವಿಕೆಯನ್ನು ಆರಂಭಿಸಿದನೆಂಬ ಐತಿಹ್ಯವಿದೆ.[54] ಇದಲ್ಲದೇ ಶಾಲಿವಾಹನನು ಯುದ್ಧದಲ್ಲಿ ಮಾಯಾವೀ ಬೊಂಬೆಗಳನ್ನು ಮಾಡಿ ತಂಡೋಪತಂಡವಾಗಿ ರಾಕ್ಷಸರ ಮೇಲೆ ಯುದ್ಧಕ್ಕೆ ಕಳುಹಿಸುತ್ತಿದ್ದರಿಂದ ಈ ಗ್ರಾಮಕ್ಕೆ ತಂಡಗ ಎಂಬ ಹೆಸರು ಬಂದಿತೆಂದು ಸ್ಥಳೀಯ ನಂಬಿಕೆ ಇದೆ.

ಈ ಗ್ರಾಮದಲ್ಲಿ ಕಂಡುಬರುವ ಮಲ್ಲೇಶ್ವರ ದೇವಾಲಯವು ಯಾವ ಕಾಲದಲ್ಲಿ ನಿರ್ಮಾಣವಾಯಿತೆಂದು ತಿಳಿಯಲು ನಮಗೆ ಯಾವುದೇ ಶಾಸನಾಧಾರಗಳು ದೊರೆತಿಲ್ಲ. ದೇವಾಲಯದ ಕಂಬಗಳ ಆಧಾರದ ಮೇಲೆ ಈ ದೇವಾಲಯವು ಗಂಗರ ಕಾಲದಲ್ಲಿ ನಿರ್ಮಾಣವಾಗಿರಬಹುದೆಂದು ತಿಳಿದುಬರುತ್ತದೆ.[55]

ಮಲ್ಲೇಶ್ವರ ದೇವಾಲಯವು ತಂಡಗ ಗ್ರಾಮದ ವಾಯುವ್ಯ ಭಾಗದಲ್ಲಿ ನಿರ್ಮಾಣವಾಗಿರುವ ಏಕಕೂಟ ದೇವಾಲಯವಾಗಿದೆ. ಈ ದೇವಾಲಯವನ್ನು ಇತ್ತೀಚಿಗೆ ಸಂಪೂರ್ಣವಾಗಿ ಜೀರ್ಣೋದ್ಧಾರ ಮಾಡಲಾಗಿದೆ. ಉಳಿದಂತೆ ಎಲ್ಲಾ ಭಾಗಗಳು ಸುಸ್ಥಿತಿಯಲ್ಲಿವೆ.

**ಗರ್ಭಗೃಹ**

ಗರ್ಭಗೃಹವು 8X8 ಅಡಿ ಉದ್ದ ಮತ್ತು ಅಗಲ ಹೊಂದಿದ್ದು ಚೌಕಾಕಾರವಾಗಿದೆ. ಈ ಗರ್ಭಗೃಹದ ಮಧ್ಯಭಾಗದಲ್ಲಿ ನಕ್ಷತ್ರಾಕಾರದ ಪಾಣಿಪೀಠದ ಮೇಲೆ ಎರಡೂವರೆ ಅಡಿ ಎತ್ತರವಿರುವ ಮಲ್ಲೇಶ್ವರ ಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಗರ್ಭಗೃಹದ ಭಾಗವು ಇತ್ತೀಚಿಗೆ ಜೀರ್ಣೋದ್ಧಾರಗೊಂಡಿದೆ. **(ಚಿ.ಸಂ.6)**

**ಸುಖನಾಸಿ**

ಸುಖನಾಸಿಯು ಗರ್ಭಗೃಹದಷ್ಟೇ ಉದ್ದ ಮತ್ತು ಅಗಲವನ್ನು ಹೊಂದಿದ್ದು ಚೌಕಾಕಾರವಾಗಿದೆ. ಸುಖನಾಸಿಯ ಮಧ್ಯಭಾಗದಲ್ಲಿ ಶಿವನಿಗೆ ಎದುರಾಗಿ ಶಿವನ ವಾಹನವಾದ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ನಂದಿಯ ಮೈಮೇಲೆ ಘಂಟೆಗಳ ಹಾರವನ್ನು ಕೆತ್ತನೆ ಮಾಡಲಾಗಿದೆ. ಸುಖನಾಸಿಯ ಬಾಗಿಲು ಸರಳವಾಗಿದೆ. ಇತ್ತೀಚಿಗೆ ಭಕ್ತಾಧಿಗಳು ಗರ್ಭಗೃಹದ ಬಾಗಿಲಿಗೆ ಪಂಚಲೋಹದ ಹೊದಿಕೆಯನ್ನು ಅಲಂಕರಣೆ ಮಾಡಿ ಸೇರಿಸಿದ್ದಾರೆ.

**ನವರಂಗ**

ನವರಂಗವು ಸುಮಾರು 20X20 ಅಡಿ ಉದ್ದ ಮತ್ತು ಅಗಲವಾಗಿದ್ದು ಚೌಕಾಕಾರವಾಗಿದೆ. ನವರಂಗದ ಮಧ್ಯದಲ್ಲಿ ಗಂಗರ ಶೈಲಿಯ ನಾಲ್ಕು ಕಂಬಗಳಿವೆ. ಈ ಕಂಬಗಳ ಪೀಠದ ಭಾಗವನ್ನು ಚೌಕಾಕಾರವಾಗಿ ಮಾಡಲಾಗಿದ್ದು ಯಾವುದೇ ಅಲಂಕರಣೆಗಳು ಕಂಡುಬರುವುದಿಲ್ಲ. ದಿಂಡಿನ ಭಾಗವನ್ನು ಸಿಲಿಂಡರ್‌ನ ಆಕಾರದಲ್ಲಿ ಮಾಡಲಾಗಿದ್ದು ಕ್ರಮವಾಗಿ ಘಂಟೆ, ಗಾಲಿ, ಘಟವನ್ನು ಹೊಂದಿವೆ. ದುಂಡಾದ ಕಪೋತವನ್ನು ಹೊಂದಿದ್ದು ಬೋಧಿಗೆಯನ್ನು ಸರಳವಾಗಿ ಮಾಡಲಾಗಿದೆ. **(ಚಿ.ಸಂ.7)**

ನವರಂಗದಲ್ಲಿನ ಕಂಬಗಳನ್ನು ಹೋಲುವಂತಹ 12 ಅರೆ ಕಂಬಗಳನ್ನು ಮಾಡಿ ನವರಂಗದ ಗೋಡೆಗ ಸೇರಿಸಲಾಗಿದೆ. ಈ ನವರಂಗದ ದಕ್ಷಿಣ ಭಾಗದಲ್ಲಿ ನಕ್ಷತ್ರಾಕಾರದ ಮೂಷಿಕ ಪೀಠದ ಮೇಲೆ ಗಣೇಶನನ್ನು ಪ್ರತಿಷ್ಠಾಪಿಸಲಾಗಿದೆ. ಈ ಮೂರ್ತಿಯು ಚತುರ್ಭುಜವನ್ನು ಹೊಂದಿದ್ದು ಕೈಗಳಲ್ಲಿ ಪಾಶ, ಅಂಕುಶ, ಫಲ ಮತ್ತು ಅಭಯ ಹಸ್ತವನ್ನು ಹೊಂದಿದ್ದಾನೆ. ಸುಖಾಸನದಲ್ಲಿ ಕುಳಿತಿರುವ ಈ ಗಣಪನು ತನ್ನ ಉದರ ಭಾಗಕ್ಕೆ ಸರ್ಪವನ್ನು ಸುತ್ತಿಕೊಂಡಿದ್ದಾನೆ. **(ಚಿ.ಸಂ.8)** ನವರಂಗದ ಉತ್ತರ ಭಾಗದಲ್ಲಿ ಪಾಣಿಪೀಠದ ಮೇಲೆ ಪಾರ್ವತಿಯನ್ನು ಪ್ರತಿಷ್ಠಾಪಿಸಲಾಗಿದೆ. ಈ ಪಾರ್ವತಿಯು ಸುಮಾರು 3 ಅಡಿ ಎತ್ತರವಾಗಿದ್ದು ಪದ್ಮಾಸನದಲ್ಲಿ ಕುಳಿತಿದ್ದಾಳೆ. ಚತುರ್ಭುಜವನ್ನು ಹೊಂದಿರುವ ಈ ದೇವಿಯ ಮುಂದಿನ ಎರಡು ಕೈಗಳು ಭಗ್ನವಾಗಿವೆ. ಹಿಂದಿನ ಕೈಗಳಲ್ಲಿ ತ್ರಿಶೂಲ ಮತ್ತು ಢಮರುಗವನ್ನು ಹಿಡಿದು ಕೊಂಡಿದ್ದಾಳೆ. ಪ್ರಭಾವಳಿಯಲ್ಲಿ ಬಳ್ಳಿಸುರುಳಿಗಳ ಕೀರ್ತಿಮುಖದ ಸುಂದರವಾದ ಕೆತ್ತನೆಯನ್ನು ಕಾಣಬಹುದು. **(ಚಿ.ಸಂ.9)**

ನವರಂಗದ ಮಧ್ಯದ ಮೇಲ್ಛಾವಣಿಯಲ್ಲಿ ವಿಶಾಲವಾಗಿ ಬಿಡಿಸಲಾಗಿರುವ ಪದ್ಮ ಪುಷ್ಪವಿದೆ. **(ಚಿ.ಸಂ.10)** ನವರಂಗದ ಬಾಗಿಲು ಅಲಂಕರಣೆಯ ಕೆತ್ತನೆಯಿಂದ ಕೂಡಿದ್ದು ಬಾಗಿಲ

ಪಟ್ಟಿಕೆಗಳಲ್ಲಿ ಕಮಲದ ದಳ, ಕಮಲದ ಪುಷ್ಪ, ಬಳ್ಳಿಸುರುಳಿಗಳ ಕೆತ್ತನೆಯನ್ನು ಕಾಣಬಹುದು. ಬಾಗಿಲ ತೋರಣದಲ್ಲಿ ಹಾರುತ್ತಿರುವ ಹಂಸಗಳ ಸಾಲು ಇವೆ. ಬಾಗಿಲ ಇಕ್ಕೆಲಗಳಲ್ಲಿ ಶೈವ ದ್ವಾರಪಾಲಕರನ್ನು ಕಾಣಬಹುದು. ಈ ದ್ವಾರಪಾಲಕರು ತ್ರಿಭಂಗಿಯಲ್ಲಿ ನಿಂತಿದ್ದು, ಕೈಗಳಲ್ಲಿ ತ್ರಿಶೂಲ, ಡಮರು, ಗದೆಯನ್ನು ಹಿಡಿದು ಅಭಯಹಸ್ತ ಹೊಂದಿದ್ದಾರೆ. ಈ ದ್ವಾರಪಾಲಕರ ಇಕ್ಕೆಲಗಳಲ್ಲಿ ಚಾಮರಧಾರಿಣಿಯರನ್ನು ಕಾಣಬಹುದು. ದೇವಾಲಯಕ್ಕೆ ಈಗ ಮುಖಮಂಟಪ ಕಂಡುಬರುವುದಿಲ್ಲ. ಈ ದೇವಾಲಯದ ಮುಂಭಾಗದಲ್ಲಿ ಸುಮಾರು 2 ಅಡಿ ಎತ್ತರವಿರುವ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. [56] ಈ ನಂದಿಯು ಮೈಮೇಲೆ ಗೆಜ್ಜೆಯ ಹಾರವನ್ನು ಹೊಂದಿದ್ದು ಗರ್ಭಗೃಹದ ಶಿವಲಿಂಗಕ್ಕೆ ಅಭಿಮುಖವಾಗಿದೆ. ಈ ದೇವಾಲಯದ ಆಗ್ನೇಯ ಭಾಗದಲ್ಲಿ ಪ್ರಾಕಾರಕ್ಕೆ ಹೊಂದಿಕೊಂಡಂತೆ ಒಂದು ಶಾಸನಗಲ್ಲು ಮತ್ತು ಎರಡು ವೀರಗಲ್ಲುಗಳು ಕಂಡುಬರುತ್ತವೆ. ಈ ಶಾಸನವು ಕ್ರಿ.ಶ.1102ರ ಕಾಲಮಾನಕ್ಕೆ ಸೇರಿದ್ದು ಹೊಯ್ಸಳ ದೊರೆ 1ನೇ ಬಲ್ಲಾಳನ ಆಳ್ವಿಕೆ ಸಂಬಂಧಿಸಿದೆ. ಭೀಮಣ್ಣ ಎಂಬುವನು ಈ ಮಲ್ಲೇಶ್ವರ ದೇವಾಲಯಕ್ಕೆ ದಾನ ನೀಡಿದ ವಿಷಯದ ಮೇಲೆ ಬೆಳಕು ಚೆಲ್ಲುತ್ತದೆ.[57]

ಈ ದೇವಾಲಯದ ಪ್ರಾಕಾರದ ಪಕ್ಕದಲ್ಲಿಯೇ ಎರಡು ವೀರಗಲ್ಲುಗಳು ಕಂಡುಬಂದಿದ್ದು, ಹಸುಗಳನ್ನು ರಕ್ಷಿಸಲು ಕಳ್ಳರ ವಿರುದ್ಧ ಹೋರಾಡಿ ಮಡಿದ ವೀರರ ತುರುಗೋಳ್ ವೀರಗಲ್ಲುಗಳಾಗಿವೆ. ದೇವಾಲಯದಲ್ಲಿ ಅದಿಷ್ಠಾನ ಕಂಡುಬರುವುದಿಲ್ಲ. ಭಿತ್ತಿಯನ್ನು ಇತ್ತೀಚಿಗೆ ಜೀರ್ಣೋದ್ಧಾರ ಮಾಡಲಾಗಿದೆ. ಅಲ್ಲದೆ ಗರ್ಭಗೃಹದ ಮೇಲೆ ಶಿಖರ ಈಗ ಕಾಣಬರುವುದಿಲ್ಲ. ದೇವಾಲಯದ ಪ್ರವೇಶದ್ವಾರದ ಮೇಲೆ ಇತ್ತೀಚಿಗೆ ನಂದಿಯ ಶಿಲ್ಪವನ್ನು ಜಿಡಿಸಲಾಗಿದೆ. ಇತ್ತೀಚಿಗೆ ಕಟ್ಟಲಾಗಿರುವ ಪ್ರಾಕಾರವನ್ನು ಸಹ ಕಾಣಬಹುದಾಗಿದೆ. ದೇವಾಲಯದ ಎದುರಿಗೆ 8 ಅಡಿಗಳ ನಂದಿಕಂಬವನ್ನು ಪ್ರತಿಷ್ಠಾಪಿಸಲಾಗಿದೆ.[58]

**ಗಂಗಾಧರೇಶ್ವರ ದೇವಾಲಯ–ಗೋವಿಂದಘಟ್ಟ**

ಗೋವಿಂದಘಟ್ಟ ಗ್ರಾಮವು ತುರುವೇಕೆರೆ ತಾಲೂಕಿಗೆ ಸೇರಿರುವ ಒಂದು ಗ್ರಾಮವಾಗಿದೆ. ಇದು ತುರುವೇಕೆರೆಯಿಂದ ತಂಡಗ ಗ್ರಾಮಕ್ಕೆ ಹೋಗುವ ರಸ್ತೆ ಮಾರ್ಗದಲ್ಲಿ ಕಂಡುಬರುತ್ತದೆ. ಇದು ತುರುವೇಕೆರೆಯಿಂದ ಸುಮರು 4 ಕಿ.ಮೀ. ದೂರದಲ್ಲಿದೆ. ಈ ಗ್ರಾಮದ ನೈರುತ್ಯ ದಿಕ್ಕಿನಲ್ಲಿ ಗಂಗಾಧರೇಶ್ವರ ದೇವಾಲಯವನ್ನು ಪೂರ್ವಾಭಿ ಮುಖವಾಗಿ ಕಣಶಿಲೆ ಮತ್ತು ಬಳಪದ ಕಲ್ಲನ್ನು ಉಪಯೋಗಿಸಿ ನಿರ್ಮಿಸಲಾಗಿದೆ. ಇದೊಂದು ಏಕಕೂಟ ದೇವಾಲಯವಾಗಿದ್ದು ಇದರಲ್ಲಿ ಒಂದು ಗರ್ಭಗೃಹ, ಸುಖನಾಸಿ, ನವರಂಗ ಮತ್ತು ಮುಖಮಂಟಪಗಳು ಕಂಡುಬರುತ್ತವೆ. ಆದರೆ ಈಗ ನವರಂಗದ ಮುಂದೆ ನಿರ್ಮಿಸಲಾಗಿದ್ದ ಮುಖಮಂಟಪ ಪ್ರಕೃತಿಯ ವಿಕೋಪಕ್ಕೆ ತುತ್ತಾಗಿ

ಬಿದ್ದುಹೋಗಿದೆ. ಅದರೆ ಅವಶೇಷಗಳು ಈಗಲೂ ಪಕ್ಕದಲ್ಲಿ ಬಿದ್ದಿವೆ. ಈ ದೇವಾಲಯದ ನಿರ್ಮಾಣದ ಬಗ್ಗೆ ಯಾವುದೇ ರೀತಿಯ ಆಧಾರಗಳು ದೊರೆಯುವುದಿಲ್ಲ. ದೇವಾಲಯದ ನವರಗಂಗದಲ್ಲಿರುವ ಕಂಬಗಳ ಆಧಾರದ ಮೇಲೆ ಈ ದೇವಾಲಯವನ್ನು ಗಂಗರ ಕಾಲದಲ್ಲಿ ನಿರ್ಮಿಸಲಾಗಿದೆ ಎಂದು ನಮಗೆ ಮನವರಿಕೆಯಾಗುತ್ತದೆ.[59]

**ಗರ್ಭಗೃಹ**

ಗರ್ಭಗೃಹವು ಸುಮಾರು 8X8 ಅಡಿಗಳ ಉದ್ದಮತ್ತು ಅಗಲವಾಗಿದ್ದು ಚೌಕಾಕಾರವಾಗಿದೆ. ಇದರ ಮಧ್ಯದಲ್ಲಿ ಎರಡು ಅಡಿಗಳ ಎತ್ತರವಾಗಿರುವ ಚೌಕಾಕಾರದ ಪಾಣಿಪೀಠದ ಮೇಲೆ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. **(ಚಿ.ಸಂ.11)** ಗರ್ಭಗೃಹದ ಮೇಲ್ಛಾವಣಿಯು ನಕ್ಷತ್ರಾಕಾರವಾದ ಭುವನೇಶ್ವರಿಯನ್ನು ಹೊಂದಿದೆ. ಇದರ ಮಧ್ಯದಲ್ಲಿ ಅರಳಿದ ಪದ್ಮ ಪುಷ್ಪವನ್ನು ಬಿಡಿಸಲಾಗಿದೆ. ಗರ್ಭಗೃಹದ ಬಾಗಿಲು ಸರಳವಾಗಿದೆ, ಇದರಲ್ಲಿ ಯಾವುದೇ ರೀತಿ ಅಲಂಕರಣದ ಕೆತ್ತನೆಗಳು ಕಾಣಬರುವುದಿಲ್ಲ.

**ಸುಖನಾಸಿ**

ಸುಖನಾಸಿಯು ಗರ್ಭಗೃಹದಷ್ಟೇ ಉದ್ದ ಮತ್ತು ಅಗಲವಾಗಿದ್ದು ಚೌಕಾಕಾರವಾಗಿದೆ. ಇದರ ಮಧ್ಯದಲ್ಲಿ ಶಿವನಿಗೆ ಎದುರಾಗಿರುವಂತೆ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ಅಲ್ಲದೆ ದಕ್ಷಿಣದ ಗೋಡೆಯ ಮುಂದೆ ಸುಮಾರು ಮೂರು ಅಡಿಗಳ ಎತ್ತರವಿರುವ ಗಣೇಶನ ಮೂರ್ತಿಯನ್ನು ಇರಿಸಲಾಗಿದೆ. ಚತುರ್ಭುಜವನ್ನು ಹೊಂದಿರುವ ಈ ದೇವನು ಪಾಶ, ಅಂಕುಶ ಹಿಡಿದುಕೊಂಡಿದ್ದಾನೆ. ಮುಂದಿನ ಎರಡು ಕೈಗಳು ಮುರಿದುಹೋಗಿವೆ. ಸುಖನಾಸಿ ಮೇಲ್ಛಾವಣಿಯಲ್ಲಿ ನಕ್ಷತ್ರಾಕಾರವಾಗಿರುವ ಭುವನೇಶ್ವರಿ ಇದೆ. ಇದರಲ್ಲಿ ಅರಳಿದ ಪದ್ಮ ಪುಷ್ಪವನ್ನು ಬಿಡಿಸಲಾಗಿದೆ. ಸುಖನಾಸಿಯ ದ್ವಾರವು ಸರಳವಾಗಿದೆ. ಇದರ ಪಟ್ಟಿಕೆಗಳಲ್ಲಿ ಯಾವುದೇ ರೀತಿಯ ಅಲಂಕರಣದ ಕೆತ್ತನೆ ಕಾಣಬರುವುದಿಲ್ಲ. ಬಾಗಿಲ ಇಕ್ಕೆಲಗಳಲ್ಲಿ ಜಾಲಾಂಧ್ರಗಳನ್ನು ಸೇರಿಸಲಾಗಿದೆ.

**ನವರಂಗ**

ನವರಂಗವು ಸು. 20X20 ಅಡಿಗಳ ಉದ್ದ ಮತ್ತು ಅಗಲವಾಗಿದ್ದು ಚೌಕಾಕಾರವಾಗಿದೆ. ಇದರ ಮಧ್ಯದಲ್ಲಿ ಹೊಯ್ಸಳ ಶೈಲಿಯ ನಾಲ್ಕು ಕಂಬಗಳಿವೆ. ಇವುಗಳನ್ನು ರಾಟೆಯಂತ್ರದ ಸಹಾಯದಿಂದ ತಯಾರಿಸಲಾಗಿದೆ. ಚೌಕ, ಬಳೆಗಳ, ಗಂಟೆ ಕುಂಬಾಕಾರವಾಗಿ ಬೋದಿಗೆ

ಯನ್ನು ಗಾಳಿಯಾಕಾರದಿಂದ ರಚಿಸಿ ಅದರ ಮೇಲೆ ಪದ್ಮ ಫಲಕವಿದೆ. ಪದ್ಮ ಫಲಕದ ಮೇಲೆ ಚೌಕಾಕಾರದ ಫಲಗೈ ಅದರ ಮೇಲೆ ಕಪೋತವನ್ನು ಕೂರಿಸಲಾಗಿದೆ. **(ಚಿ.ಸಂ.12)** ನವರಂಗದ ಮಧ್ಯದ ಮೇಲ್ಛಾವಣಿಯಲ್ಲಿ ನಕ್ಷತ್ರಾಕಾರವಾಗಿರುವ ಭುವನೇಶ್ವರಿ ಇದೆ. ಇದರ ಮಧ್ಯದಲ್ಲಿ ಅರಳಿದ ಪದ್ಮ ಪುಷ್ಪವನ್ನು ಬಿಡಿಸಲಾಗಿದೆ. ಅಡ್ಡಪಟ್ಟಿಕೆಗಳ ಮಧ್ಯದಲ್ಲಿ ಕೆಳಮುಖವಾಗಿ ಕಾಣುವಂತೆ ಬಿಡಿಸಲಾಗಿರುವ ಅರಳಿದ ಪದ್ಮ ಪುಷ್ಪಗಳಿವೆ. ನವರಂಗದ ದ್ವಾರವು ಸರಳವಾಗಿದೆ. ಪಟ್ಟಿಕೆಗಳಲ್ಲಿ ಯಾವುದೇ ಅಲಂಕರಣ ಕಾಣಬರುವುದಿಲ್ಲ. ನವರಂಗದ ಮುಂದೆ ನಿರ್ಮಿಸಲಾಗಿದ್ದ ಮುಖಮಂಪಟ ಪ್ರಕೃತಿಯ ವಿಕೋಪಕ್ಕೆ ತುತ್ತಾಗಿ ಸಂಪೂರ್ಣವಾಗಿ ಬಿದ್ದುಹೋಗಿದೆ. ಅದರ ಅವಶೇಷಗಳನ್ನು ದೇವಾಲಯದ ಪಕ್ಕದಲ್ಲಿ ಇರಿಸಲಾಗಿದೆ.[60] **(ಚಿ.ಸಂ.13)** ನವರಂಗದ ಮುಂದೆ ನಿರ್ಮಿಸಲಾಗಿದ್ದ ಭಿತ್ತಿ ಸಂಪೂರ್ಣವಾಗಿ ಬಿದ್ದುಹೋಗಿದೆ.

**ಈಶ್ವರ ದೇವಾಲಯ–ಜಡೇಯ**

ಮಾಯಸಂದ್ರದಿಂದ ಸುಮಾರು 2 ಕಿ.ಮೀ. ದೂರದಲ್ಲಿ ಪೂರ್ವಭಾಗದಲ್ಲಿ ಜಡೇಯ ಗ್ರಾಮವು ಕಂಡುಬರುತ್ತದೆ. ಊರಿನ ಪಶ್ಚಿಮದಲ್ಲಿ ಪೂರ್ವಾಭಿಮುಖವಾಗಿ ಒಂದು ಸಣ್ಣ ಈಶ್ವರ ದೇವಾಲಯವನ್ನು ಸಂಪೂರ್ಣವಾಗಿ ಬಳಪದ ಕಲ್ಲಿನಲ್ಲಿ ನಿರ್ಮಿಸಲಾಗಿದೆ. ಆದರೆ ಈ ದೇವಾಲಯದ ನವರಂಗ ಮತ್ತು ಮುಖಮಂಟಪ ಸಂಪೂರ್ಣವಾಗಿ ನಾಶಗೊಂಡಿದ್ದು ಈಗ ಕಂಡುಬರುವುದಿಲ್ಲ. ಪ್ರಸ್ತುತ ದೇವಾಲಯವನ್ನು ಊರಿನ ಗ್ರಾಮಸ್ಥರು ಸೈಜುಗಲ್ಲು ಮತ್ತು ಗಾರೆಯನ್ನು ಉಪಯೋಗಿಸಿ ದೇವಾಲಯವನ್ನು ಜೀರ್ಣೋದ್ಧಾರಗೊಳಿಸಲಾಗಿದ್ದು, ಗರ್ಭಗೃಹ ಮತ್ತು ಸುಖನಾಸಿ ಮಾತ್ರ ಕಂಡುಬರುತ್ತದೆ.

ಈ ದೇವಾಲಯವು ಹೊಯ್ಸಳರ ಅರಸ ವೀರನರಸಿಂಹ ದೇವನ ಆಳ್ವಿಕೆಯ ಕಾಲದಲ್ಲಿ ನಿರ್ಮಾಣವಾಗಿದೆ. ದೇವಾಲಯದ ಬಲಭಾಗದಲ್ಲಿ ಒಂದು ಶಾಸನವು ಕಂಡು ಬರುತ್ತದೆ. **(ಚಿ.ಸಂ.14)** ಕ್ರಿ.ಶ.1181ನೇ ವರ್ಷದಲ್ಲಿ ದೋರಸಮುದ್ರದಲ್ಲಿ ವೀರನರಸಿಂಹನು ಆಳ್ವಿಕೆ ನಡೆಸುತ್ತಿದ್ದು, ಚೈತ್ರ ಮಾಸ ಶುದ್ಧ ಸೊಮವರದಂದು ಮಲ್ಲಿದೇವ ಎಂಬುವನ ಮಗನಾದ ಗಂಗದೇವನು ಈ ದೇವಾಲಯವನ್ನು ಪ್ರತಿಷ್ಠಾಪಿಸಿ ಚಾತುರ್ಬಲ ಪಾರಾಂಗತನಾದ ಬ್ರಾಹಣೋತ್ತಮರಿಗೆ ಜಡೆಯದ ಕೆರೆಯ ಕೆಳಗಿನ ಗದ್ದೆ ಬೆದ್ದಲನ್ನು ಮತ್ತು ಜಡೆಯದ ಹತ್ತಿರದ ದಾಸಿಹಳ್ಳಿ ಚತುರ್ ಸೀಮೆಯನ್ನು ದಾನವಾಗಿ ಕೊಟ್ಟಿದುದನ್ನು ಉಲ್ಲೇಖಿಸುತ್ತದೆ.[61] ಇದೊಂದು ಚಿಕ್ಕದೇವಾಲಯವಾಗಿದ್ದು ಜೀರ್ಣೋದ್ಧಾರಗೊಂಡಿದೆ.

**ಗರ್ಭಗೃಹ**-ಗರ್ಭಗೃಹವು 8X8 ಅಡಿಗಳ ಉದ್ದ ಮತ್ತು ಅಗಲವಾಗಿದ್ದು ಚೌಕಾಕಾರವಾಗಿದೆ. ಈ ಗರ್ಭಗೃಹದ ಮಧ್ಯದಲ್ಲಿ ಸುಮಾರು ಎರಡು ಅಡಿ ಎತ್ತರವಿರುವ ಪಾಣಿಪೀಠದ ಮೇಲೆ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಗರ್ಭಗೃಹದ ಬಾಗಿಲು ಸರಳವಾಗಿದೆ. ಲಲಾಟಬಿಂಬದಲ್ಲಿ ಯಾವುದೇ ಮೂರ್ತಿಶಿಲ್ಪಗಳು ಕಂಡುಬರುವುದಿಲ್ಲ. ಆದರೆ ಗರ್ಭಗೃಹದ ಬಾಗಿಲ ಇಕ್ಕೆಲಗಳಲ್ಲಿ ದ್ವಾರಪಾಲಕರಿದ್ದಾರೆ. ಆದರೆ ದೇವಾಲಯ ಜೀರ್ಣೋದ್ಧಾರ ಮಾಡುವಾಗ ದ್ವಾರಪಾಲಕರ ವಿಗ್ರಹಗಳನ್ನು ಮುಕ್ಕಾಲು ಭಾಗ ಮುಚ್ಚಿ ಹಾಕಿದ್ದಾರೆ.

**ಸುಖನಾಸಿ**-ಸುಖನಾಸಿಯು ಗರ್ಭಗೃಹದಷ್ಟೇ ಉದ್ದಗಲವಾಗಿದ್ದು ಚೌಕಾಕಾರವಾಗಿದೆ. ಸರಳವಾಗಿರುವ ಈ ಸುಖನಾಸಿಯ ಮಧ್ಯದಲ್ಲಿ ಶಿವನಿಗೆ ಎದುರಾಗಿ ಸುಮಾರು ಮೂರು ಅಡಿ ಎತ್ತರವಿರುವ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. **(ಚಿ.ಸಂ.15)** ಸುಖನಾಸಿಯ ಮುಂದೆ ಇದ್ದಂತಹ ನವರಂಗ, ನವರಂಗದ ಮುಂದೆ ಇದ್ದ ಮುಖಮಂಟಪ ಈಗ ಸಂಪೂರ್ಣವಾಗಿ ಕಣ್ಮರೆಯಾಗಿದೆ ಮತ್ತು ಗರ್ಭಗೃಹದ ಮೇಲೆ ಯಾವುದೇ ಶಿಖರ ಕಂಡುಬರುವುದಿಲ್ಲ. [62]

**ಮೂಲೆ ಶಂಕರೇಶ್ವರ ದೇವಾಲಯ-ತುರುವೇಕೆರೆ**

ಮೂಲೆ ಶಂಕರೇಶ್ವರ ದೇವಾಲಯವನ್ನು ತುರುವೇಕೆರೆಯ ಪಟ್ಟಣದ ಉತ್ತರ ಭಾಗದಲ್ಲಿರುವ ದೊಡ್ಡ ಕೆರೆಯ ಬಲದಂಡೆಯ ಮೇಲೆ ಪೂರ್ವಭಿಮುಖವಾಗಿ ಬಳಪದ ಕಲ್ಲನ್ನು ಉಪಯೋಗಿಸಿ ದೇವಾಲಯವನ್ನು ನಿರ್ಮಾಣ ಮಾಡಲಾಗಿದೆ. ಈ ದೇವಾಲಯದ ಸ್ಥಳವು ಮೊದಲು ಸಮಮಟ್ಟದಲ್ಲಿತ್ತು. ನಂತರದ ಕಾಲದಲ್ಲಿ ಈ ದೇವಾಲಯದ ಸುತ್ತ ಮಣ್ಣು ಶೇಖರಣೆಯಾಗಿದ್ದರಿಂದ ಇದು ಪ್ರಸ್ತುತದಲ್ಲಿ ಭೂಮಟ್ಟಕ್ಕಿಂತ ತಗ್ಗಿನಲ್ಲಿದೆ. **(ಚಿ.ಸಂ.16)** ಇದೊಂದು ಏಕಕೂಟ ದೇವಾಲಯವಾಗಿದ್ದು, ಇದರಲ್ಲಿ ಒಂದು ಗರ್ಭಗೃಹ, ಸುಖನಾಸಿ ನವರಂಗ ಹಾಗೂ ಮುಖಮಂಟಪ ಕಂಡುಬರುತ್ತದೆ. ಈ ದೇವಾಲಯವನ್ನು ಹೊಯ್ಸಳ ಅರಸ ಮುಮ್ಮಡಿ ನರಸಿಂಹ (ಕ್ರಿ.ಶ.1264 ದಿಂದ ಕ್ರಿ.ಶ.1291ರವರೆಗೆ) ದಂಡನಾಯಕನಾದ ಸೋಮಣ್ಣ ದಂಡನಾಥನು ನಿರ್ಮಿಸಿದನು. ಇವನಿಗೆ ಸೋಮನಾಥ, ಸೋಮರಸ, ಸೋಮಯ, ಸೋಮ ಎಂಬ ಉಪ ಹೆಸರುಗಳು ಸಹ ಇದ್ದವು. ಈತನ ಕಾಲದಲ್ಲಿಯೇ ಇತಿಹಾಸ ಪ್ರಸಿದ್ಧ ಸೋಮನಾಥಪುರದ ಕೇಶವ ದೇವಾಲಯವು ನಿರ್ಮಾಣವಾಯಿತು. ಸೋಮನಾಥಪುರದ ಕೇಶವ ದೇವಾಲಯದ ನಿರ್ಮಾಣಕ್ಕೂ ಮುನ್ನ ತುರುವೇಕೆರೆಯನ್ನು ಅರಸ ಮೂರನೇ ನರಸಿಂಹನ ಹೆಸರಿನಲ್ಲಿ “ಸರ್ವಜ್ಞ ಶ್ರೀ ವಿಜಯನರಸಿಂಹಪುರ” ಎಂಬ ಹೆಸರಿನಲ್ಲಿ ಅಗ್ರಹಾರವನ್ನಾಗಿ ಮಾಡಿ ಬ್ರಾಹ್ಮಣರಿಗೆ ದಾನ ಬಿಟ್ಟುಕೊಟ್ಟನು. ಅಲ್ಲದೇ ಸೋಮಣ್ಣ ದಂಡನಾಥನು ತುರುವೇಕೆರೆಯಲ್ಲಿ ಒಂದು ವಿಷ್ಣು ದೇವಾಲಯ ಮತ್ತೊಂದು ಶಿವ

ದೇವಾಲಯವನ್ನು ನಿರ್ಮಾಣ ಮಾಡಿದನು. ಈ ಶಿವ ದೇವಾಲಯವೇ ಮೂಲೆ ಶಂಕರೇಶ್ವರ ದೇವಾಲಯವಾಗಿದೆ.[63]

ಈ ದೇವಾಲಯದ ಮೂರ್ತಿ ಶಿಲ್ಪಗಳನ್ನು ಇತಿಹಾಸ ಪ್ರಸಿದ್ಧ ಶಿಲ್ಪಕಾರನಾದ ಜಕ್ಕಣಚಾರಿ ಮತ್ತು ಸರೋಜ, ಇಸ್ವರ ಎಂಬ ಶಿಲ್ಪಿಗಳು ನಿರ್ಮಾಣ ಮಾಡಿದರೆಂಬುದಕ್ಕೆ ದೇವಾಲಯದ ಉತ್ತರ ದಿಕ್ಕಿನಲ್ಲಿ ಜಗತಿಯ ಮೇಲೆ ಕಂಡುಬರುವ ಈ ಶಿಲ್ಪಿಕಾರರ ಹೆಸರುಗಳೇ ನಮಗೆ ಆಧಾರವಾಗಿ ಕಂಡುಬರುತ್ತವೆ.[64] ಈ ದೇವಾಲಯದ ನಿರ್ಮಾಣಕಾಲ ಸುಮಾರು ಕ್ರಿ.ಶ.1260 ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.[65]

ಈ ದೇವಾಲಯವನ್ನು ಮೊದಲು ಮೂಲ ಶಂಕರೇಶ್ವರ ದೇವಾಲಯವೆಂದು ಕರೆಯಲ್ಪಡುತ್ತಿದ್ದು, ನಂತರ ಕಾಲದಲ್ಲಿ ಊರಿನ ವಾಯುವ್ಯ ಮೂಲೆಯಲ್ಲಿದ್ದುದರಿಂದ ಇದನ್ನು ಮೂಲೆ ಶಂಕರೇಶ್ವರ ದೇವಾಲಯ ಎಂದು ಜನರಿಂದ ಪ್ರಸ್ತುತ ಕರೆಯಲ್ಪಡುತ್ತಿದೆ. ಈ ದೇವಾಲಯಕ್ಕೆ ಆಗಾಗ್ಗೆ ಸಂರಕ್ಷಣೆ ಸರಿಯಾಗಿ ಸಿಗದೇ ಶಿಥಿಲಾವಸ್ಥೆಯಲ್ಲಿದುದರಿಂದ ಇದನ್ನು ಅನೇಕ ಬಾರಿ ಜೀರ್ಣೋದ್ಧಾರ ಮಾಡಲಾಗಿದೆ. 1939ರಲ್ಲಿ ಸರ್.ಎಂ.ವಿಶ್ವೇಶ್ವರಯ್ಯನವರು ಈ ದೇವಾಲಯಕ್ಕೆ ಭೇಟಿ ನೀಡಿದ ಸಂಧರ್ಭದಲ್ಲಿ ದೇವಾಲಯದ ಮೇಲ್ಛಾವಣಿ ಪ್ರಕೃತಿಯ ವಿಕೋಪಕ್ಕೆ ತುತ್ತಾಗಿ ಕುಸಿದಿದ್ದರಿಂದ ಸರ್. ಎಂ. ವಿಶ್ವೇಶ್ವರಯ್ಯನವರು ಆಗ ದೇವಾಲಯವನ್ನು ಜೀರ್ಣೋದ್ಧಾರ ಮಾಡಿಸಿದರು. ನಂತರದಲ್ಲಿ "ತುರುವೇಕೆರೆಯ ಸುರಭಿ ಸಂಗಮ ಸಂಸ್ಥೆ (ರಿ) ಧರ್ಮೋತ್ಥಾನ ಟ್ರಸ್ಟ್, ಧರ್ಮಸ್ಥಳ" ಇವರೊಂದಿಗೆ ಜಂಟಿ ಸಹಯೋಗದಿಂದ ಇದನ್ನು ಸಂಪೂರ್ಣವಾಗಿ ಮೂಲವಾಸ್ತುವಿಗೆ ಯಾವುದೇ ಹಾನಿಯಾಗದಂತೆ ಸುರಕ್ಷಿತವಾಗಿ ಜೀರ್ಣೋದ್ಧಾರ ಮಾಡಿದರೆಂದು ಹೇಳಲಾಗುತ್ತದೆ. ನಂತರ ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆಯವರು ಈ ಮೂಲೆ ಶಂಕರೇಶ್ವರ ದೇವಾಲಯವನ್ನು ಸಂರಕ್ಷಿಸಲ್ಪಟ್ಟ ಸ್ಮಾರಕವೆಂದು ಘೋಷಿಸಿ ಅದರ ಎಲ್ಲಾ ನಿರ್ವಹಣೆಯ ಜವಾಬ್ದಾರಿಯನ್ನು ಪುರಾತತ್ವ ಇಲಾಖೆಯವರೇ ನಿರ್ವಹಿಸುತ್ತಿದ್ದಾರೆ. ಈ ದೇವಾಲಯವು ಪೂರ್ವಾಭಿಮುಖವಾಗಿದ್ದು, ಪ್ರವೇಶದ್ವಾರವು ದಕ್ಷಿಣಾಭಿಮುಖವಾಗಿ ತೆರೆಯಲ್ಪಟ್ಟಿದೆ. ಕಲಾತ್ಮಕ ದೃಷ್ಠಿಯಿಂದ ನೋಡುವುದಾದರೆ ಇದು ನುಗ್ಗೇಹಳ್ಳಿಯ ಸೋಮೇಶ್ವರ ದೇವಾಲಯವನ್ನು ಹೋಲುತ್ತದೆ.[66]

**ಗರ್ಭಗೃಹ**

ಗರ್ಭಗೃಹವು ಸುಮಾರು 8x8 ಅಡಿ ಉದ್ದ ಮತ್ತು ಅಗಲವನ್ನು ಹೊಂದಿದ್ದು ಚೌಕಾಕಾರವಾಗಿದೆ. ಈ ಗರ್ಭಗೃಹದ ಮಧ್ಯಭಾಗದಲ್ಲಿ ಸುಮಾರು ನಾಲ್ಕು ಅಡಿ ಎತ್ತರವಿರುವ

ಶಂಕರೇಶ್ವರ ಲಿಂಗವನ್ನು ಪಾಣಿಪೀಠದ ಮೇಲೆ ಪ್ರತಿಷ್ಠಾಪಿಸಲಾಗಿದೆ. **(ಚಿ.ಸಂ.17)** ಪ್ರಜಾಕೋಟಿಯನ್ನು ಸೃಷ್ಟಿಸಲು ಒಬ್ಬನಿಂದ ಸಾಧ್ಯವಾಗದೆ ಅವನಿಗೆ ಸ್ತ್ರೀಶಕ್ತಿಯ ಸಹಾಯದ ಅವಶ್ಯಕತೆ ಕಂಡುಬಂದು ಅದಕ್ಕಾಗಿ ಅವನು ಹೆಣ್ಣೊಂದನ್ನು ಸೃಷ್ಟಿಸಿದನು ಹೀಗಾಗಿ ವಿಶ್ವ ಸೃಷ್ಟಿಯ ಸಂಕೇತವಾದ ಲಿಂಗದಲ್ಲಿ ಸ್ತ್ರೀ ಸಂಕೇತವಾದ ಯೋನಿಯನ್ನು (ಯೋನಿ ಪೀಠವನ್ನು) ಸಂಯುಕ್ತಗೊಳಿಸಲಾಯಿತು. ಲಿಂಗವೇ ಶಿವನೆಂತಲೂ ಅದರ ಪೀಠವೇ (ಯೋನಿ) ಉಮೆಯೆಂತಲೂ ಇವರ ಸಂಮಿಶ್ರಣದಿಂದ ಮಾತ್ರ ವಿಶ್ವ ಸೃಷ್ಟಿ ಎಂದು ಆಗಮಗಳ ಅಭಿಪ್ರಾಯ. ಅಂತೆಯೇ ಕ್ರಿ.ಶ.8–9ನೇ ಶತಮಾನದ ವೇಳೆಯ ಆಮಗಮೋಕ್ತ ಲಿಂಗಗಳಲ್ಲಿ ಯೋನಿಪೀಠದ ಸೇರ್ಪಡೆಯನ್ನು ಕಾಣಬಹುದು.[67] ಈ ಲಿಂಗಕ್ಕೆ ಇತ್ತೀಚಿಗೆ ಪಂಚಲೋಹದಲ್ಲಿ ತಯಾರಿಸಲಾದ ಏಳು ಹೆಡೆಗಳ್ಳುಳ ಸರ್ಪವನ್ನು ರಚಿಸಿ ಇಡಲಾಗಿದೆ. ಈ ಶಿವಲಿಂಗದ ಹಿಂದೆ ಪಂಚಲೋಹದ ಕೀರ್ತಿಮುಖವನ್ನು ಬಿಡಿಸಲಾಗಿದೆ. ಗರ್ಭಗೃಹದ ಮೇಲ್ಛಾವಣಿಯಲ್ಲಿ ನಕ್ಷತ್ರಾಕಾರದ ಭುವನೇಶ್ವರಿ ನಿರ್ಮಾಣ ಮಾಡಲಾಗಿದೆ. ಈ ಭುವನೇಶ್ವರಿಯ ಮಧ್ಯ ಭಾಗದಲ್ಲಿ ಅರಳಿದ ಕಮಲದ ಪುಷ್ಪವನ್ನು ಸುಂದರವಾಗಿ ಮಾಡಲಾಗಿದೆ. ಗರ್ಭಗೃಹದ ಬಾಗಿಲುವಾಡ ಸರಳವಾಗಿದ್ದು, ಪಟ್ಟಿಕೆಗಳಲ್ಲಿ ಯಾವುದೇ ರೀತಿಯ ಅಲಂಕರಣೆ ಇಲ್ಲ. ಲಲಾಟಬಿಂಬದಲ್ಲಿ ಯಾವುದೇ ಮೂರ್ತಿ ಶಿಲ್ಪದ ಕೆತ್ತನೆ ಕಂಡುಬರುವುದಿಲ್ಲ. ಬಾಗಿಲ ತೋರಣದಲ್ಲಿ ಮಣಿಹಾರಗಳ ರಚನೆ ಇದ್ದು, ಕಮಲದ ಮೊಗ್ಗು ಇಳಬಿಟ್ಟಿರುವಂತೆ ಕೆತ್ತಲಾಗಿದೆ. ಗರ್ಭಗೃಹದ ಬಾಗಿಲ ಇಕ್ಕೆಲಗಳಲ್ಲಿ ದ್ವಾರಪಾಲಕರ ಶಿಲ್ಪಗಳನ್ನು ಕೆತ್ತನೆ ಮಾಡದೇ ಕಲ್ಲುಗಳನ್ನು ಹಾಗೇ ಉಳಿಸಲಾಗಿದೆ.

**ಸುಖನಾಸಿ**

ಸುಖನಾಸಿಯು ಗರ್ಭಗೃಹದಷ್ಟೇ ವಿಸ್ತೀರ್ಣವನ್ನು ಹೊಂದಿದ್ದು, ಸರಳವಾಗಿದೆ. ಇದರ ಮೇಲ್ಛಾವಣಿಯಲ್ಲಿ ನಕ್ಷತ್ರಾಕಾರದ ಭುವನೇಶ್ವರಿಯನ್ನು ಮಾಡಲಾಗಿದೆ. ಈ ಭುವನೇಶ್ವರಿಯ ಮಧ್ಯ ಭಾಗದಲ್ಲಿ ಅರಳಿದ ಕಮಲದ ಪುಷ್ಪವನ್ನು ಬಿಡಿಸಲಾಗಿದೆ. ಸುಖನಾಸಿಯ ಬಾಗಿಲು ಸರಳವಾಗಿದೆ.

**ನವರಂಗ**

ನವರಂಗವು 25X25 ಅಡಿ ಉದ್ದ ಮತ್ತು ಅಗಲವಾಗಿದ್ದು, ಚೌಕಾಕಾರವಾಗಿದೆ. ನವರಂಗದ ಮಧ್ಯದಲ್ಲಿ ಹೊಯ್ಸಳ ಶೈಲಿಯ ರಾಟೆ ಯಂತ್ರದ ಸಹಾಯದಿಂದ ತಯಾರಿಸಲಾದ ನಾಲ್ಕು ಕಂಬಗಳನ್ನು ನಿಲ್ಲಿಸಲಾಗಿದೆ. **(ಚಿ.ಸಂ.18)** ಈ ಕಂಬಗಳು ಹೊಳಪಿನಿಂದ ಕೂಡಿದ್ದು, ಗಾಲಿ, ಘಂಟೆ, ಘಟಾಕಾರವಾಗಿ ರಚಿಸಲಾಗಿದೆ. ಬೋಧಿಗೆಯು ಹೊಯ್ಸಳ ಶೈಲಿಯ ತರಂಗ

ಭೋದಿಗೆಯಾಗಿದೆ. ನವರಂಗದಲ್ಲಿ ಒಟ್ಟು ಒಂಭತ್ತು ಭುವನೇಶ್ವರಿಗಳಿದ್ದು ಎಲ್ಲಾ ಭುವನೇಶ್ವರಿಗಳು ನಕ್ಷತ್ರಾಕಾರವಾಗಿದ್ದು, ಮಧ್ಯಭಾಗದಲ್ಲಿ ಅರಳಿದ ಪದ್ಮಪುಷ್ಪಗಳನ್ನು ಬಿಡಿಸಲಾಗಿದೆ. **(ಚಿ.ಸಂ.19)** ಪ್ರಧಾನ ಭುವನೇಶ್ವರಿಯು ಸಹ ಇದೇ ಲಕ್ಷಣವನ್ನು ಹೊಂದಿದೆ. ನವರಂಗದ ನೈರುತ್ಯ ಭಾಗದಲ್ಲಿ ಗಣೇಶ ಮೂರ್ತಿಯನ್ನು ಪೂರ್ವಭಿಮುಖವಾಗಿ ಪ್ರತಿಷ್ಠಾಪಿಸಲಾಗಿದೆ. ಈ ದೇವನು ಪದ್ಮಾಸನದಲ್ಲಿ ಕುಳಿತ್ತಿದ್ದು ಚತುರ್ಭುಜವನ್ನು ಹೊಂದಿದ್ದು ಪಾಶ, ಅಂಕುಶ, ಅಭಯಹಸ್ತ ಮತ್ತು ಫಲವನ್ನು ಹಿಡಿದಿದ್ದಾನೆ. ಮೈಮೇಲೆ ವಿವಿಧ ವಸ್ತ್ರಾಭರಣಗಳನ್ನು ಧರಿಸಿದ್ದು ಸುಂದರವಾಗಿವೆ. ಈ ದೇವನ ಹಿಂಭಾಗದಲ್ಲಿ ಪ್ರಭಾವಳಿ ಇದ್ದು, ಪ್ರಭಾವಳಿಯಲ್ಲಿ ಬಳ್ಳಿಸುರುಳಿಗಳ ಅಲಂಕರಣೆ ಮತ್ತು ಅಂತ್ಯಭಾಗದಲ್ಲಿ ಕೀರ್ತಿಮುಖ ಬಿಡಿಸಲಾಗಿದೆ. **(ಚಿ.ಸಂ.20)**

ನವರಂಗದ ವಾಯುವ್ಯ ಭಾಗದಲ್ಲಿ ಸುಮಾರು ಎರಡು ಅಡಿ ಪೀಠದ ಮೇಲೆ ಭೈರವ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ಸುಂದರವಾದ ಅಲಂಕರಣೆಯಿಂದ ಕೂಡಿರುವ ಈ ದೇವನು ಚತುರ್ಭುಜವನ್ನು ಹೊಂದಿದ್ದು, ಕೈಗಳಲ್ಲಿ ತ್ರಿಶೂಲ, ಢಮರು, ಕತ್ತಿ ಮತ್ತು ರುಂಡವನ್ನು ಹಿಡಿದು ಸಮಭಂಗಿಯಲ್ಲಿ ನಿಂತಿದ್ದಾನೆ. **(ಚಿ.ಸಂ.21)** ಈ ಮೂರ್ತಿಯ ಹಿಂಭಾಗದಲ್ಲಿ ಬಳ್ಳಿಸುರುಳಿಗಳಿಂದ ಅಲಂಕೃತವಾದ ಪ್ರಭಾವಳಿ ಇದ್ದು, ಅಂತ್ಯಭಾಗದಲ್ಲಿ ಕೀರ್ತಿಮುಖ ಬಿಡಿಸಲಾಗಿದೆ. ಈ ಶಿಲ್ಪದ ಪಕ್ಕದಲ್ಲಿಯೇ ಸುಮಾರು ಎರಡು ಅಡಿ ಎತ್ತರವಿರುವ ಮಯೂರದ ಮೇಲೆ ಷಣ್ಮುಖನನ್ನು ಪ್ರತಿಷ್ಠಾಪಿಸಲಾಗಿದ್ದು, ಸಂಪೂರ್ಣವಾಗಿ ಭಗ್ನಗೊಂಡಿದೆ. ಗರ್ಭಗುಡಿಯ ಶಿವಲಿಂಗಕ್ಕೆ ಅಭಿಮುಖವಾಗಿ ನವರಂಗದ ಮಧ್ಯಭಾಗದಲ್ಲಿ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ಈ ನಂದಿಯು ನೋಡಲು ನಯನ ಮನೋಹರವಾಗಿದ್ದು, ಹೊಳಪಿನಿಂದ ಕೂಡಿದೆ. ನಂದಿಯ ಕೊರಳಲ್ಲಿ ಕಂಠಹಾರ, ಮೈಮೇಲೆ ಸಣ್ಣ ಸಣ್ಣ ಮಣಿಹಾರ ಬಿಡಿಸಲಾಗಿದ್ದು, ಕೊರಳಲ್ಲಿ ಘಂಟೆಯನ್ನು ರಚಿಸಲಾಗಿದೆ. **(ಚಿ.ಸಂ.22)** ನವರಂಗದ ದಕ್ಷಿಣ ಭಾಗದ ಗೋಡೆಯ ಮುಂದೆ ಸಪ್ತಮಾತೃಕೆಯರ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. **(ಚಿ.ಸಂ.23)** ಈ ದೇವತಾ ಮೂರ್ತಿಗಳು ಸುಮಾರು ಎರಡೂವರೆ ಅಡಿ ಎತ್ತರವಾಗಿದ್ದು, ತಮ್ಮ ತಮ್ಮ ವಾಹನಗಳ ಮೇಲೆ ಕುಳಿತ್ತಿದ್ದಾರೆ. ನವರಂಗದ ದ್ವಾರವು ಸರಳವಾಗಿದ್ದು, ಬಾಗಿಲ ಪಟ್ಟಿಕೆಗಳಲ್ಲಿ ಯಾವುದೇ ರೀತಿಯ ಅಲಂಕರಣೆ ಇಲ್ಲ. ದ್ವಾರದ ಇಕ್ಕೆಲೆಗಳಲ್ಲಿ ದ್ವಾರಪಾಲಕರ ಶಿಲ್ಪಗಳನ್ನು ಕೆತ್ತನೆ ಮಾಡದೇ ಕಲ್ಲುಗಳನ್ನು ಹಾಗೇ ಉಳಿಸಲಾಗಿದೆ.

**ಮುಖಮಂಟಪ**

ಮುಖಮಂಟಪವು ದಕ್ಷಿಣಾಭಿಮುಖವಾಗಿದ್ದು, ಗರ್ಭಗೃಹದಷ್ಟೇ ಉದ್ದ ಮತ್ತು ಅಗಲವನ್ನು ಹೊಂದಿದೆ. ಹೊಯ್ಸಳ ಶೈಲಿಯಲ್ಲಿರುವ ತಿರುಗಣೆ ಯಂತ್ರದ ಸಹಾಯದಿಂದ ತಯಾರಿಸಲಾದ ಎರಡು ಕಂಬಗಳಿದ್ದು, ಈ ಕಂಬಗಳು ಎಂಟು ಅಡಿ ಎತ್ತರವನ್ನು ಹೊಂದಿವೆ. ತರಂಗ ಭೋದಿಗೆಯ ಮೇಲೆ ಕಲ್ಲಿನ ತೊಲೆಗಳನ್ನು ಹಾಕಿ ಮೇಲ್ಛಾವಣಿಯನ್ನು ನಿರ್ಮಿಸಲಾಗಿದೆ. ಈ ಮುಖಮಂಟಪದ ಪೂರ್ವ ಮತ್ತು ಪಶ್ಚಿಮ ಭಾಗದಲ್ಲಿ ಭಕ್ತಾದಿಗಳು ವಿಶ್ರಾಂತಿ ಪಡೆಯಲು ಕಕ್ಷಾಸನವನ್ನು ಮಾಡಲಾಗಿದೆ. ಮೇಲ್ಛಾವಣಿಯಲ್ಲಿ ನಕ್ಷತ್ರಾಕಾರದ ಭುವನೇಶ್ವರಿಯನ್ನು ಮಾಡಲಾಗಿದ್ದು, ಮಧ್ಯಭಾಗದಲ್ಲಿ ಅರಳಿದ ಪದ್ಮಪುಷ್ಪವನ್ನು ಬಿಡಿಸಲಾಗಿದೆ.

**ತಳವಿನ್ಯಾಸ**

ಈ ದೇವಾಲಯವು ನಕ್ಷತ್ರಾಕಾರದ ತಳವಿನ್ಯಾಸವನ್ನು ಹೊಂದಿದೆ. ಹೊಯ್ಸಳ ದೇವಾಲಯಗಳು ಸರ್ವಸಾಮಾನ್ಯವಾಗಿ ನಕ್ಷತ್ರಾಕಾರದ ತಳವಿನ್ಯಾಸವನ್ನು ಹೊಂದಿರುತ್ತವೆ. ಇದನ್ನು ಅಷ್ಟಭದ್ರ ವಿನ್ಯಾಸವೆಂದು ಕರೆಯಲಾಗಿದೆ. ಒಂದೇ ಕೇಂದ್ರವುಳ್ಳ ಸಮಚೌಕೋನಗಳನ್ನು ಒಂದು ಅಕ್ಷದ ಮೇಲೆ ತಿರುಗಿಸುತ್ತಾ ಬಂದರೆ ಬೇರೆ ಬೇರೆ ದಿಕ್ಕುಗಳಿಗೆ ಸರಿಹೊಂದುವಂತೆ ಉಂಟಾಗುವ ಕೋನಗಳು ಈ ನಕ್ಷತ್ರಾಕೃತಿಯ ಬಾಹುಗಳಾಗಿರುತ್ತವೆ. ಈ ರೀತಿಯ ಜೋಡಣೆಯಿಂದ ಎಂಟು, ಹನ್ನೆರಡು, ಹದಿನಾರು, ಹೀಗೆ ಎಷ್ಟು ಕೋನಗಳನ್ನು ಬೇಕಾದರೂ ನಿರ್ಮಿಸಿಕೊಳ್ಳಲು ಸಾಧ್ಯವಿರುತ್ತದೆ. ಈ ನಕ್ಷತ್ರಾಕಾರದ ತಳವಿನ್ಯಾಸ ಜಗತಿಯಿಂದ ಶಿಖರದ ಮೇಲಿನ ಕಳಸದವರೆಗೂ ಸಾಗಿರುತ್ತದೆ.[68]

**ಅಧಿಷ್ಠಾನ**

ಈ ದೇವಾಲಯವು ಸುಮಾರು ಮೂರು ಅಡಿ ಎತ್ತರವಿರುವ ಅದಿಷ್ಠಾನದ ಮೇಲೆ ನಿರ್ಮಾಣ ಮಾಡಲಾಗಿದೆ. ಈ ಅದಿಷ್ಠಾನವು ಪ್ರಕೃತಿಯ ವಿಕೋಪಕ್ಕೆ ತುತ್ತಾಗಿ ಮಣ್ಣಿನಲ್ಲಿ ಮುಚ್ಚಿ ಹೋಗಿತ್ತು. ಇತ್ತೀಚಿಗೆ ಮಣ್ಣನ್ನು ತೆಗೆದು ಹಾಕಲಾಗಿದೆ. ಹಾಗೂ ಐದು ಪಟ್ಟಿಕೆಗಳು ಕಂಡುಬರುತ್ತವೆ. **(ಚಿ.ಸಂ.24)** ಈ ಪಟ್ಟಿಕೆಗಳಲ್ಲಿ ಯಾವುದೇ ಶಿಲ್ಪಕೆತ್ತನೆಗಳು ಕಂಡುಬರುವುದಿಲ್ಲ. ಪಟ್ಟಿಕೆಗಳನ್ನು ಹಿನ್ಸರಿತ ಮತ್ತು ಮುನ್ಸರಿತದಂತೆ ಕ್ರಮಬದ್ಧವಾಗಿ ಜೋಡಿಸಲಾಗಿದೆ. ಗರ್ಭಗೃಹದ ಭಾಗದಲ್ಲಿ ಅದಿಷ್ಠಾನದ ಹೊರಪಟ್ಟಿಕೆಯಲ್ಲಿ ಜಕ್ಕಣ, ಇಸ್ವರ, ಸರೋಜ ಎಂಬ ಹೆಸರುಗಳ ಬರವಣಿಗೆ ಕಂಡುಬರುತ್ತದೆ.[69] **(ಚಿ.ಸಂ.25)** ಐತಿಹಾಸಿಕ ಶಿಲ್ಪಕಾರ ಜಕ್ಕಣನೇ ದೇವಾಲಯದ ಶಿಲ್ಪಗಳನ್ನು ಕೆತ್ತಿರಬಹುದೆಂದು ಊಹಿಸಲಾಗಿದೆ.

**ಭಿತ್ತಿ**

ದೇವಾಲಯದ ಭಿತ್ತಿಯು ಸರಳವಾಗಿದ್ದು ಸುತ್ತಲೂ ಸಣ್ಣ ಸಣ್ಣ ಚೌಕಸ್ತಂಭಗಳ ಅಲಂಕರಣೆಯನ್ನು ಕಾಣಬಹುದು. ಈ ಭಿತ್ತಿಯಲ್ಲಿ ಯಾವುದೇ ಭಿತ್ತಿಶಿಲ್ಪಗಳು ಕಂಡುಬರುವುದಿಲ್ಲ. ಹಾಗೂ ಭಿತ್ತಿಯು ಇದೇ ಸ್ಥಳದಲ್ಲಿರುವ ಚನ್ನಕೇಶವ ದೇವಾಲಯದ ಭಿತ್ತಿಯನ್ನು ಹೋಲುತ್ತದೆ. ಈ ದೇವಾಲಯದ ಪೂರ್ವಭಾಗದ ಭಿತ್ತಿಯಲ್ಲಿ ಸಣ್ಣದೊಂದು ಕಿಂಡಿ ಬಿಡಲಾಗಿದೆ. ಇದು ಚೌಕಸ್ತಂಭಗಳ ನಡುವೆ ಕಂಡುಬಂದಿದ್ದು, ಸುಮಾರು ಒಬ್ಬ ಮನುಷ್ಯನ ಕೈ ಒಳಹೋಗುವಷ್ಟು ಅಗಲವಿದೆ. ನಕ್ಷತ್ರಾಕಾರದ ಈ ಕಿಂಡಿಯ ಮುಖಾಂತರ ಪೌರ್ಣಮಿಯ ದಿನದಂದು ಚಂದ್ರನ ರಶ್ಮಿಗಳು ದೇವಾಲಯದ ಪಕ್ಕದಲ್ಲಿರುವ ಕೆರೆಯ ನೀರಿನ ಮೇಲೆ ಬಿದ್ದು, ನಂತರ ಅವು ಪ್ರತಿಫಲನಗೊಂಡು ಈ ಕಿಂಡಿಯ ಮೂಲಕ ಹಾದು ಗರ್ಭಗೃಹದಲ್ಲಿರುವ ಶಿವಲಿಂಗದ ಮೇಲೆ ಬೀಳುತ್ತವೆ ಎಂಬ ಪ್ರತೀತಿ ಇದೆ.

**ಶಿಖರ**

ಮೂಲೆ ಶಂಕರೇಶ್ವರ ದೇವಾಲಯದ ಗರ್ಭಗೃಹ ಮತ್ತು ಸುಖನಾಸಿ ಸೇರಿದಂತೆ ಮೇಲ್ಭಾಗದಲ್ಲಿ ಹೊಯ್ಸಳ ಶೈಲಿಯ ಶಿಖರವನ್ನು ನಿರ್ಮಿಸಲಾಗಿದೆ. ಈ ಶಿಖರವು ದ್ರಾವಿಡ ಶೈಲಿಯ ಶಿಖರವಾಗಿದ್ದು, ಭೂಮಿಜ ಮಾದರಿಯನ್ನು ಹೊಂದಿದೆ. ಭೂಮಿಜ ಶಿಖರವು ಕೆಳಗಿನಿಂದ ಮೇಲಕ್ಕೆ ಕಿರಿದಾಗುತ್ತಾ ಹೋಗುತ್ತದೆ. ಶಿಖರದ ಮಧ್ಯಭಾಗದಲ್ಲಿ ನಾಲ್ಕು ದಿಕ್ಕುಗಳಲ್ಲಿ ನೀಳವಾದ ಪಟ್ಟಿಕೆ ಇದ್ದು, ಇದರ ಮೇಲೆ ಲತಾಪಟ್ಟಿಕೆ ಇರುತ್ತದೆ. ಲತಾಪಟ್ಟಿಕೆಯ ಮೇಲೆ ಶಿಲ್ಪಯುಕ್ತ 'ಕೋಷ್ಠ ಮತ್ತು ಕೂಡುನಂತಹ ರಚನೆ ಇದ್ದು, ಶಿಖರದ ಮುಂಭಾಗದಲ್ಲಿ ಸುಖನಾಸವನ್ನು ನಿರ್ಮಾಣ ಮಾಡಲಾಗಿದೆ. ಈ ಲತಾಪಟ್ಟಿಕೆಗಳ ಮಧ್ಯೆ ಹಂತಹಂತವಾದ ಕಿರಿದಾಗುವ ಸಣ್ಣ ಶಿಖರಗಳು ಸಾಲಾಗಿರುವುವು. ಇವು ಸ್ತಂಭದ ಮೇಲೆ ನಿಂತ 'ಕೋಷ್ಠದಂತೆ' ತೋರುವುದರಿಂದ ಇದನ್ನು "ಸ್ತಂಭಕೋಷ್ಠ" ಎನ್ನುವರು. ಶಿಖರದ ಅಂತ್ಯದಲ್ಲಿ ವೇದಿ–ಘಂಟಾ–ಕಲಶ ಇರುವುದು. ಇದನ್ನು ವಿದ್ವಾಂಸರು "ಭೂಮಿಜ ಶಿಖರ" ಎಂದು ಗುರುತಿಸಿದ್ದು, ಇಂತಹ ದೇವಾಲಯಗಳು ತುರುವೇಕೆರೆಯ ಮೂಲೆ ಶಂಕರೇಶ್ವರ ದೇವಾಲಯ ಮತ್ತು ನುಗ್ಗೇಹಳ್ಳಿಯ ಸದಾಶಿವ ದೇವಾಲಯಗಳಲ್ಲಿ ಕೆಲವು ವ್ಯತ್ಯಾಸಗಳೊಂದಿಗೆ ಕಾಣಬಹುದು.[70] ಪ್ರೊ.ಡಾಕೆಯವರು ಹೊಯ್ಸಳರ ಕಾಲದ ಮೂಲೆ ಶಂಕರೇಶ್ವರ ದೇವಾಲಯ ಮತ್ತು ನುಗ್ಗೇಹಳ್ಳಿಯ ಸದಾಶಿವ ದೇವಾಲಯಗಳನ್ನು ಪ್ರಾದೇಶಿಕ ಶೈಲಿಗಳನ್ನು ಮೈಗೂಡಿಸಿಕೊಂಡ "ಭೂಮಿಜ ಶೈಲಿ" ಎನ್ನುತ್ತಾರೆ.[71] ಹೊಯ್ಸಳರ ಪ್ರಮುಖ ನೆಲೆ ದಕ್ಷಿಣ ಕರ್ನಾಟಕದ ತುಂಗಭದ್ರೆಯ ಕೆಳಗೆ ಇಲ್ಲಿ ಬಳಪದ ಕಲ್ಲಿನ ಪಾರುಪತ್ಯ, ತುಂಗಭದ್ರೆಯ ಮೇಲಕ್ಕೆ

ಮರಳುಗಲ್ಲು ಹಾಗೂ ಕಪ್ಪು ಹಸಿರು ಮಿಶ್ರಿತ ತುಸು ಗಡುಸಾದ ಕಲ್ಲಿನ ಬಳಕೆ ಇದೆ. ಬಳಪದ ಕಲ್ಲಿನಷ್ಟು ಮೆದುವಾಗಿಲ್ಲ. ಈ ಮೂಲೆ ಶಂಕರೇಶ್ವರ ದೇವಾಲಯ ಬಳಪದ ಕಲ್ಲಿನಲ್ಲಿ ನಿರ್ಮಾಣವಾಗಿದ್ದು, ನುಗ್ಗೇಹಳ್ಳಿಯ ಸದಾಶಿವ ದೇವಾಲಯ ಈ ಎರಡೂ ದೇವಾಲಯಗಳು ಭೂಮಿಜ ಶೈಲಿಯ ರಚನೆಗಳಾಗಿವೆ.[72]

ಈ ದೇವಾಲಯದ ಶಿಖರವು ಮೇಲ್ಕಂಡ ಲಕ್ಷಣಗಳನ್ನು ಹೊಂದಿದ್ದು, ಮೇಲ್ಭಾಗದಲ್ಲಿ ನಕ್ಷತ್ರಾಕಾರದ ಸ್ತೂಪಿಯನ್ನು ನಿರ್ಮಾಣ ಮಾಡಲಾಗಿದೆ. ಈ ಸ್ತೂಪಿಯ ಮೇಲ್ಭಾಗದಲ್ಲಿ ಕಳಸವನ್ನು ಇರಿಸಲಾಗಿದೆ. ಶಿಖರದ ಮುಂಭಾಗ ಸುಖನಾಸವನ್ನು ನಿರ್ಮಿಸಿದ್ದು, ಯಾವುದೇ ಮೂರ್ತಿಶಿಲ್ಪಗಳ ರಚನೆ ಕಂಡುಬರುವುದಿಲ್ಲ. ಶಿಥಿಲಾವಸ್ಥೆಯಲ್ಲಿದ್ದ ದೇವಾಲಯದ ಹಾರದ ಭಾಗದಲ್ಲಿ ಇತ್ತೀಚಿಗೆ ಗಾರೆಯಿಂದ ಜೀರ್ಣೋದ್ಧಾರಗೊಳಸಲಾಗಿದೆ. ನವರಂಗದ ಮೇಲ್ಭಾಗದಲ್ಲಿ ಹಾಗೂ ಮುಖಮಂಟಪದ ಮೇಲ್ಭಾಗದಲ್ಲಿ ಇತ್ತೀಚಿಗೆ ನಾಲ್ಕು ದಿಕ್ಕೂಗಳಗೂ ನಂದಿಯನ್ನು ಪ್ರತಿಷ್ಠಾಪನೆ ಮಾಡಲಾಗಿದೆ. ದೇವಾಲಯದ ಪೂರ್ವದಿಕ್ಕಿನಲ್ಲಿ ಸುಮಾರು 25 ಅಡಿ ಎತ್ತರದ ಕಣಶಿಲೆಯಲ್ಲಿ ಮಾಡಲಾದ ನಂದಿಕಂಬವಿದೆ.

**ಪ್ರಾಕಾರ**

ದೇವಾಲಯದ ರಕ್ಷಣೆಗೋಸ್ಕರ ಇತ್ತೀಚಿಗೆ ಗಾರೆ ಮತ್ತು ಇಟ್ಟಿಗೆಗಳಂದ ಪ್ರಾಕಾರ ನಿರ್ಮಿಸಲಾಗಿದೆ. ಶಿಖರದ ಮೇಲ್ಭಾಗದಲ್ಲಿ ಅಲ್ಲಲ್ಲಿ ಗಿಡಗಳು ಬೆಳೆದಿದ್ದು, ದೇವಾಲಯದ ಸೊಬಗನ್ನು ಕೆಡಿಸಿವೆ. ಉಳಿದಂತೆ ದಿನನಿತ್ಯ ಪೂಜಾವಿಧಿಗಳು ನಡೆಯುತ್ತಿದ್ದು, ದೇವಾಲಯವು ಸುಸ್ಥಿತಿಯಲ್ಲಿದೆ.[73]

**ಕೇದಾರೇಶ್ವರ ದೇವಾಲಯ–ನಾಗಲಾಪುರ**

ತುರವೇಕೆರೆ ತಾಲೂಕು ಕೇಂದ್ರದಿಂದ ದಬ್ಬೇಘಟ್ಟಕ್ಕೆ ಹೋಗುವ ರಸ್ತೆಯಲ್ಲಿ ಸುಮಾರು 12 ಕಿ.ಮೀ. ದೂರದಲ್ಲಿ ನಾಗಲಾಪುರ ಗ್ರಾಮವು ಕಂಡುಬರುತ್ತದೆ. ಈ ಗ್ರಾಮದಲ್ಲಿ ನಿರ್ಮಾಣಗೊಂಡಿರುವ ಕೇದಾರೇಶ್ವರ ದೇವಾಲಯವು ಇದೇ ಗ್ರಾಮದ ಪೂರ್ವ ದಿಕ್ಕಿನಲ್ಲಿರುವ ಕೆರೆಯ ಪಶ್ಚಿಮ ಭಾಗದಲ್ಲಿ ಕಾಣಬರುತ್ತದೆ. ಈ ದೇವಾಲಯವನ್ನು ಸಂಪೂರ್ಣವಾಗಿ ಬಳಪದ ಕಲ್ಲನ್ನು ಉಪಯೋಗಿಸಿ ನಿರ್ಮಿಸಲಾಗಿದೆ. ಈ ದೇವಾಲಯವು ಏಕಕೂಟ ದೇವಾಲಯ ವಾಗಿದ್ದು ಗರ್ಭಗೃಹ, ಸುಖನಾಸಿ, ನವರಂಗ ಮಾತ್ರ ಕಂಡುಬರುತ್ತವೆ. ಪ್ರಕೃತಿಯ ವಿಕೋಪಕ್ಕೆ ಈ ದೇವಾಲಯವು ಭಗ್ನಗೊಂಡಿತ್ತು. ಆದರೆ ಇತ್ತೀಚಿಗೆ ಜೀರ್ಣೋದ್ಧಾರ ಮಾಡಲಾಗಿದೆ. ಸಂಪೂರ್ಣವಾಗಿ ಮುಖಮಂಟಪ ನಾಶಗೊಂಡಿದ್ದು, ಪ್ರಸ್ತುತ ಈಗ ಮುಖಮಂಟಪ ಮತ್ತು

ಶಿಖರ ಕಂಡುಬರುವುದಿಲ್ಲ. ಪೂರ್ವಾಭಿಮುಖವಾಗಿ ನಿರ್ಮಿಸಲಾಗಿರುವ ಈ ದೇವಾಲಯದ ಪ್ರವೇಶದ್ವಾರವನ್ನು ದಕ್ಷಿಣಾಭಿಮುಖವಾಗಿ ತೆರೆಯಲಾಗಿದೆ. **(ಚಿ.ಸಂ.26)**

ಈ ದೇವಾಲಯದ ಪಶ್ಚಿಮ ಭಿತ್ತಿಯಲ್ಲಿ ಸಿಗೋಜನ ಮಗ 'ಬೈಚೋಜ' ಎಂಬ ಶಿಲ್ಪಿಯ ಹೆಸರು ಕಂಡುಬರುತ್ತದೆ. ಸುಮಾರು ಕ್ರಿ.ಶ.13ನೇ ಶತಮಾನದಲ್ಲಿ ಈ ಶಿಲ್ಪಿ ಬದುಕಿದ್ದಿರಬಹುದು ಎಂದು ವಿದ್ವಾಂಸರ ಊಹೆಯಾಗಿದೆ. ಆದುದರಿಂದ ಇದು ಹೊಯ್ಸಳರ ಕಾಲದಲ್ಲಿ ನಿರ್ಮಾಣವಾಗಿದೆ. ನುಗ್ಗೇಹಳ್ಳಿಯ ಲಕ್ಷ್ಮೀನರಸಿಂಹ ದೇವಾಲಯದ ದಕ್ಷಿಣ ಭಿತ್ತಿಯಲ್ಲಿರುವ ಶಿಲ್ಪಗಳನ್ನು ಕೆತ್ತಿದ ಶಿಲ್ಪಿ ಈ ಬೈಚೋಜನೇ ಎಂಬ ನಂಬಿಕೆ ಇದೆ. ಲಕ್ಷ್ಮೀನರಸಿಂಹ ದೇವಾಲಯದ ನಿರ್ಮಾಣ ಕಾಲ ಕ್ರಿ.ಶ.1249. ಆದುದರಿಂದ ಇದೇ ಕಾಲದಲ್ಲಿ ಈ ಕೇದಾರೇಶ್ವರ ದೇವಾಲಯ ನಿರ್ಮಾಣಗೊಂಡಿರಬಹುದೆಂಬುದು ವಿದ್ವಾಂಸರ ಅಭಿಪ್ರಾಯ ವಾಗಿದೆ.[74]

ಸಂಪೂರ್ಣವಾಗಿ ಕೇದಾರೇಶ್ವರ ದೇವಾಲಯವು ಹೊಯ್ಸಳ ವಾಸ್ತುಶೈಲಿಯನ್ನು ಹೊಂದಿದ್ದು ಇದೇ ಗ್ರಾಮದಲ್ಲಿ ನಿರ್ಮಾಣವಾಗಿರುವ ಚನ್ನಕೇಶವ ದೇವಾಲಯವನ್ನು ಹೋಲುತ್ತದೆ. ಕೇದಾರೇಶ್ವರ ದೇವಾಲಯದ ಪ್ರವೇಶದ್ವಾರ ದಕ್ಷಿಣ ದಿಕ್ಕಿಗೆ ತೆರೆಯಲ್ಪಟ್ಟಿದ್ದರೆ ಚನ್ನಕೇಶವ ದೇವಾಲಯದ ಪ್ರವೇಶದ್ವಾರ ಪೂರ್ವಾಭಿಮುಖವಾಗಿ ತೆರೆಯಲ್ಪಟ್ಟಿದೆ. ಇಂತಹದ್ದೇ ಲಕ್ಷಣಗಳನ್ನು ನಾವು ತುರುವೇಕೆರೆಯ ಚನ್ನಕೇಶವ ಮತ್ತು ಮೂಲೆ ಶಂಕರೇಶ್ವರ ದೇವಾಲಯಗಳಲ್ಲಿ ಕಾಣಬಹುದಾಗಿದೆ.

ಹೊಯ್ಸಳ ದೇವಾಲಯ ವಾಸ್ತುಶೈಲಿಗೆ ನಾಂದಿಯಾದುದೇ ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ. ಕಲ್ಯಾಣಿಚಾಲುಕ್ಯರ ವಾಸ್ತುಶಿಲ್ಪವು ಮೂಲತಃ ಬಾದಾಮಿಚಾಲುಕ್ಯರ ವಾಸ್ತುಶಿಲ್ಪ ಸಂಪ್ರದಾಯದಿಂದಲೇ ಆರಂಭವಾದರೂ ಕೊನೆಕೊನೆಗೆ ತನ್ನದೇ ಆದ ಅಂಶಗಳಂದ ಒಂದು ಹೊಸ ರೂಪವನ್ನೇ ಪಡೆಯಿತು. ನುಣುಪಾದ, ಮೆದುವಾದ ಸುಂದರ ಶಿಲ್ಪಗಳನ್ನು ಸುಲಭವಾಗಿ ತಯಾರು ಮಾಡಲು ಬಳಪದ ಕಲ್ಲಿನ ಬಳಕೆಯು ಆರಂಭವಾಯಿತು. ನಂತರದ ಕಾಲದಲ್ಲಿ ಈ ಬಳಪದ ಕಲ್ಲಿನಲ್ಲಿಯೇ ತಮ್ಮ ಎಲ್ಲಾ ದೇವಾಲಯಗಳನ್ನು ಹೊಯ್ಸಳರು ನಿರ್ಮಿಸಿದರು. ಫರ್ಗ್ಯುಸನ್, ವಿನ್ಸೆಂಟ್ ಸ್ಮಿತ್ ಮೊದಲಾದ ಕೆಲವು ಕಲಾ ಇತಿಹಾಸಕಾರರು ಕಲ್ಯಾಣಿ ಚಾಲುಕ್ಯ ಮತ್ತು ಹೊಯ್ಸಳ ಶೈಲಿಗಳೇ ಅಭಿನ್ನವೆಂದು ಅಭಿಪ್ರಾಯ ಪಡುತ್ತಾರೆ. ಬಹುಮಟ್ಟಿಗೆ ಪರ್ಸಿಬ್ರೌನ್ ಅವರೂ ಇದೇ ಅಭಿಪ್ರಾಯಪಡುತ್ತಾರೆ. ಈ ಅಭಿಪ್ರಾಯ ಭಾಗಶಃ ಸತ್ಯವಾದರೂ ಹೊಯ್ಸಳ ಶೈಲಿಯಲ್ಲಿ ಕೆಲವಾರು ಮೂಲಭೂತ ಹೊಸ ಅಂಶಗಳು ಸೇರಿ ಅದನ್ನು ಒಂದು ಪ್ರತ್ಯೇಕ ಶೈಲಿ ಎಂದು ಪರಿಗಣಿಸಲು ಸಹಾಯಕವಾಗಿವೆ. ಕಲ್ಯಾಣಿ ಚಾಲುಕ್ಯ ಮತ್ತು ದ್ವಾರಸಮುದ್ರದ

ಹೊಯ್ಸಳರ ಸಂಬಂಧ ರಾಜಕೀಯವಾಗಿ ಹಾಗೂ ಸಾಂಸ್ಕೃತಿಕವಾಗಿ ಇದ್ದುದರ ಪರಿಣಾಮವಾಗಿ ಹೊಯ್ಸಳರ ವಾಸ್ತುಶೈಲಿಯಲ್ಲಿ ಕೆಲವು ಸಾಮ್ಯಗಳು ಕಂಡುಬರುವುದು ಸ್ವಾಭಾವಿಕ.[75]

**ಗರ್ಭಗೃಹ**

ಗರ್ಭಗೃಹವು 8X8 ಅಡಿ ಉದ್ದ ಮತ್ತು ಅಗಲ ಹೊಂದಿದ್ದು ಚೌಕಾಕಾರವಾಗಿದೆ. ಈ ಗರ್ಭಗೃಹದ ಮಧ್ಯಭಾಗದಲ್ಲಿ ಸುಮಾರು 2.5 ಅಡಿ ಎತ್ತರವಿರುವ ನಕ್ಷತ್ರಾಕಾರದ ಪಾಣಿಪೀಠದ ಮೇಲೆ ಚಿಕ್ಕದಾದ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. **(ಚಿ.ಸಂ.27)** ಗರ್ಭಗೃಹದ ಮೇಲ್ಛಾವಣಿಯಲ್ಲಿ ಅಷ್ಟಮುಖವುಳ್ಳ ಭುವನೇಶ್ವರಿ ಇದೆ. ಈ ಭುವನೇಶ್ವರಿಯ ಮೇಲಿನ ಪಟ್ಟಿಕೆಯಲ್ಲಿ ಅಷ್ಟದಿಕ್ಪಾಲಕರು ಕೆಳಗಿನ ಪಟ್ಟಿಕೆಯಲ್ಲಿ ಮಣಿಹಾರಗಳನ್ನು ಮತ್ತು ಕೀರ್ತಿಮುಖಗಳನ್ನು ಬಿಡಿಸಲಾಗಿದೆ ಮತ್ತು ಮೂಲೆಗಳಲ್ಲಿ ಕೀರ್ತಿಮುಖಗಳಿವೆ. ಮಧ್ಯದಲ್ಲಿ ಪದ್ಮಪುಷ್ಪ ಮತ್ತು ಅಷ್ಠದಿಕ್ಪಾಲಕರು ತಮ್ಮ ವಾಹನದ ಮೇಲೆ ಕುಳಿತಿರುವಂತೆ ಸುತ್ತಲೂ ಬಿಡಿಸಲಾಗಿದೆ. ಗರ್ಭಗೃಹದ ಬಾಗಿಲ ಪಟ್ಟಿಕೆಗಳು ಸರಳವಾಗಿದ್ದು ಯಾವುದೇ ಸೂಕ್ಷ್ಮ ಕೆತ್ತನೆ ಕಾಣಬರುವುದಿಲ್ಲ. ಮಧ್ಯದಲ್ಲಿ ನಕ್ಷತ್ರಾಕಾರದ ಅರೆಗಂಬಗಳಿವೆ.

ಬಾಗಿಲ ಇಕ್ಕೆಲಗಳಲ್ಲಿ ಶೈವ ದ್ವಾರಪಾಲಕರಿದ್ದು ಇವರು ತ್ರಿಭಂಗಿಯಲ್ಲಿ ನಿಂತಿದ್ದು ಚತುರ್ಭುಜ ಹೊಂದಿದ್ದಾರೆ. ಕೈಗಳಲ್ಲಿ ತ್ರಿಶೂಲ, ಡಮರು ಅಭಯಹಸ್ತ ಮತ್ತು ಗದೆಯನ್ನು ಹೊಂದಿದ್ದಾರೆ. ಇಕ್ಕೆಲಗಳಲ್ಲಿ ಫಲ ಮತ್ತು ಚಾಮರ ಹಿಡಿದು ನಿಂತಿರುವ ಚಾಮರಧಾರಿಣಿಯರಿದ್ದಾರೆ. ಪ್ರಭಾವಳಿಯಲ್ಲಿ ಬಳ್ಳಿ ಸುರಳಿ ಅಂತ್ಯದಲ್ಲಿ ಕೀರ್ತಿಮುಖವಿದೆ. ಲಲಾಟಬಿಂಬದಲ್ಲಿ ಶಿವನು ತಾಂಡವ ನೃತ್ಯ ಮಾಡುತ್ತಿರುವ ಶಿಲ್ಪವನ್ನು ಬಿಡಿಸಲಾಗಿದೆ. ಈ ದೇವನ ಇಕ್ಕೆಲಗಳಲ್ಲಿ ಮಕರ ತೋರಣವಿದೆ. ಲಲಾಟಬಿಂಬದ ಕೆಳಪಟ್ಟಿಕೆಯಲ್ಲಿ ಉಮಾಮಹೇಶ್ವರನ ಶಿಲ್ಪವನ್ನು ಬಿಡಿಸಲಾಗಿದೆ. ಬಾಗಿಲುವಾಡದಲ್ಲಿ ಕೀರ್ತಿಮುಖ ಬಿಡಿಸಿ ಅದರ ಇಕ್ಕೆಲಗಳಲ್ಲಿ ಬಳ್ಳಿಸುರಳಿಗಳು, ಪದ್ಮಪುಷ್ಪದ ಮೊಗ್ಗುಗಳನ್ನು ಬಿಡಿಸಲಾಗಿದೆ.

**ಸುಖನಾಸಿ**

ಸುಖನಾಸಿಯು ಗರ್ಭಗೃಹದಷ್ಟೇ ಉದ್ದ ಮತ್ತು ಅಗಲವನ್ನು ಹೊಂದಿದ್ದು ಚೌಕಾಕಾರವಾಗಿದೆ. ಸುಖನಾಸಿಯ ದಕ್ಷಿಣಭಾಗದಲ್ಲಿ ನಾಗಶಿಲ್ಪಗಳನ್ನು ಇರಿಸಲಾಗಿದೆ. ಈ ನಾಗಶಿಲ್ಪವನ್ನು ನಕ್ಷತ್ರಾಕಾರದ ಒಂದು ಅಡಿ ವೃಶ್ಚಿಕ ಪೀಠದಲ್ಲಿ ಪ್ರತಿಷ್ಠಾಪಿಸಲಾಗಿದೆ. ಈ ನಾಗಶಿಲ್ಪಗಳು ಜೋಡಿಯಾಗಿದ್ದು ಶಿವಲಿಂಗವನ್ನು ಹೆಡೆ ಎತ್ತಿ ಕಾಪಾಡುತ್ತಿರುವಂತೆ ಬಹಳ ಸುಂದರವಾಗಿ ಕೆತ್ತಲಾಗಿದೆ. **(ಚಿ.ಸಂ.28)** ಇದರ ಪ್ರಭಾವಳಿಯಲ್ಲಿ ಬಳ್ಳಿಸುರುಳಿ, ಕೀರ್ತಿಮುಖ,

ಮಣಿಹಾರ ಇದೆ. ಈ ಸುಖನಾಸಿಯ ಉತ್ತರ ಮತ್ತು ದಕ್ಷಿಣ ಭಾಗದ ಗೋಡೆಯಲ್ಲಿ ಎರಡು ಕಂಬಗಳಿಂದ ಕೂಡಿದ ಕೋಷ್ಠಗಳಿವೆ. ಈ ಕೋಷ್ಠಗಳಲ್ಲಿ ಯಾವುದೇ ಮೂರ್ತಿಶಿಲ್ಪ ಕಂಡು ಬರುವುದಿಲ್ಲ. ಸುಖನಾಸಿಯಲ್ಲಿ ನಕ್ಷತ್ರಾಕಾರವಾಗಿರುವ ಅರೆಗಂಬಗಳನ್ನು ಗೋಡೆಗೆ ಸೇರಿಸಲಾಗಿದೆ.

ಸುಖನಾಸಿಯ ಭುವನೇಶ್ವರಿಯಲ್ಲಿ ಅಷ್ಟದಿಕ್ಪಾಲಕರು ತಮ್ಮ ತಮ್ಮ ವಾಹನದ ಮೇಲೆ ಕುಳಿತು ಚಲಿಸುತ್ತಿರುವಂತೆ ಬಹಳ ಸುಂದರವಾಗಿ ಕೆತ್ತಲಾಗಿದ್ದು ಮಧ್ಯ ಭಾಗದಲ್ಲಿ ತಾಂಡವ ನೃತ್ಯದಲ್ಲಿ ತೊಡಗಿರುವ ಶಿವನ ಮೂರ್ತಿಯನ್ನು ಬಿಡಿಸಲಾಗಿದೆ. ಕೆಳಗಿನ ಪಟ್ಟಿಕೆಯಲ್ಲಿ ಬಳ್ಳಿಸುರಳಿಗಳು ಹಾಗೂ ಮಣಿಹಾರಗಳನ್ನು ಬಿಡಿಸಲಾಗಿದೆ ಹಾಗೂ ಮೂಲೆಗಳಲ್ಲಿ ಕೀರ್ತಿಮುಖದ ಬಾಯಿಂದ ಹೊರಟಂತೆ ಬಿಡಿಸಲಾಗಿರುವ ಬಳ್ಳಿ ಸುರಳಿಗಳಿವೆ. ಸುಖನಾಸಿಯ ಬಾಗಿಲ ಪಟ್ಟಿಕೆಗಳು ಸರಳವಾಗಿದ್ದು ಮಧ್ಯದಲ್ಲಿ ನಕ್ಷತ್ರಾಕರದ ಅರೆಗಂಬಗಳಿವೆ. ಬಾಗಿಲ ಪಟ್ಟಿಕೆಗಳಲ್ಲಿ ಆಭರಣದ ಕೆತ್ತನೆ, ಪದ್ಮ ದಳಗಳನ್ನು ಬಿಡಿಸಲಾಗಿದೆ. ಬಾಗಿಲ ಎರಡೂ ಕಡೆ ಗರ್ಭಗೃಹಕ್ಕೆ ಗಾಳಿ ಮತ್ತು ಬೆಳಕಿಗಾಗಿ ಜಾಲಾಂಧ್ರಗಳನ್ನು ಜೋಡಿಸಲಾಗಿದೆ.

ಸುಖನಾಸಿಯ ಬಾಗಿಲ ಕೆಳಭಾಗದ ಇಕ್ಕೆಲಗಳಲ್ಲಿ ಸೂಕ್ಷ್ಮ ಕೆತ್ತನೆಯಿಂದ ಕೂಡಿದ ಶೈವ ದ್ವಾರಪಾಲಕರನ್ನು ಇರಿಸಲಾಗಿದೆ. ಇವರು ಚುತುರ್ಭುಜವನ್ನು ಹೊಂದಿದ್ದು ತ್ರಿಭಂಗಿಯಲ್ಲಿ ನಿಂತಿದ್ದಾರೆ. ಕೈಗಳಲ್ಲಿ ತ್ರಿಶೂಲ, ಡಮರು, ನಾಗಶಿಲ್ಪ, ಗದಾ ಹಿಡಿದಿರುವಂತೆ ಕೆತ್ತಲಾಗಿದೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣಗಳು ಸುಂದರವಾಗಿವೆ. ಇವರ ಇಕ್ಕೆಲಗಳಲ್ಲಿ ಚಾಮರಧಾರಿಣಿಯರು ವಿವಿಧ ಆಭರಣಗಳನ್ನು ಧರಿಸಿರುವ ಈ ದ್ವಾರಪಾಲಕರ ಇಕ್ಕೆಲಗಳಲ್ಲಿ ಚಾಮರಧಾರಿಣಿಯರು ಫಲ ಮತ್ತು ಚಾಮರವನ್ನು ಹಿಡಿದು ನಿಂತಿದ್ದಾರೆ. ಸುಖನಾಸಿಯ ಬಾಗಿಲ ಲಲಾಟಬಿಂಬದಲ್ಲಿ ಶಿವಪಾರ್ವತಿಯರು ಸುಖಾಸನದಲ್ಲಿ ಕುಳಿತಿರುವಂತೆ ಬಹಳ ಸುಂದರವಾಗಿ ಕೆತ್ತನೆ ಮಾಡಲಾಗಿದೆ. ಬಾಗಿಲ ತೋರಣದಲ್ಲಿ ಕಮಲದ ಮೊಗ್ಗುಗಳ ಅಲಂಕರಣೆ ಮಾಡಲಾಗಿದೆ. **(ಚಿ.ಸಂ.29)**

**ನವರಂಗ**

ನವರಂಗವು 20X20 ಅಡಿ ಉದ್ದ ಮತ್ತು ಅಗಲ ಹೊಂದಿದ್ದು ಚೌಕಾಕಾರವಾಗಿದೆ. ನವರಂಗದ ಮಧ್ಯದಲ್ಲಿ ರಂಗ ಮಂಟಪದಲ್ಲಿ ವೃತ್ತಾಕಾರದ ವೇದಿಕೆಯನ್ನು ನಿರ್ಮಾಣ ಮಾಡಲಾಗಿದೆ. ಈ ನವರಂಗದ ಮಧ್ಯದಲ್ಲಿ ಹೊಯ್ಸಳ ಶೈಲಿಯ ಸುಂದರವಾದ ನಾಲ್ಕು ಕಂಬಗಳಿವೆ. ಹೊಯ್ಸಳ ಶೈಲಿಯಲ್ಲಿರುವ ಈ ಕಂಬಗಳು ಚೌಕ, ಬಳೆಗಳ ಅಲಂಕರಣ ಗಂಟೆ,

ಗಾಲಿ, ಘಟಾಕಾರವಾಗಿ ರಚಿಸಲಾಗಿದೆ. ಬೋಧಿಗೆ ಚೌಕಾಕಾರದ ಪಲಗೈ ಅದರ ಮೇಲೆ ನಾಲ್ಕು ದಿಕ್ಕುಗಳಿಗೂ ಚಾಚಿರುವ ಉರುಳೆಯಾಕಾರದ ಕಪೋತವನ್ನು ಮಾಡಲಾಗಿದೆ.[76] ಹೀಗೆ ಹೊಯ್ಸಳ ಶೈಲಿಯಲ್ಲಿ ನಿರ್ಮಿತವಾದ ಕಂಬಗಳನ್ನು ನವರಂಗದಲ್ಲಿ ಕಾಣಬಹುದು. **(ಚಿ.ಸಂ.30)** ಕಂಬಗಳ ಮೇಲ್ಭಾಗದ ಬೋಧಿಗೆ ಮತ್ತು ದೂಲಗಳ ನಡುವೆ ಮದನಿಕಾ ವಿಗ್ರಹಗಳನ್ನು ಇಡಲು ಮಾಡಿ ಸ್ಥಳಾವಕಾಶವಿದೆ. ಆದರೆ ಈ ಭಾಗಗಳಲ್ಲಿ ಯಾವುದೇ ಮದನಿಕಾ ಶಿಲ್ಪಗಳು ಕಂಡುಬರುವುದಿಲ್ಲ. ಕಂಬದ ಕಪೋತ ಭಾಗದಲ್ಲಿ ನಾಲ್ಕು ದಿಕ್ಕುಗಳಲ್ಲಿಯೂ ನೆಗೆಯುತ್ತಿರುವ ಸಿಂಹಗಳ ಶಿಲ್ಪವನ್ನು ಬಿಡಿಸಲಾಗಿದೆ. ಆಗ್ನೇಯ ಮೂಲೆಯಲ್ಲಿರುವ ಕಂಬದಲ್ಲಿ ಆನೆಯೊಂದನ್ನು ಸಿಂಹವು ಹಿಡಿದಿರುವಂತೆ ಸುಂದರವಾಗಿ ಕೆತ್ತನೆ ಮಾಡಲಾಗಿದೆ. ನವರಂಗದ ಮೇಲ್ಛಾವಣಿಯನ್ನು ಒಂಭತ್ತು ಅಂಕಣಗಳನ್ನಾಗಿ ಮಾಡಿ ಒಂಭತ್ತು ಅಂಕಣಗಳಲ್ಲಿಯೂ ಸಹ ಭುವನೇಶ್ವರಿಯನ್ನು ಮಾಡಲಾಗಿದೆ.

**ಮಧ್ಯದ ಭುವನೇಶ್ವರಿ**

ಮಧ್ಯದ ಅಥವಾ ಪ್ರಧಾನ ಭುವನೇಶ್ವರಿಯು 5 ಅಡಿ ವ್ಯಾಸವನ್ನು ಹೊಂದಿದೆ. ಹೊಯ್ಸಳ ಶಿವ ದೇವಾಲಯಗಳಲ್ಲಿ ಒಳಾಂಗಣದ ಸೊಬಗನ್ನು ಹೆಚ್ಚಿಸಿರುವ ಮತ್ತೊಂದು ವಾಸ್ತುಭಾಗವೆಂದರೆ ಛಾವಣಿಯ ಭುವನೇಶ್ವರಿಗಳು ಭುವನೇಶ್ವರಿಗೆ "ವಿಥಾನ" ಎಂಬ ಮತ್ತೊಂದು ಹೆಸರಿದೆ. ಪ್ರಾರಂಭಿಕ ಹೊಯ್ಸಳ ದೇಗುಲಗಳಲ್ಲಿ ದ್ರಾವಿಡ ಶೈಲಿಯಲ್ಲಿ ಮೆಟ್ಟಿಲು ಮೆಟ್ಟಿಲಾಗಿ ಮೇಲೇರುವ ಮಾಡುಗಳನ್ನು ನಿರ್ಮಿಸಲಾಗುತ್ತಿತ್ತು. ಚೌಕಕಾರದಲ್ಲಿ ಒಂದರ ಮೇಲೊಂದರಂತೆ ಕಲ್ಲು ಚಪ್ಪಡಿಗಳನ್ನು ಸೇರಿಸಿ ದೇಗುಲದ ಒಳಾಂಗಣದಲ್ಲಿ ಒಂದು ಛಾವಣಿಯನ್ನು ನಿರ್ಮಿಸುತ್ತಿದ್ದು ಇದನ್ನು ವಾಸ್ತುಶಿಲ್ಪದ ಪ್ರಕಾರ "ನಾಭಿಚ್ಛಂದ್ರ" ಎಂದು ಗುರುತಿಸಲಾಗುತ್ತದೆ.[77] ಸುಂದರವಾದ ಸೂಕ್ಷ್ಮವಾದ ಕೆತ್ತನೆಯಿಂದ ಕೂಡಿರುವ ಈ ಭುವನೇಶ್ವರಿಯು ನೋಡುಗರನ್ನು ಮೈಮರೆಸುವಂತಿದೆ. ಈ ಭುವನೇಶ್ವರಿಯು ಕೆಳಮುಖವಾಗಿ ಇಳಿಬಿಟ್ಟ ಕಮಲದ ಮೊಗ್ಗಿನಂತೆ ಕಂಡುಬಂದಿದ್ದು, ಈ ಕಮಲದ ಮೊಗ್ಗು ಎರಡು ಅಡಿ ಉದ್ದವನ್ನು ಹೊಂದಿದೆ. ಈ ಭುವನೇಶ್ವರಿಯ ಮೇಲ್ಭಾಗದಲ್ಲಿ ನೆಗೆಯುತ್ತಿರುವ ಸಿಂಹಗಳು, ಹೊಯ್ಸಳ ಶೈಲಿಯ ಸಣ್ಣ ಸಣ್ಣ ಶಿಖರಗಳು, ಪದ್ಮ ಅಲಂಕರಣ, ಸ್ತ್ರೀ ಪುರುಷ ದೇವತೆಗಳು ಪದ್ಮಾಸನದಲ್ಲಿ ಕುಳಿತಿರುವಂತೆ ಸುತ್ತಲೂ ಬಿಡಿಸಲಾಗಿದೆ.

**ಪಶ್ಚಿಮದ ಭುವನೇಶ್ವರಿ:–** ಈ ಭುವನೇಶ್ವರಿಯನ್ನು ಅಷ್ಟ ಮುಖವಾಗಿ ಮಾಡಲಾಗಿದ್ದು, ಇದರಲ್ಲಿ ಅರಳಿದ ಒಂಭತ್ತು ಪದ್ಮಪುಷ್ಪಗಳನ್ನು ಬಿಡಿಸಲಾಗಿದೆ. ಒಳಭಾಗದಲ್ಲಿ ಅಷ್ಟದಿಕ್ಪಾಲಕರ ಶಿಲ್ಪಗಳನ್ನು ಬಿಡಿಸಲಾಗಿದೆ.

**ವಾಯುವ್ಯ ಭುವನೇಶ್ವರಿ**:– ವಾಯುವ್ಯದ ಮೂಲೆಯಲ್ಲಿರುವ ಭುವನೇಶ್ವರಿಯನ್ನು ಚೌಕಾಕಾರವಾಗಿ ಮಾಡಲಾಗಿದ್ದು ಅಲ್ಲಲ್ಲಿ ಕಮಲದ ದಳ, ಹಂಸಗಳ ಸಾಲು, ಅದರ ಕೆಳಭಾಗದಲ್ಲಿ ಮಣಿಹಾರ, ಕಮಲದ ಮೊಗ್ಗುಗಳ ಅಲಂಕರಣೆ ಇದೆ.

**ಉತ್ತರದ ಭುವನೇಶ್ವರಿ**:–ಉತ್ತರ ಭುವನೇಶ್ವರಿಯನ್ನು ನಕ್ಷತ್ರಾಕಾರವಾಗಿ ಬಹಳ ಸುಂದರವಾಗಿ ಕೆತ್ತನೆ ಮಾಡಲಾಗಿದೆ. ಮೂರು ಕಟ್ಟಿನಿಂದ ಕೂಡಿದ ಈ ಭುವನೇಶ್ವರಿಯ ಸುತ್ತಲೂ ಚಾಮರದಾರರು ಮತ್ತು ಚಾಮರಧಾರಿಣಿಯರ ಚಿತ್ರ ಬಿಡಿಸಲಾಗಿದೆ. ಕೆಳಭಾಗದಲ್ಲಿ ಮಣಿಹಾರ, ಇದರ ಕಲ್ಲಿನಲ್ಲಿ ನಾಲ್ಕು ದಿಕ್ಕುಗಳಲ್ಲಿ ವ್ಯಾಳ ಬಿಡಿಸಲಾಗಿದ್ದು ಕೀರ್ತಿಮುಖ ಹೊಂದಿದೆ.

**ಈಶಾನ್ಯದ ಭುವನೇಶ್ವರಿ**:–ಈಶಾನ್ಯದ ಭುವನೇಶ್ವರಿಯನ್ನು ವೃತ್ತಾಕಾರವಾಗಿ ಮಾಡಲಾಗಿದ್ದು ನಾಲ್ಕು ಸುತ್ತುಗಳಿಂದ ಕೂಡಿದೆ. ಮಧ್ಯದಲ್ಲಿ ಕಮಲದ ಮೊಗ್ಗು, ಅಷ್ಟದಿಕ್ಪಾಲಕರು, ಕೀರ್ತಿಮುಖವನ್ನು ಕಾಣಬಹುದಾಗಿದೆ.

**ಪೂರ್ವದ ಭುವನೇಶ್ವರಿ**:–ಪೂರ್ವದ ಭುವನೇಶ್ವರಿಯನ್ನು ನಕ್ಷತ್ರಾಕಾರವಾಗಿ ಮಾಡಲಾಗಿದ್ದು ಮೇಲೆ ಹೇಳಿದ ಭುವನೇಶ್ವರಿಗಳ ಲಕ್ಷಣಗಳನ್ನು ಹೊಂದಿದೆ.

**ಆಗ್ನೇಯ ಮತ್ತು ದಕ್ಷಿಣ ಭುವನೇಶ್ವರಿ**:–ಆಗ್ನೇಯ ಮತ್ತು ದಕ್ಷಿಣ ಭುವನೇಶ್ವರಿಗಳನ್ನು ಅಷ್ಟಮುಖವಾಗಿ ಮಾಡಲಾಗಿದ್ದು ಸುಂದರವಾಗಿ ಕೆತ್ತಲಾಗಿದೆ. ಇದರಲ್ಲಿ ಅಷ್ಟದಿಕ್ಪಾಲಕರ ಇಕ್ಕೆಲಗಳಲ್ಲಿ ಯುದ್ಧ ಸನ್ನಿವೇಶಗಳು, ಮೇಲ್ಭಾಗದಲ್ಲಿ ಸ್ತ್ರೀಪುರುಷ ದೇವತೆಗಳನ್ನು ಕೆತ್ತಲಾಗಿದೆ.

**ನೈರುತ್ಯ ಭುವನೇಶ್ವರಿ**:–ನೈರುತ್ಯದ ಮೂಲೆಯ ಭುವನೇಶ್ವರಿಯು ಸಹ ಮೇಲ್ಕಂಡ ಲಕ್ಷಣಗಳನ್ನು ಹೊಂದಿದ್ದು ಸಣ್ಣ ಸಣ್ಣ ಶಿಲ್ಪಗಳನ್ನು ಹೊಂದಿದೆ. **(ಚಿ.ಸಂ.31)** ನವರಂಗದ ನೈರುತ್ಯ ಮತ್ತು ವಾಯುವ್ಯ ಮೂಲೆಯಲ್ಲಿ ಎರಡು ಹೊಯ್ಸಳ ಶೈಲಿಯ ಕೋಷ್ಠಗುಡಿಗಳಿವೆ. **(ಚಿ.ಸಂ.32)** ನೈರುತ್ಯದಲ್ಲಿರುವ ಕೋಷ್ಠಗುಡಿಯನ್ನು ನಕ್ಷತ್ರಾಕಾರವಾಗಿ ನಿರ್ಮಿಸಿದ್ದು, ಕೋಷ್ಠದ ಒಳಭಾಗದಲ್ಲಿ ಅಲಂಕೃತವಾಗಿರುವ ಮೂಷಿಕ ಪೀಠದ ಮೇಲೆ ಸುಂದರವಾದ ಗಣಪತಿ ವಿಗ್ರಹವನ್ನು ಇರಿಸಲಾಗಿದೆ. ಈ ಮೂರ್ತಿಯ ಮೈಮೇಲೆ ವಿವಿಧ ಬಗೆಯ ವಸ್ತ್ರಾಭರಣಗಳನ್ನು ಬಿಡಿಸಲಾಗಿದೆ ಮತ್ತು ಈ ದೇವನು ಚತುರ್ಭುಜವನ್ನು ಹೊಂದಿದ್ದು, ಕೈಗಳಲ್ಲಿ ಪಾಶ, ಅಂಕುಶ, ಬಲಗೈಯಲ್ಲಿ ಮುರಿದ ದಂತ, ಎಡಗೈಯಲ್ಲಿ ಫಲವನ್ನು ಹಿಡಿದಿರುವಂತೆ ಕೆತ್ತಲಾಗಿದೆ. ಪ್ರಭಾವಳಿಯಲ್ಲಿ ಬಳ್ಳಿ ಸುರಳಿಗಳ ಅಲಂಕರಣೆ ಮತ್ತು ಕೀರ್ತಿಮುಖವನ್ನು ಬಿಡಿಸಲಾಗಿದೆ. ಈ ಕೋಷ್ಠಗುಡಿಯ ಮೇಲ್ಭಾಗದಲ್ಲಿ ಏಕತಲಾ ಶಿಖರವನ್ನು ಮಾಡಿ ಶಿಖರದ ಮುಂಭಾಗದ ಅಂಚಿನ ಸುತ್ತಲೂ 'ಕೂಡು'ಗಳ ಅಲಂಕರಣ, ಪದ್ಮದ ಮೊಗ್ಗುಗಳು, ದೇವದೇವತೆಯರ ಕೆತ್ತನೆಗಳಿವೆ.

**ವಾಯುವ್ಯ ಮೂಲೆಯಲ್ಲಿರುವ ಕೋಷ್ಠಗುಡಿ:–** ಈ ಕೋಷ್ಠಗುಡಿಯನ್ನು ನೈರುತ್ಯ ಭಾಗದಲ್ಲಿರುವ ಕೋಷ್ಠದಂತೆಯೇ ನಿರ್ಮಿಸಿದ್ದು ಈ ಗುಡಿಯ ಒಳಭಾಗದಲ್ಲಿ ಸುಮಾರು ಒಂದೂವರೆ ಅಡಿ ಎತ್ತರದ ಸಿಂಹಪೀಠವಿದೆ. ಈ ಸಿಂಹಪೀಠದ ಮೇಲಿನ ಮೂರ್ತಿಶಿಲ್ಪ ಈಗ ಕಂಡುಬರುವುದಿಲ್ಲ. ಸಾಮಾನ್ಯವಾಗಿ ಮಹಿಷಮರ್ಧಿನ ಶಿಲ್ಪವಿದ್ದಂತೆ ಕಂಡುಬರುತ್ತದೆ. ನವರಂಗದ ನೈರುತ್ಯ ಮೂಲೆಯಲ್ಲಿ ಒಂದು ಕೋಷ್ಠಗುಡಿ ಇದೆ. ಇದರಲ್ಲಿ ಷಣ್ಮುಖ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ಈ ದೇವನು ನವಿಲಿನ ಮೇಲೆ ಕುಳಿತಿದ್ದಾನೆ. ಸುಮಾರು 2 ಅಡಿ ಎತ್ತರವಿರುವ ಈ ದೇವಮೂರ್ತಿಯು ಕಾಲಪುರುಷರ ಪ್ರಭಾವಕ್ಕೆ ಕಾಲಪುರುಷನ ಪ್ರಭಾವಕ್ಕೆ ಒಳಗಾಗಿ ಪ್ರಸ್ತುತ ಭಗ್ನಗೊಂಡಿದೆ.

**ನವರಂಗದಲ್ಲಿರುವ ಬಿಡಿಶಿಲ್ಪಗಳು:–**ಒಂದು ಅಡಿ ಎತ್ತರವಿರುವ ಗರುಡ ಪೀಠದ ಮೇಲೆ ಸಮಭಂಗಿಯಲ್ಲಿ ನಿಂತು ಚತುರ್ಭುಜ ಹೊಂದಿರುವ ಕೇಶವನ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ಈ ದೇವನು ಕೈಗಳಲ್ಲಿ ಶಂಖ, ಚಕ್ರ ಹಿಡಿದು ಕೊಂಡಿದ್ದಾನೆ. ಬಲಭಾಗದ ಕೈ ಮುರಿದು ಹೋಗಿದೆ. ಅಭಯಹಸ್ತ ಮತ್ತು ಗಧಾ ಸಂಪೂರ್ಣವಾಗಿ ಭಗ್ನಗೊಂಡಿದ್ದು ಪ್ರಭಾವಳಿ, ಬಳ್ಳಿಸುರಳಿ ಕೀರ್ತಿಮುಖವನ್ನು ಕಾಣಬಹುದು. ಮೈಮೇಲೆ ವಿವಿಧ ಆಭರಣಗಳಿಂದ ಕೂಡಿದ ಅಲಂಕರಣೆ ಕಂಡುಬರುತ್ತದೆ. ಈ ಕೇಶವನ ಶಿಲ್ಪದ ಇಕ್ಕೆಲಗಳಲ್ಲಿ ದೇವಕಿಯರು ಫಲ ಮತ್ತು ಪದ್ಮ ಹಿಡಿದು ನಿಂತಿದ್ದಾರೆ. ಇದೇ ನವರಂಗದಲ್ಲಿರುವ ದಕ್ಷಿಣದ ಗೋಡೆಯ ಮುಂದೆ ಶಣ್ಮುಖನ ಶಿಲ್ಪವನ್ನು ಇಡಲಾಗಿದೆ. ಈ ದೇವನು ತನ್ನ ವಾಹನವಾದ ನವಿಲಿನ ಮೇಲೆ ಕುಳಿತಿದ್ದಾನೆ. ಶಿರದ ಭಾಗ ಮುರಿದಿದೆ. ಪ್ರಭಾವಳಿಯಲ್ಲಿ ಬಳ್ಳಿಸುರಳಿಗಳ ಅಲಂಕರಣೆ ಮತ್ತು ಕೀರ್ತಿಮುಖ ಕಂಡುಬರುತ್ತದೆ. ಈ ದೇವನ ಇಕ್ಕೆಲಗಳಲ್ಲಿ ಬಿಲ್ಲು ಹಿಡಿದು ಬಾಣ ಬಿಡುತ್ತಿರುವ ವೀರ ಪುರುಷರ ಚಿತ್ರಗಳಿವೆ. ನವರಂಗದಲ್ಲಿ ಗರ್ಭಗೃಹದ ಶಿವಲಿಂಗಕ್ಕೆ ಅಭಿಮುಖವಾಗಿ ಶಿವನ ವಾಹನವಾದ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ಈ ನಂದಿಯು ಸೂಕ್ಷ್ಮ ಕೆತ್ತನೆಗಳಿಂದ ಕೂಡಿದ್ದು, ಕೊರಳಲ್ಲಿ ಘಂಟೆ, ಮೈಮೇಲೆ ಮಣಿಹಾರಗಳ ಅಲಂಕರಣೆಯನ್ನು ಹೊಂದಿರುವ ಸುಂದರವಾದ ನಂದಿಯನ್ನು ಇಡಲಾಗಿದೆ. ಈ ನಂದಿಯು ತುಂಬಾ ಆಕರ್ಷಣೆಯಿಂದ ಕೂಡಿದೆ. ನವರಂಗದ ಆಗ್ನೇಯ ಮೂಲೆಯಲ್ಲಿ ಒಂದು ಅಡಿ ಎತ್ತರವಿರುವ ಹಂಸಪೀಠದ ಮೇಲೆ ಸುಮಾರು ನಾಲ್ಕು ಅಡಿ ಎತ್ತರವಿರುವ ಸರಸ್ವತಿ ದೇವಿಯನ್ನು ಇರಿಸಲಾಗಿದೆ. ಸರಸ್ವತಿಯು ಪದ್ಮಾಸನದಲ್ಲಿ ಕುಳಿತಿದ್ದು ಚತುರ್ಭುಜವನ್ನು ಹೊಂದಿದ್ದಾಳೆ. ಕೈಗಳಲ್ಲಿ ಜಪಮಣಿ, ಪುಸ್ತಕ, ಪಾಶ, ಅಂಕುಶ ಹಿಡಿದು ಕೊಂಡಿದ್ದಾಳೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣಗಳು ಸೂಕ್ಷ್ಮ ಕೆತ್ತನೆಯಿಂದ ಕೂಡಿವೆ. ಆದರೆ ಕಾಲಪುರುಷನ ವಿಕೋಪಕ್ಕೆ ಬಲಿಯಾಗಿ ಈ ಮೂರ್ತಿಶಿಲ್ಪದ ಪ್ರಭಾವಳಿ ಅರ್ಧಭಾಗಕ್ಕೆ ಮುರಿದು ಹೋಗಿದೆ. ನವರಂಗದ ದಕ್ಷಿಣದ ಭಾಗದಲ್ಲಿ

ಸಪ್ತಮಾತೃಕಾ ಶಿಲ್ಪಗಳನ್ನು ಕಾಣಬಹುದು. **(ಚಿ.ಸಂ.33)** ಸುಮಾರು ಎರಡು ಅಡಿಗಳ ಎತ್ತರವಿರುವ ಈ ದೇವಿಯರನ್ನು ಒಂದೇ ಪೀಠದ ಮೇಲೆ ಸಾಲಾಗಿರುವಂತೆ ಪ್ರತಿಷ್ಠಾಪನೆ ಮಾಡಲಾಗಿದೆ. ಈ ದೇವಿಯರು ತಮ್ಮ ತಮ್ಮ ವಾಹನದ ಮೇಲೆ ಸುಖಾಸನದಲ್ಲಿ ಕುಳಿತಿದ್ದಾರೆ. ಎಡ ಮತ್ತು ಬಲಭಾಗದಲ್ಲಿ ಶಿವ ಮತ್ತು ಗಣೇಶನನ್ನು ಇರಿಸಲಾಗಿದೆ.

**ಮುಖಮಂಟಪ**

ನಾಗಲಾಪುರದ ಕೇದಾರೇಶ್ವರ ದೇವಾಲಯದ ಮುಖಮಂಟಪ ಈಗ ಕಂಡುಬರುವುದಿಲ್ಲ. ದೇವಾಲಯದ ಮುಖಮಂಟಪ ಸಂಪೂರ್ಣ ನಾಶಗೊಂಡಿದ್ದರಿಂದ ಈಗ ನವರಂಗ ನವರಂಗದ ಪ್ರವೇಶದ್ವಾರ ಮಾತ್ರ ಕಂಡುಬರುತ್ತದೆ. ನವರಂಗದ ಬಾಗಿಲು ಸಾಮಾನ್ಯವಾಗಿದ್ದು ಇತ್ತೀಚಿಗೆ ಅದೇ ದೇವಾಲಯದ ಕಲ್ಲು ಚಪ್ಪಡಿಗಳಿಂದ ನಿರ್ಮಿಸಲಾಗಿದ್ದು ಯಾವುದೇ ಮೂರ್ತಿಶಿಲ್ಪಗಳು ಕಂಡುಬರುವುದಿಲ್ಲ. [78]

**ಅಧಿಷ್ಠಾನ**

ಈ ದೇವಾಲಯವನ್ನು ಸಂಪೂರ್ಣವಾಗಿ ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆಯವರು ಇತ್ತೀಚಿಗೆ ಜೀರ್ಣೋದ್ಧಾರ ಮಾಡಿದ್ದಾರೆ. ಅಧಿಷ್ಠಾನವು ಆರು ಪಟ್ಟಿಕೆಗಳನ್ನು ಹೊಂದಿದ್ದು ಇನ್ಸರಿತ ಮತ್ತು ಮುನ್ಸರಿತದಂತೆ ಕ್ರಮವಾಗಿ ಜೋಡಿಸಲಾಗಿದೆ. ಕೆಳಗಿನ ಪಟ್ಟಿಕೆಯಲ್ಲಿ ಗಜಸಾಲು, ಎರಡನೇ ಪಟ್ಟಿಕೆಯಲ್ಲಿ ಅಶ್ವರೋಹಿಗಳನ್ನು ಮೂರನೇಯ ಪಟ್ಟಿಕೆಯಲ್ಲಿ ಬಳ್ಳಿಸುರುಳಿಗಳ ಕೆತ್ತನೆ ಕಂಡುಬರುತ್ತದೆ. ನಾಲ್ಕನೇಯ ಪಟ್ಟಿಕೆಯಲ್ಲಿ ರಾಮಾಯಣ, ಮಹಾಭಾರತದ ದೃಶ್ಯಾವಳಿಗಳನ್ನು ಕೆತ್ತಬೇಕಾಗಿತ್ತು. ಆದರೆ ನಾಲ್ಕನೆಯ ಪಟ್ಟಿಕೆಯನ್ನು ಕೆತ್ತನೆ ಮಾಡದೆ ಹಾಗೆ ಉಳಿಸಲಾಗಿದೆ. ಅದರ ಮೇಲಿನ ಪಟ್ಟಿಕೆಯಲ್ಲಿ ಮಕರ ನಂತರದ ಪಟ್ಟಿಕೆಯಲ್ಲಿ ಹಂಸ ಸಾಲುಗಳನ್ನು ಕೆತ್ತನೆ ಮಾಡಲಾಗಿದೆ.[79] **(ಚಿ.ಸಂ.34)**

**ಭಿತ್ತಿ**–ಈ ದೇವಾಲಯದ ಭಿತ್ತಿಯ ಸುತ್ತಲೂ ದೇವ ದೇವತೆಗಳ ಶಿಲ್ಪಗಳನ್ನು ಬಿಡಿಸಿ ಭಿತ್ತಿಯನ್ನು ಸುಂದರವಾಗಿ ಕಾಣುವಂತೆ ಮಾಡಲಾಗಿದೆ. **(ಚಿ.ಸಂ.35)** ಈ ಶಿಲ್ಪಗಳ ವರ್ಣನೆಯನ್ನು ಈ ಕೆಳಗಿನಂತೆ ವಿವರಿಸಲಾಗಿದೆ. ಈ ಭಿತ್ತಿಯಲ್ಲಿರುವ ಎಲ್ಲಾ ಶಿಲ್ಪಗಳ ತಲೆ ಮೇಲೆ ಕಮಾನಿನಾಕಾರದ ಅರ್ಧ ಚಂದ್ರಾಕೃತಿಯ ಭಾಗದಲ್ಲಿ ಸುಂದರವಾಗಿ ಸೂಕ್ಷ್ಮಕೆತ್ತನೆ ಮಾಡಲಾಗಿರುವ ಅಲಂಕರಣದ ಕೆತ್ತನೆ ಮಾಡಲಾಗಿದೆ.

**ಲಕ್ಷ್ಮೀ**–ಜನರು ವಿದ್ಯಾದೇವತೆ ಸರಸ್ವತಿಗಿಂತ ಐಶ್ವರ್ಯ ದೇವತೆಯಾದ ಲಕ್ಷ್ಮೀಯನ್ನು ಆರಾಧಿಸುವುದೇ ಹೆಚ್ಚು. ಲೋಕದ ಸುಸ್ಥಿತಿಗೆ ಕಾರಣನಾದ ವಿಷ್ಣುವಿನ ಪತ್ನಿ ಹಾಗೂ ಶಕ್ತಿ ಆಗಿರುವುದರಿಂದ ಅವಳು ಶ್ರೀಮಂತಿಕೆ ಮತ್ತು ಸಮೃದ್ಧಿಯನ್ನು ಪ್ರತಿನಿಧಿಸುವ ದೇವತೆ, ಪ್ರಪಂಚದ ಸುಸ್ಥಿತಿಗೆ ಈ ಎರಡು ಸಮನಾವಾಗಿ ಅಗತ್ಯವಾಗಿವೆ.

ವೇದಗಳಲ್ಲಿ ಚಿತ್ರಿತವಾಗಿರುವ ಶ್ರೀ ಅಥವಾ ಲಕ್ಷ್ಮೀ ಐಶ್ವರ್ಯ ಮತ್ತು ಅದೃಷ್ಟದ ಶಕ್ತಿ ಮತ್ತು ಸೌಂದರ್ಯ ದೇವತೆ. [೮೦] ಈ ದೇವಿಯು ತ್ರಿಭಂಗಿಯಲ್ಲಿ ನಿಂತಿದ್ದು ಕೈಗಳಲ್ಲಿ ಫಲ ಮತ್ತು ಕಮಲದ ಪುಷ್ಪವನ್ನು ಹಿಡಿದುಕೊಂಡಿದ್ದಾಳೆ. ಮೈಮೇಲೆ ಬಿಡಿಸಲಾಗಿರುವ ಆಭರಣಗಳು ಸುಂದರವಾಗಿದೆ.

**ಡೋಲು ನುಡಿಸುವವನು**–ಡೋಲನ್ನು ತನ್ನ ತೊಡೆಯ ಮೇಲೆ ಇರಿಸಿಕೊಂಡು ಡೋಲನ್ನು ಎಡಗೈಯಲ್ಲಿ ಹಿಡಿದಿದ್ದಾನೆ. ಬಲಗೈಯಿಂದ ಬಾರಿಸುತ್ತಿದ್ದಾನೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ.

**ತಾಳಧಾರಿಣಿ**–ಈ ಸ್ತ್ರೀಯು ತ್ರಿಭಂಗಿಯಲ್ಲಿ ನಿಂತು ತನ್ನ ಎರಡೂ ಕೈಗಳಲ್ಲಿ ತಾಳಹಿಡಿದು ನುಡಿಸಲು ತಯಾರಾದಂತೆ ರಚಿಸಲಾಗಿದೆ. ಈ ಸ್ತ್ರೀಯ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ.

**ಡೋಲು ನುಡಿಸುವವನು**–ಇವನು ಎಡಗೈಯಲ್ಲಿ ಡೋಲನ್ನು ಹಿಡಿದು ಬಲಗೈಯಿಂದ ಡೋಲನ್ನು ಬಾರಿಸುತ್ತಿದ್ದಾನೆ. ಇವನ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿ ಮೂಡಿಬಂದಿದೆ.

**ಲಕ್ಷ್ಮೀ:**– ತ್ರಿಭಂಗಿಯಲ್ಲಿ ನಿಂತಿರುವ ಈ ದೇವಿಯು ಎಡಗೈಯಲ್ಲಿ ಫಲ ಬಲಗೈಯಲ್ಲಿ ಹಿಡಿದಿದ್ದ ಪದ್ಮ ಮುರಿದುಹೋಗಿದೆ. ಈ ದೇವಿಯ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ.

**ಮತ್ಸ್ಯಭೇದ ಅರ್ಜುನ**–ಅರ್ಜುನನು ಎಡಗೈಯಲ್ಲಿ ಬಿಲ್ಲನ್ನು ಹಿಡಿದು ಮೇಲಕ್ಕೆ ಎತ್ತಿಹಿಡಿದಿದ್ದಾನೆ. ಬಲಗೈಯಲ್ಲಿ ಮೇಲೆ ಕಟ್ಟಲಾಗಿರುವ ಮೀನಿನ ಕಣ್ಣಿಗೆ ಬಾಣ ಬಿಟ್ಟಿದ್ದಾನೆ. ಕೆಳಗೆ ಎಣ್ಣೆಯ ಬಟ್ಟಲು ಇದೆ. ಈ ದೇವನ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ.

**ಬಳ್ಳಿಸುರುಳಿ**–ಈ ಬಳ್ಳಿ ಸುರುಳಿಯಲ್ಲಿ ಸೂಕ್ಷ್ಮ ಕೆತ್ತನೆ ಮಾಡಿ ಬಿಡಿಸಲಾಗಿರುವ ಕಲಾತ್ಮಕ ಶಿಲ್ಪಗಳಿವೆ. ಸುರುಳಿಗಳ ಒಳಗೆ ವೀರಯೋಧನು ಕತ್ತಿ ಗುರಾಣಿ ಹಿಡಿದು ನಿಂತಿದ್ದಾನೆ

ಮತ್ತೊಂದು ಸುರುಳಿಯಲ್ಲಿ ಶಾರ್ದೂಲವನ್ನು ಬಿಡಿಸಲಾಗಿದೆ. ಈ ಶಿಲ್ಪದ ದೇಹ ಸಿಂಹದ್ದಾಗಿದ್ದು ಶಿರದ ಭಾಗ ಆನೆಯ ತಲೆ ಬಿಡಿಸಲಾಗಿದೆ. ಮೇಲೆ ಬಳ್ಳಿಸುರುಳಿ ಬಿಡಿಸಲಾಗಿದೆ.

**ಸ್ತ್ರೀಶಿಲ್ಪ**:– ಈ ದೇವಿಯು ತ್ರಿಭಂಗಿಯಲ್ಲಿ ನಿಂತಿದ್ದಾಳೆ. ಬಲಗೈಯಲ್ಲಿ ಫಲ ಎಡಗೈಯಲ್ಲಿ ಕಮಲ ಹಿಡಿದುಕೊಂಡಿದ್ದಾಳೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣಗಳು ಸುಂದರವಾಗಿದೆ.

**ಗಜಾಸುರ ಸಂಹಾರ**–ನಂದಿಪೀಠದ ಮೇಲೆ ಗಜಾಸುರನನ್ನು ಸಂಹಾರ ಮಾಡಿ ಅವನ ದೇಹದ ಒಳಗೆ ಶಿವನು ತಾಂಡವ ನೃತ್ಯದಲ್ಲಿ ತೊಡಗಿದ್ದಾನೆ. ಅಷ್ಟಭುಜವನ್ನು ಹೊಂದಿರುವ ಈ ದೇವನು ಎರಡು ಕೈಗಳನ್ನು ಮೇಲಕ್ಕೆ ಎತ್ತಿ ಹಿಡಿದಿದ್ದಾನೆ. ಎರಡು ಕೈಗಳು ವರದ ಹಸ್ತ ಮತ್ತು ಅಭಯ ಹಸ್ತ ಹೊಂದಿದ್ದಾನೆ. ಮತ್ತೆರಡು ಕೈಗಳಲ್ಲಿ ತ್ರಿಶೂಲ, ಢಮರು ಹಿಡಿದಿದ್ದಾನೆ. ಒಂದು ಕೈ ಕೆಳಗೆ ಮತ್ತೊಂದು ಕೈ ಸ್ವರ್ಗಲೋಕದ ಕಡೆ ತಿರುಗಿದೆ. ಆನೆಯ ಎರಡು ಕಾಲು ಮೇಲಿವೆ, ತಲೆ ಕೆಳಗಿದೆ. ಈ ದೇವನ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣಗಳು ಸುಂದರವಾಗಿದೆ.

**ವಿಷ್ಣು**:–ಸಮಭಂಗಿಯಲ್ಲಿ ನಿಂತಿರುವ ಈ ದೇವನು ಚತುರ್ಭುಜ ಹೊಂದಿದ್ದು ಕೈಗಳಲ್ಲಿ ಶಂಖ, ಚಕ್ರ, ಗಧಾ ಪದ್ಮವನ್ನು ಹಿಡಿದುಕೊಂಡಿದ್ದಾನೆ. ಈ ಶಿಲ್ಪವನ್ನು ಪರಿಪೂರ್ಣವಾಗಿ ಕೆತ್ತನೆ ಮಾಡದೆ ಅರ್ಧಕ್ಕೆ ನಿಲ್ಲಿಸಲಾಗಿದೆ.

**ಶಿವ**:– ಸಮಭಂಗಿಯಲ್ಲಿರುವ ಈ ದೇವನು ಚತುರ್ಭುಜ ಹೊಂದಿದ್ದು ಕೈಗಳಲ್ಲಿ ತ್ರಿಶೂಲ, ಡಮರು, ಅಭಯಹಸ್ತ ಹೊಂದಿದ್ದು ಒಂದು ಕೈ ತೃಟಿತವಾಗಿದೆ.

**ಲಕ್ಷ್ಮೀ**:–ಈ ದೇವಿಯು ತ್ರಿಭಂಗಿಯಲ್ಲಿ ನಿಂತಿದ್ದಾಳೆ. ತನ್ನ ಎರಡೂ ಕೈಗಳಲ್ಲಿ ಕಮಲದ ಮೊಗ್ಗು ಫಲವನ್ನು ಹಿಡಿದುಕೊಂಡಿದ್ದಾಳೆ.

**ಶಿವ**–ಸಮಭಂಗಿಯಲ್ಲಿ ನಿಂತಿರುವ ಈ ದೇವನು ಚತುರ್ಭುಜವನ್ನು ಹೊಂದಿದ್ದಾನೆ. ಕೈಗಳಲ್ಲಿ ತ್ರೀಶೂಲ, ಢಮರು, ಫಲ ಮತ್ತು ಚಾಮರ ಹಿಡಿದಿರುವ ದೇವಿಯರಿದ್ದಾರೆ.

**ಪಾರ್ವತಿ**–ತ್ರಿಭಂಗಿಯಲ್ಲಿ ನಿಂತಿರುವ ಈ ದೇವಿಯು ಚರ್ತುಭುಜ ಹೊಂದಿದ್ದು ಕೈಗಳಲ್ಲಿ ತ್ರಿಶೂಲ, ಢಮರು, ಅಭಯ ಹಸ್ತ, ಫಲವನ್ನು ಹಿಡಿದುಕೊಂಡಿದ್ದಾಳೆ. ಈ ದೇವಿಯನ್ನು ಸಂಪೂರ್ಣವಾಗಿ ಕೆತ್ತನೆ ಮಾಡಿಲ್ಲ.

**ಸ್ಥಾನಿಕ ಬ್ರಹ್ಮದೇವ**–ಗಡ್ಡಧಾರಿ ಬ್ರಹ್ಮನು ಸಮಭಂಗಿಯಲ್ಲಿ ನಿಂತಿದ್ದಾನೆ. ಚರ್ತುಭುಜ ಹೊಂದಿರುವ ಈ ದೇವನು ಕಮಲ ಪುಷ್ಪಗಳನ್ನು ಎಡಗೈಯಲ್ಲಿ ದಂಡವೊಂದನ್ನು ಹಿಡಿದು

ನಿಂತಿದ್ದಾನೆ. ಈ ದೇವನ ಕೆಳಗೆ ದೇವಿಯರು ನಿಂತಿದ್ದಾರೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ.

**ಎರಡು ಕಪಿಗಳು**–ಹಣ್ಣಿಗಾಗಿ ಕಿತ್ತಾಡುತ್ತಿವೆ ಎರಡು ಹಣ್ಣಿನ ಮೇಲೆ ಕೈಗಳನ್ನು ಇರಿಸಿ ಹೋರಾಡುತ್ತಿರುವ ದೃಶ್ಯ ಸಹಜವಾಗಿ ಮೂಡಿಬಂದಿದೆ.

**ಫಲವನ್ನು ಹಿಡಿದು ನಿಂತಿರುವ ಸ್ತ್ರೀ**–ದೇವಿಯ ಎಡಗೈಯಲ್ಲಿ ಕಮಲ, ಬಲಗೈಯಲ್ಲಿ ಫಲವನ್ನು ಹಿಡಿದು ತ್ರಿಭಂಗಿಯಲ್ಲಿ ನಿಂತಿದ್ದಾಳೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿ ಮೂಡಿಬಂದಿದೆ.

**ಸದಾಶಿವ**–ತ್ರಿಮೂರ್ತಿಗಳಲ್ಲಿ ಶಿವನು ಮೂರನೆಯವನು. ಇವನನ್ನು ಮಹೇಶ, ಮಹದೇವ, ರುದ್ರ, ಲಯಕರ್ತ ಮುಂತಾದ ಹೆಸರುಗಳಿಂದ ಕರೆಯಲಾಗುತ್ತದೆ. ಶಿವ ಎಂಬ ಪದದ ಅರ್ಥವೇ ಒಳ್ಳೆಯ ದೇವರು ಎಂದಾಗುತ್ತದೆ. ಈ ದೇವರು ಸಾಮಾನ್ಯವಾಗಿ ಸರ್ವವಿಚಾರಗಳಲ್ಲೂ ವಿಶಿಷ್ಟತೆಯಿಂದಲೇ ಕೂಡಿದವನೆನಿಸಿದ್ದಾನೆ. ವಾಸಿಸುವುದು ಸಶ್ಮಾನದಲ್ಲಿ ಉಡುಪು, ಮೃಗಚರ್ಮ, ಕೊರಳಲ್ಲಿ ಸರ್ಪ, ಜಟೆಯಲ್ಲಿ ಪವಿತ್ರ ಗಂಗೆ, ಆಯುಧ ತ್ರಿಶೂಲ, ವಾಹನ ನಂದಿ, ಭಿಕ್ಷಾಪಾತ್ರೆ ಮಾನವನ ಕಪಾಲವಾಗಿರುತ್ತದೆ. [81] ಚರ್ತುಭುಜವನ್ನು ಹೊಂದಿರುವ ಶಿವನು ಸಮಭಂಗಿಯಲ್ಲಿ ನಿಂತಿದ್ದಾನೆ. ಕೈಗಳಲ್ಲಿ ತ್ರಿಶೂಲ, ಡಮರು ಫಲ ಮತ್ತು ಅಭಯ ಹಸ್ತವನ್ನು ಹೊಂದಿದ್ದಾನೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ. ಎಡ ಮತ್ತು ಬಲಭಾಗದಲ್ಲಿ ಬ್ರಹ್ಮ ಮತ್ತು ವಿಷ್ಣು ನಿಂತಿದ್ದಾರೆ. ಪೀಠದಲ್ಲಿ ನಂದಿ ಶಿಲ್ಪ ಇದೆ.

**ವಿಷ್ಣು**–ತ್ರಿಭಂಗಿಯಲ್ಲಿ ನಿಂತಿರುವ ಈ ದೇವನು ತನ್ನ ಕೈಗಳಲ್ಲಿ ಪದ್ಮ ಪುಷ್ಪವನ್ನು ಮತ್ತು ಅಭಯ ಹಸ್ತವನ್ನು ಹೊಂದಿದ್ದಾನೆ. ಈ ಮೂರ್ತಿಯನ್ನು ಪರಿಪೂರ್ಣವಾಗಿ ಕೆತ್ತನೆ ಮಾಡಿಲ್ಲ.

**ಶಿವಪಾರ್ವತಿ**–ಶಿವನು ತನ್ನ ವಾಹನವಾದ ನಂದಿಯ ಮೇಲೆ ತನ್ನ ಪತ್ನಿಯೊಡನೆ ಕುಳಿತು ಪ್ರಯಾಣ ಮಾಡುತ್ತಿರುವಂತೆ ರಚಿಸಲಾಗಿದೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ.

**ಫಲವನ್ನು ಹಿಡಿದು ನಿಂತಿರುವ ಸ್ತ್ರೀ**–ಈ ಸ್ತ್ರೀಯು ತ್ರಿಭಂಗಿಯಲ್ಲಿ ನಿಂತಿದ್ದು ಕೈಗಳಲ್ಲಿ ಪದ್ಮ ಮತ್ತು ಫಲವನ್ನು ಹಿಡಿದುಕೊಂಡಿದ್ದಾಳೆ. ಮೈಮೇಲೆ ಸುಂದರವಾಗಿ ಬಿಡಿಸಿರುವ ವಸ್ತ್ರಾಭರಣಗಳಿವೆ.

**ಚಂದ್ರಶೇಖರ**:–ತ್ರಿಭಂಗಿಯಲ್ಲಿ ನಿಂತಿರುವ ಈ ದೇವನು ಚರ್ತುಭುಜವನ್ನು ಹೊಂದಿರುವನು. ಕೈಗಳಲ್ಲಿ ಢಮರು, ಕೊಡಲಿ ಹಿಡಿದು ನಿಂತಿದ್ದಾನೆ. ಇಕ್ಕೆಲಗಳಲ್ಲಿ ದೇವಿಯರು ಫಲ ಮತ್ತು

ಚಾಮರ ಹಿಡಿದು ನಿಂತಿದ್ದಾರೆ. ಮೇಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿ ಮೂಡಿಬಂದಿದೆ.

**ಫಲ ಮತ್ತು ಕಮಲ ಹಿಡಿದ ಸ್ತ್ರೀ**–ತ್ರಿಭಂಗಿಯಲ್ಲಿ ನಿಂತಿರುವ ಈ ದೇವಿಯು ಫಲ ಮತ್ತು ಪದ್ಮ ಹಿಡಿದು ನಿಂತಿದ್ದಾಳೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣಗಳು ಸುಂದರವಾಗಿ ಮೂಡಿಬಂದಿದೆ.

**ನೃತ್ಯಭಂಗಿಯಲ್ಲಿ ನಿಂತಿರುವ ದೇವಿ**–ನೃತ್ಯ ಭಂಗಿಯಲ್ಲಿ ನಿಂತಿರುವ ಈ ದೇವಿಯು ಸ್ವರ್ಗ ಹಸ್ತ ಬಳೆ ಸ್ಪರ್ಷ ಮುದ್ರೆಯಲ್ಲಿ ಎರಡು ಕೈಗಳನ್ನು ಮತ್ತು ಇನ್ನೆರಡು ಕೈಗಳನ್ನು ಒಂದಕ್ಕೊಂದು ಹಿಡಿದು ನಿಂತಿದ್ದಾಳೆ.

**ಭೈರವ**–ತ್ರಿಭಂಗಿಯಲ್ಲಿ ನಿಂತಿರುವ ಈ ದೇವನು ಚರ್ತುಭುಜ ಹೊಂದಿದ್ದಾನೆ. ಕೈಗಳಲ್ಲಿ ತ್ರಿಶೂಲ, ಢಮರು, ಕತ್ತಿ, ರುಂಡಮಾಲೆ ಹಿಡಿದಿದ್ದಾನೆ. ರುಂಡವನ್ನು ಶ್ವಾನವೊಂದು ನೆಕ್ಕುತ್ತಿದೆ. ಇಕ್ಕೆಲದಲ್ಲಿ ಸ್ತ್ರೀಯು ಫಲ ಚಾಮರ ಹಿಡಿದು ನಿಂತಿದ್ದಾಳೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ.

**ಫಲ ಮತ್ತು ಪುಷ್ಪ ಹಿಡಿದ ಸ್ತ್ರೀ**–ತ್ರಿಭಂಗಿಯಲ್ಲಿ ನಿಂತಿರುವ ಈ ಸ್ತ್ರೀಯರು ಫಲ ಮತ್ತು ಪದ್ಮ ಪುಷ್ಪ ಹಿಡಿದುಕೊಂಡಿದ್ದಾರೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ.

**ಚಾಮರಧಾರಿಣಿ**–ತ್ರಿಭಂಗಿಯಲ್ಲಿ ನಿಂತಿರುವ ಚಾಮರಧಾರಿಣಿ ಕೈಗಳಲ್ಲಿ ಚಾಮರ ಮತ್ತು ಫಲವನ್ನು ಹಿಡಿದುಕೊಂಡಿದ್ದಾಳೆ ಮೈಮೇಲೆ ಸುಂದರವಾಗಿ ಬಿಡಿಸಲಾಗಿರುವ ವಸ್ತ್ರಾಭರಣಗಳಿವೆ.

**ತ್ರಿಪುರಾರಿ**–ತ್ರಿಭಂಗಿಯಲ್ಲಿ ನಿಂತಿರುವ ಈ ದೇವನು ನಾಲ್ಕು ಕೈಗಳನ್ನು ಹೊಂದಿದ್ದು, ಕೈಗಳಲ್ಲಿ ಕೊಡಲಿ, ಜಿಂಕೆ, ಬಿಲ್ಲು, ಬಾಣವನ್ನು ಹಿಡಿದುಕೊಂಡಿದ್ದಾನೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿ ಎಡಭಾಗದಲ್ಲಿ ಫಲ ಮತ್ತು ಚಾಮರ ಹಿಡಿದು ನಿಂತಿರುವ ಸ್ತ್ರೀ ಇದ್ದಾಳೆ.

**ದುರ್ಗಾದೇವಿ**–ಸುಖಾಸನದಲ್ಲಿ ಕುಳಿತಿರುವ ಈ ದೇವಿಯು ತನ್ನ ಬಲಗಾಲನ್ನು ಮನುಷ್ಯನ ಬೆನ್ನ ಮೇಲೆ ಇರಿಸಿದ್ದಾಳೆ. ಚರ್ತುಭುಜವನ್ನು ಹೊಂದಿದ್ದು ಕೈಗಳಲ್ಲಿ ತ್ರಿಶೂಲ, ಢಮರು, ಕತ್ತಿ, ರುಂಡವನ್ನು ಹಿಡಿದುಕೊಂಡಿದ್ದಾಳೆ. ಮೇಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿ ಮೂಡಿಬಂದಿದೆ.

**ಪಾರ್ವತಿ**–ಈ ದೇವಿಯು ತ್ರಿಭಂಗಿಯಲ್ಲಿ ನಿಂತಿದ್ದು ತನ್ನ ಎರಡೂ ಕೈಗಳಲ್ಲಿ ತ್ರಿಶೂಲ ಮತ್ತು ಢಮರುಗಳನ್ನು ಹಿಡಿದಿದ್ದಾಳೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಆಕರ್ಷಕವಾಗಿದೆ.

**ಲಕ್ಷ್ಮೀ**–ತ್ರಿಭಂಗಿಯಲ್ಲಿ ನಿಂತಿರುವ ಈ ದೇವಿಯು ತನ್ನ ಕೈಗಳಲ್ಲಿ ಕಳಸ ಮತ್ತು ಪದ್ಮವನ್ನು ಹಿಡಿದುಕೊಂಡಿದ್ದಾಳೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ.

**ಹರಿಹರ**–ಈ ಶಿಲ್ಪವನ್ನು ಶಿವ ಮತ್ತು ವಿಷ್ಣುವಿನ ಸಮ್ಮಿಲನದ ರೀತಿಯಲ್ಲಿ ರಚಿಸಲಾಗಿದೆ. ಬಲಭಾಗದಲ್ಲಿ ತ್ರಿಶೂಲವನ್ನು ಹಿಡಿದ ಶಿವನ ರೂಪ ಎಡಭಾಗದಲ್ಲಿ ಕಮಲವನ್ನು ಹಿಡಿದಿರುವ ವಿಷ್ಣುವಿನ ರೂಪವನ್ನು ಮೈಗೂಡಿಸಿ ಈ ಮೂರ್ತಿಶಿಲ್ಪವನ್ನು ಬಿಡಿಸಲಾಗಿದೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ.

**ಪಶ್ಚಿಮದ ಭಿತ್ತಿ**

**ನಿರುತಿ**:–ಈ ದೇವನು ತನ್ನ ವಾಹನವಾದ ಮನುಷ್ಯನ ಭುಜದ ಮೇಲೆ ತನ್ನ ಪತ್ನಿ ಸಮೇತನಾಗಿ ಕುಳಿತಿದ್ದಾನೆ. ಬಲಗೈಯಲ್ಲಿ ಕತ್ತಿಯನ್ನು ಹಿಡಿದುಕೊಂಡಿದ್ದಾನೆ. ಈ ದೇವನ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ.

**ಅಂಕುಶ ಮತ್ತು ಕಳಸವನ್ನು ಹಿಡಿದು ನಿಂತಿರುವ ಲಕ್ಷ್ಮೀ**:–ಈ ದೇವಿಯು ತ್ರಿಭಂಗಿಯಲ್ಲಿ ನಿಂತಿದ್ದು ತನ್ನ ಎರಡೂ ಕೈಗಳಲ್ಲಿ ಅಂಕುಶ ಮತ್ತು ಕಳಸವನ್ನು ಹಿಡಿದುಕೊಂಡಿದ್ದಾಳೆ. ಮೈಮೇಲೆ ಸುಂದರವಾಗಿ ಬಿಡಿಸಲಾಗಿರುವ ವಸ್ತ್ರಾಭರಣಗಳಿವೆ.

**ಗಣಪತಿ**–ಮೂಷಿಕ ಪೀಠದ ಮೇಲೆ ಆಸೀನನಾಗಿರುವ ಗಣಪತಿಯು ಚತುರ್ಭುಜವನ್ನು ಹೊಂದಿದ್ದು ಕೈಗಳಲ್ಲಿ ಕೊಡಲಿ, ಗಧೆ, ಫಲ ಮತ್ತು ಮುರಿದ ದಂತವನ್ನು ಹಿಡಿದುಕೊಂಡಿದ್ದಾನೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣಗಳು ಆಕರ್ಷಕವಾಗಿವೆ.

**ನೃತ್ಯಪಾರ್ವತಿ**:–ನೃತ್ಯಭಂಗಿಯಲ್ಲಿ ನಿಂತಿರುವ ಈ ದೇವಿಯು ಚತುರ್ಭುಜ ಹೊಂದಿದ್ದು ಕೈಗಳಲ್ಲಿ ಕೊಡಲಿ, ಸ್ವರ್ಗಾಸ್ತ, ಭೂಮಿಸ್ಪರ್ಶ, ವರದಹಸ್ತ ಹೊಂದಿದ್ದಾಳೆ. ಮೈಮೇಲೆ ವಿವಿಧ ಬಗೆಯ ವಸ್ತ್ರಾಭರಣಗಳನ್ನು ಬಿಡಿಸಲಾಗಿದೆ. ಇಕ್ಕೆಲಗಳಲ್ಲಿ ಸಂಗೀತಗಾರರು ತಬಲವನ್ನು ಹಿಡಿದು ನುಡಿಸುತ್ತಿದ್ದಾರೆ.

**ನೃತ್ಯಲಕ್ಷ್ಮೀ**:–ಈ ದೇವಿಯು ನೃತ್ಯಭಂಗಿಯಲ್ಲಿ ನಿಂತಿದ್ದಾಳೆ. ಕೈಗಳಲ್ಲಿ ಶಂಖ, ಚಕ್ರ, ಪದ್ಮ, ಪುಷ್ಪ ಹಿಡಿದು ಕೊಂಡಿದ್ದಾಳೆ. ಮೈಮೇಲೆ ವಿವಿಧ ವಸ್ತ್ರಾಭರಣಗಳಿದ್ದು ಸುಂದರವಾಗಿದೆ.

**ವರುಣದೇವ**:–ವ್ಯಾಳದ ಮೇಲೆ ಆಸೀನರಾಗಿ ವರುಣದೇವನು ತನ್ನ ಪತ್ನಿಯೊಡನೆ ಹೊರಟಿದ್ದಾನೆ. ವರುಣನು ಬಿಲ್ಲು ಬಾಣವನ್ನು ಹಿಡಿದುಕೊಂಡಿದ್ದಾನೆ. ದೇವಿಯು ಫಲವನ್ನು ಹಿಡಿದುಕೊಂಡಿದ್ದಾಳೆ. ಇವರ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ.

**ಸ್ತ್ರೀ**:–ಈ ಸ್ತ್ರೀಯು ತ್ರಿಭಂಗಿಯಲ್ಲಿ ನಿಂತಿದ್ದು ತನ್ನ ಕೈಗಳಲ್ಲಿ ಫಲ ಮತ್ತು ಪದ್ಮವನ್ನು ಹಿಡಿದುಕೊಂಡಿದ್ದಾಳೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ.

**ಶಿವ ಪಾರ್ವತಿಯರು**:– ಸುಖಾಸನದಲ್ಲಿ ಕುಳಿತಿರುವ ಈ ದೇವನು ತನ್ನ ಪತ್ನಿಯನ್ನು ಎಡತೊಡೆಯ ಮೇಲೆ ಕೂರಿಸಿಕೊಂಡಿದ್ದಾನೆ. ಕೈಗಳಲ್ಲಿ ಆಯುಧವನ್ನು ಹಿಡಿದುಕೊಂಡಿದ್ದಾನೆ (ಗಂಡುಗೊಡಲಿ ರೀತಿಯ) ಮುಖ ಭಗ್ನಗೊಂಡಿದೆ.

**ಭಿಕ್ಷಾಟನಾ ಶಿವ**:–ತ್ರಿಭಂಗಿಯಲ್ಲಿ ನಿಂತಿರುವ ಈ ದೇವನು ಕೈಗಳಲ್ಲಿ ತ್ರಿಶೂಲ, ಢಮರು, ಭಿಕ್ಷಾಪಾತ್ರೆ ಮತ್ತು ಗಧೆಯನ್ನು ಹಿಡಿದುಕೊಂಡಿದ್ದಾನೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ.

**ಸ್ತ್ರೀ**:–ತ್ರಿಭಂಗಿಯಲ್ಲಿ ನಿಂತಿರುವ ಈ ದೇವಿಯು ಬಲಗೈಯಲ್ಲಿ ಫಲ, ಎಡಗೈಯಲ್ಲಿ ಪದ್ಮಪುಷ್ಪ ಹಿಡಿದುಕೊಂಡಿದ್ದಾಳೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ.

**ಸರಸ್ವತಿ**:– ಈ ದೇವಿಯು ಪದ್ಮಾಸನದಲ್ಲಿ ಕುಳಿತಿದ್ದು ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ.

**ಷಣ್ಮುಖ**–ನವಿಲಿನ ಮೇಲೆ ಸುಖಾಸನದಲ್ಲಿ ಕುಳಿತಿರುವ ಷಣ್ಮುಖನು ಚತುರ್ಭುಜ ಹೊಂದಿದ್ದು ಕೈಗಳಲ್ಲಿ ಫಲ, ಜಪಮಣಿ, ಪಾಶ, ದಂಡ ಹಿಡಿದಿದ್ದಾನೆ. ಮೂರು ಮುಖ ಹೊಂದಿರುವ ಈ ದೇವನ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ.

**ಚಂದ್ರಶೇಖರ**:–ತ್ರಿಭಂಗಿಯಲ್ಲಿ ನಿಂತಿರುವ ಈ ದೇವನು ತನ್ನ ಎರಡೂ ಕೈಗಳನ್ನು ಹೊಂದಿದ್ದು ಕೈಗಳಲ್ಲಿ ಗಂಡುಗೊಡಲಿ, ಎಡಗೈಯಲ್ಲಿ ಜಿಂಕೆಯನ್ನು ಹಿಡಿದುಕೊಂಡಿದ್ದಾನೆ. ಮೈಮೇಲೆ ಸುಂದರವಾದ ವಸ್ತ್ರಾಭರಣಗಳಿವೆ.

**ಸ್ತ್ರೀ**:–ತ್ರಿಭಂಗಿಯಲ್ಲಿ ನಿಂತಿರುವ ಈ ದೇವಿಯು ಫಲ ಮತ್ತು ಪದ್ಮವನ್ನು ಹಿಡಿದುಕೊಂಡಿದ್ದಾಳೆ. ಮೈಮೇಲೆ ಸುಂದರವಾದ ವಸ್ತ್ರಾಭರಣಗಳನ್ನು ಬಿಡಿಸಲಾಗಿದೆ.

**ಸ್ತ್ರೀ**:–ತ್ರಿಭಂಗಿಯಲ್ಲಿ ನಿಂತಿರುವ ಈ ಸ್ತ್ರೀಯು ಬಲಗೈಯಲ್ಲಿ ಪದ್ಮ ಹಿಡಿದು ಎಡಗೈಯನ್ನು ಕೆಳಗಿಳಿಸಿದ್ದಾಳೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ.

**ಕುಬೇರ**:– ಕುಬೇರ ದೇವನನ್ನು ಬಿಡಿಸಲು ಜೋಡಿಸಲಾಗಿದ್ದ ಕಲ್ಲನ್ನು ಯಾವುದೇ ರೀತಿ ಕೆತ್ತನೆ ಮಾಡದೆ ಹಾಗೆ ಉಳಿಸಲಾಗಿದೆ.

**ಸರಸ್ವತಿ**:–ಪದ್ಮಾಸನದಲ್ಲಿ ಕುಳಿತಿರುವ ಈ ದೇವಿಯು ಚತುರ್ಭುಜವನ್ನು ಹೊಂದಿದ್ದು ಕೈಗಳಲ್ಲಿ ಪಾಶ, ಅಂಕುಶ, ಪುಸ್ತಕ ಮತ್ತು ಅಕ್ಷರಮಾಲೆಯನ್ನು ಹಿಡಿದಿದ್ದಾಳೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ.

**ಕಪಿಲ ಮೂರ್ತಿ**:– ಈ ದೇವನು ಕೈಗಳಲ್ಲಿ ಕಪಿಲಪಾತ್ರೆ ಇಡಿದಿದ್ದಾನೆ. (ಅಪೂರ್ಣ)

**ಶಿವ**:– ನಂದಿಪೀಠದ ಮೇಲೆ ನಿಂತಿರುವ ಈ ದೇವನು ಚತುರ್ಭುಜ ಹೊಂದಿದ್ದು ಕೈಗಳಲ್ಲಿ ತ್ರಿಶೂಲ, ಢಮರು ಅಗ್ನಿ, ದಂಡವನ್ನು ಹಿಡಿದುಕೊಂಡಿದ್ದಾನೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣಗಳು ಸುಂದರವಾಗಿವೆ.

**ಮೋಹಿನಿ**:–ನಗ್ನವಾಗಿ ನಿಂತಿರುವ ಈ ಮೋಹಿನಿಯು ತನ್ನ ಎರಡೂ ಕೈಗಳಲ್ಲಿ ಸರ್ಪವನ್ನು ಹಿಡಿದು ಮೇಲಕ್ಕೆ ಎತ್ತಿ ಹಿಡಿದಿದ್ದಾಳೆ. ಕಾಲಿಗೆ ಪಾದರಕ್ಷೆ ಧರಿಸಿದ್ದಾಳೆ. ಎರಡೂ ಮೊಣಕಾಲಿನ ಮೇಲೆ ಸರ್ಪ ಸುತ್ತಿಕೊಂಡಿದೆ.

**ಈಶಾನ**:–ನಂದಿಯ ಮೇಲೆ ಕುಳಿತು ಹೊರಟಂತೆ ಬಿಡಿಸಲಾಗಿರುವ ಈ ಶಿವನು ಕೈಯಲ್ಲಿ ತ್ರಿಶೂಲ, ಬಲಗೈಯಲ್ಲಿ ಹಿಡಿದ ಆಯುಧ ಮುರಿದಿದೆ. ನಂದಿಯು ತನ್ನ ಕತ್ತನ್ನು ತಿರುಗಿಸಿಕೊಂಡಿದೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಗೆಜ್ಜೆ, ಗಂಟೆಹಾರಗಳು ಸುಂದರವಾಗಿದೆ.

**ಶಿವ**:–ಈ ದೇವನುತ್ರಿಭಂಗಿಯಲ್ಲಿನಿಂತಿದ್ದು ಚತುರ್ಭುಜವನ್ನು ಹೊಂದಿದ್ದಾನೆ. ಮುಂದಿನ ಎರಡು ಕೈ ಮುರಿದು ಹೋಗಿದೆ. ಹಿಂದಿನ ಕೈಗಳಲ್ಲಿ ದಂಡ, ಮತ್ತೊಂದು ಕೈಗಳಲ್ಲಿ ಅಧಿಕೃತವಾದ (ಅಧಿಕಾರ) ದಂಡವನ್ನು ಹಿಡಿದಿದ್ದಾನೆ. ಈ ಪುರುಷನು ತನ್ನ ಎರಡೂ ಕೈಗಳಲ್ಲಿ ಪುಷ್ಪಮಾಲೆ ಹಿಡಿದು ನಿಂತಿದ್ದಾನೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಅಪರಿಪೂರ್ಣವಾಗಿದೆ.

**ಪಾರ್ವತಿ**–ಅಪರಿಪೂರ್ಣವಾಗಿರುವ ಕೆತ್ತನೆಯಿಂದ ಕೂಡಿದ ಈ ದೇವಿಯ ಶಿಲ್ಪವನ್ನು ತಕ್ಕಮಟ್ಟಿಗೆ ಮಾತ್ರ ಕೆತ್ತನೆ ಮಾಡಲಾಗಿದೆ. ಈ ದೇವಿಯು ತ್ರಿಭಂಗಿಯಲ್ಲಿ ನಿಂತಿದ್ದು ತ್ರಿಶೂಲ ಮತ್ತು ಢಮರು ಹಿಡಿದುಕೊಂಡಿದ್ದಾಳೆ.

**ತ್ರಿಪೂರಾರಿ**:–ತ್ರಿಭಂಗಿಯಲ್ಲಿ ನಿಂತಿರುವ ತ್ರಿಪೂರಾರಿಯು ಚತುರ್ಭುಜವನ್ನು ಹೊಂದಿದ್ದು ಕೈಗಳಲ್ಲಿ ತ್ರಿಶೂಲ, ಢಮರು, ಅಭಯಹಸ್ತ, ಫಲವನ್ನು ಹಿಡಿದುಕೊಂಡಿದ್ದಾನೆ. ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಅಪರಿಪೂರ್ಣವಾಗಿದೆ.

**ಫಲ–ಪದ್ಮ ಹಿಡಿದು ನಿಂತಿರುವ ಸ್ತ್ರೀ**:–ಈ ಸ್ತ್ರೀ ತ್ರಿಭಂಗಿಯಲ್ಲಿ ನಿಂತಿದ್ದಾಳೆ. ಮೇಮೇಲೆ ಬಿಡಿಸಲಾಗಿರುವ ಆಭರಣಗಳು ಮತ್ತು ವಸ್ತ್ರಗಳು ಪರಿಪೂರ್ಣವಾಗಿಲ್ಲ.

**ಉಮಾಮಹೇಶ್ವರ**–ಶಿವನ ವಾಹನವಾದ ನಂದಿಯ ಮೇಲೆ ಉಮಾ ಮತ್ತು ಮಹೇಶ್ವರರು ಕುಳಿತು ಚಲಿಸುತ್ತಿರುವಂತೆ ರಚಿಸಲಾಗಿದೆ. ನಂದಿಯ ಅಲಂಕರಣ ಮತ್ತು ಉಮಾಮಹೇಶ್ವರರ ವಸ್ತ್ರಾಭರಣಗಳು ಸರಳವಾಗಿದೆ.

**ಫಲ ಮತ್ತು ಪದ್ಮ ಹಿಡಿದಿರುವ ಸ್ತ್ರೀಯರು**:– ಇಬ್ಬರೂ ಸ್ತ್ರೀಯರು ಫಲವನ್ನು ಎಡಗೈ ಮತ್ತು ಬಲಗೈಯಲ್ಲಿ ಪದ್ಮಪುಷ್ಪ ಹಿಡಿದುಕೊಂಡಿದ್ದಾರೆ. ಮೈಮೇಲೆ ಸುಂದರವಾಗಿ ಬಿಡಿಸಲಾಗಿರುವ ವಸ್ತ್ರಾಭರಣಗಳಿವೆ.

**ಭೈರವ**–ತ್ರಿಭಂಗಿಯಲ್ಲಿ ನಿಂತಿರುವ ಈ ಭೈರವನು ಕತ್ತಿ ಮತ್ತು ರುಂಡಮಾಲೆಯನ್ನು ಹಿಡಿದಿದ್ದಾನೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ. ಇಕ್ಕೆಲಗಳಲ್ಲಿ ಇಬ್ಬರು ಸಹಚರರು ನಿಂತಿದ್ದಾರೆ.

**ನೃತ್ಯದುರ್ಗಾದೇವಿ**–ನೃತ್ಯಭಂಗಿಯಲ್ಲಿ ನಿಂತಿರುವ ಈ ದೇವಿಯು ಅಷ್ಟಭುಜ ಹೊಂದಿದ್ದು ಕೈಗಳಲ್ಲಿ ಢಮರು, ಪದ್ಮ, ಅಭಯಹಸ್ತ, ಭೂಸ್ಪರ್ಷ ಹಸ್ತ, ಸ್ವರ್ಗಾಸ್ತ ಹೊಂದಿರುವ ಕೈಗಳನ್ನು ಈಗ ಮಾತ್ರ ಕಾಣಬಹುದು. ಇನ್ನುಳಿದ ಮೂರು ಕೈಗಳು ತೃಟಿತವಾಗಿವೆ. ಈ ದೇವಿಯ ಇಕ್ಕೆಲಗಳಲ್ಲಿ ತಬಲ ಹಿಡಿದು ನುಡಿಸುತ್ತಿರುವ ಸಂಗೀತಗಾರರಿದ್ದಾರೆ. ಅದರೆ ಇವರ ರುಂಡಗಳು ಮುರಿದಿವೆ.

**ಶಿವ**:–ಶಿವನು ತನ್ನ ವಾಹನವಾದ ನಂದಿಯ ಮೇಲೆ ಪತ್ನಿಯನ್ನು ಕೂರಿಸಿಕೊಂಡು ಹೊರಟಂತೆ ಬಿಡಿಸಲಾಗಿರುವ ಈ ಮೂರ್ತಿಶಿಲ್ಪವನ್ನು ಪರಿಪೂರ್ಣವಾಗಿ ರಚಿಸದೇ ತಕ್ಕಮಟ್ಟಿಗೆ ರಚಿಸಲಾಗಿದೆ.

**ಮನ್ಮಥ**:–ತ್ರಿಭಂಗಿಯಲ್ಲಿ ನಿಂತಿರುವ ಈ ಮನ್ಮಥನು ಕಬ್ಬಿನ ಜಲ್ಲೆ, ಬಾಣವನ್ನು ಹಿಡಿದು ಕೊಂಡಿದ್ದಾನೆ. ಈ ದೇವನ ಪಕ್ಕದಲ್ಲಿ ಸ್ತ್ರೀಯೋರ್ವಳು ಪದ್ಮಪುಷ್ಪ ಮತ್ತು ಫಲವನ್ನು ಹಿಡಿದು ನಿಂತಿದ್ದಾಳೆ. ಮೈಮೇಲೆ ವಸ್ತ್ರಾಭರಣವಿದೆ.

**ವಿಷ್ಣು**:–ಸಮಭಂಗಿಯಲ್ಲಿ ನಿಂತಿರುವ ಈ ದೇವನು ಚರ್ತುಭುಜವನ್ನು ಹೊಂದಿದ್ದು ಕೈಗಳಲ್ಲಿ ಶಂಖ ಹಿಡಿದಿರುವ ಕೈ ಮಾತ್ರ ಈಗ ಉಳಿದಿದ್ದು ಇನ್ನುಳಿದ ಚಕ್ರ, ಗಧಾ, ಪದ್ಮ ಹಿಡಿದ ಕೈಗಳು ತೃಟಿತವಾಗಿದೆ. ಈ ದೇವನ ಇಕ್ಕೆಲಗಳಲ್ಲಿ ದೇವಿಯರಿಬ್ಬರು ನಿಂತಿದ್ದಾರೆ.

**ಗರುಡ**:–ಗರುಡ ದೇವನು ವಿಷ್ಣುವಿನ ಆಗಮನ ಕಂಡು ನಮಸ್ಕರಿಸುತ್ತಾ ಇದ್ದಾನೆ. ಗರುಡನ ಎಡಭಾಗದ ರೆಕ್ಕೆ ಮುರಿದುಹೋಗಿದೆ. ಮುಖ ಭಗ್ನವಾಗಿದೆ. ಮೈಮೇಲೆ ಬಿಡಿಸಿರುವ ವಸ್ತ್ರಗಳು ಸರಳವಾಗಿದೆ.

**ಸ್ತ್ರೀ**:–ತ್ರಿಭಂಗಿಯಲ್ಲಿ ನಿಂತಿರುವ ಈ ಸ್ತ್ರೀ ಕಮಲದ ಮೊಗ್ಗು ಫಲ ಹಿಡಿದುಕೊಂಡಿದ್ದಾಳೆ. ಈ ಸ್ತ್ರೀಯ ಮೈಮೇಲಿನ ವಸ್ತ್ರಾಭರಣ ಅಪರಿಪೂರ್ಣವಾಗಿದೆ.

**ಅಗ್ನಿದೇವ**:–ಅಗ್ನಿದೇವನು ತನ್ನ ವಾಹನವಾದ ಟಗರಿನ ಮೇಲೆ ಪತ್ನಿಯೊಡಗುಡಿ ಚಲಿಸುತ್ತಿರುವಂತೆ ರಚಿಸಲಾಗಿದೆ.  ಶಿಲ್ಪವು ಸಹ ಅಪರಿಪೂರ್ಣ ಕೆತ್ತನೆಯಿಂದ ಕೂಡಿದೆ.

**ಸರಸ್ವತಿ**:–ಸುಖಾಸನದಲ್ಲಿ ಕುಳಿತಿರುವ ಈ ದೇವಿಯು ಚರ್ತುಭುಜ ಹೊಂದಿದ್ದು ಕೈಗಳಲ್ಲಿ ಪಾಶ, ಅಂಕುಶ, ಪುಸ್ತಕ ಮತ್ತು ಜಪಮಣಿಯನ್ನು ಹಿಡಿದು ಕುಳಿತಿದ್ದಾಳೆ. ಈ ಮೂರ್ತಿ ಶಿಲ್ಪವು ಸಹ ಕೆತ್ತನೆಯಿಂದ ಅಪರಿಪೂರ್ಣವಾಗಿದೆ.

**ತಾಳಧಾರಿಣಿ**:–ತ್ರಿಭಂಗಿಯಲ್ಲಿ ನಿಂತಿರುವ ಈ ತಾಳಧಾರಿಣಿ ತನ್ನ ಎರಡು ಕೈಗಳಲ್ಲಿ ತಾಳ ಹಿಡಿದು ನಿಂತಿದ್ದಾಳೆ. ಈ ಸ್ತ್ರೀಯ ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸರಳವಾಗಿದೆ.

**ಪದ್ಮ ಪುಷ್ಪ ಹಿಡಿದ ಸ್ತ್ರೀ**:–ಈ ದೇವಿಯು ತ್ರಿಭಂಗಿಯಲ್ಲಿ ನಿಂತಿದ್ದು ಕೈಯಲ್ಲಿ ಪುಷ್ಪ ಗುಚ್ಛ ಹಿಡಿದು ನಿಂತಿದ್ದಾಳೆ ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸರಳವಾಗಿದೆ.

**ದಂಡಾಧಿಕಾರಿ**:–ಈ ದಂಡಾಧಿಕಾರಿಯು ತ್ರಿಭಂಗಿಯಲ್ಲಿ ನಿಂತಿದ್ದು ಉದ್ದನೆಯ ನಿಲುವಂಗಿ ಧರಿಸಿದ್ದಾನೆ. ಬಲಗೈಯಲ್ಲಿ ದಂಡವಿದೆ ಎಡಗೈಯಲ್ಲಿ ಫಲವಿದೆ.

**ಭಿಕ್ಷಾಟನಾ ಶಿವ**:–ತ್ರಿಭಂಗಿಯಲ್ಲಿ ನಿಂತಿರುವ ಈ ಶಿವನು ಎರಗೈಯಲ್ಲಿ ಭಿಕ್ಷಾಪಾತ್ರೆ ಬಲಗೈಯಲ್ಲಿ ಫಲದ ಗೊಂಚಲು, ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾಗಿದೆ.

**ಚಾಮರಧಾರಿಣಿ**:–ತ್ರಿಭಂಗಿಯಲ್ಲಿ ನಿಂತಿರುವ ಈ ಚಾಮರಧಾರಿಣಿಯು ಬಲಗೈಯಲ್ಲಿ ಚಾಮರ ಎಡಗೈಯಲ್ಲಿ ಫಲವನ್ನು ಹಿಡಿದಿದ್ದಾಳೆ. ಆದರೆ ಫಲವನ್ನು ಹಿಡಿದ ಎಡಗೈ ತೃಟಿತವಾಗಿದೆ. ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾಗಿದೆ.

**ನಾಟ್ಯ ಪಾರ್ವತಿ**:-ನೃತ್ಯಭಂಗಿಯಲ್ಲಿ ನಿಂತಿರುವ ಈ ಪಾರ್ವತಿಯು ಮಾನವನ ಬೆನ್ನಿನ ಮೇಲೆ ಕಾಲನ್ನಿಟ್ಟು ನೃತ್ಯ ಮಾಡುತ್ತಿದ್ದಾಳೆ ಷಡ್ಭುಜ ಹೊಂದಿರುವ ಈ ದೇವಿ ಕೈಗಳಲ್ಲಿ ತ್ರಿಶೂಲ, ಢಮರು, ಕತ್ತಿ, ಗುರಾಣಿ, ಸ್ವರ್ಗಸ್ತ ಭೂಸ್ಪರ್ಶ ಹಸ್ತ ಹೊಂದಿದ್ದಾಳೆ. ಮೈಮೇಲೆ ಬಿಡಿಸಿರುವ ವಸ್ತ್ರಾಭರಣಗಳು ಸುಂದರವಾಗಿವೆ.

**ಕಪೋತ**:-ಈ ಭಿತ್ತಿ ಶಿಲ್ಪಗಳನ್ನು ಮಳೆ ಮತ್ತು ಬಿಸಿಲಿನಿಂದ ರಕ್ಷಿಸಲು ಕಪೋತವನ್ನು ಇಳಿಜಾರಾಗಿರುವಂತೆ ಮಾಡಲಾಗಿದ್ದು, ಮುಂಚಾಚಿರುವಂತೆ ಮಾಡಲಾಗಿದೆ. ಕಪೋತದ ಮೇಲೆ ಇನ್ನೊಂದು ಹಂತ ಭಿತ್ತಿಯನ್ನು ಮಾಡಿ ನಿರ್ಮಿಸಲಾಗಿದೆ. ಈ ಭಾಗದಲ್ಲಿ ಸಣ್ಣ ಸಣ್ಣ ನಕ್ಷತ್ರಾಕಾರದ ಜೋಡಿ ಅರೆಗಂಬಗಳನ್ನು ನಿರ್ಮಿಸಿ ಮೇಲೆ ಸಣ್ಣ ಸಣ್ಣ ಶಿಖರ ಕೋಷ್ಠಗಳನ್ನು ನಿರ್ಮಾಣಮಾಡಲಾಗಿದೆ. ಈ ಕೋಷ್ಠಗಳ ಮೇಲೆ 2ನೇ ಹಂತದ ಕಪೋತವನ್ನು ಮಾಡಿ ಆಂಗ್ಲ ವರ್ಣಮಾಲೆಯ ‘ಎಸ್’ ಅಕ್ಷರದಂತೆ ಮಾಡಲಾಗಿದೆ.

**ಶಿಖರ**:-ಹೊಯ್ಸಳರು ದೇವಾಲಯ ನಿರ್ಮಾಣಕ್ಕೆ ಬಳಸಿದ ಶಿಲಾ ಮಾಧ್ಯಮದಿಂದಾಗಿ ಬಹುತೇಕ ದೇವಾಲಯಗಳಲ್ಲಿ ಶಿಖರಗಳು ನಾಶವಾಗಿವೆ. ದೊಡ್ಡಗದ್ದವಳ್ಳಿ, ಸೋಮನಾಥಪುರ ಭದ್ರಾವತಿ, ನುಗ್ಗೇಹಳ್ಳಿ, ಅರಳಗುಪ್ಪೆ ಮುಂತಾದ ಸ್ಥಳಗಳಲ್ಲಿ ಇರುವ ದೇವಾಲಯಗಳಲ್ಲಿ ಉಳಿದು ಬಂದಿರುವ ಶಿಖರಗಳ ಅಧ್ಯಯನದಿಂದ ಹೊಯ್ಸಳ ಕಾಲದ ದೇವಾಲಯದ ಶಿಖರಗಳ ಆಕಾರ ವಿನ್ಯಾಸಗಳನ್ನು ತಿಳಿಯಲು ಸಾಧ್ಯವಾಗಿದೆ.[82]

ಹೀಗಾಗಿ ನಾಗಲಾಪುರದ ಕೇದಾರೇಶ್ವರ ದೇವಾಲಯ ಮತ್ತು ಚನ್ನಕೇಶವ ದೇವಾಲಯಗಳ ಶಿಖರಗಳು ಸಂಪೂರ್ಣವಾಗಿ ನಾಶಗೊಂಡಿವೆ. ಈ ದೇವಾಲಯಕ್ಕೆ ಪ್ರಾಕಾರ ಕಂಡುಬರುವುದಿಲ್ಲ. ಇತ್ತೀಚಿಗೆ ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆಯವರು ಪ್ರಾಚೀನ ಸ್ಮಾರಕ ಎಂದು ಘೋಷಿಸಿ ದೇವಾಲಯದ ಸುತ್ತಲೂ ಕಬ್ಬಿಣದ ಜಾಲರಿಯಲ್ಲಿ ಬೇಲಿಯನ್ನು ನಿರ್ಮಿಸಿದ್ದಾರೆ. ಪ್ರಸ್ತುತ ಈ ದೇವಾಲಯವು ಸುಸ್ಥಿತಿಯಲ್ಲಿದೆ. ಆದರೆ ಮಾನವನ ವಿಕೃತ ಮನಸ್ಸಿನ ಮತ್ತು ದುರಾಸೆಯಿಂದ ಈ ದೇವಾಲಯದ ಅಧಿಕ ಭಿತ್ತಿ ಶಿಲ್ಪಗಳು ವಿರೂಪಗೊಂಡಿದ್ದು ಮುಂದಿನ ತಲೆಮಾರಿಗೆ ನಮ್ಮ ಸಂಸ್ಕೃತಿಯ ಪ್ರಾಚೀನ ಸ್ಮಾರಕಗಳನ್ನು ಉಳಿಸಿಕೊಂಡು ಹೋಗುವುದು ನಮ್ಮೆಲರ ಆದ್ಯ ಕರ್ತವ್ಯವಾಗಿದೆ. ಮತ್ತು ಇಂತಹ ದೇವಾಲಯ, ದೇವಾಲಯದ ಮೂರ್ತಿ ಶಿಲ್ಪಗಳ ಅಧ್ಯಯನದಿಂದ ಪ್ರಾಚೀನ ಕಾಲದ ಸಂಸ್ಕೃತಿ, ಧರ್ಮ, ನಂಬಿಕೆಗಳು, ಉಡುಗೆ ತೊಡುಗೆಗಳು, ಆಭರಣಗಳು, ಸಂಗೀತ ವಾದ್ಯಗಳು, ಉಡುಪು ಮುಂತಾದ ಅಂಶಗಳ ಅಧ್ಯಯನಕ್ಕೆ ಈ ದೇವಾಲಯಗಳು ಸಾಕ್ಷಿಯಾಗಿ ನಿಂತಿವೆ. [83]

**ಕಲ್ಲೇಶ್ವರ ದೇವಾಲಯ–ಹುಲಿಕಲ್**

ತುರುವೇಕೆರೆ ತಾಲೂಕು ಕೇಂದ್ರದಿಂದ 13 ಕಿ.ಮೀ ದೂರದಲ್ಲಿ ದಿಡಿಗಕ್ಕೆ ಸಾಗುವ ಮಾರ್ಗದಲ್ಲಿ ಹುಲಿಕಲ್ ಗ್ರಾಮ ಕಂಡುಬರುತ್ತದೆ. ಈ ಗ್ರಾಮದಲ್ಲಿ ಪ್ರಾಚೀನ ದೇವಾಲಯಗಳಾದ ಕಲ್ಲೇಶ್ವರ ದೇವಾಲಯ ಮತ್ತು ಸಂಗಮೇಶ್ವರ ದೇವಾಲಯ ಹಾಗೂ ಊರಿನ ಶಕ್ತಿದೇವತೆಯಾದ ಕೆಂಪಮ್ಮ ದೇವಾಲಯಗಳು ಕಂಡುಬರುತ್ತವೆ. ಕನ್ನಡದ ಹೆಸರುಗಳುಳ್ಳ ಶಿವಲಿಂಗಗಳಲ್ಲಿ ಕಲ್ಲೇಶ್ವರ ಎಂಬ ಹೆಸರು ಬಹಳ ಜನಪ್ರತಿಯವಾಗಿದೆ. ಹೊಯ್ಸಳರ ಕಾಲದ ಅನೇಕ ಶಿವಲಿಂಗದ ಹೆಸರುಗಳಲ್ಲಿ ಕಲ್ಲೇಶ್ವರ ಎಂಬ ಹೆಸರನ್ನು ಬಳಸಲಾಗಿದೆ. ಕಲ್ಲೇಶ್ವರ ಎಂಬುದು ಮೇಲು ನೋಟಕ್ಕೆ "ಕಲ್ಲು+ಈಶ್ವರ ಎಂಬ ಅರ್ಥವನ್ನು ನೀಡುವುದಾದರೂ, ಈ ಹೆಸರು ಮೂಲತಃ ಕಲಿ+ಈಶ್ವರ ಎಂದಾಗಿದ್ದು ಕಲೀಶ್ವರನೆಂಬ ಪದವು ಕಾಲಾನಂತರ ಕಲ್ಲೇಶ್ವರ ಎಂದು ಜನಪದೀಕರಣಗೊಂಡಿರುವ ಸಾಧ್ಯತೆಯೂ ಇದೆ. [84]

ಹುಲಿಕಲ್ ಗ್ರಾಮದ ಈಶಾನ್ಯ ಭಾಗದಲ್ಲಿ ಪೂರ್ವಾಭಿಮುಖವಾಗಿ ಕಲ್ಲೇಶ್ವರ ದೇವಾಲಯವು ನಿರ್ಮಾಣಗೊಂಡಿದೆ. ಈ ದೇವಾಲಯದ ಹೆಸರನ್ನು ಮಲ್ಲೇಶ್ವರ ದೇವಾಲಯ ಎಂದು ಕ್ರಿ.ಶ.1916ರ ಮೈಸೂರು ಆರ್ಕಿಯಾಲಾಜಿಕ್ ರಿಪೋರ್ಟ್‌ನಲ್ಲಿ ನಮೂದಿಸಲಾಗಿದೆ. ಈ ದೇವಾಲಯದ ನಿರ್ಮಾಣ ಕಾಲಕ್ಕೆ ಸಂಬಂಧಿಸಿದ ಯಾವುದೇ ನಿಖರ ಶಾಸನಾಧಾರಗಳು ದೊರೆತಿಲ್ಲ. ದೇವಾಲಯದ ಕಲಾತ್ಮಕ ದೃಷ್ಠಿಯಿಂದ ಹೊಯ್ಸಳರ ಕಾಲದಲ್ಲಿ ನಿರ್ಮಾಣಗೊಂಡಿದ್ದು ತುರುವೇಕೆರೆಯ ಚನ್ನಕೇಶವ ದೇವಾಲಯದ ಲಕ್ಷಣಗಳನ್ನು ಹೋಲುತ್ತದೆ.[85]

ಕಲ್ಲೇಶ್ವರ ದೇವಾಲಯವನ್ನು ಸಂಪೂರ್ಣವಾಗಿ ಬಳಪದ ಕಲ್ಲನ್ನು ಉಪಯೋಗಿಸಿ ನಿರ್ಮಿಸಲಾಗಿದ್ದು, ಇದೊಂದು ಏಕಕೂಟ ದೇವಾಲಯವಾಗಿದೆ. ಇದರಲ್ಲಿ ಗರ್ಭಗೃಹ, ತೆರೆದ ಸುಖನಾಸಿ, ನವರಂಗ ಮತ್ತು ಮುಖಮಂಟಪ ಕಂಡುಬರುತ್ತದೆ. ಈ ದೇವಾಲಯದ ದಕ್ಷಿಣ ಭಾಗದಲ್ಲಿ ಒಂದು ಚಿಕ್ಕದಾದ ಕೆರೆ ಇದ್ದು ಮಳೆಗಾಲದಲ್ಲಿ ನೀರು ತುಂಬಿ ಈ ದೇವಾಲಯದ ಸುತ್ತಲೂ ನೀರು ನಿಲ್ಲುತ್ತಿದ್ದು, ಇದರ ರಕ್ಷಣೆಗಾಗಿ ಇತ್ತೀಚಿಗೆ ರಾಜ್ಯ ಪುರಾತತ್ವ ಇಲಾಖೆಯವರು ಕೆಲವು ಮಾರ್ಪಾಡುಗಳನ್ನು ಮಾಡಿ ಜೀರ್ಣೋದ್ಧಾರ ಮಾಡಿದ್ದಾರೆ.

**ಗರ್ಭಗೃಹ**

ಗರ್ಭಗೃಹವು 8x8 ಅಡಿ ಉದ್ದ ಮತ್ತು ಅಗಲ ಹೊಂದಿದ್ದು ಚೌಕಾಕಾರವಾಗಿದೆ. ಈ ಗರ್ಭಗೃಹದ ಮಧ್ಯಭಾಗದಲ್ಲಿ ನಕ್ಷತ್ರಾಕಾರದ ಪಾಣಿಪೀಠದ ಮೇಲೆ ಕಲ್ಲೇಶ್ವರ ಲಿಂಗವನ್ನು

ಪ್ರತಿಷ್ಠಾಪಿಸಲಾಗಿದೆ. **(ಚಿ.ಸಂ.36)** ಈ ಲಿಂಗವು ಒಂದು ಅಡಿ ಎತ್ತರವನ್ನು ಹೊಂದಿದೆ. ಗರ್ಭಗೃಹದ ಮೇಲ್ಛಾವಣಿಯಲ್ಲಿ ನಕ್ಷತ್ರಾಕಾರದ ಭುವನೇಶ್ವರಿಯನ್ನು ನಿರ್ಮಿಸಿದ್ದು ಭುವನೇಶ್ವರಿಯ ಮಧ್ಯಭಾಗದಲ್ಲಿ ಅರಳಿದ ಕಮಲದ ಪುಷ್ಪವನ್ನು ಬಿಡಿಸಲಾಗಿದೆ. ಈ ಗರ್ಭಗೃಹದ ಬಾಗಿಲು ಸರಳವಾಗಿದ್ದು ಯಾವುದೇ ಅಲಂಕರಣೆ ಕಂಡುಬರುವುದಿಲ್ಲ.

**ಸುಖನಾಸಿ**

ಸುಖನಾಸಿಯು ಗರ್ಭಗೃಹದಷ್ಟೇ ಉದ್ದ ಅಗಲವನ್ನು ಹೊಂದಿದ್ದು, ತೆರೆದ ಸುಖನಾಸಿಯಾಗಿದೆ. ಈ ಸುಖನಾಸಿಯಲ್ಲಿ ಯಾವುದೇ ಉತ್ಸವ ಮೂರ್ತಿಗಳಾಗಲಿ ಅಥವಾ ಮೂರ್ತಿಶಿಲ್ಪಗಳು ಕಂಡುಬರುವುದಿಲ್ಲ. ಸುಖನಾಸಿಯ ಮೇಲ್ಛಾವಣಿಯಲ್ಲಿ ನಕ್ಷತ್ರಾಕಾರದ ಭುವನೇಶ್ವರಿಯನ್ನು ಮಾಡಲಾಗಿದ್ದು ಇದರ ಮಧ್ಯದಲ್ಲಿ ಅರಳಿದ ಪದ್ಮಪುಷ್ಪವನ್ನು ಬಿಡಿಸಲಾಗಿದೆ.

**ನವರಂಗ**

ನವರಂಗವು ಸುಮಾರು 25X25 ಅಡಿಗಳ ಉದ್ದ ಮತ್ತು ಅಗಲವನ್ನು ಹೊಂದಿದ್ದು ಚೌಕಾಕಾರವಾಗಿದೆ. ನವರಂಗದ ಮಧ್ಯದಲ್ಲಿ ರಾಟೆಯಂತ್ರದಿಂದ ಮಾಡಲಾದ ಹೊಯ್ಸಳ ಶೈಲಿಯ ನಾಲ್ಕು ಕಂಬಗಳನ್ನು ಕಾಣಬಹುದು. ಈ ಕಂಬಗಳು 8 ಅಡಿಗಳ ಎತ್ತರವನ್ನು ಹೊಂದಿವೆ. ಗಾಲಿ ಭಾಗವು ಉರುಳೆಯಾಕಾರವಾಗಿದ್ದು, ತರಂಗ ಭೋದಿಗೆಯನ್ನು ಕಂಬಗಳ ಮೇಲ್ಭಾಗದಲ್ಲಿ ನಿರ್ಮಿಸಲಾಗಿದೆ. **(ಚಿ.ಸಂ.37)** ನವರಂಗದ ಮೇಲ್ಛಾವಣಿಯಲ್ಲಿ ಒಟ್ಟು ಒಂಭತ್ತು ಭುವನೇಶ್ವರಿಗಳಿವೆ. ಮಧ್ಯದ ಭುವನೇಶ್ವರಿಯು ನಕ್ಷತ್ರಾಕಾರವಾಗಿ ವಿಶಾಲವಾಗಿದೆ. ಮಧ್ಯದಲ್ಲಿ ಅರಳಿದ ಪದ್ಮಪುಷ್ಪವನ್ನು ಬಿಡಿಸಲಾಗಿದೆ. ಇನ್ನುಳಿದ ಎಂಟು ಭುವನೇಶ್ವರಿಗಳು ಸಹ ಇದೇ ಲಕ್ಷಣಗಳನ್ನು ಹೊಂದಿದ್ದು, ಅಷ್ಟೇನೂ ವಿಶಾಲವಾಗಿಲ್ಲ. ನವರಂಗದಲ್ಲಿ ಬಲ ಮತ್ತು ಎಡ ಭಾಗದಲ್ಲಿ ಎರಡು ಕೋಷ್ಠ ಗುಡಿಗಳಿವೆ. ಇವುಗಳ ಒಳಭಾಗದಲ್ಲಿ ಯಾವುದೇ ಮೂರ್ತಿ ಶಿಲ್ಪ ಕಾಣಬರುವುದಿಲ್ಲ. ಬಹುಶಃ ಹಿಂದಿನ ಕಾಲದಲ್ಲಿ ಈ ಕೋಷ್ಠ ಗುಡಿಗಳಲ್ಲಿ ಮೂರ್ತಿಶಿಲ್ಪಗಳಿದ್ದು ಇತ್ತೀಚಿಗೆ ಅವುಗಳನ್ನು ಸ್ಥಳಾಂತರಿಸಲಾಗಿದೆ. ಕೋಷ್ಠಗುಡಿಗಳು ಸಣ್ಣ ಸಣ್ಣ ಅರೆಗಂಬಗಳ ಅಲಂಕರಣಗಳಿಂದ ನಿರ್ಮಾಣವಾಗಿದ್ದು, ಮೇಲ್ಭಾಗದಲ್ಲಿ ಹೊಯ್ಸಳ ಶೈಲಿಯ ಶಿಖರವಿದೆ. ಇವುಗಳು ಕೂಡುಗಳು, ಸ್ತೂಪಿಯನ್ನು ಹೊಂದಿವೆ. ಈ ಕೋಷ್ಠಗುಡಿಗಳಲ್ಲಿ ಶಿವಲಿಂಗದ ಪೂಜಾಸಾಮಾಗ್ರಿಗಳನ್ನು ಇಡಲಾಗಿದೆ. ನವರಂಗದ ಒಳಭಿತ್ತಿಗೆ ಹೊಂದಿಕೊಂಡಂತೆ ನಕ್ಷತ್ರಾಕಾರದ 12 ಅರೆಗಂಬಗಳಿವೆ. ನವರಂಗದ ಮಧ್ಯಭಾಗದಲ್ಲಿ ಗರ್ಭಗೃಹದ ಶಿವಲಿಂಗಕ್ಕೆ

ಅಭಿಮುಖವಾಗಿ ಶಿವನ ವಾಹನವಾದ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ನವರಂಗದ ದ್ವಾರ ಬಾಗಿಲು ಸರಳವಾಗಿದ್ದು, ಬಾಗಿಲ ಪಟ್ಟಿಕೆಗಳಲ್ಲಿ ಯಾವುದೇ ಅಲಂಕರಣೆಗಳು ಕಂಡುಬರುವುದಿಲ್ಲ. ಲಲಾಟಬಿಂಬವನ್ನು ಯಾವುದೇ ಕೆತ್ತನೆಗಳಿಲ್ಲದೇ ಹಾಗೇ ಉಳಿಸಲಾಗಿದೆ. ಬಾಗಿಲ ಇಕ್ಕೆಲಗಳಲ್ಲಿ ದ್ವಾರಪಾಲಕರನ್ನು ರಚಿಸಲು ನಿಲ್ಲಿಸಿದ್ದ ಕಲ್ಲಿನ ಶಿಲಾ ಫಲಕಗಳನ್ನು ಹಾಗೇ ಉಳಿಸಲಾಗಿದೆ.

**ಮುಖಮಂಟಪ**

ದೇವಾಲಯದ ಮುಖಮಂಟಪವು ಮುಕ್ತವಾಗಿದ್ದು ಹೊಯ್ಸಳ ಶೈಲಿಯ ಎರಡು ಕಂಬಗಳ ಮೇಲೆ ಮೇಲ್ಛಾವಣಿಯನ್ನು ನಿರ್ಮಿಸಲಾಗಿದೆ. ಮುಖಮಂಟಪದಲ್ಲಿ ಯಾವುದೇ ಭುವನೇಶ್ವರಿ ಕಂಡುಬರುವುದಿಲ್ಲ. ಅಡ್ಡಪಟ್ಟಿಕೆಗಳಲ್ಲಿ ಅರಳಿದ ಕಮಲದ ಪುಷ್ಪವನ್ನು ಬಿಡಿಸಲಾಗಿದೆ. **(ಚಿ.ಸಂ.38)**

**ಅಧಿಷ್ಠಾನ**

ಅಧಿಷ್ಠಾನವು ನಕ್ಷತ್ರಾಕಾರವಾಗಿದೆ. ಇದರಲ್ಲಿ ನಾಲ್ಕು ಪಟ್ಟಿಕಗಳಿವೆ. ಈ ನಾಲ್ಕು ಪಟ್ಟಿಕೆಗಳನ್ನು ಹಿನ್ಸರಿತ ಮತ್ತು ಮುನ್ಸರಿತದಂತೆ ಕ್ರಮವಾಗಿ ಜೋಡಿಸಿ ನಿರ್ಮಿಸಲಾಗಿದೆ. [86] **(ಚಿ.ಸಂ.39)**

**ಭಿತ್ತಿ**

ಭಿತ್ತಿಯೆಂದರೆ ದೇವಾಲಯದ ಗೋಡೆ. ಭಿತ್ತಿ ಎಂಬ ಪದವು 'ಭಿದ್' ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ದೇವಾಲಯವನ್ನು (ಗರ್ಭಗುಡಿಯನ್ನು) ಹೊರ ಪ್ರಾಂಗಣದಿಂದ ಬೇರ್ಪಡಿಸುವುದರಿಂದ (ಭೇದತಿ) ಇದಕ್ಕೆ ಭಿತ್ತಿ ಎಂದು ಹೆಸರು. ಭಿತ್ತಿಯನ್ನು ಶಾಸ್ತ್ರ ಗ್ರಂಥಗಳು 'ಕುಡ್ಯ' ಎಂದು ಕರೆದಿವೆ. ದೇವಾಲಯದ ಭಿತ್ತಿಯು ಮೂರು ಪದರಗಳಿಂದ ಕೂಡಿರುತ್ತದೆ. ಸಮನಾಂತರವಾಗಿ ಎರಡು ಗೋಡೆಗಳನ್ನು ನಿರ್ಮಿಸಿ ಮಧ್ಯಕ್ಕೆ ಮಣ್ಣನ್ನು ತುಂಬಲಾಗುವುದು ನಂತರ ಎರಡೂ ಸೇರಿದಂತೆ ಮೇಲ್ಭಾಗದಲ್ಲಿ ಚಪ್ಪಡಿಗಳಿಂದ ಮುಚ್ಚಲ್ಪಡುವುದು. ಈ ಎರಡು ಪದರ ಗೋಡೆಯಲ್ಲಿ ಕಟ್ಟಡದ ಹೊರಮುಖವನ್ನು 'ಬಾಹ್ಯಭಿತ್ತಿ' ಎನ್ನುವರು. ದೇವಾಲಯದ ಒಳಮುಖವನ್ನು 'ಅಂತರ್ಭಿತ್ತಿ' ಎನ್ನುವರು. ಈ ಎರಡೂ ಭಿತ್ತಿಗಳ ಹೊರಮುಖವನ್ನು ನಯವಾಗಿ ಮಾಡಿರುತ್ತಾರೆ. ಒಳಮುಖವೂ ಒರಟಾಗಿಯೂ ಅಸಮತಲವಾಗಿಯೂ ಇರುತ್ತದೆ.[87] ಕಲ್ಲೇಶ್ವರ ದೇವಾಲಯದ ಭಿತ್ತಿಯನ್ನು ಹೊಯ್ಸಳ ಶೈಲಿಯ ನಕ್ಷತ್ರಾಕಾರದ

ಅರೆಗಂಬಗಳನ್ನು ಜೋಡಿಸಿ ಅಲಂಕರಿಸಲಾಗಿದೆ. ಅಲ್ಲಲ್ಲಿ ಅರಳಿದ ಕಮಲದ ಪುಷ್ಪಗಳನ್ನು ಭಿತ್ತಿಯಲ್ಲಿ ಬಿಡಿಸಲಾಗಿದೆ. ಈ ದೇವಾಲಯದಲ್ಲಿ ಯಾವುದೇ ಭಿತ್ತಿಶಿಲ್ಪಗಳು ಕಂಡುಬರುವುದಿಲ್ಲ. ಹಾಗೂ ಭಿತ್ತಿಯು ತುರುವೇಕೆರೆಯ ಚನ್ನಕೇಶವ ದೇವಾಲಯದ ಭಿತ್ತಿಯನ್ನು ಹೋಲುತ್ತದೆ. ಭಿತ್ತಿಯ ಮೇಲ್ಭಾಗದಲ್ಲಿ ಇಳಿಜಾರಾದ ಕಪೋತವನ್ನು ನಿರ್ಮಿಸಲಾಗಿದ್ದು ಅಲ್ಲಲ್ಲಿ 'ಕೂಡು'ಗಳ ಅಲಂಕರಣವಿದೆ. ಕಪೋತದ ಮೇಲಿರುವ ಹಾರದ ಭಾಗವನ್ನು ದಂತದ ರೀತಿಯಲ್ಲಿ ಕೆತ್ತನೆ ಮಾಡಲಾಗಿದೆ. ಕೈಪಿಡಿಯ ಮೇಲಿರುವ ಹಾರದಲ್ಲಿ ಕಲ್ಲನ್ನು ಜೋಡಿಸಿ ಹಾಗೇ ಉಳಿಸಲಾಗಿದೆ. ಇವುಗಳಲ್ಲಿ ಯಾವುದೇ ರೀತಿಯ ಮೂರ್ತಿಶಿಲ್ಪಗಳು ಕಂಡುಬರುವುದಿಲ್ಲ.

**ಶಿಖರ**

ದೇವಾಲಯದ ಶಿಖರವು ಎರಡು ತಲಗಳನ್ನು ಹೊಂದಿದೆ. ಅಲ್ಲಲ್ಲಿ ಕೂಡುಗಳ ನಿರ್ಮಾಣವಿದ್ದು ಯಾವುದೇ ಮೂರ್ತಿಶಿಲ್ಪಗಳ ಕೆತ್ತನೆ ಕಂಡುಬರುವುದಿಲ್ಲ. ಶಿಖರದ ಮೇಲ್ಭಾಗದಲ್ಲಿ ಬೋರಲು ಹಾಕಿದ ಪದ್ಮಾಕೃತಿಯಲ್ಲಿ ಸ್ತೂಪಿಯನ್ನು ನಿರ್ಮಿಸಲಾಗಿದೆ. ಸ್ತೂಪಿಯ ಮೇಲ್ಭಾಗದಲ್ಲಿ ಸುಸ್ಥಿತಿಯಲ್ಲಿರುವ ಕಳಸವಿದೆ. ಶಿಖರದ ದಕ್ಷಿಣ ಭಾಗದಲ್ಲಿ ಅರಳಿ ಗಿಡಗಳು ಆಲ ಮುಂತಾದ ಗಿಡಗಳು ಬೆಳೆದಿದ್ದು ದೇವಾಲಯದ ದುಸ್ಥಿತಿಗೆ ಕಾರಣವಾಗುತ್ತಿವೆ. ಶಿಖರದ ಮುಂಭಾಗದಲ್ಲಿ ಸುಖನಾಸದ ರಚನೆ ಕಂಡುಬರುತ್ತದೆ. ದೇವಾಲಯದ ಮುಂಭಾಗದಲ್ಲಿ 5 ಅಡಿ ಎತ್ತರದ ದ್ವೀಪಸ್ತಂಭವಿದೆ. ದೇವಾಲಯಕ್ಕೆ ಯಾವುದೇ ಪ್ರಾಕಾರ ಕಂಡುಬರುವುದಿಲ್ಲ. ದಕ್ಷಿಣ ಭಾಗದಲ್ಲಿರುವ ಕೆರೆಯ ನೀರಿನಿಂದಾಗಿ ಮಳೆಗಾಲದಲ್ಲಿ ದೇವಾಲಯದ ಆವರಣದ ಸುತ್ತಲೂ ನೀರು ನಿಂತು ದೇವಾಲಯದ ದುಸ್ಥಿತಿಗೆ ಕಾರಣವಾಗಿದೆ [೮೮]

**ಕಲ್ಲೇಶ್ವರ ದೇವಾಲಯ–ಗೋಣಿತುಮಕೂರು**

ತುರುವೇಕೆರೆ ತಾಲೂಕು ಕೇಂದ್ರದಿಂದ ದಬ್ಬೇಘಟ್ಟಕ್ಕೆ ಹೋಗುವ ರಸ್ತೆಯಲ್ಲಿ 6 ಕಿ.ಮೀ ದೂರದಲ್ಲಿ ಗೋಣಿ ತುಮಕೂರು ಗ್ರಾಮವು ಕಂಡುಬರುತ್ತದೆ. ಈ ಗ್ರಾಮದ ಕೇಂದ್ರ ಭಾಗದಲ್ಲಿ ಪೂರ್ವಾಭಿಮುಖವಾಗಿ ಕಲ್ಲೇಶ್ವರ ದೇವಾಲಯವು ನಿರ್ಮಾಣಗೊಂಡಿದೆ.

ಈ ಕಲ್ಲೇಶ್ವರ ದೇವಾಲಯವು ಏಕಕೂಟ ದೇವಾಲಯವಾಗಿದ್ದು ಗರ್ಭಗೃಹ ತೆರೆದ ಅಂತರಾಳ, ನವರಂಗವನ್ನು ಹೊಂದಿದ್ದು ಮುಖಮಂಟಪ ಕಂಡುಬರುವುದಿಲ್ಲ. ಈ ದೇವಾಲಯವು ಹೊಯ್ಸಳ ಶೈಲಿಯಲ್ಲಿದ್ದು ದುಸ್ಥಿತಿಯಲ್ಲಿದೆ. ಈ ದೇವಾಲಯದ ನಿರ್ಮಾಣ ಕಾಲಕ್ಕೆ ಸಂಬಂಧಿಸಿದಂತೆ ನಮಗೆ ಯಾವುದೇ ಶಾಸನಾಧಾರಗಳು ಕಂಡುಬರುವುದಿಲ್ಲ. ಈ

ದೇವಾಲಯವು ತಿಪಟೂರು ತಾಲೂಕಿನ ಹರಚನ ಹಳ್ಳಿಯಲ್ಲಿರುವ ತ್ರಿಕೂಟಾಚಲ ದೇವಾಲಯವನ್ನು ಹೋಲುತ್ತದೆ.[89]

**ಗರ್ಭಗೃಹ**

ಗರ್ಭಗೃಹವು 8X8 ಅಡಿ ಉದ್ದಗಲ ಹೊಂದಿದ್ದು ಚೌಕಾಕಾರವಾಗಿದೆ. ಈ ಗರ್ಭಗೃಹದ ಮಧ್ಯಭಾಗದಲ್ಲಿ ಸುಮಾರು 2 ಅಡಿ ಎತ್ತರವಿರುವ ಪಾಣಿಪೀಠದ ಮೇಲೆ ಚಿಕ್ಕದಾದ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. **(ಚಿ.ಸಂ.40)** ಗರ್ಭಗೃಹದ ಭಿತ್ತಿಯು ಕಲ್ಲು ಚಪ್ಪಡಿಗಳಿಂದ ನಿರ್ಮಾಣವಾಗಿದ್ದು ಯಾವುದೇ ಸೂಕ್ಷ್ಮ ಕೆತ್ತನೆಗಳು ಕಂಡುಬರದೇ ಸಾಧಾರಣವಾಗಿದೆ. ಗರ್ಭಗೃಹದ ಮೇಲ್ಛಾವಣಿಯಲ್ಲಿ ಭುವನೇಶ್ವರಿಯನ್ನು ಮಾಡಲಾಗಿದೆ. ಇದರ ಮಧ್ಯದಲ್ಲಿ ಅರಳಿದ ಕಮಲದ ಪುಷ್ಪವನ್ನು ಬಿಡಿಸಲಾಗಿದೆ. ಗರ್ಭಗೃಹದ ಬಾಗಿಲಿಗೆ ಹೊಯ್ಸಳ ಶೈಲಿಯ ಅರೆಗಂಬಗಳನ್ನು ಮಾಡಿ ಸೇರಿಸಲಾಗಿದೆ. ಈ ಬಾಗಿಲಿನಲ್ಲಿ ಯಾವುದೇ ಜಾಲಾಂಧ್ರಗಳು ಕಂಡುಬರುವುದಿಲ್ಲ. ಬಾಗಿಲ ಲಲಾಟಬಿಂಬವನ್ನು ಹಾಗೇ ಉಳಿಸಿದ್ದು ಯಾವುದೇ ಶಿಲ್ಪಕೆತ್ತನೆಗಳು ಕಂಡುಬರುವುದಿಲ್ಲ. ಈ ಬಾಗಿಲ ತೋರಣದಲ್ಲಿ ಕಮಲದ ಮೊಗ್ಗುಗಳನ್ನು ಎರಡೂ ಕಡೆ ಇಳಿಬಿಟ್ಟಿರುವಂತೆ ರಚಿಸಲಾಗಿದೆ.

**ಅಂತರಾಳ**

ಸುಖನಾಸಿಯು ಗರ್ಭಗೃಹದಷ್ಟೇ ಉದ್ದಗಲವನ್ನು ಹೊಂದಿದ್ದು ಮುಕ್ತವಾಗಿದೆ. ಇದರ ಮೇಲ್ಛಾವಣಿಯಲ್ಲಿ ನಕ್ಷತ್ರಾಕಾರದ ಭುವನೇಶ್ವರಿ ಇದೆ. ಇದರ ಮಧ್ಯದಲ್ಲಿ ಅರಳಿದ ಪದ್ಮಪುಷ್ಪವಿದೆ. ಈ ಅಂತರಾಳದಲ್ಲಿ ಗರ್ಭಗೃಹದಲ್ಲಿರುವ ಶಿವಲಿಂಗಕ್ಕೆ ಅಭಿಮುಖವಾಗಿ ಎರಡು ನಂದಿಗಳನ್ನು ಸ್ಥಾಪಿಸಲಾಗಿದೆ. ಈ ಎರಡೂ ನಂದಿಗಳು ಗಾತ್ರದಲ್ಲಿ ವ್ಯತ್ಯಾಸ ಹೊಂದಿದ್ದು ಕೆತ್ತನೆಯಲ್ಲಿ ಮತ್ತು ಅಲಂಕರಣೆಯಲ್ಲಿ ಒಂದೇ ಆಗಿದೆ. ಸುಖನಾಸಿಯಲ್ಲಿ ನಂದಿಗಳನ್ನು ಹೊರತುಪಡಿಸಿ ಇನ್ನಾವುದೇ ಮೂರ್ತಿಶಿಲ್ಪಗಳು ಕಂಡುಬರುವುದಿಲ್ಲ.

**ನವರಂಗ**

ನವರಂಗವು ಸುಮಾರು 20X20 ಅಡಿಗಳ ಉದ್ದ ಮತ್ತು ಅಗಲವನ್ನು ಹೊಂದಿದ್ದು, ನವರಂಗದಲ್ಲಿ ಹೊಯ್ಸಳ ಶೈಲಿಯ 4 ಕಂಬಗಳನ್ನು ಕಾಣಬಹುದು. ಈ ಕಂಬಗಳು 8 ಅಡಿಗಳ ಎತ್ತರವಿದ್ದು, 4, 8, 16 ಮುಖಗಳನ್ನು ಹೊಂದಿವೆ. ಕಂಬದ ಗಾಲಿ ಭಾಗವನ್ನು ರಾಟೆಯಂತ್ರದಿಂದ ವೃತ್ತಾಕಾರವಾಗಿ ಮಾಡಲಾಗಿದ್ದು, ಗಾಲಿಯ ಮೇಲೆ ಭೋದಿಗೆಯನ್ನು

ನಿರ್ಮಿಸಲಾಗಿದೆ. ನಾಗಲಾಪುರದ ಕೇದಾರೇಶ್ವರ, ತುರುವೇಕೆರೆಯ ಮೂಲಶಂಕರೇಶ್ವರ ದೇವಾಲಯದ ನವರಂಗದ ಕಂಬಗಳಗೂ ಮತ್ತು ಈ ಕಲ್ಲೇಶ್ವರ ದೇವಾಲಯದ ಕಂಬಗಳಗೂ ಸಾಕಷ್ಟು ವ್ಯತ್ಯಾಸವಿದ್ದರೂ ನೋಡಲು ಸುಂದರವಾಗಿವೆ. **(ಚಿ.ಸಂ.41)** ನವರಂಗದಲ್ಲಿ ಒಟ್ಟು 9 ಭುವನೇಶ್ವರಿಗಳದ್ದು ಎಲ್ಲಾ ಭುವನೇಶ್ವರಿಗಳು ಚೌಕ, ಅಷ್ಟ, ವೃತ್ತ ನಕ್ಷತ್ರಾಕಾರವಾಗಿವೆ ಇವುಗಳ ಮಧ್ಯದಲ್ಲಿ ಅರಳದ ಪದ್ಮಪುಷ್ಪವನ್ನು ಹೊಂದಿವೆ. ನವರಂಗದಲ್ಲಿ ಎಡಭಾಗದಲ್ಲಿ ದಕ್ಷಿಣಾಭಿಮುಖವಾಗಿ ಗಣೇಶನ ಮೂರ್ತಿಶಿಲ್ಪವನ್ನು ಇರಿಸಲಾಗಿದೆ. ಮೂರು ಅಡಿ ಎತ್ತರವಿರುವ ಈ ಗಣೇಶ ಮೂರ್ತಿಯು ಚತುರ್ಭುಜವನ್ನು ಹೊಂದಿದ್ದು ಪಾಶ, ಅಂಕುಶ, ಅಭಯಹಸ್ತ ಮತ್ತು ಫಲವನ್ನು ಹಿಡಿದಿದ್ದಾನೆ. ಮೈಮೇಲೆ ವಿವಿಧ ಆಭರಣಗಳು ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು ಸುಂದರವಾಗಿದೆ. ಈ ದೇವನು ಪದ್ಮಾಸನದಲ್ಲಿ ಕುಳತಿದ್ದಾನೆ. **(ಚಿ.ಸಂ.42)** ಈ ಗಣೇಶ ಮೂರ್ತಿಯ ಪಕ್ಕದಲ್ಲಿಯೇ ಸರಸ್ವತಿಯನ್ನು ಪ್ರತಿಷ್ಠಾಪಿಸಲಾಗಿದೆ. ಪದ್ಮಾಸನದಲ್ಲಿ ಕುಳತಿರುವ ಈ ದೇವಿಯು ಚತುರ್ಭುಜ ಹೊಂದಿದ್ದು ಕೈಗಳಲ್ಲಿ ಪುಸ್ತಕ, ಮಣಿಹಸ್ತ, ಪಾಶ, ಅಂಕುಶ ಹಿಡಿದುಕೊಂಡಿದ್ದಾಳೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ. **(ಚಿ.ಸಂ.43)** ನವರಂಗದಲ್ಲಿ ಮತ್ತೊಂದು ವಿಶೇಷವೆಂದರೇ ನಾಗಶಿಲ್ಪ. 4 ಅಡಿಗಳ ಎತ್ತರ 2 ಅಡಿ ಅಗಲವಿರುವ ಈ ನಾಗಶಿಲ್ಪಗಳನ್ನು ಇಡಲಾಗಿದ್ದು ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ. **(ಚಿ.ಸಂ.44)**

**ಮುಖಮಂಟಪ**

ಕಲ್ಲೇಶ್ವರ ದೇವಾಲಯದಲ್ಲಿ ಮುಖಮಂಟಪ ಕಂಡುಬರುವುದಿಲ್ಲ. ಪ್ರವೇಶದ್ವಾರವು ಪೂರ್ವಾಭಿಮುಖವಾಗಿ ತೆರೆಯಲ್ಪಟ್ಟಿದ್ದು, ಬಾಗಿಲಿಗೆ ಎರಡೂ ಕಡೆ ಅರೆಗಂಬಗಳನ್ನು ಸೇರಿಸಿ ನಿರ್ಮಿಸಲಾಗಿದೆ. ಬಾಗಿಲ ತೋರಣದಲ್ಲಿ ಯಾವುದೇ ಕೆತ್ತನೆಗಳು ಕಂಡುಬರುವುದಿಲ್ಲ. ಇತ್ತೀಚೆಗೆ ಕಬ್ಬಿಣದ ಬಾಗಿಲನ್ನು ಮಾಡಿ ಬಾಗಿಲನ್ನು ಮುಚ್ಚಲು ವ್ಯವಸ್ಥೆ ಮಾಡಲಾಗಿದೆ.

**ಅಧಿಷ್ಠಾನ**

ಅಧಿಷ್ಠಾನವು ಮೂರು ಪಟ್ಟಿಕೆಗಳನ್ನು ಹೊಂದಿದ್ದು ಹಿನ್ಸರಿತ ಮತ್ತು ಮುನ್ಸರಿತದಂತೆ ನಿರ್ಮಿಸಲಾಗಿದೆ. ಇದು ಅಲ್ಲಲ್ಲಿ ಬಿರುಕು ಬಿಟ್ಟಿದೆ. ಸೂಕ್ತ ರಕ್ಷಣೆಯಿಲ್ಲದೇ ಮತ್ತು ಗಿಡಗಂಟಿಗಳ ಬೆಳವಣಿಗೆಯಿಂದ ಈ ದೇವಾಲಯ ದುಸ್ಥಿತಿಯಲ್ಲಿದೆ.

**ಭಿತ್ತಿ**

ಈ ದೇವಾಲಯದ ಸುತ್ತಲೂ ಭಿತ್ತಿಯಲ್ಲಿ ಹೊಯ್ಸಳ ಶೈಲಿಯ ಅರೆಗಂಬಗಳನ್ನು ನಿರ್ಮಿಸಲಾಗಿದೆ. ಭಿತ್ತಿಯಲ್ಲಿ ಯಾವುದೇ ಭಿತ್ತಿಶಿಲ್ಪಗಳನ್ನು ಜೋಡಿಸಿಲ್ಲ. ದೇವಾಲಯದ ಪ್ರವೇಶ ದ್ವಾರದ ಬಳಿ ಭಿತ್ತಿಯಲ್ಲಿ ಮೇಲಿನಿಂದ ಕೆಳಮುಖವಾಗಿ ಬಿರುಕು ಕಾಣಿಸಿಕೊಂಡಿದ್ದು ಕುಸಿದು ಬೀಳುವ ಹಂತದಲ್ಲಿದೆ. ಉತ್ತರದ ಭಾಗದಲ್ಲಿಯೂ ಸಹ ಭಿತ್ತಿಯಲ್ಲಿ ಬಿರುಕು ಕಾಣಿಸಿಕೊಂಡಿದ್ದು ಗಿಡಗಂಟಿಗಳು ಬೆಳೆದಿವೆ. ಈ ದೇವಾಲಯದ ಭಿತ್ತಿಯು ಸೂಳೆಕೆರೆಯ ಈಶ್ವರ ದೇವಾಲಯವನ್ನು ಹೋಲುತ್ತದೆ. ಭಿತ್ತಿಯ ಅರೆಗಂಬಗಳ ಮೇಲ್ಭಾಗದಲ್ಲಿ ಕಪೋತವನ್ನು ನಿರ್ಮಿಸಲಾಗಿದೆ.

**ಶಿಖರ**

ಕಲ್ಲೇಶ್ವರ ದೇವಾಲಯವು ದ್ರಾವಿಡಶೈಲಿಯ ಶಿಖರವನ್ನು ಹೊಂದಿದ್ದು ಎರಡು ತಲಗಳಿಂದ ಕೂಡಿದೆ. ಈ ತಲಗಳಲ್ಲಿ 'ಕೂಡು'ಗಳನ್ನು ನಿರ್ಮಿಸಲಾಗಿದೆ. ಶಿಖರವು ಮೇಲೆ ಹೋಗುತ್ತಾ ಇದ್ದಂತೆ ಚಿಕ್ಕದಾಗುತ್ತಾ ಹೋಗುತ್ತದೆ. ಶಿಖರದ ಮೇಲೆ ಬೆಣಚುಕಲ್ಲಿನಲ್ಲಿ ಮಾಡಲಾದ ಸ್ತೂಪಿಯನ್ನು ಇರಿಸಲಾಗಿದೆ. ಸ್ತೂಪಿಯು ಬೋರಲು ಹಾಕಿದ ಪದ್ಮಪುಷ್ಪದ ಮಾದರಿ ಹೊಂದಿದ್ದು ಈ ಸ್ತೂಪಿಯ ಮೇಲೆ ಕಳಸವನ್ನು ಇರಿಸಲಾಗಿದೆ. ದೇವಾಲಯದ ಮೇಲೆ ಶಿಖರದ ಮುಂದೆ ಸುಖನಾಸದ ಭಾಗದಲ್ಲಿ ಅರಳೀಗಿಡಗಳ ಗುಂಪು ಬೆಳೆದಿದ್ದು, ಸುಖನಾಸವು ಕಾಣದಂತಾಗಿದೆ. ಕಪೋತದ ಭಾಗದಲ್ಲಿಯೂ ಹುಲ್ಲು, ಗಿಡಗಂಟಿಗಳು ಬೆಳೆದು ಸೂಕ್ತ ರಕ್ಷಣೆ ಇಲ್ಲದೇ ದುಸ್ಥಿತಿಯ ಹಂತವನ್ನು ತಲುಪಿದೆ.

ಕಲ್ಲೇಶ್ವರ ದೇವಾಲಯಕ್ಕೆ ಯಾವುದೇ ರೀತಿಯ ಪ್ರಾಕಾರ, ನಂದಿಕಂಬ ಕಾಣಬರುವುದಿಲ್ಲ. ಇತ್ತೀಚಿಗೆ ದೇವಾಲಯದ ಮೇಲೆ ನಾಲ್ಕು ದಿಕ್ಕುಗಳಲ್ಲಿಯೂ ನಂದಿಯನ್ನು ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಿಸಲಾಗಿದೆ. **(ಚಿ.ಸಂ.45)** ದೇವಾಲಯದ ಪಕ್ಕದಲ್ಲಿಯೇ ವಾಯುವ್ಯ ಭಾಗದಲ್ಲಿ ಕಸ ಕಡ್ಡಿ, ಸಗಣಿಯಿಂದ ಕೂಡಿದ ತಿಪ್ಪೆ ಕಂಡುಬರುತ್ತದೆ. [೯೦]

**ಕಲ್ಲೇಶ್ವರ ದೇವಾಲಯ–ಕಲ್ಕೆರೆ**

ಕಲ್ಕೆರೆ ಗ್ರಾಮದ ದಕ್ಷಿಣ ಭಾಗದಲ್ಲಿರುವ ರಸ್ತೆಯ ಪಕ್ಕದಲ್ಲಿ ಕಲ್ಲೇಶ್ವರ ದೇವಾಲಯವನ್ನು ಪೂರ್ವಾಭಿಮುಖವಾಗಿ ನಿರ್ಮಿಸಲಾಗಿದೆ. ಈ ದೇವಾಲಯವೂ ಸಹ ಪ್ರಕೃತಿಯ ವಿಕೋಪಕ್ಕೆ ತುತ್ತಾಗಿ ಸಂಪೂರ್ಣವಾಗಿ ಬಿದ್ದುಹೋಗಿದೆ. ಈಗ ಗರ್ಭಗೃಹ ಮಾತ್ರ ಕಂಡುಬರುತ್ತದೆ. ಗರ್ಭಗೃಹದ ಭಿತ್ತಿಗೆ ಹೊಂದಿಕೊಂಡಂತೆ ಕಲ್ಲಿನ ಕಂಬಗಳನ್ನು ನಿಲ್ಲಿಸಿ ಮರದ ಅಡ್ಡ

ಪಟ್ಟಿಕೆಗಳನ್ನು ಹಾಕಿ ಮೇಲ್ಛಾವಣಿಗೆ ಕಲ್ನಾರ್ ಶೀಟನ್ನು ಹಾಕಿ ಮುಚ್ಚಲಾಗಿದೆ. ದೇವಾಲಯದ ಸುತ್ತಲೂ ಬಿದ್ದಿರುವ ಅವಶೇಷಗಳನ್ನು ಗಮನಿಸಿದಾಗ ಈ ದೇವಾಲಯ ಹೊಯ್ಸಳರ ಕಾಲದಲ್ಲಿ ನಿರ್ಮಾಣವಾಗಿದ್ದು ಈಗ ಗರ್ಭಗೃಹ ಹೊರತುಪಡಿಸಿ ಸಂಪೂರ್ಣವಾಗಿ ನಾಶವಾಗಿರುವ ಶೈವ ದೇವಾಲಯವಾಗಿದೆ. **(ಚಿ.ಸಂ.46)**

**ಗರ್ಭಗೃಹ**

ಗರ್ಭಗೃಹವು 8X8 ಅಡಿಗಳ ಉದ್ದ ಅಗಲವಾಗಿದ್ದು ಚೌಕಾಕಾರವಾಗಿದೆ. ಇದರ ಮಧ್ಯದಲ್ಲಿ ಸುಮಾರು ಮೂರು ಅಡಿ ಎತ್ತರವಿರುವ ಚೌಕಾಕಾರದ ವೇದಿಕೆಯ ಮೇಲೆ ವೃತ್ತಾಕಾರದ ಪಾಣಿಪೀಠ ಇರಿಸಿ, ಪಾಣಿಪೀಠದ ಮೇಲೆ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಈ ಶಿವಲಿಂಗದ ಮುಂದೆ ಚಿಕ್ಕದೊಂದು ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ಗರ್ಭಗೃಹದ ಮೇಲ್ಛಾವಣಿಯಲ್ಲಿ ನಕ್ಷತ್ರಾಕಾರದ ಭುವನೇಶ್ವರಿ ಇದೆ. ಇದರ ಮಧ್ಯದಲ್ಲಿ ವಿಶಾಲವಾದ ಅರಳಿದ ಪದ್ಮ ಪುಷ್ಪ ಬಿಡಿಸಲಾಗಿದೆ. ಈ ದೇವಾಲಯದ ಮುಂಭಾಗದಲ್ಲಿ ಸಾಕಷ್ಟು ಭಗ್ನಗೊಂಡಿರುವ ಸಪ್ತಮಾತೃಕೆಯರ ಶಿಲ್ಪಗಳನ್ನು ಬಳಪದ ಕಲ್ಲಿನಲ್ಲಿ ರಚಿಸಿ ಇರಿಸಲಾಗಿದೆ. [91]

**ತ್ರಿಕೂಟ ಸೋಮೇಶ್ವರ ದೇವಾಲಯ–ಕೊಂಡಜ್ಜಿ**

ತುರುವೇಕೆರೆಯಿಂದ 8 ಕಿ.ಮಿ ದೂರದಲ್ಲಿ ಸಂಪಿಗೆ ಗ್ರಾಮಕ್ಕೆ ತೆರಳುವ ರಸ್ತೆಯಲ್ಲಿ ಕೊಂಡಜ್ಜಿ ಗ್ರಾಮವು ಕಂಡುಬರುತ್ತದೆ. ಹೊಯ್ಸಳರ ಕಾಲದಲ್ಲಿ ಕೊಂಡಜ್ಜಿ ಗ್ರಾಮವು ಒಂದು ಶಿವಪುರವಾಗಿತ್ತು.[92] ಕೊಂಡಜ್ಜಿ ಗ್ರಾಮದ ಆಗ್ನೇಯ ಭಾಗದಲ್ಲಿ ಪೂರ್ವಾಭಿಮುಖವಾಗಿ ತ್ರಿಕೂಟ ಸೋಮೇಶ್ವರ ದೇವಾಲಯವು ನಿರ್ಮಾಣಗೊಂಡಿದ್ದು ಊರಿನ ಜನರ ಬಾಯಿಮಾತಿನಲ್ಲಿ ಈಶ್ವರ ದೇವಾಲಯವೆಂದು ಕರೆಯಲ್ಪಡುತ್ತದೆ. ಇದೊಂದು ತ್ರಿಕೂಟ ದೇವಾಲಯವಾಗಿದ್ದು, ಮೂರು ಗರ್ಭಗೃಹ, ಸುಖನಾಸಿ, ನವರಂಗ ಹೊಂದಿದ್ದು ಮುಖಮಂಟಪ ಕಂಡುಬರುವುದಿಲ್ಲ. ದೇವಾಲಯವು ಸಂಪೂರ್ಣವಾಗಿ ಶಿಥಿಲಗೊಂಡಿದ್ದು ಗ್ರಾಮಸ್ಥರು ಇತ್ತೀಚಿಗೆ ಜೀರ್ಣೋದ್ಧಾರಗೊಳಸಿದ್ದಾರೆ. ತುರುವೇಕೆರೆ ತಾಲೂಕಿನಲ್ಲಿ ಹೊಯ್ಸಳ ಶೈಲಿಯಲ್ಲಿ ನಿರ್ಮಾಣಗೊಂಡಿರುವ ತ್ರಿಕೂಟಚಲ ದೇವಾಲಯವೆಂದರೆ ಈ ಸೋಮೇಶ್ವರ ದೇವಾಲಯ ಮಾತ್ರ. ಮೂರು ಗರ್ಭಗುಡಿಗಳಲ್ಲಿ ಮೂರು ದೇವತಾ ಮೂರ್ತಿಗಳನ್ನು ಪ್ರತಿಷ್ಠಾಪಿಸಿ ಮೂರು ಶಿಖರಗಳಿಂದ ಅವನ್ನು ಅಲಂಕರಿಸಿದ ದೇವಾಲಯವನ್ನು ತ್ರಿಕೂಟ ಎಂದು ಕರೆಯಲಾಗುವುದು. ಒಂದೇ ದೇವತೆಯ ವಿವಿಧ ಅವತಾರ ಅಥವಾ ಸ್ವರೂಪಗಳನ್ನು ಪ್ರದರ್ಶಿಸಲು ಇಲ್ಲವೇ ವಿವಿಧ

ದೇವತೆಗಳನ್ನು ಒಂದೇ ದೇವಾಲಯದಲ್ಲಿ ಪ್ರತಿಷ್ಠಾಪಿಸಿ ಏಕತ್ವವನ್ನು ಪ್ರತಿಪಾದಿಸುವುದು ತ್ರಿಕೂಟಗಳ ಉದ್ದೇಶವಾಗಿತ್ತು. [93]

ಹೊಯ್ಸಳ ದೇವಾಲಯಗಳಲ್ಲಿ ತ್ರಿಕೂಟಾಚಲಗಳೇ ಹೆಚ್ಚು. ಇವುಗಳಲ್ಲಿ ವಿಷ್ಣುವಿಗೆ, ಶಿವನಿಗೆ ಹಾಗೂ ಶಿವ ವಿಷ್ಣುವಿಗೆ ಜೊತೆಯಾಗಿ ಕಟ್ಟಿದ ಆಲಯಗಳಿವೆ. ವಿಷ್ಣುವಿಗೆ ಕಟ್ಟಿದ ದೇವಾಲಯಗಳಲ್ಲಿ ಅತ್ಯಂತ ಪ್ರಸಿದ್ಧವಾದುದು ಸೋಮನಾಥಪುರದ ಕೇಶವ ದೇವಾಲಯ. ಗೊರೂರು, ಆಸಂದಿ, ಕೆರೆಸಂತೆ, ಅಘಾಲಯ ಮುಂತಾದವುಗಳಲ್ಲಿ ಶೈವ ತ್ರಿಕೂಟಾಚಲಗಳಿವೆ.[94]

## ಗರ್ಭಗೃಹ

ಗರ್ಭಗೃಹವು 10X10 ಅಡಿ ಉದ್ದ ಮತ್ತು ಅಗಲ ಹೊಂದಿದ್ದು ಚೌಕಾಕಾರವಾಗಿದೆ. ಈ ಗರ್ಭಗೃಹದ ಮಧ್ಯಭಾಗದಲ್ಲಿ ನಕ್ಷತ್ರಾಕಾರದ ಪಾಣಿಪೀಠದ ಮೇಲೆ ಎರಡು ಅಡಿ ಎತ್ತರವಿರುವ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಗರ್ಭಗೃಹದ ಭಿತ್ತಿಯು ಸರಳವಾಗಿದ್ದು, ಮೇಲ್ಛಾವಣಿಯಲ್ಲಿ ಅರಳಿದ ಪದ್ಮ ಪುಷ್ಪದ ಭುವನೇಶ್ವರಿಯನ್ನು ನಿರ್ಮಿಸಲಾಗಿದೆ. ಗರ್ಭಗೃಹದ ಶಿವಲಿಂಗಕ್ಕೆ ಇತ್ತೀಚಿಗೆ ಕೀರ್ತಿಮುಖವುಳ್ಳ ಪಂಚಲೋಹದ ಪ್ರಭಾವಳಿಯನ್ನು ಮಾಡಲಾಗಿದೆ. ಗರ್ಭಗೃಹದ ಬಾಗಿಲಿಗೆ ಹೊಯ್ಸಳ ಶೈಲಿಯ ಅರೆಗಂಬಗಳನ್ನು ಮಾಡಿ ಸೇರಿಸಲಾಗಿದೆ. ಲಲಾಟಬಿಂಬದಲ್ಲಿ ಯಾವುದೇ ಕೆತ್ತನೆಗಳನ್ನು ಮಾಡದೇ ಹಾಗೇ ಉಳಿಸಲಾಗಿದೆ. ಬಾಗಿಲ ತೋರಣದಲ್ಲಿ 'ಕೂಡು'ಗಳ ರಚನೆಯಿದ್ದು, ಕಮಲದ ಮೊಗ್ಗುಗಳು ಇಳಿಬಿಟ್ಟಿರುವಂತೆ ಕೆತ್ತಲಾಗಿದೆ. **(ಚಿ.ಸಂ.47)**

## ಸುಖನಾಸಿ

ಸುಖನಾಸಿಯು 6X6 ಉದ್ದ ಮತ್ತು ಅಗಲವನ್ನು ಹೊಂದಿದ್ದು, ಮೇಲ್ಛಾವಣಿಯಲ್ಲಿ ಅರಳಿದ ಪದ್ಮಪುಷ್ಪದ ಭುವನೇಶ್ವರಿಯನ್ನು ಮಾಡಲಾಗಿದ್ದು, ಸುಖನಾಸಿಯಲ್ಲಿ ಬಲಭಾಗದಲ್ಲಿ ಉತ್ಸವ ಮೂರ್ತಿಯನ್ನು ಇರಿಸಲಾಗಿದೆ. ಸುಖನಾಸಿಯ ಬಾಗಿಲು ಅರೆಗಂಬಗಳಿಂದ ನಿರ್ಮಾಣವಾಗಿದ್ದು, ಲಲಾಟಬಿಂಬದಲ್ಲಿ ಯಾವುದೇ ಮೂರ್ತಿಶಿಲ್ಪಗಳ ಕೆತ್ತನೆ ಕಂಡುಬರುವುದಿಲ್ಲ. ಸುಖನಾಸಿಯ ಬಾಗಿಲ ಇಕ್ಕೆಲಗಳಲ್ಲಿ ದ್ವಾರಪಾಲಕರನ್ನು ಕೆತ್ತಲು ಜೋಡಿಸಿದಂತಹ ಕಲ್ಲುಗಳನ್ನು ಹಾಗೆಯೇ ಉಳಿಸಲಾಗಿದೆ.

**ಉತ್ತರ ಗರ್ಭಗೃಹ**

ಉತ್ತರ ಗರ್ಭಗೃಹವು 10X10 ಅಡಿ ಉದ್ದ ಮತ್ತು ಅಗಲ ಹೊಂದಿದ್ದು ಚೌಕಾಕಾರವಾಗಿದೆ. **(ಚಿ.ಸಂ.48)** ಈ ಗರ್ಭಗೃಹದ ಮಧ್ಯಭಾಗದಲ್ಲಿ ನಕ್ಷತ್ರಾಕಾರದ ಪಾಣಿಪೀಠದ ಮೇಲೆ ಒಂದು ಅಡಿ ಎತ್ತರವಿರುವ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಗರ್ಭಗೃಹದ ಭಿತ್ತಿಯು ಸರಳವಾಗಿದ್ದು, ಬಳಪದ ಕಲ್ಲಿನ ಚಪ್ಪಡಿಗಳಿಂದ ನಿರ್ಮಿಸಲಾಗಿದೆ. ಗರ್ಭಗೃಹದ ಮೇಲ್ಛಾವಣಿಯಲ್ಲಿ ನಕ್ಷತ್ರಾಕಾರದ ಭುವನೇಶ್ವರಿ ಇದೆ. ಇದರ ಮಧ್ಯದಲ್ಲಿ ಅರಳಿದ ಪದ್ಮಪುಷ್ಪವನ್ನು ಬಿಡಿಸಲಾಗಿದೆ. ಗರ್ಭಗೃಹದ ಬಾಗಿಲು ಸಾಧಾರಣವಾಗಿದೆ. ಇದಕ್ಕೆ ಸುಖನಾಸಿ ಕಾಣಬರುವುದಿಲ್ಲ.

**ದಕ್ಷಿಣದ ಗರ್ಭಗೃಹ**

ದಕ್ಷಿಣದ ಗರ್ಭಗೃಹವು ಸಹ 10X10 ಅಡಿ ಉದ್ದ ಅಗಲ ಹೊಂದಿದ್ದು ಚೌಕಾಕಾರವಾಗಿದೆ. ಈ ಗರ್ಭಗೃಹದ ಮಧ್ಯಭಾಗದಲ್ಲಿ ನಕ್ಷತ್ರಾಕಾರದ ಪಾಣಿಪೀಠದ ಮೇಲೆ ಒಂದು ಅಡಿ ಎತ್ತರವಿರುವ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. **(ಚಿ.ಸಂ.49)** ಗರ್ಭಗೃಹದ ಮೇಲ್ಛಾವಣಿಯಲ್ಲಿ ನಕ್ಷತ್ರಾಕಾರವಾಗಿರುವ ಭುವನೇಶ್ವರಿ ಮಾಡಿ ಮಧ್ಯದಲ್ಲಿ ಅರಳಿದ ಪದ್ಮ ಪುಷ್ಪವನ್ನು ಬಿಡಿಸಲಾಗಿದೆ. ಗರ್ಭಗೃಹದ ಬಾಗಿಲು ಉಳಿದಂತೆ ಸರಳವಾಗಿದೆ. ಸುಖನಾಸಿಯ ಬಾಗಿಲ ಬಲಭಾಗದಲ್ಲಿ ಪೂರ್ವಾಭಿಮುಖವಾಗಿ ಪದ್ಮಾಸನದಲ್ಲಿ ಕುಳಿತಿರುವ ಗಣೇಶನ ಮೂರ್ತಿಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ **(ಚಿ.ಸಂ.50)** ಈ ಗಣೇಶ ಮೂರ್ತಿಯು ಸುಂದರವಾಗಿ ಕೆತ್ತಲ್ಪಟ್ಟಿದ್ದು ಹೊಳಪಿನಿಂದ ಮತ್ತು ವಿವಿಧ ಅಲಂಕರಣೆಯಿಂದ ಕೂಡಿದೆ. ಈ ಮೂರ್ತಿಯು 4 ಅಡಿ ಎತ್ತರವಾಗಿದ್ದು ಚತುರ್ಭುಜವನ್ನು ಹೊಂದಿದ್ದಾನೆ. ಕೈಗಳಲ್ಲಿ ಪಾಶ, ಅಂಕುಶ, ಫಲ ಮತ್ತು ಅಭಯ ಹಸ್ತವನ್ನು ಹೊಂದಿದ್ದಾನೆ. ಮೈಮೇಲೆ ವಿವಿಧ ಆಭರಣಗಳನ್ನು ಹೊಂದಿರುವ ಈ ದೇವನು ಕೈಕಡಗ, ಉದರಬಂಧ ಕಿರೀಟ ಧರಿಸಿದ್ದಾನೆ. ಮೂರ್ತಿ ಶಿಲ್ಪದ ಹಿಂದಿನ ಭಾಗದಲ್ಲಿ ಬಳ್ಳಿಸುರುಳಿಗಳ ಪ್ರಭಾವಳಿ ಇದ್ದು ಅಂತ್ಯದಲ್ಲಿ ಕೀರ್ತಿಮುಖ ಕಂಡುಬರುತ್ತದೆ. ಸುಖನಾಸಿಯ ಎಡಭಾಗದಲ್ಲಿ ಭೈರವನ ಶಿಲ್ಪವಿದ್ದು ಇದು ಸುಮಾರು ಮೂರು ಅಡಿಗಳ ಎತ್ತರವಿದೆ. ಸಮಭಂಗಿಯಲ್ಲಿ ನಿಂತಿದ್ದು ಚತುರ್ಭುಜ ಹೊಂದಿದ್ದಾನೆ. ಈ ದೇವನು ತನ್ನ ಕೈಗಳಲ್ಲಿ ತ್ರಿಶೂಲ, ಡಮರು, ಕತ್ತಿ, ರುಂಡವನ್ನು ಹಿಡಿದು ಕೊಂಡಿದ್ದಾನೆ. ಈ ದೇವನ ಇಕ್ಕೆಲಗಳಲ್ಲಿ ಸೇವಕರು ನಿಂತಿದ್ದಾರೆ. ತಲೆಯ ಮೇಲೆ ಬೆಂಕಿ ಜ್ವಾಲೆಯನ್ನು ಬಿಡಿಸಲಾಗಿದೆ. ಈ ಮೂರ್ತಿಶಿಲ್ಪವು ನಾಲ್ಕು ಅಡಿ ಎತ್ತರವಿದ್ದು ತ್ರಿಶೂಲ, ಡಮರು, ದಂಡ ಮತ್ತು ಅಭಯ ಹಸ್ತ ಹೊಂದಿದ್ದಾನೆ. ಈ ದೇವನ

ಇಕ್ಕೆಲಗಳಲ್ಲಿ ಡೋಲನ್ನು ಬಾರಿಸುತ್ತಿರುವ ಪುರುಷ ಸಂಗೀತಗಾರರ ಕೆತ್ತನೆಯನ್ನು ಕಾಣಬಹುದು.

**ನವರಂಗ**

ದೇವಾಲಯವು ಸಂಪೂರ್ಣವಾಗಿ ಬಿದ್ದು ಹೋಗಿದ್ದರಿಂದ ಇದೇ ದೇವಾಲಯದ ಪರಿಕರಗಳನ್ನು ಉಪಯೋಗಿಸಿ ದೇವಾಲಯವನ್ನು ಪುನರ್ ಜೀರ್ಣೋದ್ಧಾರ ಮಾಡಲಾಗಿದೆ. ವೈಜ್ಞಾನಿಕವಾಗಿ ದೇವಾಲಯದ ಎಲ್ಲಾ ಭಾಗಗಳನ್ನು ಸ್ವಚ್ಛಗೊಳಿಸಲಾಗಿದೆ. ದೇವಾಲಯದ ನವರಂಗವು 25X25 ಅಡಿ ಉದ್ದ ಮತ್ತು ಅಗಲ ಹೊಂದಿದ್ದು ಚೌಕಾಕಾರವಾಗಿದೆ. ನವರಂಗದ ಮಧ್ಯದಲ್ಲಿ ಹೊಯ್ಸಳ ಶೈಲಿಯ 4 ಕಂಬಗಳಿದ್ದು, 6 ಅಡಿಗಳ ಎತ್ತರವನ್ನು ಹೊಂದಿವೆ. **(ಚಿ.ಸಂ.51)** ಕಂಬಗಳು ಚೌಕ, ಸಿಲಿಂಡರಿನಾಕಾರ, ಗಾಲಿಯಾಕಾರವಾಗಿದೆ ಮತ್ತು ಉರುಳೆಯಾಕಾರದ ಬೋಧಿಗೆಯನ್ನು ಹೊಂದಿದೆ.

ನವರಂಗದಲ್ಲಿ ಒಟ್ಟು ಒಂಭತ್ತು ಭುವನೇಶ್ವರಿಗಳಿವೆ. ಮಧ್ಯದ ಭಾಗದಲ್ಲಿರುವ ಪ್ರಧಾನ ಭುವನೇಶ್ವರಿಯು ಮಾತ್ರ ಪ್ರಸ್ತುತ ಸುಸ್ಥಿತಿಯಲ್ಲಿದ್ದು ಇನ್ನುಳಿದ ಎಂಟು ಭುವನೇಶ್ವರಿಗಳು ನಾಶವಾಗಿವೆ. ಇತ್ತೀಚಿಗೆ ಜೀರ್ಣೋದ್ಧಾರ ಮಾಡುವ ಸಮಯದಲ್ಲಿ ಭುವನೇಶ್ವರಿಗಳ ಪಟ್ಟಿಕೆಯ ಕಲ್ಲುಗಳನ್ನು ಹಾಗೆಯೇ ಜೋಡಿಸಿ ಮೇಲ್ಭಾಗಕ್ಕೆ ಗಾಜಿನ ಹೆಂಚುಗಳನ್ನು ಜೋಡಿಸಿ ನಿರ್ಮಿಸಲಾಗಿದೆ. ಇದರಿಂದಾಗಿ ದೇವಾಲಯಕ್ಕೆ ಸಾಕಷ್ಟು ಬೆಳಕು ಬರುವಂತಾಗಿದೆ. ಮಧ್ಯದ ಭುವನೇಶ್ವರಿಯಲ್ಲಿ ಅರಳಿದ ಪದ್ಮಪುಷ್ಪವನ್ನು ಬಿಡಿಸಲಾಗಿದ್ದು 5 ಪಟ್ಟಿಕೆಗಳಿಂದ ಕೂಡಿದೆ. ಈ ಪಟ್ಟಿಕೆಗಳ ಸುತ್ತಲೂ ಕಮಲದ ಪುಷ್ಪಗಳು, ಮಣಿಹಾರಗಳ ಕೆತ್ತನೆಯನ್ನು ಕಾಣಬಹುದು. ಈ ದೇವಾಲಯದ ಮುಖಮಂಟಪ ಪ್ರಕೃತಿ ವಿಕೋಪಕ್ಕೆ ಸಿಲುಕಿ ನಶಿಸಿ ಹೋಗಿದೆ.

**ಅಧಿಷ್ಠಾನ**

ಮೂರು ಅಡಿ ಎತ್ತರವಿರುವ ಅದಿಷ್ಠಾನವು 5 ಪಟ್ಟಿಕೆಗಳಿಂದ ಕೂಡಿದೆ. ಹಿನ್ಸರಿತ ಮತ್ತು ಮುನ್ಸರಿತದಂತೆ ಜೋಡಿಸಲಾಗಿದ್ದು, ಇತ್ತೀಚಿಗೆ ಜೀರ್ಣೋದ್ಧಾರಗೊಂಡಿದೆ. ಪ್ರಾಚೀನ ಕಾಲದಲ್ಲಿ ನಕ್ಷತ್ರಾಕಾರದ ತಳವಿನ್ಯಾಸವಿದ್ದರೂ ಸಹ ಪ್ರಕೃತಿಯ ವಿಕೋಪಕ್ಕೆ ತುತ್ತಾಗಿ ಅದು ಈಗ ಕಂಡುಬರುವುದಿಲ್ಲ. ಇತ್ತೀಚಿಗೆ ದೇವಾಲಯದ ಸುತ್ತಲೂ ಕಲ್ಲಿನಲ್ಲಿ ಎತ್ತರವಾದ ವೇದಿಕೆಯನ್ನು ದೇವಾಲಯಕ್ಕೆ ರಕ್ಷಣೆ ಒದಗಿಸಲಾಗಿದೆ. **(ಚಿ.ಸಂ.52)**

**ಭಿತ್ತಿ**

ದೇವಾಲಯದ ಭಿತ್ತಿಯು ಜೀರ್ಣೋದ್ಧಾರಗೊಂಡಿದ್ದು, ಬಳಪದ ಕಲ್ಲಿನ ಚಪ್ಪಡಿಗಳನ್ನು ಜೋಡಿಸಿ ನಿರ್ಮಿಸಲಾಗಿದೆ. ಈ ಭಿತ್ತಿಯಲ್ಲಿ ಯಾವುದೇ ಭಿತ್ತಿಶಿಲ್ಪಗಳು ಕಂಡುಬರುವುದಿಲ್ಲ. ಮಳೆಯ ನೀರಿನ ರಕ್ಷಣೆಗೋಸ್ಕರ ಗಾರೆಯಿಂದ ಇತ್ತೀಚಿಗೆ ಮೇಲ್ಛಾವಣಿ ಮತ್ತು ಕಪೋತವನ್ನು ನಿರ್ಮಿಸಲಾಗಿದೆ. ಈ ದೇವಾಲಯದ ಶಿಖರ ಬಿದ್ದು ಹೋಗಿರುವುದರಿಂದ ಗರ್ಭಗೃಹದ ಮೇಲೆ ಶಿಖರ ಕಂಡುಬರುವುದಿಲ್ಲ. ದೇವಾಲಯದ ಪ್ರವೇಶದ್ವಾರ ಅರೆಗಂಬಗಳಂದ ನಿರ್ಮಾಣವಾಗಿದ್ದು, ಇತ್ತೀಚಿಗೆ ಕಬ್ಬಿಣದ ತಗಡಿನ ಬಾಗಿಲನ್ನು ಮಾಡಿಸಿ ಬಾಗಿಲನ್ನು ಮುಚ್ಚಲು ವ್ಯವಸ್ಥೆ ಮಾಡಲಾಗಿದೆ. ದೇವಾಲಯಕ್ಕೆ ಹೋಗಲು ಕಣಶಿಲೆಯ ಚಪ್ಪಡಿಗಳ ಮೆಟ್ಟಿಲುಗಳನ್ನು ನಿರ್ಮಿಸಿ ಪ್ರವೇಶವನ್ನು ಕಲ್ಪಿಸಲಾಗಿದೆ. [95]

**ಈಶ್ವರ ದೇವಾಲಯ–ಸೂಳೆಕೆರೆ**

ತುರುವೇಕೆರೆ ತಾಲೂಕು ಕೇಂದ್ರದಿಂದ ದಬ್ಬೇಘಟ್ಟಕ್ಕೆ ಹೋಗುವ ರಸ್ತೆಯಲ್ಲಿ ತುರುವೇಕೆರೆ ಪಟ್ಟಣದಿಂದ ವಾಯುವ್ಯ ದಿಕ್ಕಿನಲ್ಲಿ ಕಂಡುಬರುತ್ತದೆ. ನಾಲ್ಕು ಕಿ.ಮೀ ದೂರದಲ್ಲಿ ಸೂಳೆಕೆರೆ ಗ್ರಾಮವು ಕಂಡುಬರುತ್ತದೆ. ಊರಿನ ಹೊರಭಾಗದಲ್ಲಿ ವಾಯುವ್ಯ ದಿಕ್ಕಿಗೆ ಪೂರ್ವಾಭಿಮುಖವಾಗಿ ಸ್ಥಾಪಿಸಿರುವ ಸುಮಾರು ಐದು ಅಡಿ ಎತ್ತರವಿರುವ ಪಟ್ಟಿಕೆಗಳನ್ನು ಹೊಂದಿರುವ ಮಾಸ್ತಿಕಲ್ಲು ಕಂಡುಬರುತ್ತದೆ. ಇದನ್ನು ಪ್ರಸ್ತುತ ಸ್ಥಳೀಯ ಜನರು 'ಸೂಳಕಾಲಮ್ಮ ದೇವರು' ಎಂಬ ಹೆಸರಿನೊಂದಿಗೆ ಪೂಜಿಸುತ್ತಿದ್ದಾರೆ. ಆದ್ದರಿಂದ ಈ ಸೂಳಕಾಲಮ್ಮ ದೇವರ ಹೆಸರಿನಿಂದಾಗಿ ಈ ಗ್ರಾಮಕ್ಕೆ 'ಸೂಳೆಕೆರೆ' ಎಂಬ ಹೆಸರು ಬಂದಿತೆಂಬ ಐತಿಹ್ಯವಿದೆ. ಈಗಲೂ ಸೂಳಕಾಲಮ್ಮ ಮಹಾಸತಿಯ ಕಲ್ಲಿನ ಎದುರು ಒಂದು ವಿಶಾಲವಾದ ಕೆರೆಯನ್ನು ನಾವು ಕಾಣಬಹುದು.[96]

ಈ ಸೂಳೆಕೆರೆ ಗ್ರಾಮದಲ್ಲಿ ಊರಿನ ಈಶಾನ್ಯ ಭಾಗದಲ್ಲಿ ಪೂರ್ವಾಭಿಮುಖವಾಗಿ ಈಶ್ವರ ದೇವಾಲಯ ನಿರ್ಮಾಣಗೊಂಡಿದೆ. ಇದೊಂದು ಏಕಕೂಟ ದೇವಾಲಯವಾಗಿದ್ದು ಹೊಯ್ಸಳ ಶೈಲಿಯನ್ನು ಹೊಂದಿದೆ.[97] ಈ ದೇವಾಲಯದ ನಿರ್ಮಾಣದ ಕಾಲದ ಬಗ್ಗೆ ನಮಗೆ ಯಾವುದೇ ನಿಖರವಾದ ಸಾಹಿತ್ಯಾಧಾರಗಳಾಗಲಿ ಮತ್ತು ಶಾಸನಾಧಾರಗಳು ಕಂಡು ಬರುವುದಿಲ್ಲ. ಆದರೆ ಈ ದೇವಾಲಯದ ವಾಸ್ತುಲಕ್ಷಣಗಳನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡಿ ಗಮನಿಸಿದಾಗ ಇದು ಹೊಯ್ಸಳ ಶೈಲಿಯ ವಾಸ್ತು ಎಂಬುದು ಮನವರಿಕೆಯಾಗುತ್ತದೆ.

**ಗರ್ಭಗೃಹ**

ಗರ್ಭಗೃಹವು 8X8 ಅಡಿ ಉದ್ದ ಮತ್ತು ಅಗಲ ಹೊಂದಿದ್ದು ಚೌಕಾಕಾರವಾಗಿದೆ. ಈ ಗರ್ಭಗೃಹದ ಮಧ್ಯಭಾಗದಲ್ಲಿ ಸುಮಾರು 2 ಅಡಿ ಎತ್ತರವಿರುವ ಪಾಣಿಪೀಠದ ಮೇಲೆ ಒಂದು ಅಡಿ ಎತ್ತರವಿರುವ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. **(ಚಿ.ಸಂ.53)** ಗರ್ಭಗೃಹದ ನೆಲಹಾಸನ್ನು ಇತ್ತೀಚಿಗೆ ಕಣಶಿಲೆಯಲ್ಲಿ ನಿರ್ಮಿಸಿದ್ದು, ಗರ್ಭಗೃಹದ ಭಿತ್ತಿಯನ್ನು ಸಾಧಾರಣ ಕಲ್ಲು ಚಪ್ಪಡಿಗಳಿಂದ ನಿರ್ಮಿಸಲಾಗಿದೆ. ಈ ಭಿತ್ತಿಯಲ್ಲಿ ಯಾವುದೇ ಅರೆಗಂಬಗಳು ಅಥವಾ ಶಿಲ್ಪಗಳು ಕಂಡುಬರುವುದಿಲ್ಲ. ಗರ್ಭಗೃಹದ ಮೇಲ್ಛಾವಣಿಯಲ್ಲಿ ನಕ್ಷತ್ರಾಕಾರದ ಭುವನೇಶ್ವರಿಯನ್ನು ನಿರ್ಮಿಸಿದ್ದು ಭುವನೇಶ್ವರಿಯ ಮಧ್ಯಭಾಗದಲ್ಲಿ ಅರಳಿದ ಕಮಲದ ಪುಷ್ಪವನ್ನು ಬಿಡಿಸಲಾಗಿದೆ. ಈ ಭುವನೇಶ್ವರಿಯನ್ನು ಎರಡು ಹಂತಗಳಲ್ಲಿ ನಿರ್ಮಿಸಲಾಗಿದ್ದು, ಮೊದಲನೆಯ ಹಂತದಲ್ಲಿ ಸುತ್ತಲೂ ಪದ್ಮಪುಷ್ಪಗಳನ್ನು ಬಿಡಿಸಲಾಗಿದೆ. ಗರ್ಭಗೃಹದ ಬಾಗಿಲು ಅರೆಗಂಬಗಳಿಂದ ನಿರ್ಮಿತವಾಗಿದ್ದು ಲಲಾಟಬಿಂಬದಲ್ಲಿ ಯಾವುದೇ ಶಿಲ್ಪಗಳು ಕಂಡುಬರುವುದಿಲ್ಲ.

**ಸುಖನಾಸಿ**

ಸುಖನಾಸಿಯು ಗರ್ಭಗೃಹದಷ್ಟೇ ಉದ್ದಗಲವನ್ನು ಹೊಂದಿದ್ದು, ಸುಖನಾಸಿಯ ಮೇಲ್ಛಾವಣಿಯಲ್ಲಿ ಭುವನೇಶ್ವರಿಯನ್ನು ನಿರ್ಮಿಸಲಾಗಿದೆ. ಈ ಭುವನೇಶ್ವರಿಯು ಗರ್ಭಗೃಹದ ಭುವನೇಶ್ವರಿಯ ಲಕ್ಷಣಗಳನ್ನು ಹೊಂದಿದ್ದು ಮಧ್ಯದಲ್ಲಿ ಅರಳಿದ ಪದ್ಮಪುಷ್ಪವನ್ನು ಬಿಡಿಸಲಾಗಿದೆ. ಸುಖನಾಸಿಯ ಮಧ್ಯಭಾಗದಲ್ಲಿ ಗರ್ಭಗೃಹದ ಶಿವಲಿಂಗಕ್ಕೆ ಅಭಿಮುಖವಾಗಿ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. **(ಚಿ.ಸಂ.54)** ಈ ನಂದಿಯು ಕಡುಕಪ್ಪು ಕಣಶಿಲೆಯಲ್ಲಿ ನಿರ್ಮಾಣಗೊಂಡಿದ್ದು ಸಾಧಾರಣವಾದ ಅಲಂಕರಣೆಯನ್ನು ಹೊಂದಿದೆ. ಸುಖನಾಸಿಯ ಎಡಭಾಗದಲ್ಲಿ ನಾಗಶಿಲ್ಪವನ್ನು ಇರಿಸಲಾಗಿದೆ. ಭಿತ್ತಿಯು ಸರಳವಾಗಿದ್ದು ಸಾಧಾರಣ ಕಲ್ಲು ಚಪ್ಪಡಿಗಳಿಂದ ನಿರ್ಮಾಸಲಾಗಿದೆ. ಈ ದೇವಾಲಯದ ನವರಂಗ ಮತ್ತು ಮುಖಮಂಟಪಗಳು ಮೂಲತಃ ಇದ್ದು ಈಗ ಪ್ರಕೃತಿ ವಿಕೋಪಕ್ಕೆ ತುತ್ತಾಗಿ ಈ ಎರಡು ಭಾಗಗಳು ಕಣ್ಮರೆಯಾಗಿದೆ. ಇತ್ತೀಚಿಗೆ ಜೀರ್ಣೋದ್ಧಾರ ಮಾಡಿ ಹೊಸ ಮುಖಮಂಟಪವನ್ನು ನಿರ್ಮಿಸಲಾಗಿದೆ.

**ಅಧಿಷ್ಠಾನ:–** ಅಧಿಷ್ಠಾನವು ಸರಳವಾಗಿದೆ. ಇದರಲ್ಲಿ ಜೋಡಿಸಲಾಗಿರುವ ಕಲ್ಲುಗಳನ್ನು ಹಿನ್ಸರಿತ ಮತ್ತು ಮುನ್ಸರಿತದಂತೆ ಕ್ರಮವಾಗಿ ಜೋಡಿಸಿ ನಿರ್ಮಿಸಲಾಗಿದೆ. ಈ ಅಧಿಷ್ಠಾನಕ್ಕೆ ಸೇರಿಸಿರುವ ಕಲ್ಲು ಚಪ್ಪಡಿಗಳು ಅಲ್ಲಲ್ಲಿ ಬಿರುಕು ಬಿಟ್ಟಿದ್ದು ಗಿಡಗಂಟಿಗಳು ಬೆಳೆದಿವೆ.

**ಭಿತ್ತಿ:–** ಭಿತ್ತಿಯು ಕಲ್ಲು ಚಪ್ಪಡಿಗಳಿಂದ ನಿರ್ಮಿತವಾಗಿದ್ದು, ಹೊಯ್ಸಳ ಶೈಲಿಯ ಜೋಡಿಸಿದ ಅರೆಗಂಭಗಳನ್ನು ದೇವಾಲಯದ ಸುತ್ತಲೂ ಭಿತ್ತಿಗೆ ಸೇರಿಸಲಾಗಿದೆ. ಭಿತ್ತಿಯಲ್ಲಿ ಯಾವುದೇ ಮೂರ್ತಿಶಿಲ್ಪಗಳು ಕಂಡುಬರುವುದಿಲ್ಲ. ಭಿತ್ತಿಯ ಮೇಲೆ ಬೆಣಚುಕಲ್ಲಿನ ದಿಮ್ಮಿಗಳನ್ನು ಉಪಯೋಗಿಸಿ ಕಪೋತವನ್ನು ನಿರ್ಮಿಸಲಾಗಿದೆ. ಗರ್ಭಗೃಹದ ಮೇಲ್ಭಾಗದಲ್ಲಿ ಎರಡು ಅಡಿಗಳ ಸಣ್ಣ ಶಿಖರವಿದೆ. ಇತ್ತೀಚಿಗೆ ದೇವಾಲಯವನ್ನು ಜೀರ್ಣೋದ್ಧಾರಗೊಳಿಸುವ ಸಂಧರ್ಭದಲ್ಲಿ ದೇವಾಲಯದ ಹಾರದ ಭಾಗದಲ್ಲಿ ಇಟ್ಟಿಗೆಗಳಿಂದ ಗೋಡೆಯನ್ನು ನಿರ್ಮಿಸಲಾಗಿದೆ. ದೇವಾಲಯದ ಮೇಲೆ ನಾಲ್ಕು ದಿಕ್ಕುಗಳಲ್ಲಿಯೂ ಇತ್ತೀಚಿಗೆ ನಂದಿಯನ್ನು ಗಾರೆ ಮತ್ತು ಇಟ್ಟಿಗೆಯನ್ನು ಉಪಯೋಗಿಸಿ ನಿರ್ಮಿಸಲಾಗಿದೆ. ದೇವಾಲಯಕ್ಕೆ ಯಾವುದೇ ಪ್ರಾಕಾರವಾಗಲಿ, ನಂದಿಕಂಬವಾಗಲಿ ಕಂಡುಬರುವುದಿಲ್ಲ. ಈ ದೇವಾಲಯದ ಮುಂದಿನ ಆವರಣದಲ್ಲಿ ಮಹಾಸತಿ ಕಲ್ಲುಗಳನ್ನು ನಿಲ್ಲಿಸಲಾಗಿದೆ.

**ಅಘೋರೇಶ್ವರ ದೇವಾಲಯ–ತಾವರೇಕೆರೆ**

ತುರುವೇಕರೆ ತಾಲೂಕು ಕೇಂದ್ರದಿಂದ 2 ಕಿ.ಮೀ. ದೂರದಲ್ಲಿ ಕಿಬ್ಬನಹಳ್ಳಿಗೆ ಹೋಗುವ ಮಾರ್ಗದಲ್ಲಿ ತಾವರೇಕೆರೆ ಗ್ರಾಮ ಕಂಡುಬರುತ್ತದೆ. ಊರಿನ ವಾಯುವ್ಯ ದಿಕ್ಕಿನಲ್ಲಿ ಉತ್ತರಾಭಿಮುಖವಾಗಿ ಅಘೋರೇಶ್ವರ ದೇವಾಲಯ ನಿರ್ಮಾಣವಾಗಿದೆ. **(ಚಿ.ಸಂ.55)** ಇದೊಂದು ಏಕಕೂಟ ದೇವಾಲಯವಾಗಿದ್ದು ಗರ್ಭಗೃಹ, ಸುಖನಾಸಿ, ನವರಂಗ ಮತ್ತು ಮುಖಮಂಟಪಗಳು ಕಾಣಬರುತ್ತವೆ.ಈ ದೇವಾಲಯವು ಸಂಪೂರ್ಣವಾಗಿ ಕಣಶಿಲೆಯಲ್ಲಿ ನಿರ್ಮಾಣವಾಗಿದೆ.

ಈ ದೇವಾಲಯದ ನಿರ್ಮಾಣ ಕಾಲಕ್ಕೆ ಸಂಬಂಧಿಸಿದ ಯಾವುದೇ ಶಾಸನಾಧಾರಗಳು ನಮಗೆ ದೊರೆಯುವುದಿಲ್ಲ. ಆದರೆ ತುರುವೇಕೆರೆ ಪಟ್ಟಣದಲ್ಲಿ ನಿರ್ಮಾಣವಾಗಿರುವ ವಿಜಯನಗರ ಕಾಲದ ಗಂಗಾಧರೇಶ್ವರ ದೇವಾಲಯವನ್ನು ಹೋಲುವುದರಿಂದ ಮತ್ತು ಮುಖಮಂಟಪದಲ್ಲಿ ಕಂಡುಬರುವ ಸ್ತಂಭಗಳ ಲಕ್ಷಣಗಳ ಆಧಾರದ ಮೇಲೆ ಇದು ವಿಜಯನಗರ ಅರಸರ ಕಾಲದಲ್ಲಿ ನಿರ್ಮಾಣವಾಗಿದೆ ಎಂಬ ಅಭಿಪ್ರಾಯಕ್ಕೆ ಬರಬಹುದು.

**ಗರ್ಭಗೃಹ:**–ಗರ್ಭಗೃಹವು 8X8 ಅಡಿಗಳ ಉದ್ದ ಮತ್ತು ಅಗಲವಾಗಿದ್ದು ಚೌಕಾಕಾರವಾಗಿದೆ. ಮಧ್ಯಭಾಗದಲ್ಲಿ ಮೂರು ಅಡಿ ಪಾಣಿಪೀಠದ ಮೇಲೆ ಎರಡು ಅಡಿ ಎತ್ತರವಿರುವ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. **(ಚಿ.ಸಂ.56)** ಗರ್ಭಗೃಹದ ಮೇಲ್ಛಾವಣಿಯು

ಸರಳವಾಗಿದ್ದು ಮಧ್ಯದಲ್ಲಿ ನಕ್ಷತ್ರಾಕಾರದ ಭುವನೇಶ್ವರಿ ಇದೆ. ಇದರ ಮಧ್ಯದಲ್ಲಿ ಅರಳಿದ ಪದ್ಮಪುಷ್ಪವನ್ನು ಬಿಡಿಸಲಾಗಿದೆ.

**ಸುಖನಾಸಿ:–** ಸುಖನಾಸಿಯು ಸಹ ಗರ್ಭಗೃಹದಷ್ಟೇ ಉದ್ದಗಲವಾಗಿದ್ದು ಚೌಕಾಕಾರವಾಗಿದೆ. ಇದರ ಮದ್ಯಭಾಗದಲ್ಲಿ ಶಿವಲಿಂಗಕ್ಕೆ ಎದುರಾಗಿ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ನಂದಿಯ ಮೈಮೇಲೆ ವಿವಿಧ ಬಗೆಯ ಅಲಂಕರಣದ ಕೆತ್ತನೆ ಮಾಡಲಾಗಿದೆ. ಸುಖನಾಸಿಯ ದ್ವಾರದ ಪಟ್ಟಿಕೆಗಳಲ್ಲಿ ಬಳ್ಳಿಸುರುಳಿಗಳ ಕೆತ್ತನೆಯಿಂದ ಅಲಂಕೃತಗೊಂಡಿದ್ದು ಲಲಾಟಬಿಂಬದಲ್ಲಿ ಗಣೇಶನನ್ನು ಬಿಡಿಸಲಾಗಿದೆ.

**ನವರಂಗ:**–ನವರಂಗವು 25X25 ಅಡಿಗಳ ಉದ್ದ ಮತ್ತು ಅಗಲವಾಗಿದ್ದು ಚೌಕಕಾರವಾಗಿದೆ. ನವರಂಗದ ಮಧ್ಯದಲ್ಲಿ ನಾಲ್ಕು, ಎಂಟು ಮುಖವಿರುವ ಎಂಟು ಅಡಿ ಎತ್ತರದ ನಾಲ್ಕು ಕಂಬಗಳಿವೆ. ಈ ಕಂಬಗಳು ಸಾಧಾರಣ ಬೋದಿಗೆಯನ್ನು ಹೊಂದಿದ್ದು ನಿರಾಲಂಕೃತವಾಗಿವೆ. ಗೋಡೆಗೆ ಹೊಂದಿಕೊಂಡಂತೆ ಒಟ್ಟು ಹನ್ನೆರಡು ಕಂಬಗಳು ನವರಂಗದಲ್ಲಿ ಕಂಡುಬರುತ್ತವೆ. ಮೇಲ್ಛಾವಣಿಗೆ ಕಲ್ಲಿನ ಚಪ್ಪಡಿಗಳನ್ನು ಹಾಸಿ ಮೇಲ್ಛಾವಣಿಯನ್ನು ಮುಚ್ಚಲಾಗಿದೆ. ನವರಂಗದ ಬಲಭಾಗದಲ್ಲಿ ಪೂರ್ವಾಭಿಮುಖವಾಗಿ ನಕ್ಷತ್ರಾಕಾರದ ಎರಡು ಅಡಿ ಎತ್ತರದ ಪೀಠದ ಮೇಲೆ 8 ಕೈಗಳನ್ನು ಹೊಂದಿರುವ ಸುಮಾರು 5 ಅಡಿ ಎತ್ತರದ ಮೂರ್ತಿ ಶಿಲ್ಪವೊಂದನ್ನು ಇರಿಸಲಾಗಿದೆ. ಅದರೆ ಎಲ್ಲಾ ಕೈಗಳು ಮುರಿದು ಹೋಗಿದೆ. ಮುಖಭಾಗವು ಭಗ್ನಗೊಂಡಿದ್ದು ಪ್ರಭಾವಳಿ, ಕೀರ್ತಿಮುಖ ಕಂಡುಬರುತ್ತವೆ. ಭಗ್ನವಾಗಿರುವುದರಿಂದ ಇದು ಯಾವ ಮೂರ್ತಿಶಿಲ್ಪವೆಂದು ತಿಳಿಯಲು ಸಾಧ್ಯವಾಗಿಲ್ಲ. ಆದರೆ ಊರಿನ ಜನರು ಇದನ್ನು ಸ್ಥಳೀಯವಾಗಿ ಕಂಚಿದೇವರು ಎಂದು ಕರೆಯುತ್ತಾರೆ. [98] ನವರಂಗದ ಎಡಭಾಗದಲ್ಲಿ ಒಂದು ಸಣ್ಣ ಕೋಣೆ ಕಂಡುಬರುತ್ತದೆ. ಇದು 5X5 ಅಡಿ ಉದ್ದಗಲವಾಗಿದ್ದು ಇದೂ ಸಹ ಚೌಕಾಕಾರವಾಗಿದೆ. ಮಧ್ಯದಲ್ಲಿ ಎರಡು ಅಡಿ ಎತ್ತರವಿರುವ ಪಾಣಿಪೀಠದ ಮೇಲೆ ಒಂದು ಅಡಿ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದ್ದು ಶಿವಲಿಂಗದ ಎದುರಿಗೆ ಒಂದು ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ.

**ಮುಖಮಂಟಪ:**–ಮುಖಮಂಟಪವು 30X20 ಅಡಿ ಉದ್ದ ಮತ್ತು ಅಗಲವಾಗಿದ್ದು ಆಯತಾಕಾರವಾಗಿದೆ. ಮುಖಮಂಟಪದಲ್ಲಿನ ನಾಲ್ಕು ಕಂಬಗಳನ್ನು ವಿಶಿಷ್ಟ ಕಲಾತ್ಮಕ ಕೆತ್ತನೆಗಳೊಂದಿಗೆ ರಚಿಸಿ ನಿಲ್ಲಿಸಲಾಗಿದ್ದು, ಈ ಕಂಬಗಳ ಮೇಲೆ ಕಲ್ಲು ಚಪ್ಪಡಿಗಳನ್ನು ಹಾಸಿ ಮೇಲ್ಛಾವಣಿ ಮಾಡಲಾಗಿದೆ. ಈ ಕಂಬಗಳು ಸುಮಾರು ಎಂಟು ಅಡಿ ಎತ್ತರವನ್ನು ಹೊಂದಿದ್ದು ಕಣಶಿಲೆಯಲ್ಲಿ ರಚಿತವಾಗಿವೆ. **(ಚಿ.ಸಂ.57)** ಮಂಟಪದಲ್ಲಿರುವ ಕಂಬಗಳು ವಿಜಯನಗರ

ಕಾಲದ ಕಂಬಗಳಾಗಿರುವುದರಿಂದ ಕಂಬಗಳ ಚೌಕದ ಭಾಗದಲ್ಲಿ ಪ್ರಾಣಿಗಳಾದ ಯಾಳಿ, ಸಿಂಹಾಕೃತಿಗಳು, ಅಶ್ವರೋಹಿಗಳಿಂದ ಕೂಡಿದ ಆನೆಯ ಕುಂಭ ಸಿಂಹದ ರೂಪಗಳು ಸ್ತಂಭಗಳಲ್ಲಿ ಕೆತ್ತಲಾಗಿದೆ ಮತ್ತು ಸ್ತಂಭಗಳ ಮೇಲಿನ ಕಪೋತದಲ್ಲಿ ಪದ್ಮಾಕೃತಿಯು ಹೋಗಿ ಬಾಳೆಯ ಹೂವಿನ ಆಕೃತಿ ಬಿಡಿಸಲಾಗಿದೆ. ಇದು ವಿಜಯನಗರ ಕಾಲದ ದೇವಾಲಯಗಳ ಪ್ರಮುಖ ಲಕ್ಷಣಗಳು. [99]

ಕಂಬಗಳಲ್ಲಿ ಸಿಂಹಗಳ ಮೇಲೆ ಪುರುಷನೋರ್ವನು ಕುಳಿತು ಸವಾರಿ ಮಾಡುತ್ತಿರುವಂತೆ ಸಿಂಹಗಳು ತಮ್ಮ ಮುಂಗಾಲುಗಳನ್ನು ಮೇಲೆ ಎತ್ತಿ ಜಿಗಿಯುತ್ತಿರುವಂತೆ ನಾಲ್ಕು ಕಂಬಗಳನ್ನು ಕೆತ್ತಲಾಗಿದೆ. ಇಂತಹ ಸ್ತಂಭಗಳನ್ನು 'ಸಂಯುಕ್ತ' ಸ್ತಂಭ ಎಂದು ಕರೆಯಲಾಗುತ್ತದೆ.

ಪ್ರಧಾನವಾದ ಕಂಬದ ದಿಂಡಿಗೆ ಹೊಂದಿಕೊಂಡಂತೆ ಎತ್ತರವಾದ ಶಿಲ್ಪಗಳನ್ನು ಅಥವಾ ಉಪಸ್ತಂಭಗಳನ್ನು ಹೊಂದಿರುವ ಕಂಬಗಳನ್ನು ಸಂಯುಕ್ತ ಸ್ತಂಭವೆನ್ನುತ್ತಾರೆ. ಈ ರೀತಿಯ ಸ್ತಂಭಗಳು ಬೃಹತ್ಪ್ರಮಾಣದಲ್ಲಿ ನಿರ್ಮಾಣವಾದುದು ವಿಜಯನಗರ ಕಾಲದಲ್ಲಿ. ಅರಂಭ ಕಾಲೀನ ವಿದ್ವಾಂಸರು ಇವುಗಳನ್ನು 'ಸಂಗೀತ ಸ್ತಂಭ' ಮತ್ತು ಯಾಳಿ ಸ್ತಂಭಗಳೆಂದು ಗುರುತಿಸಿದ್ದರು. ಈ ಸಂಯುಕ್ತ ಸ್ತಂಭಗಳಲ್ಲೂ ಹಲವಾರು ಪ್ರಭೇದಗಳಿವೆ. ಸಾಮಾನ್ಯವಾಗಿ ಈ ಕಂಬಗಳ ಪ್ರಧಾನ ದಿಂಡು ಚಿತ್ರಖಂಡ ವರ್ಗಕ್ಕೆ ಸೇರಿರುತ್ತದೆ. ಇವುಗಳ ಮೂರು ಪ್ರಭೇದಗಳೆಂದರೆ:

1. **ವ್ಯಾಳಕಾಂತ**:– ಪ್ರಧಾನ ದಿಂಡಿಗೆ ಹೊಂದಿಕೊಂಡಂತೆ ಎತ್ತರವಾದ, ಜಿಗಿಯುತ್ತಿರುವ ವ್ಯಾಳದ ಶಿಲ್ಪವನ್ನು ಹೊಂದಿರುತ್ತದೆ.
2. **ಸಿಂಹಕಾಂತ**:– ಪ್ರಧಾನ ದಿಂಡಿಗೆ ಹೊಂದಿಕೊಂಡಂತೆ ಎತ್ತರವಾದ, ಜಿಗಿಯುತ್ತಿರುವ ಸಿಂಹದ ಶಿಲ್ಪವನ್ನು ಹೊಂದಿರುತ್ತವೆ.
3. **ಅಶ್ವಕಾಂತ**:– ಪ್ರಧಾನ ದಿಂಡಿಗೆ ಹೊಂದಿಕೊಂಡಂತೆ ಎತ್ತರವಾದ ಜಿಗಿಯುತ್ತಿರುವ ಕುದುರೆಯ ಶಿಲ್ಪವನ್ನು ಹೊಂದಿರುತ್ತದೆ.

ಈ ಪ್ರಾಣಿಯ ಶಿಲ್ಪಗಳನ್ನದೆ ದೇವತೆಗಳ, ಲೀಲಾಮೂರ್ತಿಗಳ, ಪರಿವಾರ ದೇವತೆಗಳ, ಋಷಿ ಮುನಿಗಳ, ಭಕ್ತರ, ರಾಜರ, ರಾಜಪರಿವಾರದ, ಸಂಗೀತಗಾರರ ಮುಂತಾದ ಶಿಲ್ಪಗಳನ್ನು ಕೆತ್ತಿರುವುದನ್ನು ಕಾಣಬಹುದು.[100] ಈ ದೇವಾಲಯದ ಕಂಬಗಳು ಸಿಂಹಕಾಂತ ಸ್ತಂಭಗಳಾಗಿವೆ. ಇಂತಹ ಸಿಂಹಕಾಂತ ಅಥವಾ ಸಿಂಹಪಾದ ಸ್ತಂಭಗಳು ಕರ್ನಾಟಕದಲ್ಲಿ

ಕೆಲವೇ ಉದಾಹರಣೆಗಳು ದೊರೆತಿದ್ದು ಗಂಗಾವಾರದ ಸೋಮೇಶ್ವರ ದೇವಾಲಯದಲ್ಲಿ, ಶಿವರಾಳ ಒಂದು ದೇವಾಲಯದಲ್ಲಿ ಈ ರೀತಿಯ ಸ್ತಂಭಗಳನ್ನು ಕಾಣಬಹುದು. ಇಂತಹ ಸ್ತಂಭಗಳು ಅಪರೂಪವೆನಿಸಿದರೂ ವಿಜಯನಗರ ಕಾಲದ ಸ್ತಂಭಗಳಲ್ಲಿ ಸಾಮಾನ್ಯವಾಗಿ ಇರುತ್ತವೆ.[101] ಈ ದೇವಾಲಯದ ಈ ಸಂಯುಕ್ತ ಸ್ತಂಭಗಳ ಮೇಲೆ ಹಲವಾರು ದೇವ–ದೇವತೆಗಳ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. **(ಚಿ.ಸಂ.58)** ಅವುಗಳಲ್ಲಿ ಲಿಂಗೋದ್ಭವ ಮೂರ್ತಿ, ಶಿವಮೆಚ್ಚಿದ ಕಣ್ಣಪ್ಪ ತನ್ನ ಕಣ್ಣನ್ನು ಬಾಣದಿಂದ ಮೀಟಿ ಶಿವನಿಗೆ ಅರ್ಪಿಸುತ್ತಿರುವ ಕೆತ್ತನೆಗಳು ಕಂಡುಬರುತ್ತವೆ. ತಾಂಡವೇಶ್ವರ, ವಿಷ್ಣು, ಚತುರ್ಮುಖ ಬ್ರಹ್ಮ, ಶಿವತಾಂಡವ ನೃತ್ಯ, ಪಾರ್ವತಿ, ಗಂಗಾ ಮುಂತಾದ ದೇವತೆಗಳ ಕೆತ್ತನೆಗಳಿವೆ. ಕಂಬಗಳ ಮೇಲೆ ಬಳ್ಳಿಸುರುಳಿಗಳ ಅಲಂಕರಣೆ ಇದ್ದು, ಪುಷ್ಪ ಬೋದಿಗೆಯನ್ನು ಹೊಂದಿವೆ. ಬೋದಿಗೆಗಳ ಕೆಳಭಾಗವನ್ನು ತಲೆಕೆಳಕಾದ ತಾವರೆ ಮೊಗ್ಗಿನ ರೀತಿಯಲ್ಲಿ ಕೆತ್ತಲಾಗಿರುತ್ತದೆ. ಈ ಪ್ರಾಕಾರವು ಹದಿಮೂರನೇ ಶತಮಾನದಿಂದ ಬಳಕೆಗೆ ಬಂದು ವಿಜಯನಗರ ಕಾಲದಲ್ಲಿ ಹೇರಳವಾಗಿ ಬಳಸಲ್ಪಡುತ್ತಿತ್ತು.[102] ಈ ವಿಧದಲ್ಲಿ ಮುಂಚಾಚನ್ನು ಹೆಚ್ಚಿಸಿ ಮೇಲಿನ ತೊಲೆಗಳಿಗೆ ದೃಢವಾದ ಆಧಾರವನ್ನು ಕೊಡುತ್ತಿದ್ದರು. ಹೀಗಾಗಿ ವಿಜಯನಗರ ಕಾಲದಲ್ಲಿ ಹೇರಳವಾಗಿ ಬಳಸಲ್ಪಡುತ್ತಿತ್ತು. ಈ ವಿಧದಲ್ಲಿ ಮುಂಚಾಚನ್ನು ಹೆಚ್ಚಿಸಿ ಮೇಲಿನ ತೊಲೆಗಳಿಗೆ ದೃಢವಾದ ಆಧಾರವನ್ನು ಕೊಡುತ್ತಿದ್ದರು. ಹೀಗಾಗಿ ವಿಜಯನಗರದ ಕಾಲದ ತೆರೆದ ಮಂಟಪಗಳಿಗೂ ವಿಶಾಲವಾದ ಹಜಾರಗಳಿಗೂ ಅನುಕೂಲವಾಗುತ್ತಿತ್ತು. ಈ ಮೇಲ್ಕಂಡ ಲಕ್ಷಣಗಳನ್ನು ಹೊಂದಿರುವ ಕಂಬಗಳನ್ನು ತುರುವೇಕೆರೆ ತಾಲೂಕಿನ ಗಂಗಾಧರೇಶ್ವರ ದೇವಾಲಯದ ಉಪಮಂಟಪದಲ್ಲಿ ಕಾಣಬಹುದಾಗಿದೆ.

**ಅಧಿಷ್ಠಾನ**:– ಕಣಶಿಲೆಯಲ್ಲಿ ಅಧಿಷ್ಠಾನವು ರಚಿತವಾಗಿದ್ದು ನಾಲ್ಕು ಅಡಿ ಎತ್ತರವಾಗಿದೆ. ಮುರು ಪಟ್ಟಿಕೆಗಳನ್ನು ಹೊಂದಿದ್ದು ಹಿನ್ಸರಿತ ಮತ್ತು ಮುನ್ಸರಿತದಂತೆ ಕ್ರಮಬದ್ಧವಾಗಿ ಜೋಡಿಸಲಾಗಿದೆ.

**ಭಿತ್ತಿ**:– ಕಣಶಿಲೆಯ ಕಲ್ಲಿನ ದಿಮ್ಮಿಗಳನ್ನು ಒಂದರ ಮೇಲೊಂದರಂತೆ ಕ್ರಮಬದ್ಧವಾಗಿ ಜೋಡಿಸಿ ಭಿತ್ತಿಯನ್ನು ನಿರ್ಮಿಸಲಾಗಿದೆ. ಭಿತ್ತಿಯು ಸರಳವಾಗಿದ್ದು ಭಿತ್ತಿಯಲ್ಲಿ ಯಾವುದೇ ಮೂರ್ತಿಶಿಲ್ಪಗಳು ಕಂಡುಬರುವುದಿಲ್ಲ. ಕಪೋತವನ್ನು ಒಂದು ಅಡಿ ಮುಂಚಾಚಿರುವಂತೆ ಭಿತ್ತಿಯಿಂದ ಹೊರಚಾಚಿರುವಂತೆ ರಚಿಸಲಾಗಿದ್ದ ಹಾರದ ಭಾಗವು ಸರಳವಾಗಿದೆ.

**ಶಿಖರ**:– ದ್ರಾವಿಡ ಶೈಲಿಯ ಶಿಖರವನ್ನು ಹೊಂದಿದೆ. ಈ ಶಿಖರವನ್ನು ಗಾರೆ ಮತ್ತು ಇಟ್ಟಿಗೆಯಿಂದ ನಿರ್ಮಿಸಲಾಗಿದೆ. ಶಿಖರವು ಮೂರು ತಲಗಳನ್ನು ಹೊಂದಿದ್ದು ಕೆಳಹಂತದಲ್ಲಿ ಸಣ್ಣಸಣ್ಣ ಅರೆಗಂಬಗಳು ನಾಲ್ಕುದಿಕ್ಕುಗಳಲ್ಲೂ ಕೋಷ್ಠಗುಡಿಗಳ ರಚನೆಯನ್ನು ಮಾಡಲಾಗಿದೆ.

ಆದರೆ ಈ ಕೋಷ್ಠಗುಡಿಗಳಲ್ಲಿನ ಮೂರ್ತಿಶಿಲ್ಪಗಳು ಈಗ ಕಣ್ಮರೆಯಾಗಿವೆ. ಎರಡನೇ ಹಂತದಲ್ಲಿ ಬಹುಶಃ ಒಂದು ತಲೆ ಎರಡು ದೇಹದ ಸಿಂಹ ಮತ್ತು ನಂದಿಯ ಶಿಲ್ಪಗಳಿದ್ದು ಈಗ ತುಂಬಾ ಶಿಥಿಲವಾಸ್ಥೆಯಲ್ಲಿದ್ದು ಗುರುತಿಸಲು ಅಸಾಧ್ಯವಾಗಿದೆ. ಸ್ತೂಪಿಯನ್ನು ವೃತ್ತಾಕಾರವಾಗಿ ನಿರ್ಮಿಸಲಾಗಿದ್ದು ಮೇಲ್ಭಾಗದಲ್ಲಿನ ಕಳಸ ಕಂಡುಬರುವುದಿಲ್ಲ. **(ಚಿ.ಸಂ.59)** ಶಿಖರವು ತುಂಬಾ ಶಿಥಿಲವಾಗಿದ್ದು ಮುಳ್ಳುಗಿಡಗಳು ಬೆಳೆದಿವೆ. ದೇವಾಲಯದ ಅಧಿಷ್ಠಾನದ ಪಶ್ಚಿಮ ಭಾಗದಲ್ಲಿ ಪ್ರನಾಳ ನಿರ್ಮಿಸಲಾಗಿದ್ದು ಸುಸ್ಥಿತಿಯಲ್ಲಿದೆ ಹಾಗೂ ದೇವಾಲಯದ ಮುಂದೆ ಸೋಪಾನ ನಿರ್ಮಿಸಲಾಗಿದ್ದು ಪ್ರಾಕಾರ ಕಂಡುಬರುವುದಿಲ್ಲ. [103]

**ಈಶ್ವರ ದೇವಾಲಯ-ಬೆನಕನ ಕೆರೆ**

ತುರುವೇಕೆರೆ ತಾಲೂಕು ಕೇಂದ್ರದಿಂದ ದಬ್ಬೇಘಟ ಮತ್ತು ಕದಬಳ್ಳಿ ರಸ್ತೆಯಲ್ಲಿ ತಾಲೂಕು ಕೇಂದ್ರದಿಂದ 15 ಕಿ.ಮೀ ದೂರದಲ್ಲಿ ಬೆನಕನ ಕೆರೆ ಗ್ರಾಮವು ಕಂಡುಬರುತ್ತದೆ. ಊರಿನ ಮಧ್ಯ ಭಾಗದಲ್ಲಿ ಪೂರ್ವಾಭಿಮುಖವಾಗಿ ಈಶ್ವರ ದೇವಾಲಯವನ್ನು ನಿರ್ಮಿಸಲಾಗಿದೆ. ಈ ಈಶ್ವರ ದೇವಾಲಯವು ಏಕಕೂಟ ದೇವಾಲಯವಾಗಿದ್ದು ಒಂದು ಗರ್ಭಗೃಹ, ನವರಂಗ ಮತ್ತು ಮುಖಮಂಟಪ ಕಂಡುಬರುತ್ತವೆ. ಗರ್ಭಗೃಹದ ಮೇಲೆ ದ್ರಾವಿಡ ಶೈಲಿಯ ಶಿಖರವನ್ನು ಹೊಂದಿದೆ. ದೇವಾಲಯದ ನಿರ್ಮಾಣಕಾಲಕ್ಕೆ ಸಂಬಂಧಿಸಿದಂತೆ ನಮಗೆ ಯಾವುದೇ ಶಾಸನಾಧಾರಗಳು ದೊರೆತಿಲ್ಲ. ಮುಖಮಂಟಪದ ಕಂಬಗಳ ಕಲಾಶೈಲಿಯ ಲಕ್ಷಣಗಳ ಆಧಾರದ ಮೇಲೆ ಈ ದೇವಾಲಯವು ವಿಜಯನಗರ ಅರಸರ ಕಾಲದಲ್ಲಿ ನಿರ್ಮಾಣವಾಗಿದೆ ಎಂದು ಹೇಳಬಹುದಾಗಿದೆ.

**ಗರ್ಭಗೃಹ:-**ಗರ್ಭಗೃಹವು 8X8 ಅಡಿ ಉದ್ದ ಮತ್ತು ಅಗಲ ಹೊಂದಿದ್ದು ಚೌಕಾಕಾರವಾಗಿದೆ. ಗರ್ಭಗೃಹದ ಮಧ್ಯಭಾಗದಲ್ಲಿ ಪಾಣಿಪೀಠದ ಮೇಲೆ ಎರಡು ಅಡಿ ಎತ್ತರವಿರುವ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಶಿವಲಿಂಗಕ್ಕೆ ಹಿಂಭಾಗದಲ್ಲಿ ಪಂಚಲೋಹದ ಪ್ರಭಾವಳಿಯನ್ನು ಮಾಡಲಾಗಿದೆ. **(ಚಿ.ಸಂ.60)** ಈ ಪ್ರಭಾವಳಿಯು ನಂದಿ, ಸರ್ಪಗಳ ಚಿತ್ರಣದಿಂದ ಕೂಡಿದ್ದು, ಅಂತ್ಯ ಭಾಗದಲ್ಲಿ ಕೀರ್ತಿಮುಖವನ್ನು ಹೊಂದಿದೆ. ಗರ್ಭಗೃಹದ ಮೇಲ್ಛಾವಣಿಯನ್ನು ಕಣಶಿಲೆಯ ಕಲ್ಲು ಚಪ್ಪಡಿಗಳನ್ನು ಹಾಸಿ ಮುಚ್ಚಲಾಗಿದೆ. ಯಾವುದೇ ಭುವನೇಶ್ವರಿಯ ಅಲಂಕರಣೆ ಕಂಡುಬರುವುದಿಲ್ಲ.

**ಸುಖನಾಸಿ:-**ಸುಖನಾಸಿಯು ಗರ್ಭಗೃಹದಷ್ಟೇ ಉದ್ದ ಮತ್ತು ಅಗಲವನ್ನು ಹೊಂದಿದ್ದು ಚೌಕಾಕಾರವಾಗಿದೆ. ಸುಖನಾಸಿಯ ಬಾಗಿಲ ಬಲಭಾಗದಲ್ಲಿ ಗಣೇಶನ ಮೂರ್ತಿಶಿಲ್ಪವನ್ನು

ಪ್ರತಿಷ್ಠಾಪಿಸಲಾಗಿದೆ. ಈ ಗಣೇಶನು ಚತುರ್ಭುಜವನ್ನು ಹೊಂದಿದ್ದಾನೆ. ಕೈಗಳಲ್ಲಿ ಪಾಶ, ಅಂಕುಶ, ಫಲ ಮತ್ತು ಅಭಯ ಹಸ್ತವನ್ನು ಹೊಂದಿದ್ದಾನೆ. ಸುಖನಾಸಿಯಲ್ಲಿ ಗರ್ಭಗೃಹದ ಶಿವಲಿಂಗಕ್ಕೆ ಅಭಿಮುಖವಾಗಿ ಶಿವನ ವಾಹನವಾದ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ನಂದಿಯು ಕೊರಳಿನಲ್ಲಿ ಗೆಜ್ಜೆಹಾರವಿದ್ದು ಕೊರಳಿಗೆ ಗಂಟೆಹಾರದ ಅಲಂಕರಣದ ಕೆತ್ತನೆ ಇದೆ. ಸುಖನಾಸಿಯ ಒಳಭಾಗ ಸರಳವಾಗಿದೆ. ಯಾವುದೇ ಶಿಲ್ಪಗಳು ಕಂಡುಬರುವುದಿಲ್ಲ. ಈ ದೇವಾಲಯದ ನವರಂಗ ಪ್ರಕೃತಿಯ ವಿಕೋಪಕ್ಕೆ ಬಲಿಯಾಗಿ ಶಿಥಿಲಾವಸ್ಥೆಯಲ್ಲಿದೆ.

**ನವರಂಗ**:- ನವರಂಗವು 20X20 ಅಡಿಗಳ ಉದ್ದ ಅಗಲವಾಗಿದ್ದು ಚೌಕಕಾರವಾಗಿದೆ. ಇದರ ಮಧ್ಯದಲ್ಲಿ ವಿಜಯನಗರ ಶೈಲಿಯಲ್ಲಿರುವ ನಾಲ್ಕು ಕಂಬಗಳಿವೆ. ಇವುಗಳು ಚೌಕ, ಅಷ್ಟ ಮುಖವನ್ನು ಹೊಂದಿದೆ. ಇವುಗಳ ಬೋಧಿಗೆ ಸರಳವಾಗಿದ್ದು ಮೇಲ್ಛಾವಣಿಗೆ ಕಣಶಿಲೆಯ ಕಲ್ಲನ್ನು ಹಾಕಿ ಮುಚ್ಚಲಾಗಿದೆ. ನವರಂಗದ ದ್ವಾರ ಸರಳವಾಗಿದ್ದು ಪಟ್ಟಿಕೆಗಳಲ್ಲಿ ಯಾವುದೇ ರೀತಿ ಅಲಂಕರಣವಿಲ್ಲ.

**ಮುಖಮಂಟಪ:**-ಮುಖಮಂಟಪವು ಆಯಾತಾಕಾರವಾಗಿದ್ದು 10X20 ಅಡಿಗಳ ಉದ್ದ ಮತ್ತು ಅಗಲವನ್ನು ಹೊಂದಿದೆ. ಮುಖಮಂಟಪದ ಮುಂದಿನ ಎರಡು ಕಂಬಗಳು ವಿಜಯನಗರ ಶೈಲಿಯನ್ನು ಹೊಂದಿದ್ದು, 8 ಅಡಿ ಎತ್ತರವಾಗಿದ್ದು 16 ಮುಖವನ್ನು ಹೊಂದಿವೆ. ಪೀಠಭಾಗದಲ್ಲಿ ಯಾವುದೇ ಶಿಲ್ಪ ಕೆತ್ತನೆಗಳು ಕಂಡುಬರುವುದಿಲ್ಲ. ಕಂಬದ ಮಧ್ಯ ದಿಂಡಿನ ಭಾಗದಲ್ಲಿ ನಂದಿಯ ಕೆತ್ತನೆಯನ್ನು ಕಾಣಬಹುದು. ಅಡ್ಡತೊಲೆಗೆ ಆಧಾರ ಭೋದಿಗೆಯನ್ನು ಹೊಂದಿವೆ. ದೇವಾಲಯವು ಪೂರ್ಣವಾಗಿ ಕಣಶಿಲೆಯಲ್ಲಿ ನಿರ್ಮಾಣವಾಗಿದ್ದು, ಅಲ್ಲಲ್ಲಿ ಶಿಥಿಲಗೊಂಡಿದೆ. ಕಣಶಿಲೆಯ ಚೌಕಾಕಾರದ ಕಂಬಗಳನ್ನು ಮಾಡಿ ಭಿತ್ತಿಗೆ ಸೇರಿಸಲಾಗಿದೆ. **(ಚಿ.ಸಂ.61)**

**ಅಧಿಷ್ಠಾನ:**-ಅಧಿಷ್ಠಾನವು ಸುಮಾರು 3 ಅಡಿ ಎತ್ತರವಾಗಿದ್ದು ಪಟ್ಟಿಕೆಗಳನ್ನು ಹಿನ್ಸರಿತ ಮುನ್ಸರಿತದಂತೆ ಜೋಡಿಸಲಾಗಿದ್ದು ಉಳಿದಂತೆ ಸರಳವಾಗಿದೆ.

**ಭಿತ್ತಿ:**-ಭಿತ್ತಿಯನ್ನು ಕಣಶಿಲೆಯ ಕಲ್ಲು ಚಪ್ಪಡಿಗಳನ್ನು ಜೋಡಿಸಿ ನಿರ್ಮಿಸಲಾಗಿದೆ. ಭಿತ್ತಿಯಲ್ಲಿ ಯಾವುದೇ ಮೂರ್ತಿಶಿಲ್ಪಗಳ ಕೆತ್ತನೆಗಳು ಕಂಡುಬರುವುದಿಲ್ಲ. ಕಲ್ಲಿನ ಚಪ್ಪಡಿಯಿಂದ ಕಪೋತವನ್ನು ನಿರ್ಮಿಸಲಾಗಿದ್ದು, ಮಳೆಯ ನೀರು ಹೊರಬರುವಂತೆ ಇಳಿಜಾರಾಗಿ ನಿರ್ಮಿಸಲಾಗಿದೆ. ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಿಸಿದ್ದಂತಹ ಕೈಪಿಡಿ ಗೋಡೆಯು ಶಿಥಿಲವಾಗಿ ನಿಂತಿದೆ. ದೇವಾಲಯದ ಮುಖಮಂಟಪದ ಎರಡೂ ದಿಕ್ಕಿನಲ್ಲಿ ಪ್ರತಿಷ್ಠಾಪಿಸಲ್ಪಟ್ಟಿದ್ದ ನಂದಿಗಳು ಶಿಥಿಲವಾಗಿರುವುದರಿಂದ ಮುಖಭಾಗವು ಸ್ಪಷ್ಟವಾಗಿ ಕಂಡುಬರುವುದಿಲ್ಲ

**ಶಿಖರ:**–ದ್ರಾವಿಡ ಶೈಲಿಯ ಶಿಖರವನ್ನು ಹೊಂದಿದ್ದು ಗಾರೆ ಮತ್ತು ಇಟ್ಟಿಗೆಯಿಂದ ನಿರ್ಮಾಣಗೊಂಡಿದೆ. ಶಿಖರವು ಮೂರು ಹಂತಗಳಿಂದ ಕೂಡಿದ್ದು, ಕೆಳಭಾಗದಲ್ಲಿ ಗಾರೆಗಚ್ಚಿನಿಂದ ಮಾಡಿದ ಶಿಲ್ಪಗಳಿವೆ. ಆದರೆ ಅವುಗಳು ವಿರೂಪಗೊಂಡಿವೆ. ಎರಡನೆಯ ಹಂತದಲ್ಲಿ ನಾಲ್ಕು ದಿಕ್ಕಿಗೂ ನಂದಿಯನ್ನು ಗಾರೆಯಿಂದ ಪ್ರತಿಷ್ಠಾಪಿಸಲಾಗಿದೆ. **(ಚಿ.ಸಂ.62)**

ಶಿಖರದ ಮೇಲ್ಭಾಗದಲ್ಲಿರುವ ಸ್ತೂಪಿ ವೃತ್ತಾಕಾರವಾಗಿದ್ದು ಇದರ ನಾಲ್ಕು ದಿಕ್ಕೂಗಳಲ್ಲಿಯೂ ಕೀರ್ತಿಮುಖವನ್ನು ನಿರ್ಮಿಸಲಾಗಿದೆ. ಸ್ತೂಫಿಯ ಮೇಲೆ ಕಳಸ ಕಂಡುಬರುವುದಿಲ್ಲ. ದೇವಾಲಯದ ಮೇಲ್ಭಾಗದಲ್ಲಿ ಬೇವಿನ ಗಿಡಗಳು, ಹುಲ್ಲು ಮುಂತಾದ ಸಸ್ಯಗಳು ಬೆಳೆದಿದ್ದು, ದೇವಾಲಯದ ಕಪೋತ ಭಾಗವು ಶಿಥಿಲವಾಗಿದೆ. ದೇವಾಲಯಕ್ಕೆ ಪ್ರಾಕಾರ ಕಂಡುಬರುವುದಿಲ್ಲ. ದೇವಾಲಯಕ್ಕೆ ಹತ್ತಲು ಕಲ್ಲುಚಪ್ಪಡಿಗಳಿಂದ ನಿರ್ಮಿಸಲಾದ ಮೆಟ್ಟಿಲುಗಳಿವೆ. ದೇವಾಲಯದ ಮುಂಭಾಗದಲ್ಲಿ 4 ಅಡಿ ಎತ್ತರದ ನಂದಿಕಂಬವಿದ್ದು, ಮೇಲ್ಭಾಗದಲ್ಲಿ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ಬೆನಕನಕೆರೆ ಗ್ರಾಮದ ಕೆರೆಯ ಏರಿಯ ಮೇಲೆ ಪ್ರಾಚೀನ ಕಾಲದ ಒಂದು ಕಲ್ಲೇಶ್ವರ ದೇವಾಲಯವಿದೆ. ಈ ದೇವಾಲಯ ಈಗ ಸಂಪೂರ್ಣವಾಗಿ ನಾಶವಾಗಿದೆ. ಪ್ರಸ್ತುತ ಮಣ್ಣಿನಲ್ಲಿ ಹೂತು ಹೋಗಿದ್ದು, ಮೇಲೆ ಗಿಡಗಂಟಿಗಳು ಪೊದೆ ಬೆಳೆದಿವೆ. ಈ ಕಲ್ಲೇಶ್ವರ ದೇವಾಲಯವು ಹೊಯ್ಸಳ ಅರಸರ ಕಾಲದಲ್ಲಿ ನಿರ್ಮಾಣವಾಗಿದ್ದು, ಈಗ ಅದು ಕಂಡುಬರುವುದಿಲ್ಲ. ಗ್ರಾಮಸ್ಥರು ಆ ದೇವಾಲಯದ ಕೆಲವು ಅಳಿದುಳಿದ ಅವಶೇಷಗಳನ್ನು ಈಶ್ವರ ದೇವಾಲಯದ ಮುಂದೆ ತಂದು ಇಟ್ಟಿದ್ದಾರೆ. ವೀರಗಲ್ಲು, ನಂದಿ ಮುಂತಾದ ವಿಗ್ರಹಗಳಿವೆ.[104]

ಹೀಗೆ ಮೇಲೆ ತಿಳಿಸಿದ ಎಲ್ಲಾ ಅಂಶಗಳನ್ನು ಗಮನಿಸಿದಾಗ ಈ ತುರುವೇಕೆರೆ ತಾಲೂಕಿನಲ್ಲಿ ಕಂಡು ಬರುವ ಶೈವ ದೇವಾಲಯಗಳನ್ನು ಗಮನಿಸಿದಾಗ ಈ ಪ್ರಾಂತ್ಯದಲ್ಲಿ ಹೆಚ್ಚಿನ ಮಟ್ಟದಲ್ಲಿ ಶೈವ ಧರ್ಮದ ಪ್ರಭಾವ ಹೆಚ್ಚಾಗಿದ್ದು ಧಾರ್ಮಿಕ ಪ್ರಭುತ್ವವನ್ನು ಸಾಧಿಸುವಲ್ಲಿ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ ಕ್ಷೇತ್ರಗಳ ಮೇಲೆ ಹೆಚ್ಚಿನ ಮಹತ್ವ ನೀಡಿವೆ ಎಂದರೆ ತಪ್ಪಾಗಲಾರದು.

**ಗಂಗಾಧರೇಶ್ವರ ದೇವಾಲಯ–ತುರುವೇಕೆರೆ**

ಗಂಗಾಧರೇಶ್ವರ ದೇವಾಲಯವು ತುರುವೇಕೆರೆ ಪಟ್ಟಣದ ಮಧ್ಯಭಾಗದಲ್ಲಿದ್ದು ಈ ದೇವಾಲಯವು ಉತ್ತರಾಭಿಮುಖವಾಗಿ ನಿರ್ಮಾಣಗೊಂಡಿದೆ. ಇದೊಂದು ಏಕಕೂಟ

ದೇವಾಲಯವಾಗಿದ್ದು ಇದರಲ್ಲಿ ಒಂದು ಗರ್ಭಗೃಹ, ಸುಖನಾಸಿ, ನವರಂಗ, ಮುಖಮಂಟಪ, ಪಾತಾಳಂಕಣ ಮತ್ತು ಪ್ರಾಕಾರವನ್ನು ಕಾಣಬಹುದು.

ಈ ದೇವಾಲಯದ ನಿರ್ಮಾಣಕ್ಕೆ ಸಂಬಂಧಿಸಿದಂತೆ ನಮಗೆ ಯಾವುದೇ ನೇರವಾದ ಶಾಸನಾಧಾರಗಳು ದೊರಕುವುದಿಲ್ಲ. ಈ ದೇವಾಲಯದ ಮುಂದೆ ಪ್ರಾಂಗಣದಲ್ಲಿ ಸ್ಥಾಪಿಸಲಾಗಿರುವ ಸುಮಾರು 20 ಅಡಿ ಎತ್ತರವಿರುವ ದೀಪಸ್ಥಂಭದ ಕೆಳಭಾಗದಲ್ಲಿ ಭಕ್ತ ದಂಪತಿಗಳ ಕೆತ್ತನೆ ಇದೆ. ಈ ಭಕ್ತ ದಂಪತಿಗಳು ದೇವಾಲಯಕ್ಕೆ ಎರಡೂ ಕೈಗಳನ್ನು ಜೋಡಿಸಿ ನಮಿಸುತ್ತಿರುವಂತೆ ಶಿಲ್ಪಗಳನ್ನು ಬಿಡಿಸಲಾಗಿದೆ. ಈ ಭಕ್ತ ಪುರುಷನೇ ಅಯ್ಯಣ್ಣ ನಾಯಕ ಮತ್ತು ಆತನ ಪತ್ನಿ ಎಂದು ಹೇಳಲಾಗಿದ್ದು, ಈ ಅಯ್ಯಣ್ಣ ನಾಯಕನು ಈ ಪ್ರದೇಶದ ಪಾಳೇಯಗಾರನಾಗಿದ್ದು, ಈತನೇ ಗಂಗಾಧರೇಶ್ವರ ದೇವಾಲಯವನ್ನು ನಿರ್ಮಿಸಿದನೆಂದು ಐತಿಹ್ಯವಿದೆ.[105]

ಈ ದೇವಾಲಯವು ದ್ರಾವಿಡ ಶೈಲಿಯಲ್ಲಿ ನಿರ್ಮಾಣವಾಗಿದ್ದು, ಕಂಬಗಳ ಲಕ್ಷಣಗಳು ಮತ್ತು ದೇವಾಲಯದ ವಾಸ್ತುರಚನೆಯ ಆಧಾರದ ಮೇಲೆ ಈ ದೇವಾಲಯವು ವಿಜಯನಗರ ಅರಸರ ಕಾಲದಲ್ಲಿ ನಿರ್ಮಾಣವಾಗಿರಬಹುದೆಂಬ ಅಭಿಪ್ರಾಯಕ್ಕೆ ಬರಬಹುದಾಗಿದೆ. ದ್ವಾರದ ಮುಂದೆ ವಿಜಯನಗರ ಶೈಲಿಯ ಮಂಟಪವನ್ನು ನಿರ್ಮಿಸಲಾಗಿದೆ. **(ಚಿ.ಸಂ.63)**

**ಗರ್ಭಗೃಹ:-** ಗರ್ಭಗೃಹವು 8X8 ಅಡಿ ಉದ್ದ ಮತ್ತು ಅಗಲ ಹೊಂದಿದ್ದು ಚೌಕಾಕಾರವಾಗಿದೆ. ಈ ಗರ್ಭಗೃಹದ ಮಧ್ಯಭಾಗದಲ್ಲಿ ಸುಮಾರು 2.5 ಅಡಿ ಎತ್ತರವಿರುವ ನಕ್ಷತ್ರಾಕಾರದ ಪಾಣಿಪೀಠದ ಮೇಲೆ ಗಂಗಾಧರೇಶ್ವರ ಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಉಳಿದಂತೆ ಗರ್ಭಗೃಹವು ಸರಳವಾಗಿದೆ. 2 ಅಡಿ ಎತ್ತರವಿರುವ ಈ ಶಿವಲಿಂಗವು ಹಲವು ವಿಶೇಷತೆಗಳಿಂದ ಕೂಡಿದೆ. ಹೊಯ್ಸಳ ಶಿಲ್ಪಗಳಲ್ಲಿ ಅಲಂಕರಣದ ಪರಕಾಷ್ಟೆಯನ್ನು ಹೊಂದಿರುವ ತುರುವೇಕೆರೆಯ ಈ ದೇವಾಲಯದ ಲಿಂಗದಲ್ಲಿ ಆಗಮೋಕ್ತ ವಿನ್ಯಾಸವನ್ನು ಮೀರಿ ಚಪ್ಪಟೆಯಾದ ಲಿಂಗಶಿರದ ಮೇಲೆ ಮಾನವ ರೂಪದ ಗಂಗೆಯನ್ನು ಕುಳಿತ ಭಂಗಿಯಲ್ಲಿ ಕಡೆಯಲಾಗಿದೆ. ಶಿವ ಲಿಂಗದ ಶಿರದ ಮೇಲೆ ಗುಂಗುರು ಗುಂಗುರಾದ ಜಟೆ ಇದ್ದು, ಗಂಗೆಯ ಹಿಂಬದಿಯಲ್ಲಿ ಪ್ರಭಾವಳಿಯಂತೆ ಶಿವಲಿಂಗದ ಜಟೆಯುಹರಡಿ ನಿಂತಿರುವುದು ಈ ಲಿಂಗದ ವಿಶೇಷವಾಗಿದ್ದು ಹೊಯ್ಸಳ ಶಿಲ್ಪಿಯ ಅಲಂಕರಣದ ದಾಹವನ್ನು ಇದು ಪ್ರತಿಫಲಿಸುತ್ತದೆ. ಈ ಲಿಂಗದ ಬ್ರಹ್ಮಸೂತ್ರ ರೇಖೆಯು ಮಾತ್ರ ಬಹು ಕೃತಕವಾಗಿದ್ದು ಹೊಯ್ಸಳರ ಇನ್ನಾವುದೇ ಲಿಂಗದಲ್ಲೂ ಕಂಡುಬರದಂತಹ ಕೃತ್ರಿಮ ರಚನೆಯನ್ನು ಹೊಂದಿದೆ.[106] ಈ ಲಿಂಗದ ಕೆತ್ತನೆಯು ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು ಶಿವಲಿಂಗದ ಮೇಲೆ ಅಭಿಷೇಕ ಮಾಡಿದರೆ ಅಭಿಷೇಕದ ನೀರು, ಹಾಲು, ಮೊಸರು,

ಮುಂತಾದವುಗಳು ಜಟಾದ ಗೆರೆಗಳ ಮಧ್ಯದಲ್ಲಿ ಪಶ್ಚಿಮಾಭಿಮುಖವಾಗಿ ಹರಿದು ಹೋಗುತ್ತದೆ. ಶಿವಲಿಂಗಕ್ಕೆ ಇತ್ತೀಚಿಗೆ ಕೀರ್ತಿಮುಖವುಳ್ಳ ಪಂಚಲೋಹದ ಪ್ರಭಾವಳಿ ಮತ್ತು ಏಳು ಹೆಡೆಗಳ ಸರ್ಪದ ರೀತಿ ರಚಿಸಲಾಗಿದೆ. **(ಚಿ.ಸಂ.64)**

**ಸುಖನಾಸಿ:-**ಸುಖನಾಸಿಯು ಗರ್ಭಗೃಹದಷ್ಟೇ ಉದ್ದಗಲವನ್ನು ಹೊಂದಿದ್ದು ಚೌಕಾಕಾರವಾಗಿದೆ. ಸುಖನಾಸಿಯ ಮೇಲ್ಛಾವಣಿಯು ಕಣ ಶಿಲೆಯ ಕಲ್ಲು ಚಪ್ಪಡಿಗಳನ್ನು ಹಾಸಿ ಮುಚ್ಚಲಾಗಿದೆ. ಭುವನೇಶ್ವರಿ ಕಂಡುಬರುವುದಿಲ್ಲ. ಸುಖನಾಸಿಯಲ್ಲಿ ಉತ್ಸವ ಮೂರ್ತಿಗಳನ್ನು ಇರಿಸಲಾಗಿದೆ. ಉತ್ಸವ ಮೂರ್ತಿಯು ತನ್ನ ಬಲಗೈಯಲ್ಲಿ ಕರ್ಣಕುಂಡಲ ಹಿಡಿದು ಸಮಭಂಗಿಯಲ್ಲಿ ನಿಂತಿರುವಂತೆ ಕೆತ್ತನೆ ಮಾಡಲಾಗಿದೆ. ಈ ಉತ್ಸವ ಮೂರ್ತಿಯ ಇಕ್ಕೆಲಗಳಲ್ಲಿ ಪಾರ್ವತಿ ಮತ್ತು ದಾಕ್ಷಾಯಿಣಿರ ವಿಗ್ರಹಗಳನ್ನು ಸಹ ನಾವು ಕಾಣಬಹುದಾಗಿದೆ. ಈ ಉತ್ಸವ ಮೂರ್ತಿಗಳೆಲ್ಲವೂ ಕೂಡ ಪಂಚಲೋಹದಿಂದ ಮಾಡಲ್ಪಟ್ಟವುಗಳಾಗಿವೆ. "ಮಾಘ ಮಾಸದ ಶುದ್ಧ ಪೌರ್ಣಿಮಿಯ ದಿನ ಈ ದೇವಾಲಯದಲ್ಲಿ ಬ್ರಹ್ಮರಥೋತ್ಸವ ನಡೆಯುತ್ತದೆ". ಸುಖನಾಸಿಯ ದ್ವಾರದ ಇಕ್ಕೆಲಗಳಲ್ಲಿ 4 ಅಡಿ ಎತ್ತರವಿರುವ ಶೈವ ದ್ವಾರಪಾಲಕ ನಿಂತಿದ್ದಾರೆ. ಸಮಭಂಗಿಯಲ್ಲಿ ನಿಂತಿರುವ ಈ ದ್ವಾರಪಾಲಕರು ಕೈಗಳಲ್ಲಿ ಡಮರುಗ, ತ್ರಿಶೂಲ, ಗಧಾ ಮತ್ತು ಅಭಯಹಸ್ತ ಹೊಂದಿರುವಂತೆ ಕೆತ್ತಲಾಗಿದೆ. ಈ ದ್ವಾರಪಾಲಕರ ಹಿಂಬದಿಯಲ್ಲಿ ಪ್ರಭಾವಳಿಯನ್ನು ಬಿಡಿಸಲಾಗಿದ್ದು, ಪ್ರಭಾವಳಿಯಲ್ಲಿ ಬಳ್ಳಿಸುರುಳಿಗಳ ಅಲಂಕರಣೆ ಮತ್ತು ಕೀರ್ತಿಮುಖದ ಕೆತ್ತನೆಯನ್ನು ಕಾಣಬಹುದಾಗಿದೆ. ದ್ವಾರಪಾಲಕರ ಇಕ್ಕೆಲಗಳಲ್ಲಿ ನಂದಿ ಮತ್ತು ಭೃಂಗಿಯನ್ನು ಕೆತ್ತಲಾಗಿದೆ.

**ನವರಂಗ:-**ನವರಂಗವು ಸುಮಾರು 25X30 ಅಡಿ ಉದ್ದ ಮತ್ತು ಅಗಲ ಹೊಂದಿದ್ದು ವಿಶಾಲವಾಗಿದೆ. ಇದರ ಮಧ್ಯದಲ್ಲಿ ನಾಲ್ಕು ಕಂಬಗಳಿವೆ ಇವು ಎಂಟು, ಹದಿನಾರು ಮುಖಗಳನ್ನು ಹೊಂದಿವೆ. **(ಚಿ.ಸಂ.65)** ನವರಂಗದಲ್ಲಿರುವ ಈ ಕಂಬಗಳು ವಿಜಯನಗರ ಶೈಲಿಯಲ್ಲಿದ್ದು ಕಂಬದ ಚೌಕದಲ್ಲಿ ಶಿಲ್ಪಗಳಿವೆ. ಮೇಲ್ಛಾವಣಿಯು ಸರಳವಾಗಿದ್ದು ಛಾವಣಿಗೆ ಬೆಣಚು ಕಲ್ಲಿನ ಚಪ್ಪಡಿಗಳನ್ನು ಹಾಸಲಾಗಿದೆ. ಕಂಬಗಳ ಪೀಠ ಭಾಗದಲ್ಲಿ ಬಳ್ಳಿಸುರುಳಿಗಳ, ಮಣಿಹಾರಗಳ ಸುಂದರ ಕೆತ್ತನೆಯನ್ನು ಕಾಣಬಹುದು. ಪೂರ್ವದಿಕ್ಕಿನಲ್ಲಿರುವ ಕಂಬಗಳ ಮಧ್ಯಭಾಗದಲ್ಲಿ ನಂದಿಯ ಶಿಲ್ಪವನ್ನು ಮತ್ತು ವೃಷಭರೂಢ ಶಿವ ಪಾರ್ವತಿಯರ ಸುಂದರವಾದ ಕೆತ್ತನೆಯನ್ನು ಮಾಡಲಾಗಿದೆ.

ಗಂಗಾಧರೇಶ್ವರ ದೇವಾಲಯದ ಪೂರ್ವದ ದ್ವಾರದ ಹಿಂಭಾಗದಲ್ಲಿ ಸುಮಾರು ಅರ್ಧ ಅಡಿ ಎತ್ತರವಿರುವ ನಕ್ಷತ್ರಾಕಾರದ ಮೂಷಿಕ ಪೀಠದ ಮೇಲೆ ಸುಮಾರು ಮೂರು ಅಡಿ

ಎತ್ತರವಿರುವ ಗಣಪತಿಯನ್ನು ಪ್ರತಿಷ್ಠಾಪಿಸಲಾಗಿದೆ. ಈ ದೇವನು ಸುಖಾಸನದಲ್ಲಿ ಕುಳಿತಿದ್ದು, ಚತುರ್ಭುಜ ಹೊಂದಿದ್ದಾನೆ. ಮೈಮೇಲೆ ಸುಂದರವಾದ ಆಭರಣಗಳು, ಉದರದಲ್ಲಿ ನಾಗಭಂದ, ನಾಲ್ಕು ಕೈಗಳಲ್ಲಿ ಪಾಶ, ಅಂಕುಶ, ದಂತ ಎಡಗೈಯಲ್ಲಿ ಫಲವನ್ನು ಹಿಡಿದಿದ್ದಾನೆ.

ದೇವಾಲಯಕ್ಕೆ ಪೂರ್ವಾಭಿಮುಖವಾಗಿ ಒಂದು ಪ್ರವೇಶ ದ್ವಾರವನ್ನು ನಿರ್ಮಿಸಿ, ತೆರೆದ ಮಂಟಪವನ್ನು ದೇವಾಲಯಕ್ಕೆ ಹೊಂದಿಕೊಂಡಂತೆ ಮಾಡಲಾಗಿದೆ. ನಾಲ್ಕು ಕಂಬಗಳ ಮೇಲೆ ನಿಂತಂತೆ ಮೇಲ್ಛಾವಣಿಯನ್ನು ನಿರ್ಮಿಸಲಾಗಿದ್ದು ಮಂಟಪದ ಹಿಂದಿನ ಎರಡು ಕಂಬಗಳನ್ನು ದೇವಾಲಯದ ಗೋಡೆಗೆ ಸೇರಿಸಲಾಗಿದೆ. ಮುಂದಿನ ಎರಡು ಕಂಬಗಳು ವಿಶಿಷ್ಠ ಮತ್ತು ಸೂಕ್ಷ್ಮ ಕೆತ್ತನೆಗಳಿಂದ ಕೂಡಿದ್ದು, ಸಿಂಹಗಳ ಮೇಲೆ ಪುರುಷನೋರ್ವನು ಸವಾರಿ ಮಾಡುತ್ತಿರುವಂತೆ ಎರಡೂ ಕಂಬಗಳನ್ನು ಕೆತ್ತಲಾಗಿದೆ. ಇವು ಸಾಮಾನ್ಯವಾಗಿ ಚೌಕಾಕಾರವಾಗಿದ್ದು ಕಂಬಗಳ ಮೂರು ದಿಕ್ಕುಗಳಲ್ಲೂ ವಿವಿಧ ರೀತಿಯ ಶಿಲ್ಪಗಳನ್ನು ಕೆತ್ತನೆ ಮಾಡಿ ಬಿಡಿಸಲಾಗಿದೆ. ಈ ಮಾದರಿಯುಳ್ಳ ಕಂಬಗಳನ್ನು ಐಹೊಳೆ, ಡಂಬಳ, ಲಕ್ಕುಂಡಿಗಳಲ್ಲೂ ಇದೇ ಮಾದರಿಯಲ್ಲಿರುವ ಕಂಬಗಳನ್ನು ಕಾಣಬಹುದಾದಿದೆ. ಕೆಲವೊಮ್ಮೆ ಪೀಠದ ಮೇಲೆ ಪಾದದ ಬದಲಿಗೆ ಗಜ, ವ್ಯಾಳ, ಸಿಂಹ ಮುಂತಾದ ಪ್ರಾಣಿ ಶಿಲ್ಪಗಳಿದ್ದು ಅವುಗಳು ಕಂಬಕ್ಕೆ ಆಧಾರದಂತೆ  ಇರುತ್ತವೆ. ಅಲ್ಲಿ ಬಿಡಿಸಿರುವ ಪ್ರಾಣಿ ರೂಪದ ಆಧಾರದ ಮೇಲೆ (ಸಿಂಹವನ್ನು ಬಿಡಿಸಿದ್ದರೆ) 'ಸಿಂಹಪಾದ' ವ್ಯಾಳಿಯನ್ನು ಬಿಡಿಸಿದ್ದರೆ 'ವ್ಯಾಳಪಾದ' ಇತ್ಯಾದಿಯಾದ ಹೆಸರುಗಳಿವೆ. ಇಂತಹ ಸ್ತಂಭಗಳಿಗೆ "ಸಾಶ್ರಯ ಸ್ತಂಭಗಳು" ಎಂದು ಹೆಸರು.[107] ಕರ್ನಾಟಕದಲ್ಲಿ ಇಂತಹ ಸಿಂಹಪಾದ ಸ್ತಂಭಗಳ ಕೆಲವೇ ಉದಾಹರಣೆಗಳು ದೊರೆತಿದ್ದು ಗಂಗಾವಾರದ ಸೋಮೇಶ್ವರ ದೇವಾಲಯದಲ್ಲಿ ಶಿವರಾಳದ ಒಂದು ದೇವಾಲಯದಲ್ಲಿ ಇಂತಹ ಸ್ತಂಭಗಳನ್ನು ಕಾಣಬಹುದು. ಇಂತಹ ಸ್ತಂಭಗಳು ಅಪರೂಪವೆನಿಸಿದರೂ ವಿಜಯನಗರ ಕಾಲದ ದೇವಾಲಯಗಳಲ್ಲಿ ಇಂತಹ ಸ್ತಂಭಗಳು ಸಾಮಾನ್ಯವಾಗಿ ಇರುತ್ತವೆ.[108] **(ಚಿ.ಸಂ.66)** ಇದೇ ಲಕ್ಷಣಗಳನ್ನು ಹೊಂದಿರುವ ಸ್ತಂಭಗಳನ್ನು ನಾವು ತುರುವೇಕೆರೆ ತಾಲೂಕಿನ ತಾವರೇಕೆರೆ ಗ್ರಾಮದಲ್ಲಿ ನಿರ್ಮಾಣವಾಗಿರುವ ಅಘೋರೇಶ್ವರ ದೇವಾಲಯದ ಮುಖಮಂಟಪದ ಕಂಬಗಳಲ್ಲಿ ಕಾಣಬಹುದಾಗಿದೆ. ಸಿಂಹದ ಮೇಲೆ ಸವಾರಿ ಮಾಡುತ್ತಿರುವ ಪುರುಷನು ಸಿಂಹದ ಕಡಿವಾಣ ಹಿಡಿದು ಬಲಗೈಯಲ್ಲಿ ದಂಡವನ್ನು ಮೇಲೆತ್ತಿರುವಂತೆ ಕೆತ್ತಲಾಗಿದ್ದು, ವೃಷಭರೂಢ ಶಿವಪಾರ್ವತಿ, ಪಾರ್ವತಿ, ಚತುರ್ಮುಖ ಬ್ರಹ್ಮ, ವಾಮನ ಮುಂತಾದ ಶಿಲ್ಪಗಳ ಕೆತ್ತನೆಗಳನ್ನು ಕಾಣಬಹುದಾಗಿದೆ. ದೇವಾಲಯದ ಪೂರ್ವದಿಕ್ಕಿನ ಮಂಟಪದ ದಕ್ಷಿಣದಲ್ಲಿರುವ ಕಂಬದಲ್ಲಿ ಸುಂದರವಾದ ಶಿವ ಮೆಚ್ಚಿದ ಕಣ್ಣಪ್ಪನ ಶಿಲ್ಪವನ್ನು ಕಾಣಬಹುದು. ಬಾಣದಿಂದ ತನ್ನ ಎಡಗಣ್ಣನ್ನು ಮೀಟುತ್ತಿರುವಂತೆ

ಮತ್ತು ಒಂದು ಕಾಲನ್ನು ಶಿವಲಿಂಗಕ್ಕೆ ಕಣ್ಣನ್ನು ಅರ್ಪಿಸುತ್ತಿರುವಂತೆ ಕೆತ್ತನೆ ಮಾಡಿರುವ ದೃಶ್ಯ ಸುಂದರವಾಗಿ ಮೂಡಿಬಂದಿದೆ. ಈ ಮಂಟಪದ ಮತ್ತೊಂದು ವಿಶೇಷವೆಂದರೆ ಕಲ್ಲಿನ ಘಂಟೆ. ಮಂಟಪದ ಮಧ್ಯ ಭಾಗದ ಮೇಲ್ಛಾವಣಿಯಲ್ಲಿ ಒಂದು ಕಲ್ಲಿನ ಘಂಟೆಯನ್ನು ಅಳವಡಿಸಲಾಗಿದೆ. ಈ ಕಲ್ಲಿನ ಘಂಟೆಯನ್ನು ಹೊಡೆದಾಗ ಲೋಹದ ಶಬ್ದ ಕೇಳಸುತ್ತದೆ. ಈ ಘಂಟೆಯನ್ನು ಬಳಪದ ಕಲ್ಲಿನಲ್ಲಿ ಮಾಡಲಾಗಿದ್ದು 4 ಅಡಿ ವ್ಯಾಸ ಹೊಂದಿದ್ದು 4.5 ಅಡಿ ಎತ್ತರವಾಗಿದೆ.[109] ಪ್ರಾಚೀನ ಕಾಲದಲ್ಲಿ ದೇವಾಲಯದಲ್ಲಿ ನಡೆಯುತ್ತಿದ್ದ ನಿತ್ಯ ಪೂಜಾ ಕಾರ್ಯಾದಿಗಳಗೆ ಈ ಘಂಟೆಯನ್ನು ಉಪಯೋಗಿಸುತ್ತಿದ್ದುದು ಕಂಡುಬರುತ್ತದೆ. ಪ್ರಸ್ತುತವಾಗಿ ಈಗ ಇದು ಬಿರುಕು ಬಿಟ್ಟಿರುವುದರಿಂದಾಗಿ ಇದನ್ನು ಈಗ ಉಪಯೋಗ ಮಾಡಲಾಗುತ್ತಿಲ್ಲ. ಈ ರೀತಿಯ ಗಂಟೆಗಳು ಈಗ ಕಾಣಬರುವುದು ಅಪರೂಪವೇ ಸರಿ. **(ಚಿ.ಸಂ.67)**

**ಮುಖಮಂಟಪ:-** ಮುಖಮಂಟಪದ ಮುಂಭಾಗದಲ್ಲಿ ಸಾಲಾಗಿ ನಾಲ್ಕು ಕಂಬಗಳನ್ನು ನಿಲ್ಲಿಸಲಾಗಿದೆ. ಇನ್ನುಳಿದ 4 ಅರೆಕಂಬಗಳನ್ನು ದೇವಾಲಯದ ಗೋಡೆಗೆ ಸೇರಿಸಲಾಗಿದೆ. ಈಕಂಬಗಳು 4, 8, 16 ಮುಖವನ್ನು ಹೊಂದಿದ್ದು ಕಮಲದ ಪುಷ್ಪದಾಕೃತಿಯ ಬೋಧಿಗೆಯನ್ನು ಹೊಂದಿವೆ. ಮುಖಮಂಟಪದ ಪೂರ್ವಕ್ಕೆ ಮತ್ತು ಪಶ್ಚಿಮಕ್ಕೆ ಮೊದಲು ದ್ವಾರವಿದ್ದಂತೆ ಕಂಡುಬರುತ್ತದೆ. ಆದರೆ ಈಗ ಅವುಗಳನ್ನು ಜೀರ್ಣೋದ್ಧಾರ ಸಮಯದಲ್ಲಿ ಮುಚ್ಚಲಾಗಿದೆ. ಸೋಪಾನ ಮಾತ್ರ ಉಳಿದಿದೆ. ಸೋಪಾನದ ಇಕ್ಕೆಲಗಳಲ್ಲಿ ಆನೆಯ ಶಿಲ್ಪಗಳನ್ನು ಕಣಶಿಲೆಯಲ್ಲಿ ರಚಿಸಿ ನಿಲ್ಲಿಸಲಾಗಿದೆ.

**ಪಾತಾಳಾಂಕಣ:-**ದೇವಾಲಯದ ಮುಖಮಂಟಪದ ಮುಂದೆ ಪಾತಾಳಾಂಕಣವಿದ್ದು ಇದರಲ್ಲಿ 10 ಅಡಿಗಳ ಎತ್ತರವಿರುವ ಒಟ್ಟು 12 ಕಂಬಗಳ ಆಧಾರದ ಮೇಲೆ ಮೇಲ್ಛಾವಣಿಯನ್ನು ನಿರ್ಮಿಸಲಾಗಿದೆ. ಕಂಬಗಳು 16 ಮುಖ ಹೊಂದಿದ್ದು, ಪುಷ್ಪ ಬೋಧಿಗೆಯನ್ನು ಹೊಂದಿವೆ. ಪಾತಾಳಾಂಕಣದ ಮಧ್ಯಭಾಗದಲ್ಲಿ 3 ಅಡಿ ಎತ್ತರವಿರುವ ಚೌಕಾಕಾರದ ವೇದಿಕೆಯನ್ನು ಮಾಡಿ ವೇದಿಕೆಯ ಮೇಲೆ ಕಪ್ಪುಕಣಶಿಲೆಯಲ್ಲಿ ರಚಿಸಿ ಸ್ಥಾಪಿಸಲಾಗಿರುವ ಸುಂದರವಾದ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ಈ ನಂದಿಯು ಗರ್ಭಗೃಹದ ಶಿವಲಿಂಗಕ್ಕೆ ಅಭಿಮುಖವಾಗಿದೆ. ಈ ನಂದಿಯು ನಯವಾದ ಕೆತ್ತನೆಯಿಂದ ಕೂಡಿದ್ದು ಹೊಳಪಿನಿಂದ ಕೂಡಿದೆ. ದೃಢಕಾಯ ವಾಗಿರುವ ಈ ನಂದಿಯು ನೋಡುಗರ ಕಣ್ಮನ ಸೆಳೆಯುವಂತಿದ್ದು ಆಕರ್ಷಕವಾಗಿದೆ. ಇದನ್ನು ಏಕಶಿಲೆಯಲ್ಲಿ ಕೆತ್ತನೆ ಮಾಡಲಾಗಿದ್ದು, ಮೈಸೂರಿನ ಚಾಮುಂಡಿ ಬೆಟ್ಟದಲ್ಲಿರುವ ನಂದಿಯನ್ನು ನಮ್ಮ ನೆನಪಿಗೆ ತರುವುದಾದರೂ ಗಾತ್ರದಲ್ಲಿ ಸ್ವಲ್ಪ ಸಣ್ಣದಾಗಿದೆ. ನಂದಿಯನ್ನು ತುರುವೇಕೆರೆ

ತಾಲೂಕು ಕೇಂದ್ರದಿಂದ ದಕ್ಷಿಣಕ್ಕೆ 7 ಕಿ.ಮೀ. ದೂರದಲ್ಲಿರುವ ಕಡೆಹಳ್ಳಿ ಗುಡ್ಡದಲ್ಲಿ ದೊರೆಯುವ ಕಪ್ಪುಶಿಲೆಯಿಂದ ರಚಿಸಲಾಗಿದೆಯೆಂದು ಸ್ಥಳೀಯರು ತಿಳಿಸುತ್ತಾರೆ.[110] **(ಚಿ.ಸಂ.68)**

ಇಂತಹ ಕರಿಕಲ್ಲಿನ ಅಥವಾ ಕಣಶಿಲೆಯ ನಿಕ್ಷೇಪಗಳು ಕಡೇಹಳ್ಳಿ ಗುಡ್ಡದಲ್ಲಿ ದೊರಕುತ್ತವೆ.[111]ಸ್ಥಳೀಯವಾಗಿ ದೊರೆಯುತಿದ್ದಂತಹ ಶಿಲೆಯನ್ನು ಉಪಯೋಗಿಸಿ ಸುಂದರವಾದ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ಈ ನಂದಿಯು ಏಳು ಅಡಿ ಉದ್ದ, ನಾಲ್ಕುವರೆ ಅಡಿ ಅಗಲವಾಗಿದ್ದು, ಏಳು ಅಡಿ ಎತ್ತರವನ್ನು ಹೊಂದಿದ್ದು ಸುಸ್ಥಿತಿಯಲ್ಲಿದೆ. ಈ ಏಕಶಿಲಾ ನಂದಿಯು ವಿವಿಧ ಅಲಂಕರಣೆಯಿಂದ ಕೂಡಿದ್ದು, ಮಣಿಹಾರಗಳು, ಕಾಲ್ಗೆಜ್ಜೆ ಸರ, ಕೊರಳಿನಲ್ಲಿ ಘಂಟೆ, ಕಂಠಾಭರಣ, ಪುಷ್ಪದ ಮೊಗ್ಗುಗಳ ಗುಚ್ಛ ಮುಂತಾದವುಗಳಿಂದ ಅಲಂಕರಣಗೊಳಿಸಲಾಗಿದೆ.

ಗಂಗಾಧರೇಶ್ವರ ದೇವಾಲಯದ ವಾಯುವ್ಯ ಭಾಗದಲ್ಲಿ ಅಮ್ಮನವರ ಗುಡಿ ಇದೆ. ಈ ಗುಡಿಯನ್ನು ಇಟ್ಟಿಗೆ ಮತ್ತು ಗಾರೆ ಉಪಯೋಗಿಸಿ ಕಟ್ಟಲಾಗಿದ್ದು, ಅದು ಈಗ ಪ್ರಕೃತಿಯ ವಿಕೋಪಕ್ಕೆ ತುತ್ತಾಗಿ ಶಿಥಿಲಗೊಂಡಿದೆ. ಗರ್ಭಗೃಹದಲ್ಲಿರುವ ಶಕ್ತಿ ದೇವತಾ ಮೂರ್ತಿಯು 4.5 ಅಡಿ ಎತ್ತರವಾಗಿ ನಿಂತಿದ್ದು ಚತುರ್ಭುಜವನ್ನು ಹೊಂದಿದ್ದು ಕೈಗಳಲ್ಲಿ ಪಾಶ, ಅಂಕುಶ, ಅಭಯಹಸ್ತ ಮತ್ತು ವರದಾ ಹಸ್ತವನ್ನು ಈ ದೇವತೆಯು ಹೊಂದಿದ್ದಾಳೆ. ಈ ದೇವತೆಯು ಸಿಂಹ ಪೀಠದ ಮೇಲೆ ನಿಂತಿರುವುದರಿಂದ ಪಾರ್ವತಿ ಎಂದು ನಂಬಲಾಗಿದೆ. ಆದರೆ ಈ ಮೂರ್ತಿಯು ಭಾರತೀಯ ಪ್ರತಿಮಾ ಶಾಸ್ತ್ರದಂತೆ ಆಧಾರಶಕ್ತಿ ದೇವತೆ ಯಾಗಿದ್ದಾಳೆ.[112] ಈ ಶಕ್ತಿ ದೇವತೆಯ ಗುಡಿ ಶಿಖರವನ್ನು ಸಹ ಗಾರೆ ಮತ್ತು ಇಟ್ಟಿಗೆಗಳಿಂದ ನಿರ್ಮಿಸಲಾಗಿದೆ.

**ಅಧಿಷ್ಠಾನ:–** ಅಧಿಷ್ಠಾನವು ಮೂರು ಅಡಿ ಎತ್ತರವಿದ್ದು ಸರಳವಾದುದಾಗಿದೆ. ಇದರಲ್ಲಿ ಜೋಡಿಸಲಾಗಿರುವ ಕಲ್ಲಿನ ಪಟ್ಟಿಕೆಗಳು ಹಿನ್ಸರಿತ ಮುನ್ಸರಿತದಂತೆ ಕ್ರಮಬದ್ಧವಾಗಿ ಜೋಡಿಸಿ ಭದ್ರಗೊಳಿಸಲಾಗಿದೆ.

**ಭಿತ್ತಿ:–** ಭಿತ್ತಿಯು ಸರಳವಾಗಿದೆ. ಇದನ್ನು ಕಣಶಿಲೆಯ ಕಲ್ಲಿನ ದಿಮ್ಮಿಗಳನ್ನು ಕ್ರಮಬದ್ದವಾಗಿ ಜೋಡಿಸಿ ನಿರ್ಮಿಸಲಾಗಿದೆ, ಈಗ ಇದು ಪ್ರಕೃತಿಯ ವಿಕೋಪಕ್ಕೆ ಈ ಕಲ್ಲಿನ ದಿಮ್ಮಿಗಳ ಮಧ್ಯೆ ಬಿರುಕು ಕಾಣಿಸಿದ್ದರಿಂದ ಗ್ರಾಮಸ್ಥರು ಇತ್ತೀಚಿಗೆ ಬಿರುಕಿಗೆ ಸಿಮೆಂಟ್ ಲೇಪನ ಮಾಡಿದ್ದಾರೆ. ಭಿತ್ತಿಯಲ್ಲಿ ಯಾವುದೇ ಶಿಲ್ಪಗಳು ಕಂಡುಬರುವುದಿಲ್ಲ. ಭಿತ್ತಿಯ ಮೇಲೆ ಗಾರೆ ಮತ್ತು ಇಟ್ಟಿಗೆಯಿಂದ 2 ಅಡಿ ಎತ್ತರವಿರುವ ಕೈಪಿಡಿ ಗೋಡೆಯನ್ನು ನಿರ್ಮಿಸಲಾಗಿದೆ.

**ಶಿಖರ:–** ಗಂಗಾಧರೇಶ್ವರ ದೇವಾಲಯವು ದ್ರಾವಿಡ ಶೈಲಿಯ ಶಿಖರವನ್ನು ಹೊಂದಿದ್ದು, 4 ತಲಗಳಲ್ಲಿ ನಿರ್ಮಿಸಲಾಗಿದೆ. ಒಂದೊಂದು ತಲದಲ್ಲಿ ಅರೆಗಂಬಗಳನ್ನು ನಿರ್ಮಿಸಿ ಕೋಷ್ಠ

ಗುಡಿಗಳನ್ನು ರಚಿಸಲಾಗಿದೆ. ಗಾರೆ ಮತ್ತು ಇಟ್ಟಿಗೆಯಿಂದ ನಿರ್ಮಾಣವಾಗಿರುವ ಶಿಖರದ ಸ್ತೂಪಿಯ ಕೆಳಭಾಗದಲ್ಲಿ ಎರಡುದೇಹ ಒಂದುತಲೆ ಇರುವ ನಂದಿಯ ಶಿಲ್ಪಗಳು ಕಂಡುಬರುತ್ತವೆ. ಆದರೆ ಪ್ರಕೃತಿಯ ವಿಕೋಪಕ್ಕೆ ತುತ್ತಾಗಿ ತಲೆಯ ಭಾಗ ನಾಶವಾಗಿದೆ. ಶಿಖರದ ಮೇಲಿದ್ದ ಕಳಸ ಈಗ ಕಂಡುಬರುವುದಿಲ್ಲ. **(ಚಿ.ಸಂ.69)**

**ಸುಖನಾಸ:–** ಶಿಖರದ ಮುಂಭಾಗದಲ್ಲಿ ಇಟ್ಟಿಗೆ ಮತ್ತು ಗಾರೆಯಿಂದ ಮಾಡಲಾದ ಸುಖನಾಸವಿದೆ. ಈ ಸುಖನಾಸದ ಮುಂಭಾಗ ಕೋಷ್ಠದಲ್ಲಿ ಯಾವುದೇ ಮೂರ್ತಿ ಶಿಲ್ಪ ಕಾಣಬರುವುದಿಲ್ಲ.

**ಪ್ರಾಕಾರ:–** ದೇವಾಲಯದ ಸುತ್ತಲೂ ಇತ್ತೀಚಿಗೆ ಇಟ್ಟಿಗೆ ಮತ್ತು ಗಾರೆಯಿಂದ ಪ್ರಾಕಾರ ನಿರ್ಮಿಸಲಾಗಿದ್ದು ಇದು ಸುಮಾರು ಐದು ಅಡಿಗಳ ಎತ್ತರವಾಗಿದೆ. ಉತ್ತರದಲ್ಲಿ ಪ್ರವೇಶದ್ವಾರವಿದ್ದು ಪ್ರವೇಶದ್ವಾರದ ಎಡ ಮತ್ತು ಬಲಭಾಗದಲ್ಲಿ ಎರಡು ಚೌಕಾಕರದ ಕೊಠಡಿಗಳನ್ನು ನಿರ್ಮಿಸಿ, ಅದರಲ್ಲಿ ದೇವಾಲಯಕ್ಕೆ ಬಂದ ಭಕ್ತರು ಪ್ರಸಾದವನ್ನು ತಯಾರಿಸಿ ಜನರಿಗೆ ಊಟ ಉಪಚಾರಗಳನ್ನು ಮಾಡಲು ಬಳಸಿಕೊಳ್ಳುತ್ತಿದ್ದಾರೆ.

**ಶಂಭುಲಿಂಗೇಶ್ವರ ದೇವಾಲಯ–ಪುರ**

ಪುರ ಗ್ರಾಮದಲ್ಲಿರುವ ಶಂಭುಲಿಂಗೇಶ್ವರ ದೇವಾಲಯವನ್ನು ಕಣಶಿಲೆಯನ್ನು ಉಪಯೋಗಿಸಿ ಪೂರ್ವಾಭಿಮುಖವಾಗಿ ನಿರ್ಮಿಸಲಾಗಿದೆ. ಇದೊಂದು ಏಕಕೂಟ ದೇವಾಲಯವಾಗಿದ್ದು ಇದರಲ್ಲಿ ಒಂದು ಗರ್ಭಗೃಹ, ಸುಖನಾಸಿ, ನವರಂಗ ಮತ್ತು ಮುಖಮಂಟಪವನ್ನು ಹೊಂದಿದೆ. ಈ ದೇವಾಲಯದ ನಿರ್ಮಾಣ ಕಾಲಕ್ಕೆ ಸಂಬಂಧಿಸಿದಂತೆ ಯಾವುದೇ ಶಾಸನಾಧಾರಗಳು ದೊರೆಯುವುದಿಲ್ಲ.

ದ್ವಾಪರ ಯುಗದಲ್ಲಿ ಕ್ರಿಕಂಡು ಎಂಬ ಮುನಿಯು ಬದರಿ ಕ್ಷೇತ್ರದಲ್ಲಿ ವಾಸವಾಗಿದ್ದು, ದಕ್ಷಿಣ ಭಾಗಕ್ಕೆ ಪುಣ್ಯ ಸ್ಥಳಗಳಿಗೆ ಭೇಟಿ ನೀಡಲು ಯಾತ್ರೆಯನ್ನು ಕೈಗೊಂಡನು. ತುರುವೇಕೆರೆಯ ಐದು ಪುಣ್ಯ ಕ್ಷೇತ್ರಗಳಲ್ಲಿ ಐದು ಲಿಂಗಗಳನ್ನು ಪ್ರತಿಷ್ಠಾಪನೆ ಮಾಡಿದನೆಂಬ ಐತಿಹ್ಯವಿದೆ. ನಾಗನದಿಯ ಪೂರ್ವದಂಡೆಯ ಮೇಲೆ ಈ ಶಂಭುಲಿಂಗೇಶ್ವರ ದೇವಾಲಯವನ್ನು ಪ್ರತಿಷ್ಠಾಪಿಸಿ, ಉಳಿದ ನಾಲ್ಕು ಲಿಂಗಗಳನ್ನು ಅರಳಿಕೆರೆಯ ಬ್ರಹ್ಮಲಿಂಗವನ್ನು ಆಗ್ನೇಯ ಭಾಗದಲ್ಲಿ, ಚಿಕ್ಕತುರುವೇಕೆಯ ಪಶ್ಚಿಮ ಭಾಗದಲ್ಲಿ ಕಲ್ಲೇಶ್ವರ ಲಿಂಗ ಮತ್ತು ತೊರೆ ಮಾವಿನ ಹಳ್ಳಿಯ ಉತ್ತರದಲ್ಲಿ ಮಲ್ಲೇಶ್ವರ ಲಿಂಗ, ಆನೆ ಕೆರೆಯ ವಾಯುವ್ಯ ಭಾಗದಲ್ಲಿ ಶಂಕರೇಶ್ವರ ಒಟ್ಟು ಐದು ಲಿಂಗಗಳನ್ನು ತುರುವೇಕೆರೆಯಲ್ಲಿ ಸ್ಥಾಪಿಸಿದನೆಂಬ ಐತಿಹ್ಯವಿದೆ.[113]

**ಗರ್ಭಗೃಹ**:-ಗರ್ಭಗೃಹವು 8X8 ಅಡಿಗಳ ಉದ್ದ ಅಗಲವಾಗಿದ್ದು ಚೌಕಾಕಾರವಾಗಿದೆ. ಇದರ ಮಧ್ಯದಲ್ಲಿ ಚೌಕಾಕಾರದ ಸುಮಾರು ಮೂರು ಅಡಿ ಎತ್ತರವಿರುವ ಪಾಣಿಪೀಠದ ಮೇಲೆ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. **(ಚಿ.ಸಂ.70)** ಗರ್ಭಗೃಹದ ಬಾಗಿಲು ಸರಳವಾಗಿದೆ. ಗರ್ಭಗೃಹದ ಮುಂದಿರುವ ಸುಖನಾಸಿಯಲ್ಲಿ ಶಿವಲಿಂಗಕ್ಕೆ ಎದುರಾಗಿ ನಂದಿಯನ್ನು ಇರಿಸಲಾಗಿದೆ.

**ನವರಂಗ**:-ಈ ನವರಂಗವು ಸುಮಾರು 20X20 ಅಡಿಗಳ ಉದ್ದ ಅಗಲವಾಗಿದ್ದು ಚೌಕಕಾರವಾಗಿದೆ. ನವರಂಗದಲ್ಲಿ ಸುತ್ತಲೂ ಸುಮಾರು ಎರಡೂವರೆ ಅಡಿ ಎತ್ತರವಿರುವ ಚೌಕಾಕಾರದ ಪಾಣಿಪೀಠದ ಮೇಲೆ ನಾಲ್ಕು ಲಿಂಗಗಳನ್ನು ಇರಿಸಲಾಗಿದೆ. **(ಚಿ.ಸಂ.71)** ನವರಂಗದ ಮಧ್ಯದಲ್ಲಿ ವಿಜಯನಗರ ಶೈಲಿಯ ನಾಲ್ಕು ಕಂಬಗಳಿವೆ. ಈ ಕಂಬಗಳು ಚೌಕ ಅಷ್ಟಮುಖವನ್ನು ಹೊಂದಿವೆ. ನವರಂಗದ ಉತ್ತರದ ಗೋಡೆಯ ಮುಂದೆ ಸುಮಾರು ಮೂರು ಅಡಿ ಎತ್ತರವಿರುವ ವೀರಭದ್ರನ ಶಿಲ್ಪವಿದೆ. ನವರಗಂದ ಮೇಲ್ಛಾವಣಿ ಕಲ್ಲು ಚಪ್ಪಡಿಗಳನ್ನು ಹಾಸಿ ಮೇಲ್ಛಾವಣಿ ನಿರ್ಮಿಸಲಾಗಿದ್ದು ಯಾವುದೇ ಭುವನೇಶ್ವರಿಯು ಕಂಡುಬರದೆ ಸರಳವಾಗಿದೆ.

**ಮುಖಮಂಟಪ**:-ಮುಖಮಂಟಪವು ಚೌಕಾಕಾರವಾಗಿದ್ದು ಈ ಮುಖಮಂಟಪದಲ್ಲಿ ಎರಡು ಕಂಬಗಳನ್ನು ನಿಲ್ಲಿಸಲಾಗಿದ್ದು ಮೇಲ್ಛಾವಣಿ ಸರಳವಾಗಿದೆ. ಮುಖಮಂಟಪದ ಬಾಗಿಲು ಸರಳವಾಗಿದೆ.

**ಅಧಿಷ್ಠಾನ**:-ಅಧಿಷ್ಠಾನದಲ್ಲಿ ವಿಜಯನಗರ ಶೈಲಿಯ ಮೂರು ಪಟ್ಟಿಕೆಗಳಿವೆ. ಇವುಗಳನ್ನು ಹಿನ್ಸರಿತ ಮತ್ತು ಮುನ್ಸರಿತದಂತೆ ಕ್ರಮಬದ್ಧವಾಗಿ ಜೋಡಿಸಲಾಗಿದೆ. ಅಧಿಷ್ಠಾನದ ಮೇಲೆ ನಿರ್ಮಿಸಲಾಗಿದ್ದ ಭಿತ್ತಿಯು ಪ್ರಕೃತಿಯ ವಿಕೋಪಕ್ಕೆ ತುತ್ತಾಗಿದ್ದರಿಂದ ಇತ್ತೀಚೆಗೆ ಗಾರೆಯ ಲೇಪನವನ್ನು ಮಾಡಿ ಸುಣ್ಣವನ್ನು ಬಳಯಲಾಗಿದೆ. ಕಪೋತವನ್ನು ಕಲ್ಲಿನ ದಿಮ್ಮಿಗಳಿಂದ ಮಾಡಿ ಭಿತ್ತಿಯಿಂದ ಸ್ವಲ್ಪ ಮುಂದೆ ಬರುವಂತೆ ಜೋಡಿಸಲಾಗಿದೆ. ಕಪೋತದ ಮೇಲಿರುವ ಹಾರದ ಭಾಗದಲ್ಲಿ ಎರಡು ದೇಹ ಒಂದು ತಲೆಯನ್ನು ಹೊಂದಿರುವ ನಂದಿಯನ್ನು ಇತ್ತೀಚೆಗೆ ನಿರ್ಮಿಸಿ ಇರಿಸಲಾಗಿದೆ. ಗರ್ಭಗೃಹದ ಮೇಲೆ ದ್ರಾವಿಡ ಶೈಲಿಯ ಇತ್ತೀಚಿನ ಶಿಖರವನ್ನು ಕಾಣಬಹುದು. ಈ ದೇವಾಲಯದ ಉತ್ತರ ಭಾಗದಲ್ಲಿ ಚಿಕ್ಕ ಚಿಕ್ಕ ಮೂರು ದೇವಗುಡಿಗಳಿವೆ. ಈ ಗುಡಿಗಳ ಒಳಗೆ ಪಾಣಿಪೀಠದ ಮೇಲೆ ಶಿವಲಿಂಗಗಳನ್ನು ಪ್ರತಿಷ್ಠಾಪಿಸಲಾಗಿದೆ. ಈ ಗುಡಿಗಳ ಮೇಲೆ ಇತ್ತೀಚೆಗೆ ನಿರ್ಮಿಸಲಾದ ಶಿಖರಗಳಿವೆ.[114] **(ಚಿ.ಸಂ.72)**

**ಈಶ್ವರ ದೇವಾಲಯ-ಮಲ್ಲೂರು**

ಮಲ್ಲೂರು ಗ್ರಾಮದ ಈಶಾನ್ಯ ಭಾಗದಲ್ಲಿ ಈ ದೇವಾಲಯವನ್ನು ನಿರ್ಮಾಣ ಮಾಡಲಾಗಿದೆ. ಇದೂ ಸಹ ಒಂದು ಸಣ್ಣ ದೇವಾಲಯವಾಗಿದ್ದು, ಸಂಪೂರ್ಣವಾಗಿ ಬಿದ್ದುಹೋಗಿದ್ದರಿಂದ ಇತ್ತೀಚೆಗೆ ಗ್ರಾಮದ ಜನರು ಕಲ್ಲು ಮತ್ತು ಇಟ್ಟಿಗೆಯನ್ನು ಉಪಯೋಗಿಸಿ ಗರ್ಭಗೃಹ ಮತ್ತು ಸುಖನಾಸಿಯನ್ನು ಉಳಿಸಿಕೊಂಡಿದ್ದಾರೆ. ಆದರೆ ನವರಂಗ ಮತ್ತು ಮುಖಮಂಟಪ ಈಗಾಗಲೇ ಸಂಪೂರ್ಣವಾಗಿ ನಾಶವಾಗಿದ್ದು ಇವುಗಳ ಯಾವುದೇ ಭಗ್ನಾವಶೇಷಗಳು ಇಲ್ಲಿ ಕಾಣಬರುವುದಿಲ್ಲ. **(ಚಿ.ಸಂ.73)**

**ಗರ್ಭಗೃಹ**

ಗರ್ಭಗೃಹವು ಸುಮರು 8X8 ಅಡಿಗಳ ಉದ್ದ ಮತ್ತು ಅಗಲವಾಗಿದ್ದು ಚೌಕಾಕಾರವಾಗಿದೆ. ಈ ಗರ್ಭಗೃಹದ ಮಧ್ಯದಲ್ಲಿ ಸುಮರು ಮೂರು ಅಡಿ ಎತ್ತರವಿರುವ ಪಾಣಿಪೀಠದ ಮೇಲೆ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಈ ಗರ್ಭಗೃಹದ ಮೇಲ್ಛಾವಣಿಯಲ್ಲಿ ನಕ್ಷತ್ರಾಕಾರದ ಭುವನೇಶ್ವರಿ ಇದೆ. ಸರಳವಾಗಿ ರಚಿಸಲಾಗಿರುವ ಈ ಭುವನೇಶ್ವರಿಯ ಮಧ್ಯದಲ್ಲಿ ಎರಡು ಸುತ್ತು ಅರಳಿದ ಪದ್ಮ ಪುಷ್ಪ ಬಿಡಿಸಲಾಗಿದೆ. ಉಳಿದಂತೆ ಗರ್ಭಗೃಹವು ಸರಳವಾಗಿದೆ.

**ಸುಖನಾಸಿ**

ಸುಖನಾಸಿಯು ಗರ್ಭಗೃಹದಷ್ಟೇ ಉದ್ದಗಲವಾಗಿದ್ದು ಚೌಕಾಕಾರವಾಗಿದೆ. ಇದರ ಮಧ್ಯದಲ್ಲಿ ಶಿವನಿಗೆ ಎದುರಾಗಿ ಸುಮಾರು ಮೂರು ಅಡಿ ಎತ್ತರವಿರುವ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ಮಟ್ಟಸವಾಗಿರುವ ಈ ನಂದಿಯ ಕೊರಳಲ್ಲಿ ಘಂಟೆಯ ಹಾರ ಮತ್ತು ಬೆನ್ನಿನಿಂದ ಕೊರಳಿನವರೆಗೆ ರಚಿಸಲಾಗಿರುವ ಸರಪಳಿ ಅದರ ಕೆಳಭಾಗದಲ್ಲಿ ಘಂಟೆಯನ್ನು ಬಿಡಿಸಲಾಗಿದೆ. ಸುಖನಾಸಿಯ ಮೇಲ್ಛಾವಣಿಯಲ್ಲಿ ನಕ್ಷತ್ರಾಕಾರದ ಭುವನೇಶ್ವರಿ ಇದೆ. ಮಧ್ಯಭಾಗದಲ್ಲಿ ಒಂದು ಸುತ್ತು ಅರಳಿದ ಕಮಲವನ್ನು ಬಿಡಿಸಲಾಗಿದೆ . ಗರ್ಭಗೃಹ ಮತ್ತು ಸುಖನಾಸಿಯ ದ್ವಾರ ಸರಳವಾಗಿದೆ. [115]

**ಕಲ್ಲೇಶ್ವರ ದೇವಾಲಯ-ಚಿಕ್ಕಮಲ್ಲಿಗೆರೆ**

ಚಿಕ್ಕಮಲ್ಲಿಗೆರೆ ಗ್ರಾಮದ ಈಶಾನ್ಯ ಭಾಗದಲ್ಲಿ ಒಂದು ಸಣ್ಣ ಕಲ್ಲೇಶ್ವರ ದೇವಾಲಯವನ್ನು ಪೂರ್ವಾಭಿಮುಖವಾಗಿ ನಿರ್ಮಿಸಲಾಗಿದೆ. ಈ ದೇವಾಲಯ ಸಾಕಷ್ಟು ಭಗ್ನವಾಗಿದ್ದು

ಸಂಪೂರ್ಣವಾಗಿ ನಶಿಸಿಹೋಗಿದೆ. **(ಚಿ.ಸಂ.74)** ಇದರಲ್ಲಿ ಗರ್ಭಗೃಹ ಮತ್ತು ಮುಖಮಂಟಪ ಮಾತ್ರ ಕಾಣಬರುತ್ತವೆ. ಈ ದೇವಾಲಯದ ಭಿತ್ತಿ ಸಂಪೂರ್ಣವಾಗಿ ಹಾಳಾಗಿದ್ದರಿಂದ ಇತ್ತೀಚೆಗೆ ಈ ದೇವಾಲಯಕ್ಕೆ ಕಾಡುಗಲ್ಲನ್ನು ಉಪಯೋಗಿಸಿ ಭಿತ್ತಿಯನ್ನು ನಿರ್ಮಿಸಲಾಗಿದೆ.

**ಗರ್ಭಗೃಹ:-** ಗರ್ಭಗೃಹವು ಸರಳವಾಗಿದ್ದು ಗರ್ಭಗೃಹದ ಮಧ್ಯದಲ್ಲಿ ಸುಮಾರು ಅರ್ಧ ಅಡಿ ಎತ್ತರವಿರುವ ಪಾಣಿಪೀಠದ ಮೇಲೆ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಗರ್ಭಗೃಹದ ಬಾಗಿಲನ್ನು ಇತ್ತೀಚೆಗೆ ನಿರ್ಮಿಸಲಾಗಿದ್ದು, ಬಾಗಿಲ ಇಕ್ಕೆಲಗಳಲ್ಲಿ ದ್ವಾರಪಾಲಕರನ್ನು ಕೆತ್ತಲಾಗಿದೆ.

**ಸುಖನಾಸಿ**:-ಸುಖನಾಸಿಯ ಮಧ್ಯಭಾಗದಲ್ಲಿ ಶಿವನಿಗೆ ಎದುರಾಗಿ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ಮೂರು ಅಡಿ ಎತ್ತರವಿರುವ ಈ ನಂದಿಯು ಸರಳವಾಗಿದೆ. **(ಚಿ.ಸಂ.75)** ಸುಖನಾಸಿಯ ಮುಂದೆ ನಿರ್ಮಿಸಲಾಗಿದ್ದ ನವರಂಗ ಮತ್ತು ಮುಖಮಂಟಪಗಳು ಈಗ ಕಣ್ಮರೆಯಾಗಿವೆ. ದೇವಾಲಯದ ಮೇಲ್ಭಾಗಕ್ಕೆ ತೆಂಗಿನ ಗರಿಯನ್ನು ಹೊದಿಸಲಾಗಿದೆ. [116]

## ವೈಷ್ಣವ ದೇವಾಲಯಗಳು

ಭಾರತೀಯ ಹಿಂದೂ ಧರ್ಮದಲ್ಲಿ ಕಂಡುಬರುವಂತಹ ಪ್ರಮುಖವಾದ ಎರಡು ಪಂಥಗಳೆಂದರೆ ಶೈವಪಂಥ ಮತ್ತು ವೈಷ್ಣವಪಂಥ. ಈ ಎರಡೂ ಪಂಥಗಳು ಪ್ರಾಚೀನವಾಗಿದವುಗಳು. ವೈಷ್ಣವಪಂಥದ ಶ್ರೀವಿಷ್ಣುವೇ ಪ್ರಮುಖ ಆರಾಧ್ಯ ದೈವ. ಆತನ ಅವತಾರ ರೂಪಗಳನ್ನು ಉಪಾಸಿಸುವರೆಲ್ಲರನ್ನು ವೈಷ್ಣವರೆಂದು ಹೇಳಬಹುದಾಗಿದೆ. ವಿಷ್ಣುವಿನ ವಿವಿಧ ಅವತಾರವಗಳನ್ನು ಮಾಡಿ ದಾನದತ್ತಿಗಳನ್ನು ನೀಡಿರುವುದು ಶಾಸನಗಳಲ್ಲಿ ಕಂಡುಬರುತ್ತದೆ.

ಹಿಂದೂ ಧರ್ಮದಲ್ಲಿ ಶಿವನಷ್ಟೇ ಪ್ರಬಲ ದೇವನಾಗಿರುವ ವಿಷ್ಣುವಿಗೂ ಒಂದು ಸುದೀರ್ಘ ಕಾಲದ ಐತಿಹಾಸಿಕ ಹಿನ್ನೆಲೆ ಇದ್ದು, ವೇದಾಗಮಗಳಲ್ಲಿ ವಿಷ್ಣುವಿಗೆ ಹೆಚ್ಚಿನ ವೈಭವಯುತ ಪ್ರಾಮುಖ್ಯತೆ ಇಲ್ಲದಿದ್ದರೂ ಅಪ್ರಧಾನವೇನಲ್ಲ. ಅವನು ತನ್ನ ಮೂರು ಹೆಜ್ಜೆಗಳಿಂದ ಲೋಕದ ಸಮಸ್ಥಿತಿಯನ್ನು ಅಳೆಯುವುದನ್ನು ಋಗ್ವೇದದಲ್ಲಿ ವರ್ಣಿಸಲಾಗಿದೆ. ನಂತರದ ಬ್ರಾಹ್ಮಣರುಗಳು ಅವನ ಪ್ರಾಧಾನ್ಯತೆ ಹೆಚ್ಚಿದಂತೆ ದೇವತೆಗಳಿಗೆಲ್ಲಾ ಈತನೇ ವರಿಷ್ಠನೆಂದು ಅಗ್ನಿಯೇ ಕನಿಷ್ಠ ದೇವತೆಯೆಂದು ಐತರೇಯ ಬ್ರಾಹ್ಮಣವು ವರ್ಣಿಸಿದೆ. ಈ ನಿಟ್ಟಿನಲ್ಲಿ ವಿಷ್ಣುವು ದುಷ್ಟ ರಾಕ್ಷಸರ ವಿರುದ್ಧ ಹೋರಾಡಲು ದೇವತೆಗಳಿಗೆ ಸಹಾಯಕನಾಗಿದ್ದವನು ವಿಷ್ಣುವೆಂದು ಅನಂತರದ ಇತಿಹಾಸದ ಮಹಾಕಾವ್ಯಗಳ ಕಾಲದಲ್ಲಿ ವಿಷ್ಣುವು ಪರಮ ದೇವನಾಗಿ ಪರಿಣಮಿಸಿದನು ಎಂಬುದು ಸ್ಪಷ್ಟ.[117]

ಬ್ರಹ್ಮ, ವಿಷ್ಣು, ಮಹೇಶ್ವರ ಈ ಮೂರು ದೇವತೆಗಳಿಗೂ ಹಿಂದೂ ಧರ್ಮದ ನಂಬಿಕೆಯಲ್ಲಿ ಪ್ರಾಧಾನ್ಯತೆ ಇದ್ದು, ಬ್ರಹ್ಮ ಈ ಜಗತ್ತಿನ ಸೃಷ್ಠಿಕರ್ತನಾಗಿದ್ದು ಇವನು ಸೃಷ್ಠಿಸಿದ್ದನ್ನು ವಿಷ್ಣುವು ಕಾಪಾಡುತ್ತಿದ್ದು, ಶಿವ ಅದನ್ನು ಲಯವಾಗಿಸುತ್ತಾನೆ ಎಂಬ ನಂಬಿಕೆ ಇಂದಿಗೂ ಸಹ ಪ್ರಾಚೀನ ಪುರಾಣ ಗ್ರಂಥಗಳಲ್ಲಿ ಉಲ್ಲೇಖನೀಯವಾದಂತೆ ಪ್ರಚಲಿತದಲ್ಲಿದೆ. ಭಾರತೀಯ ಹರಿವಂಶ, ನಾರಾಯಣೀ, ಆಖ್ಯಾನ, ವರಹಾಪುರಾಣ, ವಾಯು ಪುರಾಣ, ಭಾಗವತ ಪುರಾಣ ಮುಂತಾದವುಗಳು ವಿಷ್ಣುವಿನ ಅವತಾರದ ಬಗ್ಗೆ ವಿವರಿಸುತ್ತವೆ. ಅವುಗಳಲ್ಲಿ ಮತ್ಸ್ಯ, ವರಹ, ನರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಕಲ್ಕಿ ಮುಂತಾದ ಅವತಾರಗಳು ಜನಪ್ರಿಯತೆಯನ್ನು ಪಡೆದಿದ್ದು ವಿಷ್ಣುವಿಗೆ ಸಹಸ್ರ ನಾಮಗಳೂ ಇವೆ. ವಿಷ್ಣುವಿನ ಆರಾಧನೆಯೇ ಪರಮೋಚ್ಚವೆಂದು ಭಾವಿಸಿದ ಪಂಥದವರನ್ನು ವೈಷ್ಣವರೆಂದು ಕರೆದರು. ಇವರಲ್ಲಿ ಆರು ಪಂಗಡಗಳನ್ನು ಕಾಣಬಹುದು. ಅವುಗಳಲ್ಲಿ ಪ್ರಮುಖವಾಗಿ

1. ಶ್ರೀರಾಮಾನುಜ ಸಂಪ್ರದಾಯ ಶ್ರೀವೈಷ್ಣವರು

2. ಮಧ್ವಾಚಾರ್ಯ ಸಂಪ್ರದಾಯ ವೈಷ್ಣವರು (ಹರಿ ವೈಷ್ಣವರು, ಬ್ರಹ್ಮತಂತ್ರ ವೈಷ್ಣವರು)

3. ಚೈತನ್ಯಸ್ವಾಮಿ ಸಂಪ್ರದಾಯ ವೈಷ್ಣವರು

4. ಶ್ರೀರಾಮಾನಂದ ಸಂಪ್ರದಾಯ ಶ್ರೀರಾಮನಂದಿ ವೈಷ್ಣವರು

5. ಶ್ರೀನಿಂಬಾಕರ ಸಂಪ್ರದಾಯ ನಿಂಬಾಕರ ವೈಷ್ಣವರು

6. ಶ್ರೀವಲ್ಲಭಾಚಾರ್ಯ ಸಂಪ್ರದಾಯ ರಾಧವಲ್ಲಭ ವೈಷ್ಣವರು[118]

ವಿಷ್ಣುವಿನ ದಶಾವತಾರಗಳಾದ 1. ಮತ್ಸ್ಯ (ಮೀನು), 2. ಕೂರ್ಮ (ಆಮೆ), 3. ವರಾಹ (ಹಂದಿ), 4. ನರಸಿಂಹ, 5. ವಾಮನ (ಕುಬ್ಜ), 6. ಪರಶುರಾಮ, 7. ರಾಮ, 8. ಕೃಷ್ಣ, 9. ಬುದ್ಧ, 10. ಕಲ್ಕಿ ಮುಂತಾದವು ಅಷ್ಟ ದಶಪುರಾಣಗಳಲ್ಲಿ ಮತ್ಸ್ಯ ಪುರಾಣ, ಭಾಗವತ ಪುರಾಣ, ಕೂರ್ಮ ಪುರಾಣ, ವರಾಹ ಪುರಾಣ, ವಿಷ್ಣು ಪುರಾಣ, ನಾಗಪುರಾಣ, ಗರುಡ ಪುರಾಣ ಇವು ವಿಷ್ಣುವು ಲೋಕಕಲ್ಯಾಣಕ್ಕಾಗಿ ತಳೆದ ಅವತಾರಗಳನ್ನು ತಿಳಿಸಿರುವ ಪ್ರಮುಖ ಪುರಾಣಗಳಾಗಿವೆ.[119]

ವೈಷ್ಣವ ಧರ್ಮವು ದಕ್ಷಿಣ ಭಾರತದಲ್ಲಿ ಯಾವಾಗ ಹರಡಿತು ಎಂಬ ವಿಷಯವನ್ನು ತಿಳಿಯುವುದು ಒಂದು ಕಲ್ಪನೆಯಷ್ಟೇ. ಆದರೆ ವಿಷ್ಣುವನ್ನು ಆರಾಧ್ಯ ದೈವವಾಗಿ ಭಾವಿಸುವ ಆಗಮಗಳು ಪಂಚತಾರಾಗಮಗಳು ತಿಳಿಯಪಡಿಸುತ್ತವೆ.[120] ಆದರೆ ಕ್ರಿ.ಶ. 4ನೇ ಶತಮಾನದಲ್ಲಿಯೇ ವೈಷ್ಣವ ಧರ್ಮವು ದಕ್ಷಿಣ ಭಾರತಕ್ಕೆ ಬಂದಿತು ಎಂಬ ಅಂಶವು ಸಾಹಿತ್ಯಕ ಆಧಾರಗಳಿಂದ ತಿಳಿದುಬರುತ್ತದೆ.[121] ಪ್ರಾಚೀನ ಕಾಲದಿಂದಲೂ ವಿಷ್ಣುವಿನ ಆರಾಧನೆಯು ಕರ್ನಾಟಕದಲ್ಲಿ ಇದ್ದಿತಾದರೂ ಕ್ರಿ.ಶ.10ನೇ ಶತಮಾನದ ನಂತರದಲ್ಲಿ ವೈಷ್ಣವ ಧರ್ಮವು ವ್ಯಾಪಕವಾಗಿ ಹರಡಿತು. ವಿಷ್ಣುವು ಸರ್ವಲೋಕಾಧಿಪತಿ ಎಂಬ ಭಾವನೆ ಬೆಳೆದು ವಿಷ್ಣುವಿನ ಆರಾಧನೆಯು ಪ್ರಮುಖವಾಯಿತು.[122] ಕರ್ನಾಟಕದಲ್ಲಿ ವೈಷ್ಣವ ಧರ್ಮದ ಪ್ರಾಬಲ್ಯವು ಕನ್ನಡದ ಮೊಟ್ಟ ಮೊದಲ ಶಾಸನ ಕ್ರಿ.ಶ.450ರ ಹಲ್ಮಿಡಿ ಶಾಸನದಿಂದ ತಿಳಿದುಬರುತ್ತದೆ. ಈ ಶಾಸನದ ಪ್ರಾರಂಭವು ವಿಷ್ಣುವಿನ ಶ್ಲೋಕದಿಂದಲೇ ಆರಂಭವಾಗುತ್ತದೆ.[123] ತುಮಕೂರು ಜಿಲ್ಲೆ ತುರುವೇಕೆರೆಯ ಚನ್ನಕೇಶವ ದೇವಾಲಯ, ತುರುವೇಕೆರೆ ತಾಲೂಕಿನ ತಂಡಗ ಗ್ರಾಮದ ಚನ್ನಕೇಶವ ದೇವಾಲಯ, ನಾಗಲಾಪುರ ಚನ್ನಕೇಶವ ದೇವಾಲಯ, ಬುಗುಡನಹಳ್ಳಿಯ ರಂಗನಾಥ ದೇವಾಲಯ ಮುಂತಾದ ಪ್ರದೇಶಗಳಲ್ಲಿ ಹಲವಾರು ವೈಷ್ಣವ ದೇವಾಲಯಗಳು ನಿರ್ಮಾಣವಾಗಿವೆ. ಈ ಹಿನ್ನೆಲೆಯಲ್ಲಿ ದಕ್ಷಿಣ ಕರ್ನಾಟಕಕ್ಕೆ ವಿಷ್ಣುವರ್ಧನನ ಆಳ್ವಿಕೆಯ ಕಾಲದಲ್ಲಿ ಆಗಮಿಸಿದ ರಾಮಾನುಜಾಚಾರ್ಯರು ಈತನ ಮನ ಪರಿವರ್ತನೆ ಮಾಡಿ ವೈಷ್ಣವ ಧರ್ಮಕ್ಕೆ

ಮತಾವಲಂಬಿಯಾಗುವಂತೆ ಮಾಡಿದರು. ಇದರಿಂದ ಕರ್ನಾಟಕದ ಅನೇಕ ಪ್ರದೇಶಗಳಲ್ಲಿ ವೈಷ್ಣವ ಧರ್ಮವು ಅನೇಕ ರಾಜಾಶ್ರಯದಲ್ಲಿ ಪ್ರವರ್ಧಮಾನಕ್ಕೆ ಬಂದುದಲ್ಲದೇ, ಅನೇಕ ರಾಜರುಗಳು, ಪಾಳೇಯಗಾರರು, ವೈಷ್ಣವ ದೇವಾಲಯಗಳ ನಿರ್ಮಾಣಕ್ಕೆ ಪ್ರೋತ್ಸಾಹ ನೀಡಿದರು.[124] ಹೊಯ್ಸಳರ ಕಾಲದಲ್ಲಿ ವೈಷ್ಣವ ದೇವಾಲಯಗಳು ನಿರ್ಮಾಣವಾಗಿದ್ದರೂ ಅವರ ಕಾಲದಲ್ಲಿ ಎಲ್ಲಾ ಧರ್ಮಗಳ ಬೆಳವಣಿಗೆಗೆ ಪ್ರೋತ್ಸಾಹ ನೀಡುತ್ತಿದ್ದರೆಂಬ ಅಂಶ ಹಲವು ಶಾಸನಗಳಿಂದ ತಿಳಿದುಬರುತ್ತದೆ. ತದನಂತರದ ವಿಜಯನಗರ ಕಾಲದಲ್ಲಿಯೂ ಸಹ ವೈಷ್ಣವ ದೇವಾಲಯಗಳು ನಿರ್ಮಾಣವಾಗಿರುವುದನ್ನು ಕಾಣುತ್ತೇವೆ. ವಿಜಯನಗರದ ಸಾಮಂತ ಅರಸರು ಮತ್ತು ಮೈಸೂರು ಒಡೆಯರು ಸಹ ವೈಷ್ಣವ ಧರ್ಮವನ್ನು ಪ್ರೋತ್ಸಾಹಿಸಿ ಬೆಳೆಸಿದರು. ಈ ಹಿನ್ನೆಲೆಯಲ್ಲಿ ನನ್ನ ಸಂಶೋಧನಾ ಕ್ಷೇತ್ರ ಕಾರ್ಯದಲ್ಲಿ ದೊರೆತಂತಹ ವೈಷ್ಣವ ದೇವಾಲಯಗಳನ್ನು ಸಂದರ್ಶಿಸಿ ದೇವಾಲಯಕ್ಕೆ ಸಂಬಂಧಿಸಿದ ಮಹತ್ವದ ವಿಷಯಗಳನ್ನು ಪರಿಶೋಧಿಸಿ, ಸಂಗ್ರಹಿಸಿರುವುದಲ್ಲದೇ ಕೆಲವು ಮೂಲ ಆಕರಗಳನ್ನು ಅಭ್ಯಾಸಮಾಡಿ ಅವುಗಳ ಕಲೆ ಮತ್ತು ವಾಸ್ತುಶಿಲ್ಪ ಕುರಿತಂತೆ ಮಾಹಿತಿಯನ್ನು ಈ ಕೆಳಕಂಡಂತೆ ವಿವರಿಸಲಾಗಿದೆ.

**ಚನ್ನಕೇಶವ ದೇವಾಲಯ-ನಾಗಲಾಪುರ**

ತುರುವೇಕೆರೆ ತಾಲೂಕಿನಿಂದ ದಕ್ಷಿಣಕ್ಕೆ ಸುಮಾರು 8 ಕಿ.ಮೀ. ದೂರದಲ್ಲಿ ನಾಗಲಾಪುರ ಗ್ರಾಮವಿದೆ. ಈ ಗ್ರಾಮವು ಪ್ರಾಚೀನ ಕಾಲದಲ್ಲಿ ಅಂದರೆ ಹೊಯ್ಸಳರ ಆಳ್ವಿಕೆಯ ಕಾಲದಲ್ಲಿ ಇತಿಹಾಸ ಪ್ರಸಿದ್ಧ ಸ್ಥಳವಾಗಿದ್ದು ತನ್ನದೇ ಆದಂತಹ ಸಾಂಸ್ಕೃತಿಕ ಅಂಶಗಳನ್ನು ಒಳಗೊಂಡ ಗ್ರಾಮವಾಗಿದೆ. ಇದಕ್ಕೆ ಸಾಕ್ಷಿಯಾಗಿ ಈ ಗ್ರಾಮದ ಪೂರ್ವಕ್ಕೆ ಅಂದರೆ ಈಶಾನ್ಯ ಭಾಗದಲ್ಲಿ ನಿರ್ಮಾಣ ಮಾಡಲಾಗಿರುವ ಚನ್ನಕೇಶವ ದೇವಾಲಯ ಇದಕ್ಕೆ ಸಾಕ್ಷಿಯಾಗಿ ನಿಂತಿದೆ. ಈ ದೇವಾಲಯ ಕಾಲಪುರುಷನ ಮತ್ತು ಪ್ರಕೃತಿಯ ವಿಕೋಪಕ್ಕೆ ತುತ್ತಾಗಿ ಪ್ರಸ್ತುತ ಶಿಥಿಲಾವಸ್ಥೆಯಲ್ಲಿದ್ದು ಈಗ ಸ್ವಲ್ಪಮಟ್ಟಿಗೆ ಸುಸ್ಥಿತಿಯಲ್ಲಿದೆ.

ನಾಗಲಾಪುರ ಗ್ರಾಮದ ಈಶಾನ್ಯ ಭಾಗದಲ್ಲಿರುವ ಕೆರೆಯ ಹಿಂಬದಿಯಲ್ಲಿ ಈ ದೇವಾಲಯವನ್ನು ನಿರ್ಮಿಸಲಾಗಿದೆ. ಇದೊಂದು ಏಕಕೂಟ ದೇವಾಲಯವಾಗಿದ್ದು ಸಂಪೂರ್ಣವಾಗಿ ಬಳಪದ ಕಲ್ಲನ್ನು ಉಪಯೋಗಿಸಿ ನಿರ್ಮಿಸಲಾಗಿದೆ. ಇದರಲ್ಲಿ ಒಂದು ಗರ್ಭಗೃಹ, ಸುಖನಾಸಿ, ನವರಂಗ ಮತ್ತು ಮುಖಮಂಟಪಗಳು ಕಂಡುಬರುತ್ತವೆ. ಶಾಸನದ ಭಾಗವು ತೃಟಿತವಾಗಿದ್ದು ಪ್ರಸ್ತುತ ಅದನ್ನು ಗ್ರಹಿಸಲು ಅಸಾಧ್ಯವಾಗಿದೆ.[125] ತುಮಕೂರು ಜಿಲ್ಲೆಯಲ್ಲಿ ಊರ ಮುಂಬಾಗಿಲಿನ ಬಳಿ ಹೊಯ್ಸಳ ದೊರೆ ಮೂರನೇ ಬಲ್ಲಾಳನ ಆಡಳಿತಕ್ಕೆ ಸಂಬಂಧಿಸಿದಂತೆ ಹಲವಾರು ಶಾಸನಗಳು ದೊರೆತಿದ್ದು (ಕ್ರಿ.ಶ. 1291-1342)[126] ಬಹುಶಃ

ನಾಗಲಾಪುರದ ಈ ಶಾಸನವು ಕ್ರಿ.ಶ.1336ರ ಕಾಲಮಾನಕ್ಕೆ ಸಂಬಂಧಿಸಿದುದಾಗಿದೆ. ಈ ದೇವಾಲಯ ಸುಮಾರು ಕ್ರಿ.ಶ.1249ರಲ್ಲಿ ಹೊಯ್ಸಳ ದೊರೆ 3ನೇ ನರಸಿಂಹನ ಕಾಲದಲ್ಲಿ ನಿರ್ಮಾಣವಾಗಿದೆ. [127]

**ಗರ್ಭಗೃಹ:-** ಗರ್ಭಗೃಹವು 8X8 ಅಡಿ ಉದ್ದ ಮತ್ತು ಅಗಲ ಹೊಂದಿದ್ದು ಚೌಕಾಕಾರವಾಗಿದೆ. ಈ ಗರ್ಭಗೃಹದ ಮಧ್ಯಭಾಗದಲ್ಲಿ ಸುಮಾರು 2 ಅಡಿ ಎತ್ತರದ ಪೀಠದ ಮೇಲೆ ಸುಮಾರು ಐದು ಅಡಿ ಎತ್ತರವಿರುವ ಚನ್ನಕೇಶವ ಮೂರ್ತಿಯನ್ನು ಮಾಡಲಾಗಿದ್ದು ಆ ಮೂರ್ತಿಯು ಭಿನ್ನವಾಗಿದ್ದರಿಂದ ಮೂಲ ಮೂರ್ತಿಯನ್ನು ತೆಗೆದು ಈಗ ವೆಂಕಟರಮಣ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. **(ಚಿ.ಸಂ.76)** ದೇವಾಲಯದ ಮೂಲಸ್ಥಾನವನ್ನು ವಾಸ್ತು ಶಾಸ್ತ್ರವು ಗರ್ಭಗುಡಿ ಎಂದು ಕರೆಯಲು ಅದರ ರಚನೆಯೇ ಕಾರಣವಾಗಿದೆ. ಸ್ತ್ರೀ ದೇಹದಲ್ಲಿರುವ ಗರ್ಭಕೋಶದಂತೆ ದೇವಾಲಯದಲ್ಲಿ ಕೇವಲ ಒಂದು ಕೋಣೆ ಮಾತ್ರ ಇರುವುದರಿಂದ ಈ ಹೆಸರು ಬರಲು ಕಾರಣವಾಗಿದೆ. ದೇಗುಲದ ಗರ್ಭಗುಡಿಯು ಒಂದೇ ಪ್ರವೇಶ ದ್ವಾರವನ್ನು ಪಡೆದು ಯಾವುದೇ ಜಾಲಾಂಧ್ರಗಳನ್ನು ಹೊಂದಿರದೆ ಮಂದವಾದ ಬೆಳಕನ್ನು ಹೊಂದಿರಬೇಕಾಗುತ್ತದೆ. ಈ ಕತ್ತಲ ಪರಿಸರದಲ್ಲಿ ಮೂಲ ಮೂರ್ತಿಯ ದರ್ಶನವು ಸ್ಪಷ್ಟವಾಗಿ ಕಾಣಲು ದೀಪದ ಆರತಿಯನ್ನು ಬೆಳಗುವ ಪರಿಪಾಠವನ್ನು ವಿಗ್ರಹ ದರ್ಶನಕ್ಕೆ ಅನುವು ಮಾಡಿಕೊಡುವ ಬಹುಮುಖ್ಯ ಘಟ್ಟವಾಗಿ ಪರಿಗಣಿಸಲಾಗುತ್ತದೆ. [128]

ವಿಷ್ಣುವಿನ ವಿವಿಧ ರೂಪಗಳಲ್ಲಿ ಕೇಶವನ ರೂಪವು ಹೆಚ್ಚು ಜನಪ್ರಿಯವಾಗಿದೆ. ಕೇಶವನ ಮಹಿಮೆಯನ್ನು ಗಮನಿಸಿದಾಗ ವಿಷ್ಣುವು 'ಕೇಶಿ' ಎಂಬ ರಾಕ್ಷಸನನ್ನು ವಧಿಸಿ ಲೋಕಕಲ್ಯಾಣವನ್ನು ಉಂಟುಮಾಡಿ ಕಷ್ಟವನ್ನು ಪರಿಹರಿಸಿದ್ದರಿಂದ ಕೇಶವನೆನಿಸಿದನೆಂದು ತಿಳಿದುಬರುವುದು. ಬಹುಶಃ 'ಕೇಶವಃ ಕೇಶ ನಾಶಾಯ' ಎನ್ನುವ ಭಾವನೆ ಇದರಿಂದಾಗಿರ ಬಹುದು.[129]ನಾಗಲಾಪುರದ ಚನ್ನಕೇಶವ ದೇವಾಲಯದಲ್ಲಿ ಕಂಡುಬರುವ ಈ ಮೂರ್ತಿಶಿಲ್ಪವು ವಿಷ್ಣುವಿನದೇ. ಆದರೆ ಇದು ನಂತರದ ಕಾಲದಲ್ಲಿ ಮೂಲ ಮೂರ್ತಿಯು ಭಗ್ನವಾಗಿದ್ದರಿಂದ ಮೂಲ ಮೂರ್ತಿಯನ್ನು ಪೀಠದಿಂದ ಬೇರ್ಪಡಿಸಿ ಈ ಪೀಠದ ಮೇಲೆ ನಂತರ ಕಾಲದಲ್ಲಿ ವೆಂಕಟರಮಣ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ಏಕೆಂದರೆ ಈ ಮೂರ್ತಿಯು ಹೊಯ್ಸಳ ಶಿಲ್ಪದ ಮಾದರಿಯಲ್ಲಿ ಇಲ್ಲವಾಗಿದ್ದರಿಂದ ಇದು ನಂತರದ ಶಿಲ್ಪವೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಮೂರ್ತಿಯು ನಂತರದ ಕಾಲದ್ದಾಗಿದ್ದು, ಎಲ್ಲಿಂದಲೋ ತಂದಿಡಲ್ಪಟ್ಟಿರುವು ದಾಗಿದೆಯೆಂದು ಪೀಠದ ಆಧಾರದಿಂದ ಸ್ಪಷ್ಟವಾಗಿ ಗುರುತಿಸ ಬಹುದಾಗಿದೆ.[130] ಇದು ಸಹಸ್ರನಾಮಗಳಲ್ಲಿ ಒಂದಾಗಿರುವ ವೆಂಕಟೇಶ್ವರನ ಮೂರ್ತಿ

ಶಿಲ್ಪವಾಗಿದ್ದು ವಿಜಯನಗರ ಕಾಲಕ್ಕೆ ಸೇರುತ್ತದೆ.[131] ವೆಂಕಟರಮಣ ಮೂರ್ತಿಯು ಚತುರ್ಭುಜವನ್ನು ಹೊಂದಿದ್ದು, ಸಮಭಂಗಿಯಲ್ಲಿ ನಿಂತಿದ್ದಾನೆ. ಚರ್ತುಭುಜ ಹೊಂದಿರುವ ಈ ದೇವನು ಶಂಖ, ಚಕ್ರ, ವರದ ಹಸ್ತ ಕಟಿಹಸ್ತವನ್ನು ಹೊಂದಿದ್ದಾನೆ. ಮೈಮೇಲೆ ವಿವಿಧ ಬಗೆಯ ವಸ್ತ್ರಾಭರಣಗಳನ್ನು ಬಿಡಿಸಿ ಸುಂದರಗೊಳಸಲಾಗಿದೆ. ಅವುಗಳಲ್ಲಿ ತೋಳಬಂಧಿ, ಕಂಠಿಕೆ, ಉದರಬಂಧ, ಯಜ್ಞೋಪವೀತ, ಕಾಲ್ಕಡಗ ಮುಂತಾದ ಆಭರಣಗಳನ್ನು ಚಿತ್ರಿಸಲಾಗಿದೆ. ಈ ದೇವನ ಹಿಂದಿರುವ ಪ್ರಭಾವಳಿಯು ಲತಾಸುರುಳಿಗಳ ಕೆತ್ತನೆಯಿಂದ ಅಲಂಕರಣಗೊಂಡಿದ್ದು, ಅಂತ್ಯಭಾಗದಲ್ಲಿ ಕೀರ್ತಿಮುಖ ಹೊಂದಿದೆ. ಮೂರ್ತಿಶಿಲ್ಪದ ಕೆಳಗೆ ಇಕ್ಕೆಲಗಳಲ್ಲಿ ಶ್ರೀದೇವಿ ಮತ್ತು ಭೂದೇವಿಯರನ್ನು ಇರಿಸಲಾಗಿದೆ.

ಗರ್ಭಗೃಹದ ಮೇಲ್ಛಾವಣಿಯಲ್ಲಿ ಅಷ್ಟ ಮತ್ತು ಚೌಕಾಕಾರವಾಗಿ ಭುವನೇಶ್ವರಿಯನ್ನು ರಚಿಸಲಾಗಿದೆ. ಇದರ ಒಳಭಾಗದಲ್ಲಿ ೯ ಅಂಕಣಗಳನ್ನು ಮಾಡಿ ಮಧ್ಯದಲ್ಲಿ ಅರಳಿದ ಪದ್ಮ ಪುಷ್ಪವನ್ನು ಬಿಡಿಸಿ ಸುತ್ತಲೂ ಅಷ್ಟದಿಕ್ಪಾಲಕರ ಶಿಲ್ಪಗಳನ್ನು ಬಹಳ ಸುಂದರವಾಗಿ ಬಿಡಿಸಲಾಗಿದೆ. **(ಚಿ.ಸಂ.77)** ಅಲ್ಲದೆ ಒಳಪಟ್ಟಿಕೆಯಲ್ಲಿ ದಿಕ್ಪಾಲಕರ ಜಾಗದಲ್ಲಿ ಇಂದ್ರ, ಲಕ್ಷ್ಮೀನಾರಾಯಣ, ವಾಮನ ಮತ್ತು ಕೇಶವನ ಮೂರ್ತಿಗಳನ್ನು ಬಿಡಿಸಲಾಗಿದೆ. ಮಧ್ಯದಲ್ಲಿ ಮಣಿಹಾರಗಳವೆ. ಎರಡನೆಯ ಪಟ್ಟಿಕೆಯಲ್ಲಿ ಕೀರ್ತಿಮುಖಗಳ ಅಲಂಕರಣೆ ಮೊದಲನೆಯ ಪಟ್ಟಿಕೆಯಲ್ಲಿ ಲತಾಸುರುಳಿ, ಪುಷ್ಪಗಳ ಕೆತ್ತನೆಗಳಿಂದ ಭುವನೇಶ್ವರಿಯನ್ನು ಅಲಂಕರಿಸಲಾಗಿದೆ.

ಗರ್ಭಗೃಹದ ದ್ವಾರವು ಸರಳವಾಗಿದ್ದು ಮಧ್ಯದಲ್ಲಿ ನಕ್ಷತ್ರಾಕಾರದ ಕಂಬಗಳನ್ನಿಟ್ಟು ನಿರ್ಮಿಸಲಾಗಿದೆ. ಲಲಾಟಬಿಂಬದಲ್ಲಿ ನಾರಾಯಣನನ್ನು ಬಿಡಿಸಲಾಗಿದೆ. ಉಳಿದಂತೆ ಎರಡೂ ಕಡೆಗಳಲ್ಲಿ ಕಮಲದ ಮೊಗ್ಗು ಇಳಿ ಬಿಟ್ಟಿರುವಂತೆ ಕೆತ್ತನೆ ಮಾಡಿ ಅಲಂಕರಣೆ ಮಾಡಲಾಗಿದೆ. ಇವುಗಳ ಮೇಲೆ ಸಂಗೀತಗಾರರ ಶಿಲ್ಪಗಳನ್ನು ಬಿಡಿಸಲಾಗಿದೆ. ತೋರಣದ ಭಾಗದಲ್ಲಿ ಕೂಡುಗಳು ಮಣಿಹಾರಗಳನ್ನು ಕಮಲದ ಮೊಗ್ಗುಗಳನ್ನು ಬಿಡಿಸಿ ಸುಂದರಗೊಳಸಲಾಗಿದೆ. ದ್ವಾರದ ಬಾಗಿಲುವಾಡದಲ್ಲಿ ಕೀರ್ತಿಮುಖದ ಬಾಯಿಂದ ಹೊರಟಂತೆ ಬಿಡಿಸಲಾಗಿರುವ ಬಳ್ಳಿಸುರುಳಿಗಳವೆ. ಬಾಗಿಲ ಇಕ್ಕೆಲಗಳಲ್ಲಿ ವೈಷ್ಣವ ದ್ವಾರಪಾಲಕರಿದ್ದಾರೆ. ಇವರು ತ್ರಿಭಂಗಿಯಲ್ಲಿ ನಿಂತಿದ್ದು ಚತುರ್ಭುಜವನ್ನು ಹೊಂದಿದ್ದಾರೆ. ಇವರು ಕೈಗಳಲ್ಲಿ ಶಂಖ, ಚಕ್ರ, ಗಧಾ, ಪದ್ಮವನ್ನು ಹಿಡಿದು ನಿಂತಿದ್ದಾರೆ. ಪ್ರಭಾವಳಿಯಲ್ಲಿ ಬಳ್ಳಿ ಸುರುಳಿ ಕೀರ್ತಿಮುಖ ಬಿಡಿಸಲಾಗಿದೆ.

**ಸುಖನಾಸಿ**

ಸುಖನಾಸಿಯು ಸಹ ಗರ್ಭಗೃಹದಷ್ಟೇ ಉದ್ದ ಮತ್ತು ಅಗಲವನ್ನು ಹೊಂದಿದೆ. ಸುಖನಾಸಿಯಲ್ಲಿ ಯಾವುದೇ ಮೂರ್ತಿ ಶಿಲ್ಪಗಳು ಕಂಡುಬರುವುದಿಲ್ಲ. ಮೇಲ್ಛಾವಣಿಯಲ್ಲಿರುವ ಭುವನೇಶ್ವರಿಯು ಗರ್ಭಗೃಹದ ಭುವನೇಶ್ವರಿಯ ಲಕ್ಷಣಗಳನ್ನು ಹೊಂದಿದ್ದು, ಇದರಲ್ಲಿ ಅಷ್ಟದಿಕ್ಪಾಲಕರು ಮತ್ತು ಕಮಲದ ಪುಷ್ಪವನ್ನು ಬಿಡಿಸಲಾಗಿದೆ. ಕೆಳಗಿನ ಪಟ್ಟಿಕೆಗಳಲ್ಲಿ ವಿಷ್ಣುವಿನ ಅವತಾರಕ್ಕೆ ಸಂಬಂಧಿಸಿದ ಶಿಲ್ಪಗಳನ್ನು ಬಿಡಿಸಿ ಮಧ್ಯದಲ್ಲಿ ಮಣಿಹಾರಗಳನ್ನು ಬಿಡಿಸಿ ಸುಂದರಗೊಳಸಲಾಗಿದೆ ಮತ್ತು ಮೂಲೆಗಳಲ್ಲಿ ಕೀರ್ತಿಮುಖದ ಬಾಯಿಂದ ಹೊರಟಂತೆ ಬಿಡಿಸಲಾಗಿರುವ ಬಳ್ಳಿಸುರುಳಿಗಳನ್ನು ಬಿಡಿಸಲಾಗಿದೆ.

ಸುಖನಾಸಿಯ ದ್ವಾರವು ಸರಳವಾದ ಪಟ್ಟಿಕೆಗಳಿಂದ ಕೂಡಿವೆ. ಇವುಗಳಲ್ಲಿ ಯಾವುದೇ ರೀತಿಯ ಸೂಕ್ಷ್ಮ ಕೆತ್ತನೆ ಕಾಣಬರುವುದಿಲ್ಲ. ಲಲಾಟಬಿಂಬದಲ್ಲಿ ಲಕ್ಷ್ಮೀಯನ್ನು ಬಿಡಿಸಲಾಗಿದೆ. ತೋರಣದ ಭಾಗದಲ್ಲಿ ಮಣಿಹಾರಗಳ, ಕಮಲದ ಮೊಗ್ಗುಗಳ ಕೂಡುಗಳನ್ನು ಬಿಡಿಸಲಾಗಿದೆ. ಬಾಗಿಲವಾಡದಲ್ಲಿ ಮಕರ ತೋರಣ, ಬಾಗಿಲ ಪಟ್ಟಿಕೆಗಳ ಪಕ್ಕದಲ್ಲಿ ನಕ್ಷತ್ರಾಕಾರದ ಅರೆಗಂಬ, ಜಾಲಾಂಧ್ರಗಳನ್ನು ಜೋಡಿಸಲಾಗಿದೆ. ಬಾಗಿಲ ಇಕ್ಕೆಲಗಳಲ್ಲಿ ವಿಷ್ಣುವಿನ ದ್ವಾರಪಾಲಕರಿದ್ದಾರೆ. ಇವರು ತ್ರಿಭಂಗಿಯಲ್ಲಿ ನಿಂತಿದ್ದು ಚತುರ್ಭುಜ ಹೊಂದಿದ್ದಾರೆ. ಕೈಗಳಲ್ಲಿ ಶಂಖ, ಚಕ್ರ, ಗಧಾ ಹಸ್ತ ಹೊಂದಿದ್ದಾರೆ ಪ್ರಭಾವಳಿಯಲ್ಲಿ ಬಳ್ಳಿಸುರುಳಿ ಕೀರ್ತಿಮುಖ ಬಿಡಿಸಲಾಗಿದೆ. **(ಚಿ.ಸಂ.78)**

**ನವರಂಗ**

ನವರಂಗವು ಸುಮಾರು 25X25 ಅಡಿ ಉದ್ದ ಮತ್ತು ಅಗಲವಾಗಿದ್ದು ಚೌಕಾಕಾರವಾಗಿದೆ. ನವರಂಗದ ಮಧ್ಯಭಾಗದಲ್ಲಿ ಹೊಯ್ಸಳ ಶೈಲಿಯ ನಾಲ್ಕು ಕಂಬಗಳಿವೆ.**(ಚಿ.ಸಂ.79)** ಇವುಗಳು ದೃಢಕಾಯವಾಗಿದ್ದು ನಯವಾದ ಕೆತ್ತನೆಯಿಂದ ಕೂಡಿವೆ. ಇವುಗಳನ್ನು ಉಪಪೀಠದ ಮೇಲೆ ಚೌಕಾಕಾರ, ಮೇಲೆ ಬಳೆಗಳ, ಗಂಟೆಯಾಕಾರ, ಘಟಾಕಾರ ಗಾಲಿಯಾಕಾರದ ಗಾಲಿಯ ನಾಲ್ಕು ದಿಕ್ಕುಗಳಲ್ಲೂ ಬುಗುಟುಗಳನ್ನು ಮಾಡಲಾಗಿದೆ. ಇದರ ಮೇಲಿರುವ ಬೋಧಿಗೆಯನ್ನು ಕಮಲ ಪುಷ್ಪದಂತೆ ರಚಿಸಿ ಅದರ ಮೇಲೆ ಚೌಕಾಕಾರದ ಫಲಗೈ ಮತ್ತದರ ಮೇಲೆ ಸಿಂಬಿಯಾಕಾರದ ಕಪೋತವನ್ನು ಮಾಡಲಾಗಿದೆ. ಈ ಕಂಬಗಳ ಗಂಟೆಯಾ ಕಾರದ ಭಾಗದಲ್ಲಿ ಮಣಿಹಾರಗಳನ್ನು ಸುತ್ತಲೂ ಬಿಡಿಸಿ ಅಲಂಕರಣ ಮಾಡಲಾಗಿದೆ.[132] ನವರಂಗದ ಮೇಲ್ಛಾವಣಿಯು 9 ಅಂಕಣಗಳಿಂದ ಕೂಡಿದ್ದು ಇವುಗಳನ್ನು ಭುವನೇಶ್ವರಿಗಳಾಗಿ ಪರಿವರ್ತಿಸಿ ಮೇಲ್ಛಾವಣಿಯನ್ನು ಸುಂದರಗೊಳಸಲಾಗಿದೆ.

**ಮಧ್ಯದ ಭುವನೇಶ್ವರಿ**

ಈ ಭುವನೇಶ್ವರಿಯು ಚೌಕ, ಅಷ್ಟ ವೃತ್ತಾಕಾರವಾಗಿ ಒಳಭಾಗವನ್ನು ರಚಿಸಲಾಗಿದೆ. ಮಧ್ಯದಲ್ಲಿ ಮೂರು ಸುತ್ತು ವಿಶಾಲವಾಗಿ ಅರಳಿರುವ ಪದ್ಮಪುಷ್ಪವನ್ನು ಬಿಡಿಸಲಾಗಿದೆ. ವೃತ್ತದ ಬಳೆಗಳ ಮೇಲೆ ಪದ್ಮಪುಷ್ಪದ ಮೊಗ್ಗುಗಳನ್ನು ಬಿಡಿಸಲಾಗಿದೆ. ಒಳಭಾಗದಲ್ಲಿ ಅಷ್ಟ ಮೂಲೆಗಳಲ್ಲಿ ಅಷ್ಟ ದಿಕ್ಪಾಲಕರು ತಮ್ಮ ತಮ್ಮ ವಾಹನವನ್ನೇರಿ ಕುಳಿತಿದ್ದಾರೆ. ಇದರ ಮಧ್ಯದಲ್ಲಿ ಸಂಗೀತಗಾರರ ನೃತ್ಯಗಾರರ ಶಿಲ್ಪಗಳನ್ನು ಬಿಡಿಸಲಾಗಿದೆ. ಉಳಿದಂತೆ ಮೂಲೆಗಳಲ್ಲಿ ಕೀರ್ತಿಮುಖ ಬಿಡಿಸಿ ಬಹಳ ಸುಂದರವಾಗಿ ಕಾಣುವಂತೆ ರಚಿಸಲಾಗಿದೆ.

**ಪಶ್ಚಿಮದ ಭುವನೇಶ್ವರಿ**:-ಈ ಭುವನೇಶ್ವರಿಯು ಚೌಕ, ಅಷ್ಟ ಮತ್ತು ನಕ್ಷತ್ರಾಕಾರವಾಗಿ ರಚಿಸಲಾಗಿದೆ. ಇದರ ಮಧ್ಯದಲ್ಲಿ ಮೂರು ಸುತ್ತು ವೃತ್ತಾಕಾರವಾಗಿ ಅರಳಿದ ಪದ್ಮ ಪುಷ್ಪ ಬಿಡಿಸಲಾಗಿದೆ. ಒಳಗೆ ದಿಲ್ಪಾಲಕರ ಶಿಲ್ಪಗಳನ್ನು ನಾಲ್ಕು ದಿಕ್ಕುಗಳಲ್ಲೂ ಬಿಡಿಸಲಾಗಿದೆ. ಉಳಿದಂತೆ ಕಮಲದ ಮೊಗ್ಗುಗಳು, ಕೀರ್ತಿಮುಖಗಳನ್ನು ಬಿಡಿಸಿ ಸುಂದರಗೊಳಿಸಲಾಗಿದೆ.

**ವಾಯುವ್ಯ ಭುವನೇಶ್ವರಿ**:- ಈ ಭುವನೇಶ್ವರಿಯನ್ನು ಚೌಕಾಕಾರವಾಗಿ ರಚಿಸಲಾಗಿದೆ. ಇದರ ಒಳಗೆ ಕಮಲದ ಪುಷ್ಪವನ್ನು ಬಿಡಿಸಿ ಅದರ ಮೇಲೆ ಚೌಕ ಬಳ್ಳಿಯ ರೀತಿ ಬಳೆ ಬಿಡಿಸಲಾಗಿದೆ. ಉಳಿದಂತೆ ಕಮಲದ ಮೊಗ್ಗುಗಳು ವ್ಯಾಳದ ಬಾಯಿಂದ ಹೊರಟಂತೆ ಬಿಡಿಸಿರುವ ಬಳ್ಳಿ ಸುರುಳಿಗಳು, ಕಮಲದ ಮೊಗ್ಗುಗಳ ಸಾಲು ಮತ್ತೆ ಕೀರ್ತಿಮುಖದ ಬಾಯಿಂದ ಹೊರಟಂತೆ ಬಿಡಿಸಲಾಗಿರುವ ಬಳ್ಳಿ ಸುರುಳಿಗಳ ಅಲಂಕರಣವಿದೆ.

**ಉತ್ತರದ ಭುವನೇಶ್ವರಿ**:-ಇದು ಚೌಕ, ನಕ್ಷತ್ರಾಕಾರವಾಗಿ ರಚಿಸಲಾಗಿದೆ. ಇದರ ಒಳಗೆ ವೃತ್ತಾಕಾರದ ಮೂರು ಬಳೆಗಳಿವೆ. ಈ ಬಳೆಗಳ ಮೇಲೆ ಕಮಲದ ಮೊಗ್ಗುಗಳನ್ನು ಬಿಡಿಸಲಾಗಿದೆ. ಮಧ್ಯದಲ್ಲಿರುವ ಕಮಲದ ಮೊಗ್ಗು ಅರಳುತ್ತಿರುವಂತೆ ಬಿಡಿಸಲಾಗಿದೆ. ಒಳಭಾಗದಲ್ಲಿ ಮಣಿಹಾರಗಳು, ಬಳ್ಳಿ ಸುರುಳಿಗಳು ದಿಕ್ಪಾಲಕರ ಶಿಲ್ಪಗಳನ್ನು ಬಿಡಿಸಲಾಗಿದೆ. ಮತ್ತೆ ಮಣಿಹಾರ ಕಮಲದ ಮೊಗ್ಗುಗಳನ್ನು ಚೌಕಾಕಾರದಲ್ಲಿ ಸುತ್ತಲೂ ಬಿಡಿಸಲಾಗಿದೆ.

**ಈಶಾನ್ಯ ಭುವನೇಶ್ವರಿ**:-ಭುವನೇಶ್ವರಿಯನ್ನು ಚೌಕ, ವೃತ್ತಾಕಾರವಾಗಿ ರಚಿಸಲಾಗಿದೆ. ಇದರ ಮಧ್ಯದಲ್ಲಿ ಮೂರು ಸುತ್ತು ಅರಳಿದ ಪದ್ಮ ಪುಷ್ಪವನ್ನು ಬಿಡಿಸಲಾಗಿದೆ. ಒಳಭಾಗದಲ್ಲಿರುವ ವೃತ್ತಾಕಾರದ ಬಳೆಗಳ ಅಂಚಿನಲ್ಲಿ ಕಮಲದ ಮೊಗ್ಗುಗಳನ್ನು ಬಿಡಿಸಲಾಗಿದೆ. ಅಲ್ಲದೆ ಒಳಭಾಗದಲ್ಲಿ ಅಷ್ಟದಿಕ್ಪಾಲಕರು ಆಸೀನರಾಗಿರುವಂತೆ ಬಿಡಿಸಲಾಗಿದೆ. ಇವುಗಳ ಮಧ್ಯದಲ್ಲಿ

ಮಣಿಹಾರಗಳನ್ನು ಬಿಡಿಸಲಾಗಿದೆ. ಮೂಲೆಗಳಲ್ಲಿ ಕೀರ್ತಿಮುಖಗಳನ್ನು ಮತ್ತು ಚೌಕಾಕಾರದ ಕಟ್ಟಿನಲ್ಲಿ ಕಮಲದ ಮೊಗ್ಗುಗಳನ್ನು ಬಿಡಿಸಲಾಗಿದೆ.

**ಪೂರ್ವದ ಭುವನೇಶ್ವರಿ:**-ಈ ಭುವನೇಶ್ವರಿಯನ್ನು ಚೌಕ, ಅಷ್ಟ ನಕ್ಷತ್ರಾಕಾರ ಮತ್ತು ವೃತ್ತಾಕಾರವಾಗಿ ರಚಿಸಲಾಗಿದೆ. ಮಧ್ಯದಲ್ಲಿ ಕಮಲದ ಮೊಗ್ಗು ಇದೆ. ಒಳಭಾಗದಲ್ಲಿ ಮೂರು ವೃತ್ತಾಕಾರದ ಬಳೆಗಳಿವೆ. ಇವುಗಳಲ್ಲಿ ಕಮಲದ ಮೊಗ್ಗು ನಕ್ಷತ್ರಾಕಾರ ಅಷ್ಟಕೋನಾಕಾರದಲ್ಲಿ ಅಷ್ಠದಿಕ್ಪಾಲಕರು, ಮಣಿಹಾರಗಳು, ಕೀರ್ತಿಮುಖಗಳು ಮತ್ತು ಚೌಕಾಕಾರದ ಭಾಗದಲ್ಲಿ ದಿಕ್ಪಾಲಕರ ಮಧ್ಯಭಾಗದಲ್ಲಿ ಮಣಿಹಾರ ಕಮಲದ ಮೊಗ್ಗುಗಳನ್ನು ಬಿಡಿಸಲಾಗಿದೆ, ಮೂಲೆಗಳಲ್ಲಿ ಕೀರ್ತಿಮುಖಗಳನ್ನು ಬಿಡಿಸಲಾಗಿದೆ.

**ಆಗ್ನೇಯ ಭಾಗದ ಭುವನೇಶ್ವರಿ:**-ಇದನ್ನು ಚೌಕ, ಅಷ್ಠ ನಕ್ಷತ್ರಾಕಾರ ವೃತ್ತಾಕಾರವಾಗಿ ರಚಿಸಲಾಗಿದೆ. ಇದರಲ್ಲಿ ಮೂರು ವೃತ್ತಗಳಿವೆ. ಇವುಗಳ ಒಳಗೆ ಕಮಲದ ಮೊಗ್ಗು ನಕ್ಷತ್ರಾಕಾರ, ಅಷ್ಠಕೋನಾಕಾರ ಮತ್ತು ಅಷ್ಠದಿಕ್ಪಾಲಕರುಗಳನ್ನು ಬಿಡಿಸಲಾಗಿದೆ. ಒಳಭಾಗದಲ್ಲಿ ಕೂಡುಗಳ ಅಲಂಕರಣ ಕೀರ್ತಿಮುಖಗಳು ಮಣಿಹಾರ ಕಮಲದ ಮೊಗ್ಗುಗಳನ್ನು ಬಿಡಿಸಲಾಗಿದೆ.

**ದಕ್ಷಿಣ ಭಾಗದ ಭುವನೇಶ್ವರಿ:**-ಈ ಭುವನೇಶ್ವರಿಯನ್ನು ಚೌಕ, ಅಷ್ಠಾಕಾರವಾಗಿ ಮಾಡಲಾಗಿದೆ. ಇದರ ಮಧ್ಯದಲ್ಲಿ ರಚಿಸಲಾಗಿದ್ದ ಮೊಗ್ಗು ಮುರಿದು ಹೋಗಿದೆ. ಇದರಲ್ಲಿ ಅಷ್ಠಾಕಾರವಾಗಿ ಬಿಡಿಸಲಾಗಿರುವ ಮೂರು ವೃತ್ತಗಳಿವೆ. ಇವುಗಳ ಮೇಲೆ ಕಮಲದ ಮೊಗ್ಗು, ಮಣಿಹಾರಗಳು ಅಷ್ಠದಿಕ್ಪಾಲಕರು ಮೂಲೆಗಳಲ್ಲಿ ಕೀರ್ತಿಮುಖ, ದಿಕ್ಪಾಲಕರು ಮಣಿಹಾರ, ಕಮಲದ ಮೊಗ್ಗುಗಳನ್ನು ಬಿಡಿಸಿ ಅಲಂಕರಿಸಲಾಗಿದೆ.

**ನೈರುತ್ಯದ ಭುವನೇಶ್ವರಿ:-** ಇದನ್ನು ಚೌಕಾಕಾರವಾಗಿ ರಚಿಸಲಾಗಿದೆ. ಒಳಭಾಗವನ್ನು ಅಷ್ಟ ಮತ್ತು ಚೌಕಾಕಾರವಾಗಿ ರಚಿಸಿ ಮಧ್ಯದಲ್ಲಿ ೨ ಅರಳಿದ ಪದ್ಮ ಪುಷ್ಪಗಳನ್ನು ಬಿಡಿಸಲಾಗಿದೆ. ಮೂಲೆಗಳಲ್ಲಿ ಕೀರ್ತಿಮುಖದ ಬಾಯಿಂದ ಹೊರಟಂತೆ ಬಿಡಿಸಲಾಗಿರುವ ಬಳ್ಳಿ ಸುರುಳಿಗಳು, ಕಮಲದ ಮೊಗ್ಗುಗಳ ದಿಕ್ಪಾಲಕರು ಕೂಡುಗಳು ಮತ್ತು ಬಳ್ಳಿ ಸುರುಳಿಗಳನ್ನು ಬಿಡಿಸಿ ಸುಂದರವಾಗಿ ಕಾಣುವಂತೆ ರಚಿಸಲಾಗಿದೆ. **(ಚಿ.ಸಂ.೮೦)**

ನವರಂಗದ ಪಶ್ಚಿಮದ ಗೋಡೆಯ ಮುಂದೆ ಉತ್ತರ ಮತ್ತು ದಕ್ಷಿಣ ಭಾಗದಲ್ಲಿ ಎರಡು ಕೋಷ್ಠ ಗುಡಿಗಳಿವೆ. ಈ ಕೋಷ್ಠಗುಡಿಗಳನ್ನು ನಕ್ಷತ್ರಾಕಾರವಾಗಿ ರಚಿಸಲಾಗಿದೆ. ಭಿತ್ತಿಯಲ್ಲಿ ತೆಳುವಾದ ಕಂಬಗಳನ್ನು ಸೇರಿಸಿ ಅಲಂಕರಣ ಮಾಡಲಾಗಿದೆ. ಭಿತ್ತಿಯ ಮೇಲೆ ಕಪೋತವನ್ನು ಇಳಿಜಾರಾಗಿ ಮಾಡಲಾಗಿದೆ. ಇದರ ಮೇಲೆ ಮೂರು ಹೊಯ್ಸಳ ಮಾದರಿಯ ಶಿಖರಗಳನ್ನು

ಚಿಕ್ಕದಾಗಿ ಮಾಡಲಾಗಿದೆ. **(ಚಿ.ಸಂ.81)** ಈ ಕೋಷ್ಠಗಳ ಒಳಗೆ ಯಾವುದೇ ಮೂರ್ತಿಶಿಲ್ಪಗಳು ಕಾಣಬರುವುದಿಲ್ಲ. ಈ ಕೋಷ್ಠದ ದ್ವಾರದ ಮುಂದೆ ಅಂದರೆ ಇಕ್ಕೆಲಗಳಲ್ಲಿ ಫಲ ಮತ್ತು ಚಾಮರ ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ಚಾಮರಧಾರಿಣಿಯರಿದ್ದಾರೆ. ನವರಂಗದ ದ್ವಾರ ಬಿದ್ದು ಹಾಳಾಗಿದ್ದರಿಂದ ಈಗ ಎರಡು ಕಲ್ಲಿನ ದಿಮ್ಮಿಗಳನ್ನು ನಿಲ್ಲಿಸಿ ದ್ವಾರವನ್ನು ಮಾಡಲಾಗಿದೆ. ನವರಂಗದ ದ್ವಾರವು ಪ್ರಕೃತಿಯ ವಿಕೋಪಕ್ಕೆ ಬಲಿಯಾಗಿ ಬಿದ್ದುಹೋಗಿದೆ, ಆದರೆ ಮುಖಮಂಟಪದ ಭಾಗವನ್ನು ಈಗ ತೆಗೆಯಲಾಗಿದೆ.

**ಮುಖಮಂಟಪ:**–ದೇವಾಲಯಕ್ಕೆ ಮುಖಮಂಟಪ ಕಂಡುಬರುವುದಿಲ್ಲ. ದೇವಾಲಯವು ಸಂಪೂರ್ಣವಾಗಿ ಶಿಥಿಲಾವಸ್ಥೆಯಲ್ಲಿದ್ದ ಕಾರಣ ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆಯವರು ಈ ದೇವಾಲಯವನ್ನು ಜೀರ್ಣೋದ್ಧಾರಗೊಳಿಸಿ ಸಂರಕ್ಷಿಸಿದ್ದಾರೆ. ತಳವಿನ್ಯಾಸವು ಸಂಪೂರ್ಣವಾಗಿ ನಾಶವಾಗಿವೆ. ಬಹುಶಃ ನಕ್ಷತ್ರಾಕಾರದ ತಳವಿನ್ಯಾಸವಿದ್ದು, ದೇವಾಲಯವು ಶಿಥಿಲಗೊಂಡಿದ್ದರಿಂದ ದೇವಾಲಯದ ಸುತ್ತಲೂ ಕಲ್ಲು ಮತ್ತು ಗಾರೆಯನ್ನು ಉಪಯೋಗಿಸಿ ಎತ್ತರದ ವೇದಿಕೆಯನ್ನು ನಿರ್ಮಿಸಿ ದೇವಾಲಯಕ್ಕೆ ಸೂಕ್ತ ರಕ್ಷಣೆಯನ್ನು ಒದಗಿಸಿದ್ದಾರೆ.

**ಜಗತಿ:–** ಮೂಲತಃ ಈ ದೇವಾಲಯವನ್ನು ನಕ್ಷತ್ರಾಕಾರದ ಜಗತಿಯ ಮೇಲೆ ನಿರ್ಮಾಣ ಮಾಡಿದಂತೆ ಕಂಡುಬರುತ್ತದೆ. ಆದರೆ ಭಾರತೀಯ ಪುರಾತತ್ವ ಇಲಾಖೆಯವರು ಈ ದೇವಾಲಯದ ಕೆಳಗೆ ಇದ್ದು ಜಗತಿಯ ಸುತ್ತಲೂ ಸೈಜುಗಲ್ಲನ್ನು ಉಪಯೋಗಿಸಿ ಜಗತಿ ಕಾಣದಂತೆ ಮುಚ್ಚಲಾಗಿದೆ. ಮತ್ತು ಮೇಲ್ಭಾಗಕ್ಕೆ ಕಲ್ಲಿನ ಚಪ್ಪಡಿಗಳನ್ನು ಹಾಸಿ ಮುಚ್ಚಿದ್ದಾರೆ.**(ಚಿ.ಸಂ.82)**

**ಅಧಿಷ್ಠಾನ:–** ಅಧಿಷ್ಠಾನವನ್ನು ಹಿನ್ಸರಿತ ಮುನ್ಸರಿತಗಳಂತೆ ಮಾಡಲಾಗಿದೆ. ಇಲ್ಲಿ ಸುಮಾರು 6 ಪಟ್ಟಿಕೆಗಳಿದ್ದು ಇವುಗಳ ಮೇಲೆ ಶಿಲ್ಪಗಳನ್ನು ಬಿಡಿಸಿ ಸುಂದರಗೊಳಿಸಲಾಗಿದೆ. ಹೊಯ್ಸಳ ದೇವಾಲಯಗಳಲ್ಲಿ ಕಂಡುಬರುವ ಅಧಿಷ್ಠಾನಗಳ ರೀತಿ ಪಟ್ಟಿಕೆಗಳ ಮೇಲೆ ಕೆಳಗಿನ ಪಟ್ಟಿಕೆಯಲ್ಲಿ ಆನೆಗಳು ಸಾಲಾಗಿ ತಮ್ಮ ಪಥದಲ್ಲಿ ಒಂದರ ಹಿಂದೆ ಮತ್ತೊಂದು ಚಲಿಸುತ್ತಿರುವಂತೆ ಮತ್ತು ವಿವಿಧ ಭಂಗಿಯ ಕತ್ತಿ ಗುರಾಣಿ ಹಿಡಿದು ಚಲಿಸುತ್ತಿರುವಂತೆ ಕೆತ್ತನೆ ಮಾಡಲಾಗಿದೆ. ಎರಡನೇ ಸಾಲಿನಲ್ಲಿ ಅಶ್ವಾರೋಹಿ ಯುದ್ಧದ ಕುದುರೆಗಳನ್ನು ಚಲಿಸುತ್ತಿರುವಂತೆ ಬಹಳ ನಯನ ಮನೋಹರವಾಗಿ ಕೆತ್ತನೆ ಮಾಡಲಾಗಿದೆ. ಕುದುರೆಗಳ ಮೇಲೆ ಸೈನಿಕರು ಕುಳಿತು ಯುದ್ಧವೊಂದಕ್ಕೆ ಹೊರಟಿರುವಂತೆ ರಚಿಸಲಾಗಿದೆ. ಮೂರನೇ ಪಟ್ಟಿಕೆಯಲ್ಲಿ ಬಳ್ಳಿ ಸುರುಳಿಗಳನ್ನು ಸೂಕ್ಷ್ಮ ಕೆತ್ತನೆ ಮಾಡಿ ಬಿಡಿಸಲಾಗಿದೆ. ನಾಲ್ಕನೇ ಪಟ್ಟಿಯನ್ನು ಹಾಗೆ ಖಾಲಿ ಬಿಡಲಾಗಿದೆ. ಐದನೇ

ಪಟ್ಟಿಕೆಯಲ್ಲಿ ಮಕರಗಳ ಸಾಲನ್ನು ಬಿಡಿಸಲಾಗಿದೆ. ಆರನೇ ಪಟ್ಟಿಕೆಯಲ್ಲಿ ಹಂಸಗಳ ಸಾಲನ್ನು ಬಹಳ ಸುಂದರವಾಗಿ ಮುಂದಕ್ಕೆ ಹಿಂದಕ್ಕೆ ಚಲಿಸುತ್ತಿರುವಂತೆ ಬಿಡಿಸಿ ಅಧಿಷ್ಠಾನವನ್ನು ಸುಂದರಗೊಳಿಸಲಾಗಿದೆ. **(ಚಿ.ಸಂ.83)**

**ಭಿತ್ತಿ:–** ಭಿತ್ತಿಯನ್ನು ಹಿನ್ಸರಿತ, ಮುನ್ಸರಿತಗಳ ರೀತಿ ನಿರ್ಮಿಸಲಾಗಿದೆ. ಇದರ ಮಧ್ಯದಲ್ಲಿ ಒಂದು ಕಪೋತವನ್ನು ಮಾಡಿ ಅದರ ಮೇಲೆ ಒಂದು ಭಿತ್ತಿಯನ್ನು ರಚಿಸಲಾಗಿದೆ. ಇದನ್ನು ನೋಡಿದಾಗ ಹಾರ್ನಹಳ್ಳಿ ಮತ್ತು ಜಾವಗಲ್ ದೇವಾಲಯಗಳ ಭಿತ್ತಿಯಂತೆ 2 ಹಂತಗಳಾಗಿ ಮಾಡಿ ಕೆಳಗಿನ ಹಂತದಲ್ಲಿ ಶಿಲ್ಪಗಳನ್ನು ಸುತ್ತಲೂ ಬಿಡಿಸಲಾಗಿದೆ. **(ಚಿ.ಸಂ.84)** ಮೇಲಿನ ಹಂತದಲ್ಲಿ ಎರಡು ಕಂಬಗಳ ಮೇಲೆ ಮತ್ತು ಒಂದು ಕಂಬದ ಮೇಲೆ ರಚಿಸಲಾಗಿರುವ ಶಿಖರಗಳನ್ನು ಬಿಡಿಸಲಾಗಿದೆ. ಕೆಳಗಿನ ಹಂತದಲ್ಲಿರುವ ಶಿಲ್ಪಗಳನ್ನು ಈ ಕೆಳಗಿನಂತೆ ಒಂದೊಂದಾಗಿ ವಿವರಿಸಲಾಗಿದೆ. **(ಚಿ.ಸಂ.85)**

**ನವರಂಗದ ಆಗ್ನೇಯ ಭಾಗ**

**ಫಲ ಮತ್ತು ಪುಷ್ಪ ಹಿಡಿದು ನಿಂತಿರುವ ಸ್ತ್ರೀ:–**ಈ ದೇವಿಯು ಬಲಗೈಯಲ್ಲಿ ಪದ್ಮಪುಷ್ಪ ಎಡಗೈಯಲ್ಲಿ ಫಲವನ್ನು ಹಿಡಿದಿದ್ದಾಳೆ. ತ್ರಿಭಂಗಿಯಲ್ಲಿರುವ ಈ ದೇವಿಯ ವಸ್ತ್ರಾಭರಣ ಸುಂದರವಾಗಿದೆ.

**ನೃತ್ಯ ಗಣಪತಿ:–** ಈ ದೇವನು ನೃತ್ಯಭಂಗಿಯಲ್ಲಿ ನಿಂತಿದ್ದಾನೆ. ಚತುರ್ಭುಜವನ್ನು ಹೊಂದಿರುವ ಈ ದೇವನು ಕೈಗಳಲ್ಲಿ ಪಾಶ, ಅಂಕುಶ, ಮುರಿದ ದಂತ ಮತ್ತು ಫಲವನ್ನು ಹಿಡಿದುಕೊಂಡಿದ್ದಾನೆ. ಈ ದೇವನ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು ಸುಂದರವಾಗಿದೆ. ಇಕ್ಕೆಲಗಳಲ್ಲಿ ಸಂಗೀತಗಾರರು ತಬಲವನ್ನು ನುಡಿಸುತ್ತಿದ್ದಾರೆ.

**ಅಮರ ನಾರಾಯಣ:–** ಈ ದೇವನು ಸಮಭಂಗಿಯಲ್ಲಿ ನಿಂತಿದ್ದಾನೆ. ಚತುರ್ಭುಜವನ್ನು ಹೊಂದಿರುವ ಈ ದೇವನು ಕೈಗಳಲ್ಲಿ ಶಂಖ, ಚಕ್ರ, ಗಧಾ ಪದ್ಮ ಹಿಡಿದು ನಿಂತಿದ್ದಾನೆ. ಮೈಮೇಲೆ ವಿವಿಧ ಬಗೆಯ ವಸ್ತ್ರಾಭರಣಗಳಿವೆ. ಈ ದೇವನ ಇಕ್ಕೆಲಗಳಲ್ಲಿ ಶ್ರೀದೇವಿ ಭೂದೇವಿಯರಿದ್ದಾರೆ.

**ದಕ್ಷಿಣ ಭಿತ್ತಿಯ ಶಿಲ್ಪಗಳು:–** ಈ ಭಾಗದಲ್ಲಿರುವ ಶಿಲ್ಪಗಳನ್ನು ಪರಿಪೂರ್ಣವಾಗಿ ರಚಿಸದೆ ಒಂದು ರೀತಿ ಒರಟಾಗಿ ರಚಿಸಲಾಗಿದೆ. ಕೆಲವು ಭಾಗವನ್ನು ಹಾಗೆ ಉಳಿಸಲಾಗಿದೆ.

**ವಿಷ್ಣು:–** ಸಮಭಂಗಿಯಲ್ಲಿ ನಿಂತಿರುವ ಈ ದೇವನು ಚತುರ್ಭುಜವನ್ನು ಹೊಂದಿದ್ದು ಕೈಗಳಲ್ಲಿ ಶಂಖ, ಚಕ್ರ, ಗಧಾ ಮತ್ತು ಪದ್ಮವನ್ನು ಹಿಡಿದುಕೊಂಡಿದ್ದಾನೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣಗಳು ಸುಂದರವಾಗಿ ಮೂಡಿಬಂದಿವೆ. ಈ ದೇವನ ಇಕ್ಕೆಲಗಳಲ್ಲಿ ಶ್ರೀದೇವಿ ಭೂದೇವಿಯರು ಫಲವನ್ನು ಹಿಡಿದು ನಿಂತಿದ್ದಾರೆ.

**ಎರಡು ಕಪಿಗಳು ಶಿಲ್ಪ:–** ಈ ಕಪಿಗಳು ಒಂದು ಹಣ್ಣನ್ನು ಹಿಡಿದುಕೊಂಡು ಅದನ್ನು ಪಡೆಯಲು ಜಗಳ ಮಾಡುತ್ತಿರುವಂತೆ ಬಿಡಿಸಲಾಗಿರುವ ಸನ್ನಿವೇಶ ಸುಂದರವಾಗಿ ಮೂಡಿಬಂದಿದೆ.

**ಗೋವರ್ಧನ ಗಿರಿಧರೆ ಕೃಷ್ಣ:–** ಶ್ರೀ ಕೃಷ್ಣನನ್ನು ಗೋವರ್ಧನ ಗಿರಿಯನ್ನು ತನ್ನ ಕೈಯನ್ನು ಮೇಲಕ್ಕೆ ಎತ್ತಿಹಿಡಿದಿರುವಂತೆ ಬಹಳ ಸುಂದರವಾಗಿ ರಚಿಸಲಾಗಿದೆ. ಬೆಟ್ಟದಿಂದ ಕೆಳಗೆ ಸರ್ಪಗಳು ಹೊರಬಂದು ತಮ್ಮ ಎಡೆಬಿಚ್ಚಿರುವಂತೆ ರಚಿಸಿರುವುದು ಸುಂದರವಾಗಿದೆ.

**ಯೋಗನರಸಿಂಹ:–** ನರಸಿಂಹದೇವನು ಯೋಗ ಮುದ್ರೆಯಲ್ಲಿ ಕುಳಿತು ಧ್ಯಾನ ಮಾಡುತ್ತಿರುವಂತೆ ರಚಿಸಲಾಗಿದೆ. ಈ ದೇವನು ತನ್ನ ಎರಡು ಕೈಗಳನ್ನು ಮೊಣಕೈ ಮೇಲೆ ಇರಿಸಿ ಉತ್ಕುಟಿಕಾಸನದಲ್ಲಿ ಕುಳಿತಿದ್ದಾನೆ.

**ಇಂದ್ರದೇವ:–** ಇಂದ್ರ ದೇವನು ತನ್ನ ವಾಹನವಾದ ಶ್ವೇತ ಗಜದ ಮೇಲೆ ಕುಳಿತು ಹೊರಟಂತೆ ಬಿಡಿಸಲಾಗಿದೆ. ಇಂದ್ರನು ತನ್ನ ಕೈಯಲ್ಲಿ ವಜ್ರಾಯುಧವನ್ನು ಹಿಡಿದಿರುವಂತೆ ಮತ್ತು ಆನೆಯು ಚಲಿಸುತ್ತಿರುವಂತೆ ರಚಿಸಲಾಗಿದೆ.

**ಕೃಷ್ಣ:–** ಕೃಷ್ಣನು ಗರುಡ ಪೀಠದ ಮೇಲೆ ಒಂಟಿಕಾಲಿನಲ್ಲಿ ನಿಂತು ತನ್ನ ಎರಡೂ ಕೈಗಳಲ್ಲಿ ಕೊಳಲನ್ನು ಹಿಡಿದು ನುಡಿಸುತ್ತಿರುವಂತೆ ರಚಿಸಲಾಗಿದೆ. ಈ ದೇವನ ಜೊತೆಗೆ ಸಖಿಯರನ್ನು ಸಹ ಬಿಡಿಸಲಾಗಿದೆ.

**ಸ್ಥಾನಿಕ ವಿಷ್ಣು:–** ಈ ದೇವನು ಸಮಭಂಗಿಯಲ್ಲಿ ನಿಂತಿದ್ದಾನೆ. ಚತುರ್ಭುಜವನ್ನು ಹೊಂದಿರುವ ಈ ದೇವನು ಶಂಖ, ಚಕ್ರ ಹಿಡಿದಿದ್ದು ಮುಂದಿನ ಎರಡು ಕೈಗಳು ತ್ರುಟಿತವಾಗಿದೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣಗಳು ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು ಸುಂದರವಾಗಿದೆ.

**ನೃತ್ಯಲಕ್ಷ್ಮೀ:–** ನೃತ್ಯಭಂಗಿಯಲ್ಲಿ ನಿಂತಿರುವ ಈ ದೇವಿಯು ಅಷ್ಟಭುಜವನ್ನು ಹೊಂದಿದ್ದಾಳೆ. ಕೈಗಳಲ್ಲಿ ಕತ್ತಿ, ಗುರಾಣಿ, ಬಿಲ್ಲು ಮತ್ತು ಬಾಣ ಉಳಿದ ಕೈಗಳು ತ್ರುಟಿತವಾಗಿದೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿ ಮೂಡಿಬಂದಿದೆ. ಈ ದೇವಿಯ ಕೆಳಗೆ ಸಂಗೀತಗಾರರು ವಾದ್ಯಗಳನ್ನು ತಮ್ಮ ಕೈಗಳಲ್ಲಿ ಹಿಡಿದು ನುಡಿಸುತ್ತಿರುವರು.

**ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀ:–** ಈ ಸ್ತ್ರೀಯು ತ್ರಿಭಂಗಿಯಲ್ಲಿ ನಿಂತಿದ್ದು ತನ್ನ ಎರಡು ಕೈಗಳಲ್ಲಿ ಫಲ ಮತ್ತು ಪುಷ್ಪವನ್ನು ಹಿಡಿದುಕೊಂಡಿದ್ದಾಳೆ. ಈ ಸ್ತ್ರೀಯ ಮೈಮೇಲೆ ಬಿಡಿಸಲಾಗಿರುವ ಆಭರಣಗಳು ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು ಸುಂದರವಾಗಿದೆ.

**ನೃತ್ಯ ಸರಸ್ವತಿ:–** ಈ ದೇವಿಯನ್ನು ಪರಿಪೂರ್ಣವಾಗಿ ರಚಿಸಲಾಗಿಲ್ಲ. ನೃತ್ಯಭಂಗಿಯಲ್ಲಿ ನಿಂತಿದ್ದಾಳೆ ಅಷ್ಟಭುಜವನ್ನು ಹೊಂದಿರುವ ಈ ದೇವಿಯು ಕೈಗಳಲ್ಲಿ ಮಣಹಸ್ತ, ಪುಸ್ತಕ, ಶಂಖ, ಚಕ್ರ, ಸ್ವರ್ಗ ಹಸ್ತವನ್ನು ಮತ್ತೊಂದು ಕೈಯನ್ನು ಭೂಲೋಕ ಸ್ಪರ್ಶ ಮಾಡುತ್ತಿರುವಂತೆ ಮತ್ತೊಂದು ಕೈಯನ್ನು ಮೇಲೆ ಮಾಡಿ ನೃತ್ಯದಲ್ಲಿ ತೊಡಗಿರುವಂತೆ ರಚಿಸಲಾಗಿದೆ. ಈ ದೇವಿಯ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿವೆ. ಇಕ್ಕೆಲಗಳಲ್ಲಿ ಸಂಗೀತಗಾರರು ಮೃದಂಗ ಹಿಡಿದು ನುಡಿಸುತ್ತಿದ್ದಾರೆ.

**ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀ:–** ಈ ಸ್ತ್ರೀಯು ತ್ರಿಭಂಗಿಯಲ್ಲಿ ನಿಂತಿದ್ದು ತನ್ನ ಎರಡು ಕೈಗಳಲ್ಲಿ ಫಲ ಮತ್ತು ಪುಷ್ಪವನ್ನು ಹಿಡಿದುಕೊಂಡಿದ್ದಾಳೆ. ಈ ಸ್ತ್ರೀಯ ಮೈಮೇಲೆ ಬಿಡಿಸಲಾಗಿರುವ ಆಭರಣಗಳು ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು ಸುಂದರವಾಗಿದೆ.

**ಸ್ಥಾನಿಕ ಬ್ರಹ್ಮ:–** ಸಮಭಂಗಿಯಲ್ಲಿ ನಿಂತಿರುವ ಬ್ರಹ್ಮದೇವನು ಚತುರ್ಭುಜ ಹೊಂದಿದ್ದು ಕೈಗಳಲ್ಲಿ ಪಾಶ ಅಂಕುಶ ಮತ್ತು ಕೈಗಳಲ್ಲಿ ಕಮಲ ಹಿಡಿದುಕೊಂಡಿದ್ದಾನೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ.

**ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀ:–** ಈ ಸ್ತ್ರೀಯು ತ್ರಿಭಂಗಿಯಲ್ಲಿ ನಿಂತಿದ್ದು ತನ್ನ ಎರಡು ಕೈಗಳಲ್ಲಿ ಫಲ ಮತ್ತು ಪುಷ್ಪವನ್ನು ಹಿಡಿದುಕೊಂಡಿದ್ದಾಳೆ. ಈ ಸ್ತ್ರೀಯ ಮೈಮೇಲೆ ಬಿಡಿಸಲಾಗಿರುವ ಆಭರಣಗಳು ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು ಸುಂದರವಾಗಿದೆ.

**ವಿಷ್ಣು:–** ಸಮಭಂಗಿಯಲ್ಲಿ ನಿಂತಿರುವ ಈ ದೇವನು ಚತುರ್ಭುಜ ಹೊಂದಿದು, ಕೈಗಳಲ್ಲಿ ಶಂಖ, ಚಕ್ರ, ಗಧಾ, ಪದ್ಮ ಹಿಡಿದುಕೊಂಡಿದ್ದಾನೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ. ಇಕ್ಕೆಲಗಳಲ್ಲಿ ದೇವಿಯರು ಫಲವನ್ನು ಹಿಡಿದು ನಿಂತಿದ್ದಾರೆ. ಪೀಠದಲ್ಲಿ ಗರುಡನ ಮೂರ್ತಿ ಇದೆ.

**ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀ:–** ಈ ಸ್ತ್ರೀಯು ತ್ರಿಭಂಗಿಯಲ್ಲಿ ನಿಂತಿದ್ದು ತನ್ನ ಎರಡು ಕೈಗಳಲ್ಲಿ ಫಲ ಮತ್ತು ಪುಷ್ಪವನ್ನು ಹಿಡಿದುಕೊಂಡಿದ್ದಾಳೆ. ಈ ಸ್ತ್ರೀಯ ಮೈಮೇಲೆ ಬಿಡಿಸಲಾಗಿರುವ ಆಭರಣಗಳು ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು ಸುಂದರವಾಗಿದೆ.

**ಮೋಹಿನಿ:–** ನಗ್ನರೂಪದಲ್ಲಿರುವ ಈ ಮೋಹಿನಿಯು ಕೋತಿಯು ಮಾಡುತ್ತಿರುವ ಚೇಷ್ಟೆಯನ್ನು ಕಂಡು ಬೆದರಿ ನಿಂತಿರುವಂತೆ ಬಹಳ ಚೆನ್ನಾಗಿ ರಚಿಸಲಾಗಿದೆ.

**ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀ:–** ಈ ಸ್ತ್ರೀಯು ತ್ರಿಭಂಗಿಯಲ್ಲಿ ನಿಂತಿದ್ದು ತನ್ನ ಎರಡು ಕೈಗಳಲ್ಲಿ ಫಲ ಮತ್ತು ಪುಷ್ಪವನ್ನು ಹಿಡಿದುಕೊಂಡಿದ್ದಾಳೆ. ಈ ಸ್ತ್ರೀಯ ಮೈಮೇಲೆ ಬಿಡಿಸಲಾಗಿರುವ ಆಭರಣಗಳು ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು ಸುಂದರವಾಗಿದೆ.

**ಹಯಗ್ರೀವ:–** ಪದ್ಮಾಸನದಲ್ಲಿ ಕುಳಿತಿರುವ ಈ ದೇವನು ಕುದುರೆಯ ಮುಖವನ್ನು ಹೊಂದಿದ್ದಾನೆ. ಚತುರ್ಭುಜ ಹೊಂದಿರುವ ದೇವನು ಶಂಖ, ಚಕ್ರ, ಪುಸ್ತಕ ಮತ್ತು ಮಣಿಹಾರವನ್ನು ಹಿಡಿದುಕೊಂಡಿದ್ದಾನೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿ ಮೂಡಿಬಂದಿದೆ.

**ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀ:–** ಈ ಸ್ತ್ರೀಯು ತ್ರಿಭಂಗಿಯಲ್ಲಿ ನಿಂತಿದ್ದು ತನ್ನ ಎರಡು ಕೈಗಳಲ್ಲಿ ಫಲ ಮತ್ತು ಪುಷ್ಪವನ್ನು ಹಿಡಿದುಕೊಂಡಿದ್ದಾಳೆ. ಈ ಸ್ತ್ರೀಯ ಮೈಮೇಲೆ ಬಿಡಿಸಲಾಗಿರುವ ಆಭರಣಗಳು ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು ಸುಂದರವಾಗಿದೆ.

**ವಿಷ್ಣು:–** ಸಮಭಂಗಿಯಲ್ಲಿ ನಿಂತಿರುವ ಈ ದೇವನು ಚತುರ್ಭುಜ ಹೊಂದಿದ್ದು ಕೈಗಳಲ್ಲಿ ಶಂಖ, ಚಕ್ರ, ಗಧಾ, ಪದ್ಮ ಹಿಡಿದುಕೊಂಡಿದ್ದಾನೆ. ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾಗಿದೆ. ಇಕ್ಕೆಲಗಳಲ್ಲಿ ಕಳಸ ಮತ್ತು ಫಲವನ್ನು ಹಿಡಿದು ನಿಂತಿರುವ ದೇವಿಯರಿದ್ದಾರೆ.

**ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀ:–** ಈ ಸ್ತ್ರೀಯು ತ್ರಿಭಂಗಿಯಲ್ಲಿ ನಿಂತಿದ್ದು ತನ್ನ ಎರಡು ಕೈಗಳಲ್ಲಿ ಫಲ ಮತ್ತು ಪುಷ್ಪವನ್ನು ಹಿಡಿದುಕೊಂಡಿದ್ದಾಳೆ. ಈ ಸ್ತ್ರೀಯ ಮೈಮೇಲೆ ಬಿಡಿಸಲಾಗಿರುವ ಆಭರಣಗಳು ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು ಸುಂದರವಾಗಿದೆ.

**ವಿಷ್ಣು:–** ಸಮಭಂಗಿಯಲ್ಲಿ ನಿಂತಿರುವ ಈ ದೇವನು ಚತುರ್ಭುಜವನ್ನು ಹೊಂದಿದ್ದು ಕೈಗಳಲ್ಲಿ ಗಧಾ, ಶಂಖ, ಪದ್ಮ ಮತ್ತು ಚಕ್ರವನ್ನು ಹಿಡಿದುಕೊಂಡಿದ್ದಾನೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿ ಮೂಡಿಬಂದಿದೆ.

**ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀ:–** ಈ ಸ್ತ್ರೀಯು ತ್ರಿಭಂಗಿಯಲ್ಲಿ ನಿಂತಿದ್ದು ತನ್ನ ಎರಡು ಕೈಗಗಳಲ್ಲಿ ಫಲ ಮತ್ತು ಪುಷ್ಪವನ್ನು ಹಿಡಿದುಕೊಂಡಿದ್ದಾಳೆ. ಈ ಸ್ತ್ರೀಯ ಮೈಮೇಲೆ ಬಿಡಿಸಲಾಗಿರುವ ಆಭರಣಗಳು ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು ಸುಂದರವಾಗಿದೆ.

**ದುರ್ಗಾದೇವಿ:–** ಪದ್ಮಾಸನದಲ್ಲಿ ಕುಳಿತಿರುವ ಈ ದೇವಿಯು ಷಡ್ಭುಜವನ್ನು ಹೊಂದಿದ್ದು ಕೈಗಳಲ್ಲಿ ಕತ್ತಿ, ಗುರಾಣಿ, ತ್ರಿಶೂಲ, ಢಮರು ಮತ್ತು ಭಿಕ್ಷಾಪಾತ್ರೆ ಹಾಗೂ ತ್ರಿಶೂಲದಿಂದ ರಾಕ್ಷಸನಿಗೆ ಚುಚ್ಚಿದ್ದಾಳೆ. ಈ ದೇವಿಯ ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾಗಿದೆ.

**ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀ:–** ಈ ಸ್ತ್ರೀಯು ತ್ರಿಭಂಗಿಯಲ್ಲಿ ನಿಂತಿದ್ದು ತನ್ನ ಎರಡು ಕೈಗಳಲ್ಲಿ ಫಲ ಮತ್ತು ಪುಷ್ಪವನ್ನು ಹಿಡಿದುಕೊಂಡಿದ್ದಾಳೆ. ಈ ಸ್ತ್ರೀಯ ಮೈಮೇಲೆ ಬಿಡಿಸಲಾಗಿರುವ ಆಭರಣಗಳು ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು ಸುಂದರವಾಗಿದೆ.

**ವಿಷ್ಣು:–** ಸಮಭಂಗಿಯಲ್ಲಿ ನಿಂತಿರುವ ಈ ದೇವನು ಚತುರ್ಭುಜವನ್ನು ಹೊಂದಿದ್ದು ಕೈಗಳಲ್ಲಿ ಗಧಾ, ಶಂಖ, ಚಕ್ರ ಮತ್ತು ಪದ್ಮವನ್ನು ಹಿಡಿದುಕೊಂಡಿದ್ದಾನೆ. ಈ ದೇವನ ಇಕ್ಕೆಲಗಳಲ್ಲಿ ಶ್ರೀದೇವಿ ಭೂದೇವಿಯರಿದ್ದಾರೆ. ಮೈಮೇಲೆ ಇರುವ ವಸ್ತ್ರಾಭರಣ ಸುಂದರವಾಗಿದೆ.

**ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀ:–** ಈ ಸ್ತ್ರೀಯು ತ್ರಿಭಂಗಿಯಲ್ಲಿ ನಿಂತಿದ್ದು ತನ್ನ ಎರಡು ಕೈಗಳಲ್ಲಿ ಫಲ ಮತ್ತು ಪುಷ್ಪವನ್ನು ಹಿಡಿದುಕೊಂಡಿದ್ದಾಳೆ. ಈ ಸ್ತ್ರೀಯ ಮೈಮೇಲೆ ಬಿಡಿಸಲಾಗಿರುವ ಆಭರಣಗಳು ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು ಸುಂದರವಾಗಿದೆ.

**ಯೋಗನಾರಾಯಣ:–** ಪದ್ಮಾಸನದಲ್ಲಿ ಕುಳಿತಿರುವ ಈ ದೇವನು ಯೋಗ ಮುದ್ರೆಯಲ್ಲಿ ಕುಳಿತಿದ್ದಾನೆ. ಚತುರ್ಭುಜ ಹೊಂದಿರುವ ದೇವನು ಅಭಯಹಸ್ತ, ಶಂಖ, ಚಕ್ರ ಹಿಡಿದಿದ್ದಾನೆ. ಈ ದೇವನ ಹಿಂದೆ ಸಹಚರರು ನಿಂತಿದ್ದಾರೆ.

**ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀ:–** ಈ ಸ್ತ್ರೀಯು ತ್ರಿಭಂಗಿಯಲ್ಲಿ ನಿಂತಿದ್ದು ತನ್ನ ಎರಡು ಕೈಗಳಲ್ಲಿ ಫಲ ಮತ್ತು ಪುಷ್ಪವನ್ನು ಹಿಡಿದುಕೊಂಡಿದ್ದಾಳೆ. ಈ ಸ್ತ್ರೀಯ ಮೈಮೇಲೆ ಬಿಡಿಸಲಾಗಿರುವ ಆಭರಣಗಳು ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು ಸುಂದರವಾಗಿದೆ.

**ವಿಷ್ಣು:–** ಸಮಭಂಗಿಯಲ್ಲಿ ನಿಂತಿರುವ ಈ ದೇವನು ಚತುರ್ಭುಜವನ್ನು ಹೊಂದಿದ್ದಾನೆ. ಕೈಗಳಲ್ಲಿ ಚಕ್ರ, ಶಂಖ, ಗಧಾ ಮತ್ತು ಪದ್ಮವನ್ನು ಹಿಡಿದುಕೊಂಡಿದ್ದಾನೆ. ಆದರೆ ಈ ಮೂರ್ತಿ ಕಾಲಪುರುಷನ ತುಳಿತಕ್ಕೆ ಸಿಕ್ಕಿ ಮುರಿದು ಹೋಗಿದೆ. ಈ ದೇವನ ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾಗಿದೆ.

**ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀ:–** ಈ ಸ್ತ್ರೀಯು ತ್ರಿಭಂಗಿಯಲ್ಲಿ ನಿಂತಿದ್ದು ತನ್ನ ಎರಡು ಕೈಗಳಲ್ಲಿ ಫಲ ಮತ್ತು ಪುಷ್ಪವನ್ನು ಹಿಡಿದುಕೊಂಡಿದ್ದಾಳೆ. ಈ ಸ್ತ್ರೀಯ ಮೈಮೇಲೆ ಬಿಡಿಸಲಾಗಿರುವ ಆಭರಣಗಳು ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು ಸುಂದರವಾಗಿದೆ.

**ಉಗ್ರನರಸಿಂಹ:–** ಚತುರ್ಭುಜವನ್ನು ಹೊಂದಿರುವ ಉಗ್ರನರಸಿಂಹನು ಹಿರಣ್ಯಾಕ್ಷನನ್ನು ತನ್ನ ತೊಡೆಯ ಮೇಲೆ ಮಲಗಿಸಿಕೊಂಡು ಕೈಗಳಿಂದ ಹಿರಣ್ಯಾಕ್ಷನ ಹೊಟ್ಟೆ ಬಗೆಯುತ್ತಿದ್ದಾನೆ. ಕರುಳ ಬಳ್ಳಿಯನ್ನು ಹಿಂದಿನ ಎರಡು ಕೈಗಳಲ್ಲಿ ಎತ್ತಿಹಿಡಿದಿದ್ದಾನೆ. ಮುಂದಿನ ಎರಡು ಕೈ ಮುರಿದು ಹೋಗಿದೆ.

**ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀ:–** ಈ ಸ್ತ್ರೀಯು ತ್ರಿಭಂಗಿಯಲ್ಲಿ ನಿಂತಿದ್ದು ತನ್ನ ಎರಡು ಕೈಗಳಲ್ಲಿ ಫಲ ಮತ್ತು ಪುಷ್ಪವನ್ನು ಹಿಡಿದುಕೊಂಡಿದ್ದಾಳೆ. ಈ ಸ್ತ್ರೀಯ ಮೈಮೇಲೆ ಬಿಡಿಸಲಾಗಿರುವ ಆಭರಣಗಳು ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು ಸುಂದರವಾಗಿದೆ.

**ವಿಷ್ಣು:–** ಸಮಭಂಗಿಯಲ್ಲಿ ನಿಂತಿರುವ ಈ ದೇವನು ಚತುರ್ಭುಜವನ್ನು ಹೊಂದಿದ್ದಾನೆ. ಹಿಂದಿನ ಎರಡು ಕೈಗಳಲ್ಲಿ ಶಂಖ, ಚಕ್ರ ಮುಂದಿನ ಎರಡು ಕೈ ಮುರಿದು ಹೋಗಿವೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ.

**ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀ:–** ಈ ಸ್ತ್ರೀಯು ತ್ರಿಭಂಗಿಯಲ್ಲಿ ನಿಂತಿದ್ದು ತನ್ನ ಎರಡು ಕೈಗಳಲ್ಲಿ ಫಲ ಮತ್ತು ಪುಷ್ಪವನ್ನು ಹಿಡಿದುಕೊಂಡಿದ್ದಾಳೆ. ಈ ಸ್ತ್ರೀಯ ಮೈಮೇಲೆ ಬಿಡಿಸಲಾಗಿರುವ ಆಭರಣಗಳು ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು ಸುಂದರವಾಗಿದೆ.

**ಸರಸ್ವತಿ:–** ಪದ್ಮಾಸನದಲ್ಲಿ ಕುಳಿತಿರುವ ಈ ದೇವಿಯು ಚತುರ್ಭುಜ ಹೊಂದಿದ್ದು ಕೈಗಳಲ್ಲಿ ಪಾಶ, ಅಂಕುಶ ಮತ್ತು ಜಪಮಣಿ ಮತ್ತು ಪುಸ್ತಕವನ್ನು ಹಿಡಿದುಕೊಂಡಿದ್ದಾಳೆ. (ಆದರೆ ಪುಸ್ತಕ ಹಿಡಿದ ಕೈ ಮುರಿದಿದೆ)

**ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀ:–** ಈ ಸ್ತ್ರೀಯು ತ್ರಿಭಂಗಿಯಲ್ಲಿ ನಿಂತಿದ್ದು ತನ್ನ ಎರಡು ಕೈಗಳಲ್ಲಿ ಫಲ ಮತ್ತು ಪುಷ್ಪವನ್ನು ಹಿಡಿದುಕೊಂಡಿದ್ದಾಳೆ. ಈ ಸ್ತ್ರೀಯ ಮೈಮೇಲೆ ಬಿಡಿಸಲಾಗಿರುವ ಆಭರಣಗಳು ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು ಸುಂದರವಾಗಿದೆ.

**ವಿಷ್ಣು:–** ಸಮಭಂಗಿಯಲ್ಲಿ ನಿಂತಿರುವ ಈ ದೇವನು ಚತುರ್ಭುಜವನ್ನು ಹೊಂದಿದ್ದಾನೆ, ಕೈಗಳಲ್ಲಿ ಹಿಡಿದುಕೊಂಡಿದ್ದ ಶಂಖ, ಚಕ್ರ ಗಧಾ ಪದ್ಮದ ಕೈಮುರಿದು ಹೋಗಿದೆ.

**ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀ:–** ಈ ಸ್ತ್ರೀಯು ತ್ರಿಭಂಗಿಯಲ್ಲಿ ನಿಂತಿದ್ದು ತನ್ನ ಎರಡು ಕೈಗಳಲ್ಲಿ ಫಲ ಮತ್ತು ಪುಷ್ಪವನ್ನು ಹಿಡಿದುಕೊಂಡಿದ್ದಾಳೆ. ಈ ಸ್ತ್ರೀಯ ಮೈಮೇಲೆ ಬಿಡಿಸಲಾಗಿರುವ ಆಭರಣಗಳು ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು ಸುಂದರವಾಗಿದೆ.

**ಧರಿಣಿ ವರಾಹ**:- ವರಾಹ ದೇವನು ಧರಣಿ ದೇವಿಯನ್ನು ತನ್ನ ಎಡಭುಜದ ಮೇಲೆ ಕೂರಿಸಿಕೊಂಡು ನಿಂತಿದ್ದಾನೆ. ಕೈಗಳಲ್ಲಿ ಶಂಖ, ಚಕ್ರ ಹಿಡಿದು ನಿಂತಿದ್ದಾನೆ. ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾಗಿದೆ.

**ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀ**:- ಈ ಸ್ತ್ರೀಯು ತ್ರಿಭಂಗಿಯಲ್ಲಿ ನಿಂತಿದ್ದು ತನ್ನ ಎರಡು ಕೈಗಳಲ್ಲಿ ಫಲ ಮತ್ತು ಪುಷ್ಪವನ್ನು ಹಿಡಿದುಕೊಂಡಿದ್ದಾಳೆ. ಈ ಸ್ತ್ರೀಯ ಮೈಮೇಲೆ ಬಿಡಿಸಲಾಗಿರುವ ಆಭರಣಗಳು ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು ಸುಂದರವಾಗಿದೆ.

**ಲಕ್ಷ್ಮೀನಾರಾಯಣ**: - ಸುಖಾಸನದಲ್ಲಿ ನಾಗಸರ್ಪದ ಸಿಂಬಿಯ ಮೇಲೆ ಕುಳಿತಿರುವ ಈ ದೇವನು ತನ್ನ ಎಡತೊಡೆಯ ಮೇಲೆ ಲಕ್ಷ್ಮಿಯನ್ನು ಕೂರಿಸಿಕೊಂಡಿದ್ದಾನೆ. ದೇವಿಯು ಕಮಲದ ಮೊಗ್ಗನ್ನು ಹಿಡಿದು ಸುಖಾಸನದಲ್ಲಿ ಕುಳಿತಿದ್ದಾಳೆ. ವಿಷ್ಣುವು ನಾಲ್ಕು ಕೈಗಳನ್ನು ಹೊಂದಿದ್ದು, ಶಂಖ, ಚಕ್ರ ಒಂದು ಕೈಯಲ್ಲಿ ಲಕ್ಷ್ಮಿಯನ್ನು ಹಿಡಿದುಕೊಂಡಿದ್ದಾನೆ. ಬಲಗೈಯಲ್ಲಿ ಕಮಲದ ಮೊಗ್ಗನ್ನು ಹಿಡಿದುಕೊಂಡಿದ್ದಾನೆ. ಪೀಠದಲ್ಲಿ ಗರುಡನಿದ್ದಾನೆ.

**ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀ**:- ಈ ಸ್ತ್ರೀಯು ತ್ರಿಭಂಗಿಯಲ್ಲಿ ನಿಂತಿದ್ದು ತನ್ನ ಎರಡು ಕೈಗಳಲ್ಲಿ ಫಲ ಮತ್ತು ಪುಷ್ಪವನ್ನು ಹಿಡಿದುಕೊಂಡಿದ್ದಾಳೆ. ಈ ಸ್ತ್ರೀಯ ಮೈಮೇಲೆ ಬಿಡಿಸಲಾಗಿರುವ ಆಭರಣಗಳು ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು ಸುಂದರವಾಗಿದೆ.

**ವೇಣುಗೋಪಾಲ**:- ಒಂಟಿಕಾಲಿನಲ್ಲಿ ನಿಂತಿರುವ ಗೋಪಾಲನು ತನ್ನ ಎರಡೂ ಕೈಗಳಲ್ಲಿ ಕೊಳಲನ್ನು ಹಿಡಿದು ನುಡಿಸುತ್ತಿದ್ದಾನೆ. ಕೊಳಲಿನ ನಾದಕ್ಕೆ ಎರಡೂ ಕಡೆ ಗೋವುಗಳು ನಿಂತು ಕೃಷ್ಣನನ್ನೇ ನೋಡುತ್ತಿವೆ. ಮೇಲೆ ಭಕ್ತಾದಿಗಳು ಸೇವಕರು ನಿಂತಿದ್ದಾರೆ ಮೇಲೆ ಕಲ್ಪವೃಕ್ಷವನ್ನು ಬಿಡಿಸಲಾಗಿದೆ. ಈ ದೇವನ ಬಲಭಾಗದಲ್ಲಿ ಗರುಡ ನಿಂತಿದ್ದಾನೆ.

**ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀ**:- ಈ ಸ್ತ್ರೀಯು ತ್ರಿಭಂಗಿಯಲ್ಲಿ ನಿಂತಿದ್ದು ತನ್ನ ಎರಡು ಕೈಗಳಲ್ಲಿ ಫಲ ಮತ್ತು ಪುಷ್ಪವನ್ನು ಹಿಡಿದುಕೊಂಡಿದ್ದಾಳೆ. ಈ ಸ್ತ್ರೀಯ ಮೈಮೇಲೆ ಬಿಡಿಸಲಾಗಿರುವ ಆಭರಣಗಳು ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು ಸುಂದರವಾಗಿದೆ.

**ವಿಷ್ಣು**:- ಈ ದೇವನು ಸಮಭಂಗಿಯಲ್ಲಿ ನಿಂತಿದ್ದಾನೆ. ಈ ದೇವನ ಇಕ್ಕೆಲಗಳಲ್ಲಿ ಶ್ರೀದೇವಿ ಭೂದೇವಿಯರು ಫಲವನ್ನು ಹಿಡಿದುನಿಂತಿದ್ದಾರೆ. ಚತುರ್ಭುಜವನ್ನು ಹೊಂದಿದ್ದು ಕೈಗಳಲ್ಲಿ ಪದ್ಮ, ಗಧಾ, ಶಂಖ ಮತ್ತು ಚಕ್ರವನ್ನು ಹಿಡಿದುಕೊಂಡಿದ್ದಾನೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿವೆ.

**ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀ:–** ಈ ಸ್ತ್ರೀಯು ತ್ರಿಭಂಗಿಯಲ್ಲಿ ನಿಂತಿದ್ದು ತನ್ನ ಎರಡು ಕೈಗಳಲ್ಲಿ ಫಲ ಮತ್ತು ಪುಷ್ಪವನ್ನು ಹಿಡಿದುಕೊಂಡಿದ್ದಾಳೆ. ಈ ಸ್ತ್ರೀಯ ಮೈಮೇಲೆ ಬಿಡಿಸಲಾಗಿರುವ ಆಭರಣಗಳು ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು ಸುಂದರವಾಗಿದೆ.

**ನರಸಿಂಹ:–** ಈ ದೇವನು ಪದ್ಮಾಸನದಲ್ಲಿ ಕುಳಿತ್ತಿದ್ದಾನೆ. ಚತುರ್ಭುಜ ಹೊಂದಿರುವ ಈ ದೇವನು ಕೈಗಳಲ್ಲಿ ಶಂಖ, ಚಕ್ರ ಮತ್ತು ಮುಂದಿನ ಎರಡು ಕೈ ಮುರಿದು ಹೋಗಿದ್ದು ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿ ಮೂಡಿಬಂದಿದೆ.

**ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀ:–** ಈ ಸ್ತ್ರೀಯು ತ್ರಿಭಂಗಿಯಲ್ಲಿ ನಿಂತಿದ್ದು ತನ್ನ ಎರಡು ಕೈಗಳಲ್ಲಿ ಫಲ ಮತ್ತು ಪುಷ್ಪವನ್ನು ಹಿಡಿದುಕೊಂಡಿದ್ದಾಳೆ. ಈ ಸ್ತ್ರೀಯ ಮೈಮೇಲೆ ಬಿಡಿಸಲಾಗಿರುವ ಆಭರಣಗಳು ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು ಸುಂದರವಾಗಿದೆ.

**ವಿಷ್ಣು:–** ಸಮಭಂಗಿಯಲ್ಲಿ ನಿಂತಿರುವ ಈ ದೇವನು ಚತುರ್ಭುಜವನ್ನು ಹೊಂದಿದ್ದು ಕೈಗಳಲ್ಲಿ ಪದ್ಮ, ಪುಷ್ಪ, ಚಕ್ರ ಮತ್ತು ಶಂಖ ಹಿಡಿದುಕೊಂಡಿದ್ದಾನೆ. ಗಧೆಯ ಭಾಗ ಮುರಿದು ಹೋಗಿದೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ. ಇಕ್ಕೆಲಗಳಲ್ಲಿ ದೇವಿಯರು ಫಲ ಹಿಡಿದು ನಿಂತಿದ್ದಾರೆ.

**ವಾಯುವ್ಯ ಭಾಗದ ಶಿಲ್ಪಗಳು:**

**ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀ:–** ಈ ಸ್ತ್ರೀಯು ತ್ರಿಭಂಗಿಯಲ್ಲಿ ನಿಂತಿದ್ದು ತನ್ನ ಎರಡು ಕೈಗಳಲ್ಲಿ ಫಲ ಮತ್ತು ಪುಷ್ಪವನ್ನು ಹಿಡಿದುಕೊಂಡಿದ್ದಾಳೆ. ಈ ಸ್ತ್ರೀಯ ಮೈಮೇಲೆ ಬಿಡಿಸಲಾಗಿರುವ ಆಭರಣಗಳು ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು ಸುಂದರವಾಗಿದೆ.

**ನೃತ್ಯ ಮೋಹಿನಿ:–**ನೃತ್ಯ ಭಂಗಿಯಲ್ಲಿರುವ ಮೋಹಿನಿಯು ಉನ್ಮಾದದಲ್ಲಿರುವಂತೆ ರಚಿಸಲಾಗಿದೆ.

**ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀ:–** ಈ ಸ್ತ್ರೀಯು ತ್ರಿಭಂಗಿಯಲ್ಲಿ ನಿಂತಿದ್ದು ತನ್ನ ಎರಡು ಕೈಗಳಲ್ಲಿ ಫಲ ಮತ್ತು ಪುಷ್ಪವನ್ನು ಹಿಡಿದುಕೊಂಡಿದ್ದಾಳೆ. ಈ ಸ್ತ್ರೀಯ ಮೈಮೇಲೆ ಬಿಡಿಸಲಾಗಿರುವ ಆಭರಣಗಳು ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು ಸುಂದರವಾಗಿದೆ.

**ಧನ್ವಂತರಿ:–** ಧನ್ವಂತರಿಯು ಸಮಭಂಗಿಯಲ್ಲಿ ನಿಂತಿದ್ದಾನೆ. ಎರಡು ಕೈಗಳಲ್ಲಿ ಬಟ್ಟಲುಗಳನ್ನು ಹಿಡಿದುಕೊಂಡಿದ್ದಾನೆ.

**ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀ:-** ಈ ಸ್ತ್ರೀಯು ತ್ರಿಭಂಗಿಯಲ್ಲಿ ನಿಂತಿದ್ದು ತನ್ನ ಎರಡು ಕೈಗಳಲ್ಲಿ ಫಲ ಮತ್ತು ಪುಷ್ಪವನ್ನು ಹಿಡಿದುಕೊಂಡಿದ್ದು ಮೈಮೇಲೆ ಬಿಡಿಸಲಾಗಿರುವ ಆಭರಣಗಳು ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು ಸುಂದರವಾಗಿದೆ.

**ವಿಷ್ಣು**:- ಸಮಭಂಗಿಯಲ್ಲಿ ನಿಂತಿರುವ ಈ ದೇವನು ಚತುರ್ಭುಜವನ್ನು ಹೊಂದಿದ್ದು ಕೈಗಳಲ್ಲಿ ಶಂಖ, ಚಕ್ರ, ಗಧಾ ಮತ್ತು ಪದ್ಮ ಹಿಡಿದುಕೊಂಡಿದ್ದಾನೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿ ಮೂಡಿಬಂದಿದೆ. (ಆದರೆ ಮುಂದಿನ ಎರಡು ಕೈಗಳು ಮುರಿದು ಹೋಗಿದೆ)

**ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀ:-** ಈ ಸ್ತ್ರೀಯು ತ್ರಿಭಂಗಿಯಲ್ಲಿ ನಿಂತಿದ್ದು ತನ್ನ ಎರಡು ಕೈಗಳಲ್ಲಿ ಫಲ ಮತ್ತು ಪುಷ್ಪವನ್ನು ಹಿಡಿದುಕೊಂಡಿದ್ದಾಳೆ. ಈ ಸ್ತ್ರೀಯ ಮೈಮೇಲೆ ಬಿಡಿಸಲಾಗಿರುವ ಆಭರಣಗಳು ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು ಸುಂದರವಾಗಿದೆ.

**ವಿಠಲ**:- ಸಮಭಂಗಿಯಲ್ಲಿ ನಿಂತಿರುವ ಈ ದೇವನು ತೋಳಲ್ಲಿ ಜೋಳಿಗೆ ನಾಲ್ಕು ಕೈಗಳನ್ನು ಹೊಂದಿದ್ದು ಕೈಗಳಲ್ಲಿ ಶಂಖ, ಚಕ್ರ, ಭಿಕ್ಷಾಟನಾಪಾತ್ರೆ ಹಿಡಿದುಕೊಂಡಿದ್ದಾನೆ. ಇಕ್ಕೆಲಗಳಲ್ಲಿ ಫಲ ಹಿಡಿದು ನಿಂತಿರುವ ದೇವಿಯರಿದ್ದಾರೆ.

**ದಕ್ಷಿಣಾಮೂರ್ತಿ**:-ಸಮಭಂಗಿಯಲ್ಲಿರುವ ಈ ದೇವನು ಮೈಮೇಲೆ ಉದ್ದನೆಯ ನಿಲುವಂಗಿಯನ್ನು ಧರಿಸಿದ್ದಾನೆ. ಕೈಗಳಲ್ಲಿ ವರದ ಮತ್ತೊಂದು ಕೈ ಕೆಳಗಿಳಸಿದ್ದಾನೆ. ಈ ಭಿತ್ತಿಶಿಲ್ಪಗಳ ಮೇಲೆ ದೇವಾಲಯದ ಸುತ್ತಲೂ ಕಮಾನಿನಾಕಾರದ ಛತ್ರಿಯನ್ನು ಮಾಡಲಾಗಿದೆ. ಇವುಗಳಲ್ಲಿ ಕೆಲವನ್ನು ಮಾತ್ರ ಬಳ್ಳಿಸುರುಳಿ ಫಲಗಳನ್ನು ಬಿಡಿಸಿ ಅಲಂಕರಿಸಲಾಗಿದೆ. ಮುಕ್ಕಾಲು ಭಾಗ ಛತ್ರಿಗಳನ್ನು ಹಾಗೆ ಕೆತ್ತನೆ ಮಾಡದೆ ಉಳಿಸಲಾಗಿದೆ. ಶಿಲ್ಪಪಟ್ಟಿಕೆಯ ನಂತರದಲ್ಲಿ ಅಂದರೆ ಭಿತ್ತಿಯ ಮಧ್ಯಭಾಗದಲ್ಲಿ ಒಂದು ಕಪೋತವನ್ನು ಮಾಡಲಾಗಿದೆ. ಇದು ಸುಮಾರು ಎರಡು ಅಡಿ ಮುಂದೆ ಚಾಚಿದ್ದು ಕಮಾನಿನಾಕಾರವಾಗಿ ಬಾಗಿದೆ. ಇದರ ಅಂಚಿನಲ್ಲಿ ಕಮಲದ ಮೊಗ್ಗುಗಳ ದಂತದ ರೀತಿ ಅಲಂಕರಣ ಮಾಡಲಾಗಿದೆ. ಈ ಕಪೋತದ ಮೇಲೆ ಏಕಕಂಬ, ಶಿಖರ, ದ್ವಿಕಂಬ, ಶಿಖರಗಳನ್ನು ಮಾಡಿ ಭಿತ್ತಿಯ ಮೇಲ್ಭಾಗವನ್ನು ಅಲಂಕರಣಗೊಳಸಲಾಗಿದೆ. ಈ ಭಿತ್ತಿಯ ಮೇಲೆ ಕಪೋತವನ್ನು ಮಾಡಲಾಗಿದೆ. ಇದು ಗೋಡೆಯಿಂದ ಮುಂದಕ್ಕೆ ಚಾಚಿದ್ದು ಮಳೆಯ ನೀರು ಭಿತ್ತಿಯ ಮೇಲೆ ಬೀಳದಂತೆ ಕಮಾನಿನಾಕಾರವಾಗಿ ರಚಿಸಲಾಗಿದೆ. **(ಚಿ.ಸಂ.86)** ಈ ದೇವಾಲಯದ ಕಪೋತದ ಮೇಲೆ ನಿರ್ಮಿಸಲಾಗಿದ್ದ ಹಾರವು ಸಂಪೂರ್ಣವಾಗಿ ಬಿದ್ದುಹೋಗಿದೆ ಮತ್ತು ಶಿಖರವು ಸಂಪೂರ್ಣವಾಗಿ ಬಿದ್ದುಹೋಗಿದೆ. **(ಚಿ.ಸಂ.87)** ಈ ದೇವಾಲಯವನ್ನು ಇತ್ತೀಚೆಗೆ ಪುರಾತತ್ವ ಸರ್ವೇಕ್ಷಣಾ ಇಲಾಖೆಯವರು

ಜೀರ್ಣೋದ್ಧಾರ ಮಾಡಿ ರಕ್ಷಿಸಿದ್ದಾರೆ. ಗರ್ಭಗೃಹದ ಮೇಲೆ ನಿರ್ಮಿಸಲಾಗಿದ್ದ ಶಿಖರ ಪ್ರಕೃತಿ ವಿಕೋಪಕ್ಕೆ ತುತ್ತಾಗಿ ಸಂಪೂರ್ಣವಾಗಿ ಬಿದ್ದುಹೋಗಿದೆ. **(ಚಿ.ಸಂ.88)** ಶಿಖರದ ಯಾವುದೇ ಭಾಗ ಈಗ ಕಾಣಬರುವುದಿಲ್ಲ. ಈ ದೇವಾಲಯಕ್ಕೆ ಮೊದಲು ಪ್ರಾಕಾರವಿದ್ದಂತೆ ಕಂಡುಬರುತ್ತದೆ. ಆದರೆ ಪ್ರಾಕಾರ ಬಿದ್ದುಹೋಗಿರುವುದರಿಂದ ಇತ್ತೀಚೆಗೆ ದೇವಾಲಯದ ಸುತ್ತಲೂ ತಂತಿಬೇಲಿಯನ್ನು ಹಾಕಿ ರಕ್ಷಿಸಲಾಗಿದೆ. [133] **(ಚಿ.ಸಂ.89)**

**ಚನ್ನಕೇಶವ ದೇವಾಲಯ–ತುರುವೇಕೆರೆ**

ತುರುವೇಕೆರೆ ತುಮಕೂರು ಜಿಲ್ಲೆಗೆ ಸೇರಿರುವ ಒಂದು ತಾಲೂಕು ಕೇಂದ್ರವಾಗಿದೆ. ತುರುವೇಕೆರೆಯು ಪ್ರಾಚೀನ ಕಾಲದಲ್ಲಿ ಸಮೃದ್ಧ ಗೋ (ತುರು) ಸಂಪತ್ತು ಮತ್ತು ಜಲ (ಕೆರೆ) ಸಂಪತ್ತಿನ ಸಂಕೇತವಾಗಿ 'ಧೇನುಪುರಿ' ಎಂದು ಕರೆಯಲ್ಪಡುತ್ತಿದ್ದು ನಂತರ ಕಾಲಗಳುರುಳದಂತೆ ಜನರ ಬಾಯಲ್ಲಿ ದೇನುಕಾಪುರಿ ಎಂಬುದು ಹೋಗಿ ತುರುವೇಕೆರೆ (ತುರು+ಕೆರೆ) ಎಂಬುದಾಗಿ ಕರೆಯಲ್ಪಟ್ಟಿದೆ. [134]ಪ್ರಾಚೀನ ಕಾಲದಲ್ಲಿ ತುರುವೇಕೆರೆಯು ಒಂದು ಅಗ್ರಹಾರವಾಗಿತ್ತು. ಹೊಯ್ಸಳರ ದೊರೆ ಮೂರನೇ ನರಸಿಂಹನ ದಂಡನಾಯಕ ಸೋಮಣ್ಣ ದಂಡನಾಯಕ ಕ್ರಿ.ಶ.1263ರಲ್ಲಿ ತುರುವೇಕೆರೆಗೆ ಸರ್ವಜ್ಞ "ಶ್ರೀವಿಜಯನರಸಿಂಹಪುರ" ಎಂದು ನಾಮಕರಣ ಮಾಡಿ ಬ್ರಾಹ್ಮಣರಿಗೆ ದಾನವಾಗಿ ಕೊಟ್ಟನೆಂದು ಶಾಸನಗಳಿಂದ ತಿಳಿದುಬರುತ್ತದೆ.[135]

ದೇವಾಲಯ ನಿರ್ಮಾಣವಾದ ಕಾಲದ ಬಗ್ಗೆ ಯಾವುದೇ ಶಾಸನಾಧಾರಗಳು ದೊರೆಯದಿದ್ದರೂ ಕ್ರಿ.ಶ. 1258ರಲ್ಲಿ ಸೋಮನಾಥಪುರದ ಚನ್ನಕೇಶವ ದೇವಾಲಯದ ನಿರ್ಮಾತೃ ಸೋಮಣ್ಣ ದಂಡನಾಯಕನೇ ಕ್ರಿ.ಶ. 13ನೇ ಶತಮಾನದಲ್ಲಿ ಈ ಚನ್ನಕೇಶವ ದೇವಾಲಯವನ್ನು ನಿರ್ಮಿಸಿದನೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.[136] ಈ ದೇವಾಲಯದ ಬಾಗಿಲ ಬಲಭಾಗದಲ್ಲಿ ಕ್ರಿ.ಶ.1539ರಕ್ಕೆ ಸಲ್ಲುವ ವಿಜಯನಗರದ ವೆಂಕಟಾದ್ರಿಯ ಶಾಸನ ಒಂದು ಕಂಡುಬರುತ್ತದೆ. ಈ ಶಾಸನವು ತಂಡಗದ ಸಂಗದಯ್ಯನವರು ವೆಂಕಟಾದ್ರಿ ರಾಜನಿಗೆ ಪುಣ್ಯಪ್ರಾಪ್ತಿಯಾಗಲೆಂದು ಮಾಯಸಂದ್ರ ಸೀಮೆಯ ತಂಡಗದಲ್ಲಿ ಭೂಮಿಯನ್ನು ಈ ದೇವಾಲಯಕ್ಕೆ ದಾನನೀಡಿದ ವಿಷಯವನ್ನು ತಿಳಿಸುತ್ತದೆ. [137] ಇದೊಂದು ಏಕಕೂಟ ದೇವಾಲಯವಾಗಿದ್ದು ಸಂಪೂರ್ಣವಾಗಿ ಬಳಪದ ಕಲ್ಲನ್ನು ಉಪಯೋಗಿಸಿ ಪೂರ್ವಾಭಿಮುಖವಾಗಿ ನಿರ್ಮಿಸಲಾಗಿದೆ. **(ಚಿ.ಸಂ.90)** ಇದರಲ್ಲಿ ಒಂದು ಗರ್ಭಗೃಹ, ಸುಖನಾಸಿ, ನವರಂಗ, ಮುಖಮಂಟಪ ಕಾಣಬರುತ್ತದೆ.

**ಗರ್ಭಗೃಹ:-** ಗರ್ಭಗೃಹವು 8X8 ಅಡಿ ಉದ್ದ ಮತ್ತು ಅಗಲ ಹೊಂದಿದ್ದು ಚೌಕಾಕಾರವಾಗಿದೆ. ಈ ಗರ್ಭಗೃಹದ ಮಧ್ಯಭಾಗದಲ್ಲಿ ಸುಮಾರು 2 ಅಡಿ ಎತ್ತರವಿರುವ ನಕ್ಷತ್ರಾಕಾರದ ಗರುಡಪೀಠದ ಮೇಲೆ ಸುಮಾರು 5 ಅಡಿ ಎತ್ತರದ ಚನ್ನಕೇಶವ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ಈ ಮೂರ್ತಿಯು ಚತುರ್ಭುಜಧಾರಿಯಾಗಿದ್ದು ನಾಲ್ಕು ಕೈಗಳಲ್ಲಿ ಶಂಖ, ಚಕ್ರ, ಗಧಾ ಮತ್ತು ಪದ್ಮವನ್ನು ಹಿಡಿದು ಸಮಭಂಗಿಯಲ್ಲಿ ನಿಂತಿದ್ದಾನೆ. ಈ ದೇವನ ಮೈಮೇಲೆ ವಿವಿಧ ಬಗೆಯ ವಸ್ತ್ರಾಭರಣಗಳನ್ನು ಬಿಡಿಸಲಾಗಿದೆ. ಹಿಂಭಾಗದಲ್ಲಿ ಪ್ರಭಾವಳಿ ಇದೆ. ಇದರಲ್ಲಿ ಬಳ್ಳಿಸುರುಳಿ ಕೀರ್ತಿಮುಖವಿದೆ. ಅಂಚಿನಲ್ಲಿ ವಿಷ್ಣುವಿನ ಅವತಾರಕ್ಕೆ ಸಂಬಂಧಿಸಿದ ಮೂರ್ತಿಗಳನ್ನು ಬಿಡಿಸಲಾಗಿದೆ. ಪ್ರಭಾವಳಿಯಲ್ಲಿ ಎರಡೂ ಕಡೆ ಚಾಮರಧಾರಿಣಿಯರಿದ್ದಾರೆ. ಇವರು ಫಲ ಮತ್ತು ಚಾಮರವನ್ನು ಹಿಡಿದು ನಿಂತಿದ್ದಾರೆ. ಈ ಗರ್ಭಗೃಹದ ಭುವನೇಶ್ವರಿಯು ನಕ್ಷತ್ರಾಕಾರವಾಗಿದ್ದು, ಯಾವುದೇ ರೀತಿಯ ಅಲಂಕರಣೆಯನ್ನು ಮಾಡದೇ, ಭುವನೇಶ್ವರಿಯ ಮಧ್ಯಭಾಗದಲ್ಲಿ ಕಮಲದ ಮೊಗ್ಗನ್ನು ಇಳಿಮುಖವಾಗಿ ಬಿಡಿಸಲಾಗಿದೆ. ಗರ್ಭಗೃಹದ ಬಾಗಿಲ ಅಲಂಕರಣೆಯು ನಿರಾಲಂಕೃತವಾಗಿದ್ದು, ಸಾಧಾರಣವಾಗಿದೆ. ಬಾಗಿಲ ತೋರಣದ ಮೇಲೆ ಕಮಲದ ಮೊಗ್ಗುಗಳ ಮತ್ತು ಹೊಯ್ಸಳ ಶೈಲಿಯ ಚಿಕ್ಕ ಚಿಕ್ಕ ಶಿಖರಗಳನ್ನು ಕೆತ್ತನೆ ಮಾಡಲಾಗಿದೆ. **(ಚಿ.ಸಂ.91)**

**ಸುಖನಾಸಿ:-**ಸುಖನಾಸಿಯು ಗರ್ಭಗೃಹದಷ್ಟೇ ಉದ್ದ ಮತ್ತು ಅಗಲವನ್ನು ಹೊಂದಿದ್ದು ಚೌಕಾಕಾರವಾಗಿದೆ. ಈ ಸುಖನಾಸಿಯಲ್ಲಿ ಯಾವುದೇ ರೀತಿಯ ಅಲಂಕರಣೆಗಳಾಗಲಿ ಅಥವಾ ಮೂರ್ತಿಶಿಲ್ಪಗಳಾಗಲಿ ಕಂಡುಬರುವುದಿಲ್ಲ. ಸುಖನಾಸಿಯ ಭುವನೇಶ್ವರಿಯು ನಕ್ಷತ್ರಾಕಾರ ವಾಗಿದ್ದು, ಮಧ್ಯದಲ್ಲಿ ಅರಳಿದ ಪದ್ಮಪುಷ್ಪವನ್ನು ಬಿಡಿಸಲಾಗಿದೆ. ಸುಖನಾಸಿಯ ಬಾಗಿಲು ಅಲಂಕರಣದ ಕೆತ್ತನೆಗಳಿಂದ ಕೂಡಿದ್ದು, ಬಳ್ಳಿಸುರುಳಿಗಳನ್ನು ಕೆತ್ತನೆ ಮಾಡಲಾಗಿದೆ. ಲಲಾಟಬಿಂಬದಲ್ಲಿ ಯಾವುದೇ ರೀತಿಯ ಶಿಲ್ಪಗಳು ಇರುವುದಿಲ್ಲ. ಬಾಗಿಲ ಎರಡೂ ಕಡೆ ಜಾಲಾಂಧ್ರಗಳನ್ನು ನಿರ್ಮಿಸಲಾಗಿದೆ. ಸುಖನಾಸಿಯ ದ್ವಾರದ ಇಕ್ಕೆಲಗಳಲ್ಲಿ ದ್ವಾರಪಾಲಕರ ಉಬ್ಬು ಶಿಲ್ಪದ ಕೆತ್ತನೆ ಮಾಡಲು ಜೋಡಣೆ ಮಾಡಲಾಗಿದ್ದ ಕಲ್ಲನ್ನು ಹಾಗೆ ಉಳಿಸಲಾಗಿದೆ.

**ನವರಂಗ:-** ನವರಂಗವು ಸುಮಾರು 25X25 ಅಡಿ ಉದ್ದ ಮತ್ತು ಅಗಲವಾಗಿದ್ದು ಚೌಕಾಕಾರವಾಗಿದೆ. ನವರಂಗದ ಮಧ್ಯದಲ್ಲಿ ಹೊಯ್ಸಳ ಶೈಲಿಯ ನಾಲ್ಕು ಕಂಬಗಳಿವೆ. **(ಚಿ.ಸಂ.92)** ಈ ಕಂಬಗಳನ್ನು ತಿರುಗುವ ರಾಟೆಯಂತ್ರದ ಸಹಾಯದಿಂದ ತಯಾರಿಸಲಾಗಿದೆ. ಇವುಗಳು ಚೌಕ, ಬಳೆ, ಗಂಟೆ, ಗಾಲಿ, ಘಟಾ ಮತ್ತು ಪದ್ಮಪುಷ್ಪದಂತೆ ರಚಿಸಲಾಗಿದೆ. ಅದರ ಮೇಲೆ ಚೌಕಾಕಾರದ ಫಲಗ್ಯೆ ಮೇಲೆ ಉರುಳಿಯಾಕಾರದ ಬೋಧಿಗೆಯನ್ನು ಮಾಡಲಾಗಿದೆ.

ನವರಂಗದ ಮೇಲ್ಛಾವಣಿಯು 9 ಅಂಕಣಗಳಿಂದ ಕೂಡಿದೆ. ಕಂಬಗಳ ಜೋಡಣೆ ದ್ರಾವಿಡ ರೀತಿಯ ಚತುರಸ್ರ ಬೋಧಿಗೆಗಳುಳ್ಳ ಕಂಬಗಳನ್ನು ಅನುಸರಿಸಿದೆ. ಈ ಅಂಕಣಗಳಲ್ಲಿ ವಿವಿಧಾಕಾರದಲ್ಲಿ ರಚಿಸಿ ಭುವನೇಶ್ವರಿಗಳನ್ನು ಆಕರ್ಷಕವಾಗಿ ಕಾಣುವಂತೆ ಮಾಡಲಾಗಿದೆ. ಇವುಗಳನ್ನು ಚೌಕ, ಅಷ್ಟ ಮತ್ತು ವೃತ್ತಾಕಾರವಾಗಿ ಹಾಗೂ ನಕ್ಷತ್ರಾಕಾರವಾಗಿ ಮತ್ತು ಶ್ರೀಚಕ್ರದ ಮಾದರಿಯಲ್ಲಿ ರಚಿಸಿದ್ದು, ಒಳಭಾಗದಲ್ಲಿ ಕಮಲದ ಪುಷ್ಪ, ಕಮಲದ ಮೊಗ್ಗುಗಳು ಮತ್ತು ಕೀರ್ತಿಮುಖಗಳನ್ನು ಬಿಡಿಸಲಾಗಿದೆ. ಮತ್ತೆ ಕೆಲವು ಭುವನೇಶ್ವರಿಗಳ ಪಟ್ಟಿಕೆಗಳಲ್ಲಿ ದಿಕ್ಪಾಲಕರ, ಅಷ್ಟದಿಕ್ಪಾಲಕರ, ಸಂಗೀತಗಾರರ, ನೃತ್ಯಗಾರರ, ವೀರಯೋಧರ ಶಿಲ್ಪಗಳನ್ನು ಬಿಡಿಸಲಾಗಿದೆ. **(ಚಿ.ಸಂ.93)** ನವರಂಗದ ಒಳಭಿತ್ತಿಯ ಗೋಡೆಗೆ ಹೊಂದಿಕೊಂಡಂತೆ ನಕ್ಷತ್ರಾಕಾರದ ಅರೆಗಂಬಗಳನ್ನು ಮಾಡಿ ಭಿತ್ತಿಯನ್ನು ಭದ್ರಪಡಿಸಲಾಗಿದೆ. ನವರಂಗದಲ್ಲಿ ಸುಖನಾಸಿಯ ಎಡಭಾಗಕ್ಕೆ ಹೊಂದಿಕೊಂಡಂತೆ ಒಂದು ಅಡಿ ಎತ್ತರವಿರುವ ಮೂಷಿಕ ಪೀಠದ ಮೇಲೆ ಗಣೇಶನ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ. ಪದ್ಮಾಸನದಲ್ಲಿ ಕುಳಿತಿರುವ ಗಣೇಶ ಮೂರ್ತಿಯು ಚತುರ್ಭುಜವನ್ನು ಹೊಂದಿದ್ದು, ಕೈಗಳಲ್ಲಿ ಪಾಶ, ಅಂಕುಶ, ಫಲ ಮತ್ತು ಅಭಯ ಹಸ್ತವನ್ನು ಹೊಂದಿದ್ದಾನೆ. ಮೈಮೇಲೆ ಬಿಡಿಸಲಾಗಿರುವ ವಿವಿಧ ಆಭರಣಗಳನ್ನು ಕಾಣಬಹುದು. ಈ ಮೂರ್ತಿಯ ಶಿಲ್ಪದ ಹಿಂಭಾಗದಲ್ಲಿ ಬಳ್ಳಿಸುರುಳಿಗಳನ್ನು ಮತ್ತು ಕೀರ್ತಿಮುಖವನ್ನು ಬಿಡಿಸಲಾಗಿರುವ ಪ್ರಭಾವಳಿ ಇದೆ. **(ಚಿ.ಸಂ.94)** ನವರಂಗದ ಮುಂದಿನ ಎರಡು ಅಡ್ಡ ತೊಲೆಯ ಮೇಲೆ ಕ್ರಿ.ಶ.1263ರಲ್ಲಿ ಬರೆಸಲಾದ ದಾನ ಶಾಸನವಿದೆ. ಈ ಶಾಸನವು ಮೇಲೆ ಹೇಳಿದಂತೆ ಸೋಮಣ್ಣ ದಂಡನಾಯಕನು ತುರುವೇಕೆರೆಯನ್ನು ಅಗ್ರಹಾರವನ್ನಾಗಿ ಮಾಡಿ ಬ್ರಾಹ್ಮಣರಿಗೆ ದಾನಬಿಟ್ಟಿದ್ದನ್ನು ಉಲ್ಲೇಖಿಸುತ್ತದೆ. [138]

**ಮುಖಮಂಟಪ:–** ನವರಂಗದ ದ್ವಾರದ ಪಟ್ಟಿಕೆಗಳಲ್ಲಿ ಯಾವುದೇ ರೀತಿಯ ಅಲಂಕರಣದ ಕೆತ್ತನೆ ಇರುವುದಿಲ್ಲ. ಲಲಾಟಬಿಂಬದಲ್ಲಿ ವೇಣುಗೋಪಾಲನನ್ನು ಬಿಡಿಸಲಾಗಿದೆ. ಬಾಗಿಲ ಇಕ್ಕೆಲಗಳಲ್ಲಿ ದ್ವಾರಪಾಲಕರನ್ನು ಬಿಡಿಸಲು ಜೋಡಿಸಲಾಗಿದ್ದ ಕಲ್ಲನ್ನು ಹಾಗೆ ಉಳಿಸಲಾಗಿದೆ. ನವರಂಗದ ಮುಂದಿರುವ ಮುಖಮಂಟಪದಲ್ಲಿ ಎರಡು ಕಂಬಗಳನ್ನು ಕಕ್ಷಾಸನದ ಜಗತಿಯ ಮೇಲೆ ನಿಲ್ಲಿಸಲಾಗಿದೆ. ಕೆಳಗೆ ಭಕ್ತಾದಿಗಳು ಪ್ರವಾಸಿಗರು ವಿಶ್ರಾಂತಿ ಪಡೆಯಲೆಂದು ಕಕ್ಷಾಸನವನ್ನು ಮಾಡಲಾಗಿದೆ. ಇಲ್ಲಿರುವ ಹೊಯ್ಸಳ ಶೈಲಿಯ ಎರಡು ಕಂಬಗಳ ಮೇಲೆ ಈ ಮುಖಮಂಟಪದ ಮೇಲ್ಛಾವಣಿಯನ್ನು ನಿರ್ಮಿಸಲಾಗಿದ್ದು **(ಚಿ.ಸಂ.95)** ಇದರ ಮಧ್ಯದಲ್ಲಿ ನಕ್ಷತ್ರಾಕಾರದ ಭುವನೇಶ್ವರಿಯನ್ನು ನಿರ್ಮಿಸಲಾಗಿದೆ. ಮುಖಮಂಟಪದ ಮುಂದೆ ಸೋಪಾನಗಳನ್ನು

ಮಾಡಲಾಗಿದೆ.[139] ಈ ಮುಖಮಂಟಪದ ವಾಯುವ್ಯ ದಿಕ್ಕಿನಲ್ಲಿ ಗೋಡೆಗೆ ಸೇರಿಸಲಾಗಿರುವ ಆಯತಾಕಾರದ ಚಪ್ಪಡಿ ಮೇಲೆ ಬರೆಸಲಾಗಿರುವ ಒಂದು ಶಾಸನವಿದೆ.

**ಜಗತಿ:-** ಈ ದೇವಾಲಯವನ್ನು ನಕ್ಷತ್ರಾಕಾರದ ಜಗತಿಯ ಮೇಲೆ ನಿರ್ಮಿಸಲಾಗಿದೆ. ಆದರೆ ಇತ್ತೀಚೆಗೆ ಪ್ರಾಕಾರ ನಿರ್ಮಿಸುವಾಗ ಜಗತಿಯ ಸುತ್ತಲೂ ಕಲ್ಲು ಮತ್ತು ಸಿಮೆಂಟನ್ನು ಉಪಯೋಗಿಸಿ ಮಾರ್ಗ ಕಲ್ಪಿಸಿದ್ದರಿಂದಾಗಿ ಜಗತಿಯ ಎರಡು ಪಟ್ಟಿಕೆಗಳು ಮಾತ್ರ ಈಗ ಕಾಣಬರುತ್ತವೆ. ಉಳಿದ ಭಾಗಗಳ ಪಟ್ಟಿಕೆಗಳು ಮಣ್ಣಿನಲ್ಲಿ ಮುಚ್ಚಿಹೋಗಿದೆ.

**ಅಧಿಷ್ಠಾನ:-** ನಕ್ಷತ್ರಾಕಾರದ ತಳವಿನ್ಯಾಸ ಹೊಂದಿದ್ದು ಕಳಸಬಂಧ ಅಧಿಷ್ಠಾನವನ್ನು ಹೊಂದಿದೆ. ಅಧಿಷ್ಠಾನವು 5 ಪಟ್ಟಿಕೆಗಳಿಂದ ಕೂಡಿದ್ದು, ಪಟ್ಟಿಕೆಗಳನ್ನು ನಯವಾಗಿ ಕೆತ್ತನೆ ಮಾಡಿ ಹಿನ್ಸರಿತ ಮತ್ತು ಮುನ್ಸರಿತದಂತೆ ಕೂಡಿರುವಂತೆ ಕ್ರಮವಾಗಿ ಜೋಡಿಸಿ ನಿರ್ಮಿಸಲಾಗಿದೆ. ಇದರಲ್ಲಿ ಉಪಾನ, ಜಗತಿ, ತ್ರಿಪಟ್ಟ ಕುಮುದ, ಕಂಠ, ಪ್ರತಿಗಳನ್ನು ಕಾಣಬಹುದು.

**ಭಿತ್ತಿ:-** ದೇವಾಲಯದ ಭಿತ್ತಿಯು ಸರಳವಾಗಿದ್ದು, ಭಿತ್ತಿಯಲ್ಲಿ ತೆಳುವಾದ ಚೌಕಸ್ತಂಭಗಳನ್ನು ಜೋಡಣೆ ಮಾಡಲಾಗಿದೆ. ಈ ಚೌಕಸ್ತಂಭಗಳ ಮೇಲೆ ಭೂಮಿಜ ಮಾದರಿಯ ಸಣ್ಣ ಸಣ್ಣ ಶಿಖರಗಳನ್ನು ಮಾಡಲಾಗಿದೆ. ಭಿತ್ತಿಯ ಉತ್ತರ, ದಕ್ಷಿಣ ಮತ್ತು ಗರ್ಭಗೃಹದ ಮೂರು ಕಡೆಗಳಲ್ಲಿ ಚಿಕ್ಕ ಚಿಕ್ಕ ಕೋಷ್ಠಗಳನ್ನು ಮಾಡಲಾಗಿದೆ. ಚೌಕಸ್ತಂಭಗಳ ಮಧ್ಯದಲ್ಲಿ ದೇವಾಲಯದ ಸುತ್ತಲೂ ಅರಳಿದ ಪುಷ್ಪಗಳನ್ನು ಬಿಡಿಸಲಾಗಿದೆ.

**ಕಪೋತ:-** ಭಿತ್ತಿಯ ಮೇಲಿರುವ ಕಪೋತವನ್ನು ಗೋಡೆಯಿಂದ ಸುಮಾರು 1.5 ಅಡಿ ಮುಂದಕ್ಕೆ ಚಾಚಿಕೊಂಡಿದ್ದು ಮಳೆಯ ನೀರು ಭಿತ್ತಿಯ ಮೇಲೆ ಬೀಳದಂತೆ ಮಾಡಲಾಗಿದೆ. ಕಪೋತದ ಮೇಲಿರುವ ಹಾರದ ಭಾಗದಲ್ಲಿ ದೇವಾಲಯದ ಸುತ್ತಲೂ ದಂತದ ರೀತಿ ಕೆತ್ತನೆ ಮಾಡಲಾಗಿದೆ. ಮತ್ತು ಶಿಲ್ಪಗಳನ್ನು ರಚಿಸಲು ಜೋಡಿಸಲಾಗಿರುವ ಕಲ್ಲುಗಳನ್ನು ಇದ್ದ ಹಾಗೆ ಉಳಿಸಲಾಗಿದೆ. ಹಾರದ ಮೇಲೆ ಇತ್ತೀಚೆಗೆ ಸಿಮೆಂಟ್ ಇಟ್ಟಿಗೆ ಉಪಯೋಗಿಸಿ ಸುಮಾರು ಮೂರು ಅಡಿ ಎತ್ತರವಿರುವ ಕೈಪಿಡಿ ಗೋಡೆಯನ್ನು ನಿರ್ಮಿಸಲಾಗಿದೆ.

**ಶಿಖರ:-** ಗರ್ಭಗೃಹದ ಮೇಲ್ಭಾಗದಲ್ಲಿ ಹೊಯ್ಸಳ ಶೈಲಿಯ ಶಿಖರವನ್ನು ನಿರ್ಮಿಸಲಾಗಿದೆ. ಈ ದೇವಾಲಯದ ಶಿಖರವು ಶೆಟ್ಟಿಕೆರೆಯ ಯೋಗಮಾಧವ ದೇವಾಲಯದ ಶಿಖರವನ್ನು ಹೋಲುತ್ತದೆ. ಇದು ನಾಲ್ಕು ತಲಗಳಿಂದ ಕೂಡಿದೆ. ಇದರಲ್ಲಿ ಯಾವುದೇ ಮೂರ್ತಿಶಿಲ್ಪಗಳನ್ನು ಕೆತ್ತನೆ ಮಾಡದೇ ಹಾಗೆ ಉಳಿಸಲಾಗಿದೆ. ಶಿಖರದಲ್ಲಿ ಸುತ್ತಲೂ ಕಲ್ಲಿನ ಕಳಸಗಳನ್ನು ಇಡಲಾಗಿದೆ. ಗ್ರೀವದ ಭಾಗ ಒಳಸರಿದಂತೆ ಮಾಡಿ ಗ್ರೀವದ ಮೇಲೆ ನಕ್ಷತ್ರಾಕಾರವಾಗಿರುವ ಸ್ತೂಪಿಯನ್ನು

ರಚಿಸಲಾಗಿದೆ. ಈ ಸ್ತೂಪಿಯ ಮೇಲೆ ಇರಿಸಲಾಗಿದ್ದ ಮೂಲ ಕಳಸವು ಬಿದ್ದುಹೋಗಿದ್ದರಿಂದ ಆ ಭಾಗದಲ್ಲಿ ಇತ್ತೀಚೆಗೆ ಒಂದು ಪಂಚಲೋಹದ ಕಳಸವನ್ನು ಮಾಡಿಸಿ ಇಡಲಾಗಿದೆ. ಶಿಖರದ ಮುಂಭಾಗದಲ್ಲಿ ಸುಖನಾಸವನ್ನು ಮಾಡಲಾಗಿದೆ. ಈ ಸುಖನಾಸದ ಮುಂದೆ ವಿಷ್ಣುವಿನ ವಾಹನವಾದ ಗರುಡನನ್ನು ಬಿಡಿಸಲಾಗಿದೆ. **(ಚಿ.ಸಂ.96)**

**ಪ್ರಾಕಾರ:-** ಈ ದೇವಾಲಯಕ್ಕೆ ಮೂಲತಃ ಪ್ರಾಕಾರವಿತ್ತೆಂದು ಗ್ರಾಮಸ್ಥರು ತಿಳಿಸುತ್ತಾರೆ. ಆದರೆ ಪ್ರಕೃತಿಯ ವಿಕೋಪಕ್ಕೆ ತುತ್ತಾಗಿ ಬಿದ್ದುಹೋಗಿದ್ದರಿಂದಾಗಿ ಇತ್ತೀಚೆಗೆ ಗ್ರಾಮಸ್ಥರು ಸರ್ಕಾರದಿಂದ ಅನುದಾನ ಪಡೆದು ಇಟ್ಟಿಗೆ ಮತ್ತು ಸಿಮೆಂಟನ್ನು ಉಪಯೋಗಿಸಿ ದೇವಾಲಯದ ಸುತ್ತಲೂ ಸುಮಾರು ನಾಲ್ಕು ಅಡಿಗಳು ಎತ್ತರವಾಗಿ ಪ್ರಾಕಾರವನ್ನು ನಿರ್ಮಿಸಿದ್ದಾರೆ.

**ಚನ್ನಕೇಶವ ದೇವಾಲಯ-ತಂಡಗ**

ತಂಡಗ ಗ್ರಾಮವು ತುರುವೇಕೆರೆ ತಾಲೂಕಿಗೆ ಸೇರಿರುವ ಗ್ರಾಮವಾಗಿದ್ದು ಈ ಗ್ರಾಮವು ತುರುವೇಕೆರೆಯಿಂದ ದಬ್ಬೇಘಟ್ಟಕ್ಕೆ ಹೋಗುವ ರಸ್ತೆ ಮಾರ್ಗದಲ್ಲಿ ಸುಮಾರು 8 ಕಿ.ಮೀ ದೂರದಲ್ಲಿದೆ. ಪುರಾಣಗಳ ಪ್ರಕಾರ ತಂಡಗ ಗ್ರಾಮವು ಐತಿಹಾಸಿಕ ಪುರುಷನಾದ ಶಾಲಿವಾಹನನು ಇಲ್ಲಿ ಜನ್ಮ ಪಡೆದನೆಂದೂ ಮತ್ತು ಈ ಪುರುಷನು ಸ್ಥಳೀಯ ಬ್ರಾಹ್ಮಣ ಪುರುಷ ಮತ್ತು ಕುಂಬಾರ ಕುಲದ ಮಹಿಳೆಯ ಮಗನಾಗಿ ಜನಿಸಿದನೆಂಬ ಪ್ರತೀತಿ ಇದೆ. ಹೊಯ್ಸಳರ ಕಾಲದಲ್ಲಿ ತಂಡಗ ಗ್ರಾಮವು ಒಂದು ಅಗ್ರಹಾರವಾಗಿದ್ದು, ಹಿಂದೆ ಇದನ್ನು ಶಂಕರ ನಾರಾಯಣಪುರ ಎಂದು ಕರೆಯಲ್ಪಡುತ್ತಿತ್ತು ಎಂಬ ಅಂಶಗಳು ಶಾಸನಾಧಾರಗಳಿಂದ ತಿಳಿದುಬರುತ್ತದೆ.[140] ಈ ಗ್ರಾಮದಲ್ಲಿ ಜನ್ಮಪಡೆದ ಶಾಲಿವಾಹನನು ಆ ಕಾಲದಲ್ಲಿ ನಡೆಯುತ್ತಿದ್ದ ಯುದ್ಧದಲ್ಲಿ ರಾಕ್ಷಸರ ಸಂಹಾರಕ್ಕಾಗಿ ಬೊಂಬೆಗಳನ್ನು ಸೃಷ್ಟಿಸಿ ತಂಡೋಪತಂಡವಾಗಿ ಯುದ್ಧಕ್ಕೆ ಕಳುಹಿಸುತ್ತಿದ್ದನೆಂಬ ಜಾನಪದೀಯ ಕಥೆ ಇದ್ದುದರಿಂದಾಗಿ ಈ ಸ್ಥಳಕ್ಕೆ 'ತಂಡಗ' ಎಂಬ ಹೆಸರು ಬಂದಿದೆ ಎಂದು ಹೇಳಲಾಗುತ್ತದೆ. ಈ ಗ್ರಾಮವು ಪ್ರಾಚೀನ ಕಾಲದಿಂದಲೂ ಸಾಂಸ್ಕೃತಿಕವಾಗಿ ಮಹತ್ವವನ್ನು ಪಡೆದುಕೊಂಡಿದ್ದುದಲ್ಲದೇ, ಐತಿಹಾಸಿಕ ಮತ್ತು ಧಾರ್ಮಿಕವಾಗಿ ತನ್ನದೇ ಆದಂತಹ ಮಾನ್ಯತೆಯನ್ನು ಪಡೆದುಕೊಂಡಿದೆ. ಇದಕ್ಕೆ ಸಾಕ್ಷಿಯಾಗಿ ಈ ಗ್ರಾಮದಲ್ಲಿ ನಿರ್ಮಾಣ ಮಾಡಲಾಗಿರುವ ಚನ್ನಕೇಶವ ಮತ್ತು ಮಲ್ಲೇಶ್ವರ ಎರಡೂ ಪ್ರಾಚೀನ ದೇವಾಲಯಗಳಾಗಿವೆ. ಹೊಯ್ಸಳ ಅಗ್ರಹಾರಗಳ ಲಕ್ಷಣಗಳಂತೆಯೇ ಊರಿನ ಮಧ್ಯಭಾಗದಲ್ಲಿ ಪೂರ್ವಾಭಿಮುಖವಾಗಿ ಚನ್ನಕೇಶವ ದೇವಾಲಯವು ನಿರ್ಮಾಣವಾಗಿದ್ದರೆ ಊರಿನ ಈಶಾನ್ಯ ಭಾಗಕ್ಕೆ ಶಿವನ ದೇವಾಲಯವು ನಿರ್ಮಾಣವಾಗಿದೆ.[141] ಇದೇ ಲಕ್ಷಣಗಳನ್ನು ನಾವು ತುರುವೇಕೆರೆ ಪಟ್ಟಣದ ಚನ್ನಕೇಶವ ದೇವಾಲಯ ಮತ್ತು ಇದೇ ತಾಲೂಕಿನ ನಾಗಲಾಪುರದಲ್ಲಿರುವ ಕೇಶವ

ದೇವಾಲಯದಲ್ಲಿ ಕಾಣುತ್ತೇವೆ. ಈ ಚನ್ನಕೇಶವ ದೇವಾಲಯದ ನಿರ್ಮಾಣದ ವಿಷಯಕ್ಕೆ ಸಂಬಂಧಿಸಿದಂತೆ ಯಾವುದೇ ರೀತಿಯ ಮೂಲಾಧಾರಗಳು ಲಭ್ಯವಾಗಿಲ್ಲ. ಆದರೆ ದೇವಾಲಯದ ವಾಸ್ತುಲಕ್ಷಣಗಳನ್ನು ಗಮನಿಸಿದಾಗ ಸುಮಾರು ಕ್ರಿ.ಶ.1160ರಲ್ಲಿ ನಿರ್ಮಾಣವಾಗಿದೆ ಎಂಬುದು ವಿದ್ವಾಂಸರ ಅಭಿಪ್ರಾಯ.[142] ದೇವಾಲಯದ ಪ್ರತಿಯೊಂದು ವಾಸ್ತು ಭಾಗದ ಮೇಲೂ ಕಟ್ಟಡದಲ್ಲಿ ಅದರ ಸ್ಥಾನ, ದೇವಾಲಯದ ನಿರ್ಮಾಣದ ಬಗ್ಗೆ ನಿರ್ದೇಶನ ಸೂಚಿಸುವ ವಿವರಗಳನ್ನು ಕೆತ್ತಿರುವುದು ಒಂದು ವೈಶಿಷ್ಟ್ಯವಾಗಿದೆ.[143] ಚನ್ನಕೇಶವ ದೇವಾಲಯವು ಏಕಕೂಟ ದೇವಾಲಯವಾಗಿದ್ದು, ಪೂರ್ವಾಭಿಮುಖವಾಗಿದೆ. ಇದನ್ನು ಸಂಪೂರ್ಣವಾಗಿ ಬಳಪದ ಕಲ್ಲನ್ನು ಉಪಯೋಗಿಸಿ ನಿರ್ಮಿಸಲಾಗಿದೆ. ಇದರಲ್ಲಿ ಗರ್ಭಗೃಹ, ಸುಖನಾಸಿ, ನವರಂಗ ಮತ್ತು ಮುಖಮಂಟಪ ಕಂಡುಬರುತ್ತವೆ.

**ಗರ್ಭಗೃಹ:-** ಗರ್ಭಗೃಹವು 8X8 ಅಡಿ ಉದ್ದ ಮತ್ತು ಅಗಲವನ್ನು ಹೊಂದಿದ್ದು ಚೌಕಾಕಾರವಾಗಿದೆ. ಇದರ ಮಧ್ಯಭಾಗದಲ್ಲಿ ಸುಮಾರು 2 ಅಡಿ ಎತ್ತರವಿರುವ ನಕ್ಷತ್ರಾಕಾರದ ಗರುಡಪೀಠದ ಮೇಲೆ ಸುಮಾರು 5 ಅಡಿ ಎತ್ತರವಿರುವ ಕೇಶವ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. **(ಚಿ.ಸಂ.97)** ಸಮಭಂಗಿಯಲ್ಲಿ ನಿಂತಿರುವ ಈ ದೇವನು ಚತುರ್ಭುಜವನ್ನು ಹೊಂದಿದ್ದು ಕೈಗಳಲ್ಲಿ ಶಂಖ, ಚಕ್ರ, ಗಧಾ ಮತ್ತು ಪದ್ಮವನ್ನು ಹಿಡಿದುಕೊಂಡಿದ್ದಾನೆ. ನಯವಾದ ಕೆತ್ತನೆಯಿಂದ ಕೂಡಿರುವ ಈ ಸುಂದರವಾದ ದೇವನ ಮೈಮೇಲೆ ವಿವಿಧ ಬಗೆಯ ವಸ್ತ್ರಾಭರಣಗಳನ್ನು ಬಿಡಿಸಲಾಗಿದೆ. ಕೊರಳಲ್ಲಿ ಕಂಠೀಹಾರ ಮತ್ತು ಮೈಮೇಲೆ ಯಜ್ಞೋಪವೀತವನ್ನು ಸೂಕ್ಷ್ಮ ಕೆತ್ತನೆ ಮಾಡಲಾಗಿದೆ. ಈ ದೇವನ ಹಿಂಭಾಗದಲ್ಲಿ ಪ್ರಭಾವಳಿಯನ್ನು ಮಾಡಲಾಗಿದೆ. ಇದರಲ್ಲಿ ಬಳ್ಳಿಸುರುಳಿಗಳ ಕೆತ್ತನೆ ಮತ್ತು ಅಂತಿಮದಲ್ಲಿ ಕೀರ್ತಿಮುಖವನ್ನು ಬಿಡಿಸಿ ಸುಂದರಗೊಳಿಸಲಾಗಿದೆ. ಈ ದೇವನ ಇಕ್ಕೆಲಗಳಲ್ಲಿ ಶ್ರೀದೇವಿ ಭೂದೇವಿಯರು ಫಲವನ್ನು ಹಿಡಿದುಕೊಂಡು ತ್ರಿಭಂಗಿಯಲ್ಲಿ ನಿಂತಿದ್ದಾರೆ. ಪ್ರಸ್ತುತ ಇರುವ ಈ ಮೂರ್ತಿಯನ್ನು ನಂತರದ ಕಾಲದಲ್ಲಿ ಬೇರೆ ಸ್ಥಳದಿಂದ ಸ್ಥಳಾಂತರಿಸಿ ತಂದು ಇಡಲಾಗಿದೆ ಎಂದು ಗ್ರಾಮದವರು ತಿಳಿಸುತ್ತಾರೆ. ಏಕೆಂದರೆ ದೇವಾಲಯದ ಮೂಲ ಕೇಶವ ಮೂರ್ತಿಯು ಕಾಲಪುರುಷನ ಹಾವಳಿಗೆ ತುತ್ತಾಗಿ ಭಗ್ನವಾಗಿದ್ದರಿಂದ ಇದನ್ನು ಗರ್ಭಗೃಹದಿಂದ ಬೇರ್ಪಡಿಸಿ ದೇವಾಲಯದ ದಕ್ಷಿಣ ಭಾಗದಲ್ಲಿ ಇರಿಸಲಾಗಿದೆ. [144]

ಗರ್ಭಗೃಹದ ಮೇಲ್ಛಾವಣಿಯಲ್ಲಿ ನಕ್ಷತ್ರಾಕಾರದ ಭುವನೇಶ್ವರಿಯನ್ನು ನಿರ್ಮಿಸಲಾಗಿದೆ ಭುವನೇಶ್ವರಿಯ ಮಧ್ಯಭಾಗದಲ್ಲಿ ಅರಳಿದ ಪದ್ಮಪುಷ್ಪವನ್ನು ಮೂಲೆಗಳಲ್ಲಿ ಕೀರ್ತಿಮುಖಗಳನ್ನು ಬಿಡಿಸಲಾಗಿದೆ. ಗರ್ಭಗೃಹದ ಬಾಗಿಲು ಹಲವು ಪಟ್ಟಿಕೆಗಳಿಂದ ಕೂಡಿದ್ದು, ಸರಳವಾಗಿದೆ. ಈ

ಪಟ್ಟಿಕೆಗಳಲ್ಲಿ ಯಾವುದೇ ರೀತಿಯ ಅಲಂಕರಣದ ಕೆತ್ತನೆ ಮಾಡದೆ ಹಾಗೆ ಉಳಿಸಲಾಗಿದೆ. ಮುಧ್ಯದಲ್ಲಿ ನಕ್ಷತ್ರಾಕಾರದ ಅರೆಗಂಬವನ್ನು ಸೇರಿಸಿ ಅಲಂಕರಿಸಲಾಗಿದೆ. ಲಲಾಟಬಿಂಬದಲ್ಲಿ ಗರುಡನ ಮೂರ್ತಿಯನ್ನು ಬಿಡಿಸಲಾಗಿದೆ. ಬಾಗಿಲ ತೋರಣ ಭಾಗದಲ್ಲಿ ಹೊಯ್ಸಳ ಶೈಲಿಯ ಚಿಕ್ಕ ಶಿಖರಗಳಿವೆ. ಬಾಗಿಲ ಇಕ್ಕೆಲಗಳಲ್ಲಿ ದ್ವಾರಪಾಲಕರನ್ನು ಬಿಡಿಸಲಾಗಿದೆ. ಈ ದ್ವಾರಪಾಲಕರು ತ್ರಿಭಂಗಿಯಲ್ಲಿ ನಿಂತಿದ್ದು ಚತುರ್ಭುಜವನ್ನು ಹೊಂದಿದ್ದಾರೆ. ಕೈಗಳಲ್ಲಿ ಶಂಖ, ಚಕ್ರ ಗಧಾ, ಪದ್ಮವನ್ನು ಹಿಡಿದುಕೊಂಡಿದ್ದಾರೆ. ಪ್ರಭಾವಳಿಯಲ್ಲಿ ಬಳ್ಳಿಸುರುಳಿ ಕೀರ್ತಿಮುಖವನ್ನು ಬಿಡಿಸಿ ಸುಂದರಗೊಳಿಸಲಾಗಿದೆ. ಈ ದ್ವಾರಪಾಲಕರ ಇಕ್ಕೆಲಗಳಲ್ಲಿ ಚಾಮರ ಮತ್ತು ಫಲವನ್ನು ಹಿಡಿದು ನಿಂತಿರುವ ಚಾಮರಧಾರಣಿಯರನ್ನು ಕಾಣಬಹುದು.

**ಸುಖನಾಸಿ:–** ಸುಖನಾಸಿಯು ಗರ್ಭಗೃಹದಷ್ಟೇ ಉದ್ದ ಮತ್ತು ಅಗಲವಾಗಿದ್ದು ಚೌಕಾಕಾರವಾಗಿದೆ. ಇದರಲ್ಲಿ ಯಾವುದೇ ರೀತಿಯ ದೇವತಾ ಮೂರ್ತಿಶಿಲ್ಪಗಳು ಕಾಣಬರುವುದಿಲ್ಲ. ಸುಖನಾಸಿಯ ಮೇಲ್ಛಾವಣಿಯು ನಕ್ಷತ್ರಾಕಾರವಾಗಿದ್ದು, ಮಧ್ಯಭಾಗದಲ್ಲಿ ಮೂರು ಸುತ್ತುಗಳಲ್ಲಿ ಬಿಡಿಸಲಾಗಿರುವ ವಿಶಾಲವಾದ ಪದ್ಮಪುಷ್ಪವನ್ನು ಬಿಡಿಸಲಾಗಿದೆ. ಮೂಲೆಗಳಲ್ಲಿ ಕೀರ್ತಿಮುಖಗಳನ್ನು ಬಿಡಿಸಿ ಅಲಂಕರಣಗೊಳಿಸಲಾಗಿದೆ. ಆದರೆ ಸುಖನಾಸಿಯ ಉತ್ತರದ ಗೋಡೆಯ ಮುಂಭಾಗದಲ್ಲಿ ಸುಮಾರು 2 ಅಡಿ ಎತ್ತರವಿರುವ ಆಳ್ವಾರರ ಅಥವಾ ಶ್ರೀವೈಷ್ಣವ ಮೂರ್ತಿಶಿಲ್ಪಗಳಿವೆ. ಇವುಗಳನ್ನು ವೈಷ್ಣವ ಮತ ಪ್ರಚಾರಕರಾದ ಶ್ರೀರಾಮಾನುಜಾಚಾರ್ಯ ಮತ್ತು ನಮ್ಮಾಳ್ವಾರ್ ಶಿಲ್ಪಗಳೆಂದು ಗುರುತಿಸಲಾಗಿದೆ. ಸುಖನಾಸಿಯ ದ್ವಾರವು ಅಲಂಕರಣೆಯ ಕೆತ್ತನೆಯಿಂದ ಕೂಡಿದ್ದು, ಬಾಗಿಲ ಪಟ್ಟಿಕೆಗಳಲ್ಲಿ ಆಭರಣಗಳು, ಬಳ್ಳಿಸುರುಳಿಗಳ ಸೂಕ್ಷ್ಮ ಕೆತ್ತನೆಮಾಡಿ ಬಾಗಿಲನ್ನು ಸುಂದರಗೊಳಿಸಲಾಗಿದೆ. ಈ ಬಾಗಿಲ ಇಕ್ಕೆಲಗಳಲ್ಲಿ ಜಾಲಾಂಧ್ರಗಳನ್ನು ಜೋಡಿಸಿ ಗಾಳಿ ಮತ್ತು ಬೆಳಕಿನ ವ್ಯವಸ್ಥೆಗೆ ಎರಡೂ ಜಾಲಾಂದ್ರಗಳನ್ನು ಸೇರಿಸಿಸಲಾಗಿದೆ. ಈ ಎರಡೂ ಜಾಲಾಂದ್ರಗಳಲ್ಲಿ ಕಮಲದ ಪುಷ್ಪಗಳಿಂದ ಅಲಂಕೃತವಾದ 'ಪುಷ್ಪಖಂಡ' ಜಾಲಾಂಧ್ರಗಳನ್ನು ಬಿಡಿಸಲಾಗಿದೆ. ಶಿಲ್ಪಶಾಸ್ತ್ರ, ದೇವಾಲಯದ ನಿರ್ಮಾಣ ಗ್ರಂಥಗಳು ಈ ಜಾಲಾಂಧ್ರಗಳನ್ನು 'ವಾತಾಯನ' ಎಂದು ಕರೆದಿವೆ. ಈ ಜಾಲ ವಾತಾಯನವನ್ನು ದೇವಾಲಯದ ಒಳಭಾಗಕ್ಕೆ ಗಾಳಿ ಮತ್ತು ಬೆಳಕನ್ನು ಒದಗಿಸಲು ನಿರ್ಮಿಸಲಾಗಿರುತ್ತದೆ. **(ಚಿ.ಸಂ.98)** 'ಜಾಲಾ' ಎಂದರೆ ತೆರೆ ಹಾಗೂ 'ವಾತಾಯನ' ಎಂದರೆ ಗಾಳಿ ಬರಲು ಮಾರ್ಗ ಎಂದರ್ಥ. ಪ್ರಾಚೀನ ದೇವಾಲಯಗಳಲ್ಲಿ ಇವುಗಳನ್ನು ಹೆಚ್ಚಾಗಿ ಬಳಸಿರುವುದು ಕಂಡುಬರುತ್ತದೆ. ಶಾಸ್ತ್ರಗಳು ವಲ್ಲಿಮಂಡಲ, ಪುಷ್ಪಖಂಡ, ಗುಳಿಕ, ಗವಾಕ್ಷ, ಸ್ವಸ್ತಿಕ, ನಂದ್ಯಾವರ್ತ, ಶಂಖಮಂಡಲ ಇತ್ಯಾದಿ ಜಾಲಾವಾತಾಯನಗಳ ಪ್ರಕಾರಗಳನ್ನು ಹೇಳುತ್ತವೆ. ಪ್ರಾಚೀನ ದೇವಾಲಯಗಳಲ್ಲಿ ಇವುಗಳನ್ನು ಹೆಚ್ಚಾಗಿ ಬಳಸಿರುವುದು ಕಂಡುಬರುತ್ತದೆ.[145] ಬಾಗಿಲ ಲಲಾಟಬಿಂಬದಲ್ಲಿ

ಪದ್ಮಾಸನದಲ್ಲಿ ಕುಳಿತಿರುವ ಗಜಲಕ್ಷ್ಮೀಯನ್ನು ಬಿಡಿಸಲಾಗಿದೆ. ಮಧ್ಯಭಾಗದಲ್ಲಿ ಚತುರ್ಷಾಕಾರದ ಮತ್ತೊಂದು ಪಟ್ಟಿಕೆಯಲ್ಲಿ ಅಥವಾ ಮುಂಚಾಚನ್ನು ಕೊರೆದು ಅದರಲ್ಲಿ ಸಾಮಾನ್ಯವಾಗಿ ಪ್ರಧಾನ ದೇವತೆಯ ಲೀಲಾ ಸ್ವರೂಪದ ಉಬ್ಬು ಶಿಲ್ಪ ಮತ್ತು ವಾಹನವನ್ನು ಬಿಡಿಸಿರುತ್ತಾರೆ ಅಥವಾ ಗಜಲಕ್ಷ್ಮೀಯ ಬಿಂಬವನ್ನು ಕೆತ್ತಲಾಗಿರುತ್ತದೆ. ಪ್ರಾಚೀನ ಕಾಲದಿಂದಲೂ ಗಜಲಕ್ಷ್ಮಿಯನ್ನು ಕೆತ್ತಿರುವುದು ಹೆಚ್ಚಾಗಿ ಕಂಡುಬರುತ್ತದೆ.[146] ಸುಖನಾಸಿಯ ಲಲಾಟಬಿಂಬದಲ್ಲಿ ಕಂಡುಬರುವ ಗಜಲಕ್ಷ್ಮಿಗೆ ಆನೆಗಳು ಎರಡೂ ಕಡೆ ಕುಂಭವನ್ನು ಹಿಡಿದು ಲಕ್ಷ್ಮೀದೇವಿಯ ಮೇಲೆ ಜಲವನ್ನು ಪ್ರೋಕ್ಷಣೆ ಮಾಡುವಂತಿದೆ. ಈ ಆನೆಗಳ ಹಿಂಭಾಗದಲ್ಲಿ ವ್ಯಾಳಗಳ ಬಾಯಿಂದ ಹೊರಟ ಬಳ್ಳಿಸುರುಳಿಗಳು ಮತ್ತು ಕಮಲದ ಮೊಗ್ಗುಗಳನ್ನು ಬಹಳ ಸುಂದರವಾಗಿ ಬಿಡಿಸಲಾಗಿದೆ. ಮೇಲ್ಭಾಗದಲ್ಲಿ ಕೀರ್ತಿಮುಖವಿದೆ.

**ನವರಂಗ:-** ನವರಂಗವು ಸುಮಾರು 25X25 ಅಡಿ ಉದ್ದಗಲವಾಗಿದ್ದು ಚೌಕಾಕಾರವಾಗಿದೆ. ನವರಂಗದ ಮಧ್ಯದಲ್ಲಿ ಹೊಯ್ಸಳ ಶೈಲಿಯ ನಾಲ್ಕು ಕಂಬಗಳಿವೆ. **(ಚಿ.ಸಂ.99)** ಇವುಗಳನ್ನು ರಾಟೆಯಂತ್ರದ ಸಹಾಯದಿಂದ ರಚಿಸಲಾಗಿದೆ. ಇವುಗಳ ದಿಂಡಿನ ಭಾಗವು ಚೌಕ, ಬಳೆಗಳು ಗಂಟೆ, ಕುಂಭ, ಗಾಲಿ ಮತ್ತು ಅದರ ಮೇಲೆ ಚೌಕಾಕಾರದ ಫಲಗೈ ಮತ್ತು ಅದರ ಮೇಲೆ ಕಪೋತವನ್ನು ಮಾಡಲಾಗಿದೆ. ನವರಂಗದ ಮೇಲ್ಛಾವಣಿಯು ಒಂಭತ್ತು ಅಂಕಣಗಳಿಂದ ಕೂಡಿದೆ. ಈ ಅಂಕಣಗಳಲ್ಲಿರುವ ಭುವನೇಶ್ವರಿಗಳನ್ನು ವಿವಿಧಾಕೃತಿಯಲ್ಲಿ ಅಂದರೆ ನಕ್ಷತ್ರಾಕಾರವಾಗಿ, ಅಷ್ಟಕೋನಾಕೃತಿಯಲ್ಲಿ ಶ್ರೀಚಕ್ರದ ಮಾದರಿಯಲ್ಲಿ ಮತ್ತು ವೃತ್ತಾಕಾರವಾಗಿ ರಚಿಸಿ ಮಧ್ಯದಲ್ಲಿ ಅರಳಿದ ಪದ್ಮಪುಷ್ಪಗಳನ್ನು ಬಿಡಿಸಲಾಗಿದೆ. ಪಟ್ಟಿಕೆಗಳಲ್ಲಿ ಕಮಲದ ಮೊಗ್ಗುಗಳನ್ನು ಮೂಲೆಗಳಲ್ಲಿ ಕೀರ್ತಿಮುಖಗಳನ್ನು ಬಿಡಿಸಿ ಅಲಂಕರಣ ಮಾಡಿ ಸುಂದರಗೊಳಿಸಲಾಗಿದೆ. ನವರಂಗದ ಪಶ್ಚಿಮದ ಗೋಡೆಯ ಮುಂದೆ ಎರಡು ನಕ್ಷತ್ರಾಕಾರವಾಗಿರುವ ಕೋಷ್ಠಗುಡಿಗಳಿವೆ. **(ಚಿ.ಸಂ.100)** ಈ ಗುಡಿಗಳು ಹೊಯ್ಸಳ ಶೈಲಿಯ ಮಾದರಿಯಲ್ಲಿ ನಿರ್ಮಿಸಲಾಗಿದೆ. ಇವುಗಳ ಶಿಖರವನ್ನು ಪಿರಮಿಡ್ಡಿನಾಕಾರವಾಗಿ ರಚಿಸಲಾಗಿದೆ. ಅಂತ್ಯದಲ್ಲಿ ಕಳಸಗಳನ್ನು ಇಡಲಾಗಿದೆ. ಬಾಗಿಲ ದಕ್ಷಿಣ ಭಾಗದಲ್ಲಿರುವ ಕೋಷ್ಠಗುಡಿ ಒಳಗೆ ನಕ್ಷತ್ರಾಕಾರವಾಗಿರುವ ಮೂಷಿಕ ಪೀಠದ ಮೇಲೆ ಸುಮಾರು ಮೂರು ಅಡಿಗಳ ಎತ್ತರವಿರುವ ಗಣಪತಿಯನ್ನು ಪ್ರತಿಷ್ಠಾಪಿಸಲಾಗಿದೆ. ಈ ದೇವನು ಪದ್ಮಾಸನದಲ್ಲಿ ಕುಳಿತುಕೊಂಡಿದ್ದು ನಾಲ್ಕು ಕೈಗಳನ್ನು ಹೊಂದಿದ್ದಾನೆ. ಕೈಗಳಲ್ಲಿ ಪಾಶ, ಅಂಕುಶ, ಮುರಿದ ದಂತ ಮತ್ತು ಫಲವನ್ನು ಹಿಡಿದುಕೊಂಡಿದ್ದಾನೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣಗಳು ಸುಂದರವಾಗಿವೆ. ಬಾಗಿಲ ಉತ್ತರ ಭಾಗದಲ್ಲಿರುವ ಕೋಷ್ಠಗುಡಿಯು ಸಹ ದಕ್ಷಿಣದ ಕೋಷ್ಠ ಗುಡಿಯಂತೆಯೇ

ನಕ್ಷತ್ರಾಕಾರವಾಗಿದ್ದು, ಸಣ್ಣ ಸಣ್ಣ ಅರೆಗಂಬಗಳನ್ನು ಸೇರಿಸಿ ಅಲಂಕರಣೆ ಮಾಡಲಾಗಿದೆ. ಗುಡಿಯ ಒಳಭಾಗದಲ್ಲಿ ಲಕ್ಷ್ಮೀಯನ್ನು ಪ್ರತಿಷ್ಠಾಪಿಸಲಾಗಿದೆ. ಈ ದೇವಿಯು ಸುಖಾಸನದಲ್ಲಿ ಕುಳಿತುಕೊಂಡಿದ್ದಾಳೆ. ಚುತುರ್ಭುಜವನ್ನು ಹೊಂದಿರುವ ಈ ದೇವಿಯು ಕೈಗಳಲ್ಲಿ ಶಂಖ, ಚಕ್ರ, ವರದಹಸ್ತ ಮತ್ತು ಅಭಯಹಸ್ತವನ್ನು ಹೊಂದಿದ್ದಾಳೆ. ಬಾಗಿಲ ತೋರಣದ ಮೇಲೆ ಇಳಿಜಾರಾಗಿರುವಂತೆ ರಚಿಸಲಾಗಿದೆ. ಅಂತ್ಯದಲ್ಲಿ ದಂತದ ರೀತಿ ಅಲಂಕರಣದ ಕೆತ್ತನೆ ಮಾಡಲಾಗಿದೆ. ಬಾಗಿಲ ಮೇಲ್ಭಾಗದಲ್ಲಿ "ಯಾ" ಎನ್ನುವ ಅಕ್ಷರ ಬರೆಯಲಾಗಿದೆ. ಅಲ್ಲದೇ ನವರಂಗದ ವಾಯುವ್ಯ ಭಾಗದಲ್ಲಿರುವ ಕಂಬದ ಕಂಠದ ಮೇಲೆ "ವಾಯುವ್ಯ" ಎಂಬ ಬರವಣಿಗೆ ಇದೆ. ಈಶಾನ್ಯ ಕಂಬದ ಬೋಧಿಗೆಯ ಮೇಲೆ "ಇಶ" ಎಂಬ ಬರಹವಿದೆ. ಆಗ್ನೇಯ ದಿಕ್ಕಿನ ಕಂಬದ ಬೋಧಿಗೆಯ ಮೇಲೆ "ಆ, ಇ" ಎಂಬ ಅಕ್ಷರಗಳನ್ನು ಬರೆಯಲಾಗಿದೆ. ಈ ಬರಹಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ದೇವಾಲಯದ ನಿರ್ಮಾಣ ಕಾರ್ಯವು ನಿರ್ದೇಶನವನ್ನು ಪಡೆದು ಅಂದರೆ ತಾಂತ್ರಿಕ ತಜ್ಞರ ಆಜ್ಞೆಯ ಮೇರೆಗೆ ಈ ದೇವಾಲಯ ನಿರ್ಮಾಣ ಮಾಡಿದಂತೆ ಕಂಡುಬರುತ್ತದೆ. ನವರಂಗದ ಮಧ್ಯಭಾಗದಲ್ಲಿ ನಾಲ್ಕು ಹೊಯ್ಸಳ ಶೈಲಿಯ ಕಂಬಗಳಿವೆ. ಮಧ್ಯಭಾಗದಲ್ಲಿರುವ ಕಂಬಗಳಿಗೆ ಸಮಾನಾಂತರವಾಗಿ ನಕ್ಷತ್ರಾಕಾರವಾಗಿರುವ 16 ಅರೆಗಂಬಗಳನ್ನು ಸೂಕ್ಷ್ಮವಾಗಿ ಕೆತ್ತನೆ ಮಾಡಿ ಸೇರಿಸಲಾಗಿದೆ. ನವರಂಗದ ಮಧ್ಯದಲ್ಲಿ ಕಂಬಗಳ ನಡುವೆ ಚೌಕಾಕಾರ, ವೃತ್ತಾಕಾರದ ರಂಗಮಂಟಪ ನಿರ್ಮಿಸಲಾಗಿದೆ.[147] ನವರಂಗದಲ್ಲಿ ಹೊಯ್ಸಳ ಶೈಲಿಯಲ್ಲಿರುವ ೯ ಭುವನೇಶ್ವರಿಗಳಿವೆ. ಇವುಗಳನ್ನು ನಕ್ಷತ್ರಾಕಾರವಾಗಿ ರಚಿಸಿ ಒಳಭಾಗದಲ್ಲಿ ಕೀರ್ತಿಮುಖಗಳ, ಅರಳಿದ ಪದ್ಮ ಪುಷ್ಪಗಳನ್ನು ಮತ್ತು ಮಧ್ಯದಲ್ಲಿ ದೃಢಕಾಯವಾಗಿರುವ ಪದ್ಮಪುಷ್ಪದ ಮೊಗ್ಗುಗಳನ್ನು ಬಿಡಿಸಲಾಗಿದೆ. ನವರಂಗದ ದ್ವಾರವು 5 ಪಟ್ಟಿಕೆಗಳಿಂದ ಕೂಡಿದ್ದು ಪಟ್ಟಿಕೆಗಳು ಸರಳವಾಗಿ ಅಲಂಕರಣಗೊಂಡಿವೆ. ದ್ವಾರದ ಕೆಳಭಾಗದಲ್ಲಿ ಎರಡೂ ಕಡೆ ವೈಷ್ಣವ ದ್ವಾರಪಾಲಕರನ್ನು ಬಿಡಿಸಲಾಗಿದೆ. ತ್ರಿಭಂಗಿಯಲ್ಲಿ ನಿಂತಿರುವ ಇವರು ಚತುರ್ಭುಜ ಹೊಂದಿದ್ದು ಕೈಗಳಲ್ಲಿ ಶಂಖ, ಚಕ್ರ, ಗಧಾಹಸ್ತವನ್ನು ಕಾಣಬಹುದು. ದ್ವಾರದ ತೋರಣದಲ್ಲಿ ಹೊಯ್ಸಳ ಶೈಲಿಯ ನಕ್ಷತ್ರಾಕಾರದ ಚಿಕ್ಕ ಚಿಕ್ಕ ಶಿಖರಗಳನ್ನು ಬಿಡಿಸಲಾಗಿದೆ.

**ಮುಖಮಂಟಪ:-** ಮುಖಮಂಟಪವು ಮುಕ್ತವಾಗಿದೆ. ಇದರಲ್ಲಿ ಹೊಯ್ಸಳ ಶೈಲಿಯ ಎರಡು ಕಂಬಗಳ ಆಧಾರದ ಮೇಲೆ ಮುಖಮಂಟಪವನ್ನು ನಿರ್ಮಿಸಲಾಗಿದೆ. **(ಚಿ.ಸಂ.101)** ತೆರೆದ ಈ ಮುಖಮಂಟಪದ ಮೇಲ್ಛಾವಣಿಯಲ್ಲಿ ಮೂರು ಹಂತಗಳಲ್ಲಿ ಭುವನೇಶ್ವರಿಯನ್ನು ಅಷ್ಟಕೋನಾಕಾರ ಮತ್ತು ವೃತ್ತಾಕಾರವಾಗಿ ರಚಿಸಿ ಮಧ್ಯದಲ್ಲಿ ಮೂರು ವೃತ್ತಗಳನ್ನು ಮಾಡಿ ವೃತ್ತಗಳ ಮೇಲೆ ಕಮಲದ ಮೊಗ್ಗುಗಳನ್ನು ಬಿಡಿಸಲಾಗಿದೆ. **(ಚಿ.ಸಂ.102)** ಮಧ್ಯದಲ್ಲಿ

ಬಿಡಿಸಲಾಗಿರುವ ಕಮಲದ ಮೊಗ್ಗು 2 ಅಡಿ ಉದ್ದವಾಗಿದ್ದು ಕೆಳಗೆ ಬಂದಂತೆ ರಚಿಸಲಾಗಿದೆ. ಪಟ್ಟಿಕೆಗಳಲ್ಲಿ ಮಣಿಹಾರಗಳು, ಅರಳಿದ ಪದ್ಮಪುಷ್ಪಗಳನ್ನು ಬಿಡಿಸಲಾಗಿದೆ. ಈ ಮುಖಮಂಟಪದ ಮುಂದೆ ಸೋಪಾನಗಳ ಮಧ್ಯಭಾಗದಲ್ಲಿ ಭಕ್ತನೊಬ್ಬನು ದೀರ್ಘದಂಡವಾಗಿ ಮಲಗಿ ಸಾಷ್ಟಾಂಗ ನಮಸ್ಕಾರ ಮಾಡುತ್ತಿರುವಂತೆ ಬಳಪದ ಕಲ್ಲಿನಲ್ಲಿ ಕೆತ್ತನೆ ಮಾಡಲಾಗಿದೆ. **(ಚಿ.ಸಂ.103)** ಈ ರೀತಿ ಭಕ್ತನೋರ್ವನು ದೇವರಿಗೆ ಧೀರ್ಘದಂಡ ನಮಸ್ಕಾರ ಮಾಡುತ್ತಿರುವಂತೆ ಬಿಡಿಸಲಾಗಿರುವ ಈ ಶಿಲ್ಪವು ಕರ್ನಾಟಕದಲ್ಲಿ ದೊರೆಯುವ ಹೊಯ್ಸಳರ ಕಾಲದ ಯಾವುದೇ ದೇವಾಲಯದಲ್ಲಿ ಕಾಣಬರುವುದಿಲ್ಲ. ಇದೊಂದು ಈ ದೇವಾಲಯದ ವಿಶೇಷತೆಯಾಗಿದೆ. ಮುಖಮಂಟಪದ ಮುಂದೆ ದೇವಾಲಯಕ್ಕೆ ಏರಿಬರಲು ಸೋಪಾನಗಳನ್ನು ಮಾಡಲಾಗಿದೆ.

**ಅಧಿಷ್ಠಾನ:-** ಅಧಿಷ್ಠಾನವು ದೇವಾಲಯವನ್ನು ಭದ್ರಪಡಿಸುವ ಪ್ರಮುಖ ಅಂಗವಾಗಿದ್ದು ಇದು 'ಅಧಿಷ್ಠತಿ' (ಏರಿಸು, ಆಶ್ರಯ ನೀಡು) ಎಂಬ ಪದದಿಂದ ನಿಷ್ಪನ್ನವಾಗಿದೆ. [148] ಷಡ್ವರ್ಗದಲ್ಲಿ ಇದು ಮೊದಲನೆಯ ಅಂಗವಾದ ಕಾರಣ ಇದನ್ನು 'ಆದ್ಯಂಗ'ವೆಂದೂ ಕರೆಯುತ್ತಾರೆ. ಶಾಸ್ತ್ರಗ್ರಂಥ ಗಳು ಮಸೂರಕ, ವಾಸ್ತ್ವಾಧಾರ, ಕುಟ್ಟಿಮ, ಧರಾತಲ, ಧರಣಿ, ಭುವನ, ಪೃಥ್ವಿ ಮತ್ತು ಆಧಾರ ಎಂಬ ಪದಗಳನ್ನು ಅಧಿಷ್ಠಾನಕ್ಕೆ ಸಮನಾರ್ಥಕವಾಗಿ ಬಳಸಿವೆ. ಈ ದೇವಾಲಯದ ಅದಿಷ್ಠಾನದಲ್ಲಿ 5 ಪಟ್ಟಿಕಗಳಿವೆ. **(ಚಿ.ಸಂ.104)** ಅವುಗಳೆಂದರೆ ಉಪಾನ, ಜಗತಿ, ತ್ರಿಪಟ್ಟಕುಮುದ, ದಂತದ ಮಾದರಿ ಕೆತ್ತನೆ ಮಾಡಲಾಗಿದೆ. ಗರ್ಭಗೃಹದ ಅಭಿಷೇಕದ ನೀರು ಉತ್ತರಾಭಿಮುಖವಾಗಿ ಹರಿಯುವಂತೆ ಮಾಡಿ ಸಿಂಹಮುಖ ಪ್ರನಾಳವನ್ನು ನಿರ್ಮಿಸಲಾಗಿದೆ.

**ಭಿತ್ತಿ:-** ಈ ದೇವಾಲಯದ ಭಿತ್ತಿಯಲ್ಲಿ ಯಾವುದೇ ಭಿತ್ತಿ ಶಿಲ್ಪಗಳು ಕಂಡುಬರುವುದಿಲ್ಲ. ಸುತ್ತಲೂ ಸಣ್ಣ ಸಣ್ಣ ಅರೆಗಂಬಗಳನ್ನು ಮಾಡಿ ಗೋಡೆಗೆ ಹೊಂದಿಕೊಂಡಿರುವಚಿತೆ ಚೌಕಸ್ತಂಭಗಳನ್ನು ಸೇರಿಸಲಾಗಿದೆ. **(ಚಿ.ಸಂ.105)** ಈ ಕಂಬಗಳ ಮಧ್ಯದಲ್ಲಿ ದೇವಾಲಯದ ಗರ್ಭಗೃಹವನ್ನು ಬಿಟ್ಟು ಸುತ್ತಲೂ ಏಕಕಂಬ ಶಿಖರ ಮತ್ತು ದ್ವಿಕಂಬಗಳ ಮೇಲೆ ಶಿಖರವನ್ನು ರಚಿಸಲಾಗಿದೆ. ಇವುಗಳು ಕೋಷ್ಠಗಳಾಗಿದ್ದು ಇವುಗಳಲ್ಲಿ ಯಾವುದೇ ರೀತಿಯ ಶಿಲ್ಪಗಳನ್ನು ಬಿಡಿಸದೇ ಹಾಗೆ ಖಾಲಿ ಬಿಡಲಾಗಿದೆ. ಮತ್ತು ಗರ್ಭಗೃಹದ ಮೂರೂ ಭಾಗದಲ್ಲಿ ಲಕ್ಷ್ಮೀನಾರಾಯಣ, ಕೇಶವ, ಬ್ರಹ್ಮ, ವಿಷ್ಣುವಿನ ಶಿಲ್ಪಗಳನ್ನು ಕೋಷ್ಠಗುಡಿಗಳ ಒಳಗೆ ಬಿಡಿಸಲಾಗಿದೆ. [149]

**ಕಪೋತ:-** ಕಪೋತವು ದೇವಾಲಯದ ಬಹುಮುಖ್ಯ ಅಂಗವಾಗಿದೆ. ಮಳೆಯ ನೀರನ್ನು ದೇವಾಲಯದ ಗೋಡೆಯ ಮೇಲೆ ಬೀಳದಂತೆ ತಡೆಯುತ್ತದೆ. ಆದ್ದರಿಂದಲೇ ಏರು ವಿನ್ಯಾಸದ ವಲಯದಿಂದ ಇದು ಪ್ರಧಾನವಾಗಿ ಮುಂಚಾಚಿರುತ್ತದೆ. ಈ ದೇವಾಲಯದ ಕಪೋತವನ್ನು

ಕಮಾನು ರೀತಿಯಲ್ಲಿ ಎಳೆದ ಆಂಗ್ಲ ವರ್ಣಮಾಲೆಯ 'S' ಆಕಾರವಾಗಿ ಮಾಡಲಾಗಿದೆ.[150] ಕಪೋತದ ಮೇಲಿರುವ ಸೂರಿನ ಭಾಗದಲ್ಲಿ ದೇವಾಲಯದ ಸುತ್ತಲೂ ದಂತದ ಮಾದರಿಯ 'ಕೂಡು'ಗಳ ರಚನೆಯನ್ನು ಕಾಣಬಹುದಾಗಿದೆ. ಕಪೋತದ ಮೇಲಿರುವ ಕೈಪಿಡಿ ಗೋಡೆಯನ್ನು ಹಲವಾರು ಸೂಕ್ಷ್ಮ ಕೆತ್ತನೆಗಳಿಂದ ಕೂಡಿರುವಂತೆ ಮಾಡಲಾಗಿದೆ. ಈ ಹಾರದಲ್ಲಿ ದೇವಾಲಯದ ಸುತ್ತಲೂ ಹಂಸಗಳ ಸಾಲು, ಮಕರ ತೋರಣಗಳ ಸಾಲು, ಲತಾಸುರುಳಿಗಳ ಹಾಗೂ ಪುಷ್ಪಗಳ ಅಲಂಕರಣೆಯನ್ನು ಮಾಡಲಾಗಿದೆ. ಹಾರದ ಭಾಗದಲ್ಲಿ ದಕ್ಷಿಣ ದಿಕ್ಕಿನಲ್ಲಿ ಸರ್ಪ ಹಿಡಿದು ನಿಂತಿರುವ ಗರುಡನ ಕೆತ್ತನೆ ಕಾಣಬಹುದು. ಉತ್ತರಭಾಗದಲ್ಲಿ ವಿಷ್ಣುವಿನ ಕೆತ್ತನೆ ಮಾಡಲಾಗಿರುವ ದಕ್ಷಿಣ ಭಾಗದಲ್ಲಿ ಹನುಮಂತನ ಶಿಲ್ಪವಿದೆ. ಈ ಹನುಮಂತನ ಬಾಲವನ್ನು ವೃತ್ತಾಕಾರವಾಗಿ ರಚಿಸಲಾಗಿದೆ. ಅಲ್ಲದೇ ಬಲಗೈಯನ್ನು ಮೇಲಕ್ಕೆ ಎತ್ತಿ ಹಿಡಿದಿದ್ದಾನೆ. ಮತ್ತೊಂದು ಕಡೆ ವರಹಾ ಭೂದೇವಿಯ ಶಿಲ್ಪವಿದೆ. ಮೂಲೆಗಳಲ್ಲಿ ಕಳಸಗಳನ್ನು ಸೇರಿಸಲಾಗಿದೆ.

**ಶಿಖರ:–** ಶಿಖರವನ್ನು ಹೊಯ್ಸಳ ಶೈಲಿಯಲ್ಲಿ ನಿರ್ಮಿಸಲಾಗಿದ್ದು ಮೂರು ತಲಗಳನ್ನು ಹೊಂದಿದೆ. ಈ ತಲಗಳಲ್ಲಿ ನಾಲ್ಕು ದಿಕ್ಕುಗಳಲ್ಲಿ ವಿಷ್ಣುವಿನ ವಿವಿಧ ಅವತಾರಕ್ಕೆ ಸಂಬಂಧಿಸಿದ ಶಿಲ್ಪಗಳನ್ನು ಬಿಡಿಸಲಾಗಿದೆ. ಉಳಿದಂತೆ ಕೀರ್ತಿಮುಖಗಳು ಮತ್ತು ದಂತದ ಮಾದರಿಯ 'ಕೂಡುಗಳ' ಅಲಂಕರಣೆ ಕಂಡುಬರುತ್ತದೆ. ಶಿಲ್ಪಗಳನ್ನು ರಚಿಸಲು ಜೋಡಿಸಲಾಗಿದ್ದ ಕಲ್ಲುಗಳನ್ನು ಹಾಗೆ ಉಳಿಸಲಾಗಿದೆ. ಮಧ್ಯದಲ್ಲಿ ದಂತದ ರೀತಿ ಅಲಂಕರಣವನ್ನು ಶಿಖರದ ಸುತ್ತಲೂ ಮೂರು ತಲಗಳಲ್ಲಿ ಮಾಡಲಾಗಿದೆ. ಈ ಮೂರು ತಲಗಳ ಮೇಲೆ ಗ್ರೀವದ ಭಾಗವು ಸ್ವಲ್ಪ ಒಳಸರಿದಂತೆ ಮಾಡಿ ಅದರ ಮೇಲೆ ಸ್ತೂಪಿಯನ್ನು ಪದ್ಮಪುಷ್ಪವನ್ನು ಬೋರಲಾಗಿರುವಂತೆ ಪದ್ಮದಳಗಳ ರೀತಿ ನಕ್ಷತ್ರಾಕಾರವಾಗಿ ರಚಿಸಲಾಗಿದೆ. ಇದರ ಮೇಲೆ ಮೇಲ್ಮುಖವಾಗಿ ಪದ್ಮದಳಗಳನ್ನು ಬಿಡಿಸಿ ಅದರ ಮೇಲೆ ಕಲ್ಲಿನ ಕಳಸವನ್ನು ಇರಿಸಲಾಗಿದೆ. ಈ ಶಿಖರದಲ್ಲಿ ಗಿಡಗಂಟಿಗಳು ಬೆಳೆದು ಶಿಖರದ ಮೂಲ ಸ್ವರೂಪವನ್ನು ನಶಿಸಿ ಹೋದಂತೆ ಕಾಣುತ್ತದೆ.

**ಸುಖನಾಸ:–** ಶಿಖರದ ಮುಂಭಾಗದಲ್ಲಿ ಸುಖನಾಸವನ್ನು ನಿರ್ಮಿಸಲಾಗಿದ್ದು, ಸುಖನಾಸದ ಮುಂದೆ ಗರುಡನ ಶಿಲ್ಪವಿದೆ. ಸುಖನಾಸಿ ಮತ್ತು ಗರ್ಭಗೃಹದ ಭಿತ್ತಿಯ ಭಾಗದಲ್ಲಿ ಎರಡು ಚೌಕಸ್ತಂಭಗಳುಳ್ಳ ಕೋಷ್ಠಗಳನ್ನು ಮಾಡಲಾಗಿದ್ದು, ಇಲ್ಲಿ ವಿಷ್ಣುವಿನ ಅವತಾರಕ್ಕೆ ಸಂಬಂಧಿಸಿದ ಉಬ್ಬುಶಿಲ್ಪಗಳನ್ನು ಕೆತ್ತನೆ ಮಾಡಲಾಗಿದೆ. **(ಚಿ.ಸಂ.106)** ದಕ್ಷಿಣದ ಕೋಷ್ಠದಲ್ಲಿ ಉಗ್ರನರಸಿಂಹನು ಹಿರಣ್ಯ ಕಶ್ಯಪುನನ್ನು ಸಂಹರಿಸುತ್ತಿರುವ ಶಿಲ್ಪವನ್ನು ಕೆತ್ತನೆ ಮಾಡಲಾಗಿದೆ. ಉತ್ತರ ಭಾಗದಲ್ಲಿರುವ ಹಾರದಲ್ಲಿ ವರಹಾಮೂರ್ತಿಯು ಭೂದೇವಿಯನ್ನು ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡಿರುವ ಶಿಲ್ಪವಿದೆ. ಮುಖಮಂಟಪದ ಮೇಲಿರುವ ಮೇಲ್ಛಾವಣಿಯನ್ನು ಇತ್ತೀಚಿಗೆ

ಗಾರೆ ಮತ್ತು ಇಟ್ಟಿಗೆಯಿಂದ ಮಾಡಲಾಗಿದೆ. ಈ ದೇವಾಲಯದ ಉತ್ತರ ಭಾಗದಲ್ಲಿ ಒಂದು ಚೌಕಾಕಾರದ ತುಳಸಿಕಟ್ಟೆಯನ್ನು ನಿರ್ಮಿಸಲಾಗಿದೆ. ಅಲ್ಲದೆ ಈ ದೇವಾಲಯದ ಮುಂದೆ ಸುಮಾರು 30 ಅಡಿಗಳ ಎತ್ತರವಿರುವ ಗರುಡ ಸ್ತಂಭವಿದೆ. ಇದನ್ನು ಕಣಶಿಲೆಯಲ್ಲಿ ಚೌಕ ಅಷ್ಠಮುಖಗಳಂತೆ ರಚಿಸಿ ಚೌಕಾಕಾರದ ಸುಮಾರು ಮೂರು ಅಡಿ ಎತ್ತರವಿರುವ ವೇದಿಕೆಯ ಮೇಲೆ ನಿಲ್ಲಿಸಲಾಗಿದೆ. [151]

**ವರದರಾಜಸ್ವಾಮಿ ದೇವಾಲಯ–ರಾಮಸಾಗರ**

ರಾಮಸಾಗರ ಗ್ರಾಮವು ತುರುವೇಕೆರೆಯಿಂದ ವಾಯುವ್ಯಕ್ಕೆ 15 ಕಿ.ಮೀ.ದೂರದಲ್ಲಿದೆ ಈ ಗ್ರಾಮದ ಸ್ಥಳಪುರಾಣದ ಪ್ರಕಾರ ರಾಮನು ಇಲ್ಲಿರುವ ಸಾಗರದ ರೀತಿಯಲ್ಲಿರುವ ಕೆರೆಯಲ್ಲಿ ಸ್ನಾನ ಮಾಡಿದನೆಂದು ನಂತರ ಕೆರೆಯ ದಂಡೆಯ ಮೇಲಿದ್ದ ಈ ಗ್ರಾಮಕ್ಕೆ ರಾಮಸಾಗರವೆಂದು ಹೆಸರು ಬಂದಿತ್ತೆಂದು ಹೇಳಲಾಗಿದೆ.[152] ಈ ಗ್ರಾಮದ ಪೂರ್ವ ಭಾಗದಲ್ಲಿ ವರದರಾಜ ಸ್ವಾಮಿಯ ದೇವಾಲಯವನ್ನು ನಿರ್ಮಾಣ ಮಾಡಲಾಗಿದೆ. ಇದೊಂದು ಏಕಕೂಟ ದೇವಾಲಯ ವಾಗಿದ್ದು ಇದರಲ್ಲಿ ಒಂದು ಗರ್ಭಗೃಹ, ಸುಖನಾಸಿ, ನವರಂಗ, ಮುಖಮಂಟಪ ಹಾಗೂ ಮಹಾಮಂಟಪ ಮತ್ತು ದ್ವಾರಮಂಟಪಗಳು ಕಾಣಬರುತ್ತವೆ. ಮೂಲತಃ ಈ ದೇವಾಲಯ ಹೊಯ್ಸಳ ಕಾಲದಲ್ಲಿ ನಿರ್ಮಾಣ ಮಾಡಲಾಗಿದ್ದು, ಪ್ರಕೃತಿ ವಿಕೋಪಕ್ಕೆ ತುತ್ತಾಗಿ ನಶಿಸಿ ಹೋಗುತ್ತಿದ್ದ ಈ ದೇವಾಲಯವನ್ನು ನಂತರ ಕಾಲದಲ್ಲಿ ಅಧಿಕಾರಕ್ಕೆ ಬಂದ ವಿಜಯನಗರದ ಅರಸರ ಕಾಲದಲ್ಲಿ ಸಂಪೂರ್ಣವಾಗಿ ಜೀರ್ಣೋದ್ಧಾರ ಮಾಡಲಾಗಿದೆ.[153]

**ಗರ್ಭಗೃಹ:–** ಗರ್ಭಗೃಹವು 8X8 ಅಡಿ ಉದ್ದ ಮತ್ತು ಅಗಲವಾಗಿದ್ದು, ಚೌಕಾಕಾರವಾಗಿದೆ. ಮಧ್ಯ ಭಾಗದಲ್ಲಿ ಎರಡು ಅಡಿ ಎತ್ತರದ ಪದ್ಮಪೀಠದ ಮೇಲೆ ವರದರಾಜಸ್ವಾಮಿ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. **(ಚಿ.ಸಂ.107)** ಈ ದೇವನು ಸಮಭಂಗಿಯಲ್ಲಿ ನಿಂತಿದ್ದು ಚತುರ್ಭುಜವನ್ನು ಹೊಂದಿರುವ ದೇವನು ಕೈಗಳಲ್ಲಿ ಶಂಖ, ಚಕ್ರ, ಗಧ ಮತ್ತು ವರದ ಹಸ್ತವನ್ನು ಹೊಂದಿದ್ದಾನೆ. ಮೈಮೇಲೆ ವಿವಿಧ ಬಗೆಯ ಆಭರಣಗಳು ಸುಂದರವಾಗಿ ಮೂಡಿಬಂದಿದೆ. ತಲೆಯ ಮೇಲೆ ಕಿರೀಟವನ್ನು ರಚಿಸಲಾಗಿದೆ. ಈ ದೇವ ಮೂರ್ತಿಯ ಹಿಂದೆ ಪಂಚ ಲೋಹದಲ್ಲಿ ಮಾಡಲಾದ ಪ್ರಭಾವಳಿ ಇದೆ. ಪುಷ್ಪಾಲಂಕೃತವಾದ ಈ ಪ್ರಭಾವಳಿಯ ಮೇಲ್ಭಾಗದಲ್ಲಿ ಕೀರ್ತಿ ಮುಖವಿದೆ. ಈ ದೇವಮೂರ್ತಿ ಇಕ್ಕೆಲಗಳಲ್ಲಿ ನಾಗ ಸರ್ಪಗಳು ಬಂಧನದಲ್ಲಿರುವಂತೆ ಕಲ್ಲಿನಲ್ಲಿ ಕೆತ್ತಲಾಗಿದೆ. ಗರ್ಭಗುಡಿಯ ಭಿತ್ತಿಗೆ ಇತ್ತೀಚೆಗೆ ಬಿಳಿವರ್ಣದ ಹೆಂಚುಗಳನ್ನು ಹಾಕಲಾಗಿದ್ದು ಜೀರ್ಣೋದ್ಧಾರ ಮಾಡಲಾಗಿದೆ. ಮೇಲ್ಛಾವಣಿಯಲ್ಲಿ

ನಕ್ಷತ್ರಾಕಾರದ ಭುವನೇಶ್ವರಿ ಕಂಡುಬರುತ್ತದೆ. ಇದರ ಮಧ್ಯದಲ್ಲಿ ಅರಳಿದ ಕಮಲದ ಪುಷ್ಪವಿದೆ. ಈ ದೇವಾಲಯವು ಸಂಪೂರ್ಣವಾಗಿ ಕಣ ಶಿಲೆಯಲ್ಲಿ ನಿರ್ಮಾಣವಾಗಿದೆ. ಇದರಲ್ಲಿರುವ ಮೂರ್ತಿಶಿಲ್ಪಗಳು ರಚಿಸಲ್ಪಟ್ಟಿದೆ. ಗರ್ಭಗೃಹದ ಬಾಗಿಲು ಸರಳವಾಗಿದ್ದು ಲಲಾಟಬಿಂಬದಲ್ಲಿ ಯಾವುದೇ ಕೆತ್ತನೆಯು ಕಂಡುಬರುವುದಿಲ್ಲ.

**ಸುಖನಾಸಿ**:– ಸುಖನಾಸಿಯು ಗರ್ಭಗೃಹದಷ್ಟೇ ಉದ್ದ ಮತ್ತು ಅಗಲ ಹೊಂದಿದ್ದು ಚೌಕಾಕಾರವಾಗಿದೆ. ಸುಖನಾಸಿಯಲ್ಲಿ ಯಾವುದೇ ಮೂರ್ತಿ ಶಿಲ್ಪಗಳು ಕಂಡುಬರುವುದಿಲ್ಲ. ನೆಲಕ್ಕೆ ಇತ್ತೀಚೆಗೆ ಗ್ರಾನೈಟ್ ಶಿಲೆಯನ್ನು ಹಾಸಲಾಗಿದೆ. ಸುಖನಾಸಿಯ ಮೇಲಾವಣಿಯಲ್ಲಿ ಭುವನೇಶ್ವರಿಯನ್ನು ನಿರ್ಮಿಸದೇ ಕಣಶಿಲೆಯ ಕಲ್ಲು ಚಪ್ಪಡಿಗಳನ್ನು ಹಾಸಿ ಮೇಲ್ಛಾವಣಿಯನ್ನು ನಿರ್ಮಿಸಲಾಗಿದೆ.

**ನವರಂಗ**:– ನವರಂಗವು 25X25 ಉದ್ದ ಮತ್ತು ಅಗಲವಾಗಿದ್ದು ಚೌಕಾಕಾರವಾಗಿದೆ. ನವರಂಗದ ಮಧ್ಯದಲ್ಲಿ ಆರು ಅಡಿ ಎತ್ತರವಿರುವ ನಾಲ್ಕು ಕಂಬಗಳಿವೆ. ಕಂಬಗಳು ಚೌಕ ಹದಿನಾರು ಮೂಲೆಗಳನ್ನು ಹೊಂದಿದ್ದು ವಿಜಯನಗರ ಶೈಲಿಯಲ್ಲಿವೆ. **(ಚಿ.ಸಂ.108)** ಕಂಬಗಳ ಮೇಲೆ ವಿಷ್ಣು, ಯೋಗನರಸಿಂಹ ಮುಂತಾದ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ಕಣಶಿಲೆಯ ಕಲ್ಲು ಚಪ್ಪಡಿಗಳನ್ನು ಹಾಕಿ ಮೇಲ್ಛಾವಣಿ ನಿರ್ಮಿಸಲಾಗಿದ್ದು ಮಧ್ಯಭಾಗದಲ್ಲಿ ನಕ್ಷತ್ರಾಕಾರದ ಭುವನೇಶ್ವರಿ ಕಂಡುಬರುತ್ತದೆ. ಭುವನೇಶ್ವರಿಯ ಮಧ್ಯಭಾಗದಲ್ಲಿ ಅರಳಿದ ಕಮಲದ ಪುಷ್ಪವನ್ನು ಬಿಡಿಸಲಾಗಿದೆ. ನವರಂಗ ಬಲಭಾಗದಲ್ಲಿ ಉತ್ತರಾಭಿಮುಖವಾಗಿ ನಕ್ಷತ್ರಾಕಾರದ ಪೀಠದ ಮೇಲೆ ಪದ್ಮಾಸನದಲ್ಲಿ ಕುಳಿತಿರುವ ಲಕ್ಷ್ಮಿದೇವಿಯನ್ನು ಮತ್ತು ಯತಿಶ್ರೀ ರಾಮಾನುಜಾಚಾರ್ಯರ ಮೂರ್ತಿಶಿಲ್ಪವನ್ನು ಇರಿಸಲಾಗಿದೆ. ಪದ್ಮಾಸನದಲ್ಲಿ ಕುಳಿತಿರುವ ಲಕ್ಷ್ಮೀದೇವಿಯು ಚತುರ್ಭುಜವನ್ನು ಹೊಂದಿದ್ದು ಕೈಗಳಲ್ಲಿ ಶಂಖ, ಚಕ್ರ, ವರದಹಸ್ತ, ಅಭಯ ಹಸ್ತವನ್ನು ಹೊಂದಿದ್ದಾಳೆ. ಈ ದೇವಿಯ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿ ಮೂಡಿಬಂದಿದೆ. ಪಕ್ಕದಲ್ಲಿ ನಕ್ಷತ್ರಾಕಾರದ ಪೀಠದ ಮೇಲೆ ವಿಷ್ಣುವಿನ ಶಿಲ್ಪವೊಂದಿದ್ದು ಇದು ಸುಮಾರು ನಾಲ್ಕು ಅಡಿ ಎತ್ತರವನ್ನು ಹೊಂದಿದೆ. ಶಂಖ, ಚಕ್ರ, ಗಧಾ ಮತ್ತು ಕಟಿ ಹಸ್ತವನ್ನು ಒಳಗೊಂಡಿದ್ದು ಮೈಮೇಲೆ ವಿವಿಧ ಬಗೆಯ ವಸ್ತ್ರಾಭರಣಗಳನ್ನು ಬಿಡಿಸಲಾಗಿದ್ದು ಸುಂದರವಾಗಿವೆ. ಪ್ರಭಾವಳಿಯಲ್ಲಿ ಬಳ್ಳಿ ಸುರುಳಿ ಕೀರ್ತಿಮುಖವಿದೆ. ಗರ್ಭಗೃಹದ ಬಾಗಿಲು ಸರಳವಾಗಿದ್ದು ಪಟ್ಟಿಕೆಗಳಲ್ಲಿ ಯಾವುದೇ ರೀತಿಯ ಅಲಂಕರಣದ ಕೆತ್ತನೆ ಕಾಣಬರುವುದಿಲ್ಲ..[154]

**ಅಂತರಾಳ**:– ದೇವಾಲದ ಮುಂಭಾಗದಲ್ಲಿ ತೆರೆದ ಅಂತರಾಳ ಕಂಡುಬರುತ್ತದೆ, ವಿಜಯನಗರ ಶೈಲಿಯ ಎರಡು ಪ್ರಧಾನ ಕಂಬಗಳ ಮೇಲೆ ಕಲ್ಲಿನ ತೊಲೆಗಳನ್ನು ಹಾಕಿ ಕಲ್ಲು ಚಪ್ಪಡಿಗಳಿಂದ

ಮೇಲ್ಛಾವಣಿ ನಿರ್ಮಿಸಲಾಗಿದೆ. ಭಕ್ತಾದಿಗಳ ವಿಶ್ರಾಂತಿಗಾಗಿ ಎರಡೂ ಕಡೆ ಜಗತಿಯನ್ನು ನಿರ್ಮಿಸಲಾಗಿದೆ. ಇದರ ಪಕ್ಕದಲ್ಲಿ ಬಳಪದ ಕಲ್ಲಿನಲ್ಲಿ ಮಾಡಲಾದ ಬಲಿ ಪೀಠವಿದೆ.

**ಮಹಾಮಂಟಪ**:- ನವರಂಗದ ಮುಂಭಾಗದಲ್ಲಿ ಮಂಟಪವನ್ನು ನಿರ್ಮಾಣ ಮಾಡಲಾಗಿದ್ದು 25X25 ಅಡಿ ಉದ್ದ ಮತ್ತು ಅಗಲವಾಗಿದೆ. ಇದರಲ್ಲಿ ಚೌಕಾಕಾರವಾಗಿರುವ ಸುಮಾರು ಆರು ಅಡಿ ಎತ್ತರವಿರುವ ನಾಲ್ಕು, ಎಂಟು ಮತ್ತು ಹದಿನಾರು ಮುಖವಿರುವ ಕಂಬಗಳನ್ನು ನಿಲ್ಲಿಸಿ ಮಹಾಮಂಟಪ ನಿರ್ಮಿಸಲಾಗಿದೆ ಮತ್ತು ಇಂತಹ ಹದಿನಾರು ಕಂಬಗಳು ಗೋಡೆಗೆ ಹೊಂದಿಕೊಂಡಂತೆ ಕಂಡುಬರುತ್ತವೆ. ಮಹಾಮಂಟಪಕ್ಕೆ ಗಾಳಿ ಬೆಳಕಿನ ವ್ಯವಸ್ಥೆಗೆ ದೊಡ್ಡ ದೊಡ್ಡ ಜಾಲಾಂಧ್ರಗಳನ್ನು ಗೋಡೆಗೆ ಅಳವಡಿಸಲಾಗಿದೆ. ಕಂಬಗಳ ಪೀಠಭಾಗದಲ್ಲಿ ಭಕ್ತದಂಪತಿಗಳು, ಆಂಜನೇಯ, ಮುಂತಾದ ಉಬ್ಬುಶಿಲ್ಪಗಳ ಕೆತ್ತನೆಯನ್ನು ಮಾಡಲಾಗಿದೆ. [155]

**ದ್ವಾರಮಂಟಪ**:- ದೇವಾಲಯಕ್ಕೆ ಪ್ರವೇಶಿಸಲು ಮಹಾದ್ವಾರವನ್ನು ನಿರ್ಮಾಣ ಮಾಡಲಾಗಿದ್ದು, ದ್ವಾರ ಮಂಟಪವನ್ನು ಸಹ ಒಳಭಾಗ ಹಾಗೂ ಹೊರ ಭಾಗದಲ್ಲಿ ವಿಜಯನಗರ ಶೈಲಿಯ ವೃತ್ತಾಕಾರವಾದ ಎರಡೆರಡು ಕಂಬಗಳನ್ನು ನಿಲ್ಲಿಸಿ ಅವುಗಳ ಮೇಲೆ ಕಣಶಿಲೆಯ ಕಲ್ಲು ಚಪ್ಪಡಿಗಳನ್ನು ಹಾಸಿ ಮೇಲ್ಛಾವಣಿ ನಿರ್ಮಿಸಲಾಗಿದೆ. **(ಚಿ.ಸಂ.109)** ಮಂಚಬಂಧ ಅದಿಷ್ಠಾನದ ಮೇಲೆ ನಿರ್ಮಾಣವಾಗಿರುವ ಈ ದ್ವಾರಮಂಟಪದ ಬಾಗಿಲು ಸರಳವಾಗಿದ್ದು ಮೇಲ್ಭಾಗದಲ್ಲಿ ಕೂಡುಗಳ ರಚನೆಯಿದೆ. ಒಳ ಹಾಗೂ ಹೊರ ಭಾಗಗಳಲ್ಲಿ ಚೌಕಾಕರದ ವೇದಿಕೆಯನ್ನು ನಿರ್ಮಿಸಲಾಗಿದೆ.

**ಅಧಿಷ್ಠಾನ**:- ಅಧಿಷ್ಠಾನವು 3 ಅಡಿ ಎತ್ತರವಿದ್ದು ಕಣ ಶಿಲೆಯನ್ನು ಉಪಯೋಗಿಸಿ ನಿರ್ಮಿಸಲಾಗಿದೆ. ಮೂರು ಪಟ್ಟಿಕೆಗಳಿದ್ದು ಹಿನ್ಸರಿತ ಮತ್ತು ಮುನ್ಸರಿತದಂತೆ ಜೋಡಿಸಲಾಗಿದೆ. ಯಾವುದೇ ಅಲಂಕರಣೆ ಇಲ್ಲದೆ ಸರಳವಾಗಿದೆ. **(ಚಿ.ಸಂ.110)**

**ಭಿತ್ತಿ**:- ಕಣಶಿಲೆಯ ಕಲ್ಲು ಚಪ್ಪಡಿಗಳಿಂದ ಭಿತ್ತಿಯನ್ನು ನಿರ್ಮಿಸಲಾಗಿದ್ದು ಯಾವುದೇ ಭಿತ್ತಿ ಶಿಲ್ಪಗಳು ಕಂಡುಬರುವುದಿಲ್ಲ. ಮಹಾಮಂಟಪದ ಭಿತ್ತಿಯಲ್ಲಿ ದೊಡ್ಡ ಜಾಲಾಂಧ್ರಗಳನ್ನು ಉಪಯೋಗಿಸಲಾಗಿದೆ, ಉಳಿದಂತೆ ದೇವಾಲಯದ ಸುತ್ತಲೂ ಭಿತ್ತಿ ಸರಳವಾಗಿದೆ. **(ಚಿ.ಸಂ.111)**

**ಕಪೋತ**:- ಕಪೋತವು ಒಂದು ಅಡಿ ಮುಂಚಾಚಿದ್ದು ಸರಳವಾಗಿದೆ. ಆದರೆ ಮಹಾಮಂಟಪದ ಕಪೋತವನ್ನು ಬೆಣಚುಕಲ್ಲಿನ ಚಪ್ಪಡಿಗಳನ್ನು ಇಳಿಜಾರಾಗಿ ಮಾಡಿ ನಿರ್ಮಿಸಲಾಗಿದೆ. ಮಳೆಯ ನೀರು ಛಾವಣಿಯಿಂದ ಹೊರಬರಲು ಅಲ್ಲಲ್ಲಿ ಪ್ರನಾಳಗಳ ರಚನೆಯನ್ನು ಕಾಣಬಹುದು.

**ಶಿಖರ**:–ಪ್ರಾಚೀನ ದೇವಾಲಯದ ಶಿಖರವನ್ನು ಈಗ ಹೊಸದಾಗಿ ಜೀರ್ಣೋದ್ಧಾರ ಗೊಳಿಸಲಾಗುತ್ತಿದೆ. **(ಚಿ.ಸಂ.112)** ಶಿಖರದ ನಾಲ್ಕು ದಿಕ್ಕುಗಳಲ್ಲಿಯೂ ದೇವದೇವತೆಯರ ಮೂರ್ತಿಶಿಲ್ಪಗಳನ್ನು ಕಾಣಬಹುದು. ಸ್ತೂಫಿಯ ನಾಲ್ಕು ದಿಕ್ಕುಗಳಲ್ಲಿ ಕೀರ್ತಿಮುಖಗಳನ್ನು ನಿರ್ಮಾಣ ಮಾಡಲಾಗಿದೆ. ಮೇಲ್ಭಾಗದಲ್ಲಿ ಕಳಶ ಇರಿಸಲಾಗಿದೆ. ಈ ದೇವಾಲಯದ ಎಡಭಾಗದಲ್ಲಿ ಚಿಕ್ಕದೊಂದು ಗುಡಿಯನ್ನು ಮಾಡಿ ಅದರ ಒಳಗೆ ಲಕ್ಷ್ಮೀದೇವಿಯನ್ನು ಪ್ರತಿಷ್ಠಾಪಿಸಲಾಗಿದೆ. ಪದ್ಮಾಸನದಲ್ಲಿ ಕುಳಿತಿರುವ ಈ ದೇವಿಯು ನಾಲ್ಕು ಕೈಗಳನ್ನು ಹೊಂದಿದ್ದು ಕೈಗಳಲ್ಲಿ ಪದ್ಮ, ವರದ ಹಸ್ತ, ಅಭಯ ಅಸ್ತವನ್ನು ಹೊಂದಿದ್ದಾಳೆ.

**ಪ್ರಾಕಾರ**:– ಗಾರೆ ಮತ್ತು ಕಲ್ಲುಗಳಿಂದ ಇತ್ತೀಚೆಗೆ ಪ್ರಕಾರ ನಿರ್ಮಿಸಲಾಗಿದೆ. ದೇವಾಲಯದ ಮುಂದೆ ಸುಮಾರು 20 ಅಡಿ ಎತ್ತರದ ಗರುಡಸ್ತಂಭವನ್ನು ಸ್ಥಾಪಿಸಲಾಗಿದೆ. ದೇವಾಲಯಕ್ಕೆ ಏರಿಬರಲು ಸೋಪಾನ ನಿರ್ಮಿಸಲಾಗಿದೆ.

**ಚನ್ನಕೇಶವ ದೇವಾಲಯ–ಬೆನಕನಕೆರೆ**

ಬೆನಕನಕೆರೆಯ ವಾಯುವ್ಯ ಭಾಗದಲ್ಲಿ ನಿರ್ಮಿಸಲಾಗಿರುವ ಚನ್ನಕೇಶವ ದೇವಾಲಯವನ್ನು ಪೂರ್ವಾಭಿಮುಖವಾಗಿ ಕಣಶಿಲೆಯ ಕಲ್ಲನ್ನು ಉಪಯೋಗಿಸಿ ನಿರ್ಮಿಸಲಾಗಿದೆ. ಇದೊಂದು ಏಕಕೂಟ ದೇವಾಲಯವಾಗಿದ್ದು ಸಾಕಷ್ಟು ನಿರ್ಲಕ್ಷ್ಯಕ್ಕೆ ಒಳಗಾದಂತೆ ಕಂಡುಬರುತ್ತದೆ. ವಿಜಯನಗರ ಕಾಲದ ಕಲಾಶೈಲಿಯಲ್ಲಿ ಈ ದೇವಾಲಯವನ್ನು ನಿರ್ಮಾಣ ಮಾಡಲಾಗಿದೆ.[156]

**ಗರ್ಭಗೃಹ**:– ಗರ್ಭಗೃಹವು 8X8 ಅಡಿ ಉದ್ದ ಮತ್ತು ಅಗಲವಾಗಿದ್ದು ಚೌಕಾಕಾರವಾಗಿದೆ. ಇದರ ಮಧ್ಯದಲ್ಲಿ ಸುಮಾರು ಎರಡು ಅಡಿ ಎತ್ತರವಿರುವ ಗರುಡ ಪೀಠದ ಮೇಲೆ ಸುಮಾರು 5 ಅಡಿ ಎತ್ತರವಿರುವ ಚನ್ನಕೇಶವ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. **(ಚಿ.ಸಂ.113)** ಸಮಭಂಗಿಯಲ್ಲಿ ನಿಂತಿರುವ ಈ ದೇವನು ಚತುರ್ಭುಜ ಹೊಂದಿದ್ದು ಕೈಗಳಲ್ಲಿ ಶಂಖ, ಚಕ್ರ, ಗಧಾ ಮತ್ತು ಪದ್ಮವನ್ನು ಹಿಡಿದುಕೊಂಡಿದ್ದಾನೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣಗಳು ಆಕರ್ಷಕವಾಗಿವೆ. ಸುಂದರವಾಗಿರುವ ಈ ದೇವನ ಇಕ್ಕೆಲಗಳಲ್ಲಿ ಕಮಲ ಮತ್ತು ಫಲವನ್ನು ಹಿಡಿದು ನಿಂತಿರುವ ಸ್ತ್ರೀ ದೇವತೆಗಳಿದ್ದಾರೆ. ಪ್ರಭಾವಳಿಯಲ್ಲಿ ಸಿಂಹಗಳು, ಗೋವುಗಳ ಸಾಲು, ಪದ್ಮಧಳಗಳ ಅಲಂಕರಣೆಯಿದ್ದು, ಪ್ರಭಾವಳಿಯ ಮೇಲ್ಭಾಗದಲ್ಲಿ ಕೀರ್ತಿಮುಖವಿದೆ. ಗರ್ಭಗೃಹದ ಮೇಲ್ಭಾವಣಿಯಲ್ಲಿ ನಕ್ಷತ್ರಾಕಾರದ ಭುವನೇಶ್ವರಿಯಿದ್ದು ಮಧ್ಯಭಾಗದಲ್ಲಿ ನಾಗಬಂಧ ವೃತ್ತವನ್ನು ಮಾಡಿ ಮಧ್ಯದಲ್ಲಿ ಅರಳಿದ ಪದ್ಮ ಪುಷ್ಪವನ್ನು ಬಿಡಿಸಲಾಗಿದೆ. ಒಂದು

ನಾಗ ಸರ್ಪದ ಕೊರಳಿಗೆ ಮತ್ತೊಂದು ಸರ್ಪದ ಬಾಲ ಸುತ್ತಿಕೊಂಡಿರುವಂತೆ ಬಹಳ ಸುಂದರವಾಗಿ ಬಿಡಿಸಲಾಗಿದೆ. ಈ ರೀತಿಯ ಭುವನೇಶ್ವರಿ ತುರುವೇಕೆರೆಯ ದೇವಾಲಯಗಳಲ್ಲಿ ಕಾಣಬರದಿರುವುದು ಒಂದು ವಿಶೇಷತೆಯಾಗಿದೆ. ಗರ್ಭಗೃಹದ ಬಾಗಿಲು ಸರಳವಾಗಿದ್ದು ಯಾವುದೇ ಮೂರ್ತಿ ಶಿಲ್ಪಗಳ ಕೆತ್ತನೆ ಕಂಡುಬರುವುದಿಲ್ಲ. ಲಲಾಟಬಿಂಬದಲ್ಲಿ ಯಾವುದೇ ಕೆತ್ತನೆಗಳಿಲ್ಲದೆ ಹಾಗೇ ಉಳಿಸಲಾಗಿದೆ.

**ಸುಖನಾಸಿ:-** ಸುಖನಾಸಿಯು ಗರ್ಭಗೃಹದಷ್ಟೇ ಉದ್ದಗಲವಾಗಿದ್ದು ಚೌಕಾಕಾರವಾಗಿದೆ. ಇದರಲ್ಲಿ ಯಾವುದೇ ಮೂರ್ತಿಶಿಲ್ಪಗಳು ಕಂಡುಬರುವುದಿಲ್ಲ.

**ನವರಂಗ:-** ನವರಂಗವು ಸುಮಾರು 25x25 ಅಡಿ ಉದ್ದ ಮತ್ತು ಅಗಲವಾಗಿದ್ದು ಚೌಕಾಕಾರವಾಗಿದೆ. ಇದರ ಮಧ್ಯದಲ್ಲಿ ವಿಜಯನಗರ ಶೈಲಿಯ ನಾಲ್ಕು ಕಂಬಗಳಿವೆ ಇವುಗಳನ್ನು ಚೌಕ ಮತ್ತು ಅಷ್ಠ ಮುಖಗಳಲ್ಲಿ ಕೆತ್ತನೆ ಮಾಡಿ ಜೋಡಿಸಲಾಗಿದೆ. **(ಚಿ.ಸಂ.114)** ದೇವಾಲಯದ ಅಂತರ್ಭಿತ್ತಿಯಲ್ಲಿ ಇತ್ತೀಚೆಗೆ ಕೆಲವು ವರ್ಣ ಚಿತ್ರಗಳನ್ನು ಬಿಡಿಸಲಾಗಿದೆ. ಅವುಗಳಲ್ಲಿ ಆಂಜನೇಯ, ಗರುಢ, ರಾಮ ಲಕ್ಷ್ಮಣರ ಚಿತ್ರಗಳನ್ನು ಬಿಡಿಸಲಾಗಿದೆ.

**ಮುಖಮಂಟಪ:-** ಮುಖಮಂಟಪದಲ್ಲಿ ನಾಲ್ಕು ಕಂಬಗಳು ಕಂಡುಬರುತ್ತವೆ. ಇವುಗಳಲ್ಲಿ ಮಧ್ಯದ ಎರಡು ಕಂಬಗಳನ್ನು ಚೌಕ, ಅಷ್ಟಮುಖವಾಗಿ ಕೆತ್ತನೆ ಮಾಡಲಾಗಿದೆ. ಮುಖಮಂಟಪದ ಮುಂದಿದ್ದ ಸೋಪಾನ ಶಿಥಿಲವಾಗಿದೆ.

**ಅಧಿಷ್ಠಾನ:-** ವಿಜಯನಗರ ಶೈಲಿಯ ಅಧಿಷ್ಠಾನವನ್ನು ನಾವು ಇಲ್ಲಿ ಕಾಣಬಹುದಾಗಿದೆ. ಅಧಿಷ್ಠಾನವನ್ನು ಕಣ ಶಿಲೆಯ ಕಲ್ಲುಚಪ್ಪಡಿಗಳನ್ನು ಸೇರಿಸಿ ನಿರ್ಮಿಸಲಾಗಿದೆ. ಉತ್ತರ ಭಾಗದಲ್ಲಿ ಗರ್ಭಗೃಹದ ಅಭಿಷೇಕದ ನೀರು ಹೊರಬರಲು ಪ್ರನಾಳ ಮಾಡಲಾಗಿದೆ. ಗರ್ಭಗೃಹದ ಮೇಲಿನ ಭಿತ್ತಿಯನ್ನು ಕಲ್ಲುದಿಮ್ಮಿಗಳನ್ನು ಒಂದರ ಮೇಲೊಂದರಂತೆ ಕ್ರಮಬದ್ಧವಾಗಿ ಜೋಡಿಸಿ ನಿರ್ಮಿಸಲಾಗಿದೆ. ಆದರೆ ಶಿಖರದಲ್ಲಿ ಗಿಡಗಂಟಿಗಳು ಬೆಳೆದು ಈಗ ಶಿಥಿಲಾವಸ್ಥೆಯಲ್ಲಿದೆ. ಗರ್ಭಗೃಹದ ಮೇಲೆ ನಿರ್ಮಿಸಲಾಗಿರುವ ಶಿಖರವನ್ನು ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಿಸಲಾಗಿದ್ದು ಇದೂ ಸಹ ಶಿಥಿಲಾವಸ್ಥೆಯಲ್ಲಿದೆ. ನವರಂಗ ಮುಖಮಂಟಪದ ಭಿತ್ತಿಯನ್ನು ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಿಸಲಾಗಿದೆ. ಮುಖಮಂಟಪದ ಮೇಲೆ ಮೂರು ಕೋಷ್ಠ ಗುಡಿಗಳಿದ್ದು ಒಳಗಿದ್ದ ಮೂರ್ತಿ ಶಿಲ್ಪಗಳು ಈಗ ಕಣ್ಮರೆಯಾಗಿವೆ. ಈ ದೇವಾಲಯದ ಮುಂದೆ ಸುಮಾರು 30 ಅಡಿ ಎತ್ತರವಿರುವ ಗರುಡಸ್ತಂಭವನ್ನು ಚೌಕಾಕಾರದ ಕಾಡುಗಲ್ಲಿನ ವೇದಿಕೆಯ ಮೇಲೆ ನಿಲ್ಲಿಸಲಾಗಿದೆ. [157] **(ಚಿ.ಸಂ.115)**

**ಚನ್ನಕೇಶವ ದೇವಾಲಯ–ಸೂಳೆಕೆರೆ**

ಸೂಳೆಕೆರೆಯ ನೈರುತ್ಯ ಭಾಗದಲ್ಲಿ ಪೂರ್ವಾಭಿಮುಖವಾಗಿ ಚನ್ನಕೇಶವ ದೇವಾಲಯವನ್ನು ನಿರ್ಮಾಣ ಮಾಡಲಾಗಿದೆ. ಏಕಕೂಟ ದೇವಾಲಯವಾಗಿದ್ದು ಇದರಲ್ಲಿ ಗರ್ಭಗೃಹ, ಸುಖನಾಸಿ, ನವರಂಗ ಮತ್ತು ಮುಖಮಂಟಪ ಕಂಡುಬರುತ್ತವೆ. ಈ ದೇವಾಲಯವನ್ನು ಸಂಪೂರ್ಣವಾಗಿ ಕಣಶಿಲೆಯಲ್ಲಿ ನಿರ್ಮಾಣ ಮಾಡಲಾಗಿದ್ದು, ಸ್ಥಳೀಯರ ನಿರ್ಲಕ್ಷ್ಯಕ್ಕೆ ತುತ್ತಾಗಿ ದೇವಾಲಯವು ಶಿಥಿಲಾವಸ್ಥೆಯಲ್ಲಿದೆ. ಈ ದೇವಾಲಯದ ಕಂಬಗಳು ಮತ್ತು ಮೂರ್ತಿಶಿಲ್ಪಗಳ ಲಕ್ಷಣಗಳು ವಿಜಯನಗರ ಶೈಲಿಯನ್ನು ಹೋಲುತ್ತದೆ.

**ಗರ್ಭಗೃಹ:–** ಗರ್ಭಗೃಹವು ಸುಮಾರು 8X8 ಅಡಿ ಉದ್ದ ಮತ್ತು ಅಗಲವಾಗಿದ್ದು ಚೌಕಾಕಾರವಾಗಿದೆ. ಇದರ ಮಧ್ಯದಲ್ಲಿ ಉಪಪೀಠದ ಮೇಲೆ ಸುಮಾರು ಒಂದು ಅಡಿ ಎತ್ತರವಿರುವ ಗರುಡಪೀಠದ ಮೇಲೆ ಚನ್ನಕೇಶವ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. **(ಚಿ.ಸಂ.116)** ಈ ದೇವನು ಸುಮಾರು 5 ಅಡಿ ಎತ್ತರವಾಗಿದ್ದು ಸಮಭಂಗಿಯಲ್ಲಿ ನಿಂತಿದ್ದಾನೆ. ಈ ದೇವನು ಚತುರ್ಭುಜ ಹೊಂದಿದ್ದು ಕೈಗಳಲ್ಲಿ ಶಂಖ, ಚಕ್ರ, ಗಧಾ ಮತ್ತು ಪದ್ಮವನ್ನು ಹಿಡಿದುಕೊಂಡಿದ್ದಾನೆ. ಈ ದೇವನ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣಗಳು ಕಲಾತ್ಮಕ ಕೆತ್ತನೆಗಳಂದ ಕೂಡಿವೆ. ಇಕ್ಕೆಲಗಳಲ್ಲಿ ಚಾಮರವನ್ನು ಹಿಡಿದು ನಿಂತಿರುವ ಚಾಮರಧಾರಿಣಿಯರಿದ್ದಾರೆ. ಪ್ರಭಾವಳಿಯಲ್ಲಿ ವ್ಯಾಳದ ಬಾಯಿಯಿಂದ ಊರ್ಧ್ವಮುಖವಾಗಿ ಹೊರಟಂತೆ ಬಿಡಿಸಲಾಗಿರುವ ಬಳ್ಳಿಸುರುಳಿಗಳ ಕೀರ್ತಿಮುಖವಿದೆ. ಗರ್ಭಗೃಹದ ಮೇಲ್ಛಾವಣಿಯಲ್ಲಿ ಕಣಶಿಲೆಯಲ್ಲಿ ನಕ್ಷತ್ರಾಕಾರದ ಭುವನೇಶ್ವರಿಯಿದೆ. ಈ ಭುವನೇಶ್ವರಿಯ ಮಧ್ಯದಲ್ಲಿ ಅರಳಿದ ಕಮಲದ ಪುಷ್ಪವನ್ನು ಬಿಡಿಸಲಾಗಿದೆ. ಗರ್ಭಗೃಹದ ದ್ವಾರ ಸರಳವಾಗಿದ್ದು ಇಕ್ಕೆಲಗಳಲ್ಲಿ ವೈಷ್ಣವ ದ್ವಾರಪಾಲಕರು ನಿಂತಿದ್ದಾರೆ. ಈ ದ್ವಾರಪಾಲಕರು ಸಮಭಂಗಿಯಲ್ಲಿ ನಿಂತಿದ್ದು ಅಭಯಹಸ್ತ, ಶಂಖ, ಚಕ್ರ, ಗಧಾ ಹಿಡಿದುಕೊಂಡಿದ್ದಾರೆ

**ಸುಖನಾಸಿ:–** ಸುಖನಾಸಿಯು ಗರ್ಭಗೃಹದಷ್ಟೇ ಉದ್ದ ಮತ್ತು ಅಗಲವಾಗಿದ್ದು ಚೌಕಾಕಾರವಾಗಿದೆ. ಇದರಲ್ಲಿ ಯಾವುದೇ ಮೂರ್ತಿ ಶಿಲ್ಪಗಳು ಕಂಡುಬರುವುದಿಲ್ಲ. ಮೇಲ್ಛಾವಣಿ ಸರಳವಾಗಿದೆ. ಸುಖನಾಸಿಯ ದ್ವಾರವು ಸರಳವಾಗಿದ್ದು, ಬಾಗಿಲ ಇಕ್ಕೆಲಗಳಲ್ಲಿ ಒಂಟಿ ಕಾಲಿನಲ್ಲಿ ನಿಂತಿರುವ ವಿಷ್ಣುವಿನ ದ್ವಾರಪಾಲಕರಿದ್ದಾರೆ. **(ಚಿ.ಸಂ.117)** ಇವರು ಅಭಯಹಸ್ತ, ಶಂಖ, ಚಕ್ರ ಮತ್ತು ಗಧಾ ಹಿಡಿದು ಕೊಂಡಿದ್ದಾರೆ. ಈ ದ್ವಾರಪಾಲಕರಿಗೆ ತೈಲವನ್ನು ಲೇಪನ ಮಾಡಿ ಅದರ ಯಾವುದೇ ಲಕ್ಷಣಗಳು ಕಾಣದಂತೆ ಮಾಡಲಾಗಿದೆ.

**ನವರಂಗ:-** ನವರಂಗವು ಸುಮಾರು 20x20 ಅಡಿ ಉದ್ದ ಮತ್ತು ಅಗಲವಾಗಿದ್ದು ಚೌಕಾಕಾರವಾಗಿದೆ. ಈ ನವರಂಗದ ಮಧ್ಯಭಾಗದಲ್ಲಿರುವ ನಾಲ್ಕು ಕಂಬಗಳನ್ನು ಕಣಶಿಲೆಯಲ್ಲಿ ಮಾಡಲಾಗಿದ್ದು ಇವುಗಳನ್ನು ಚೌಕ, ಅಷ್ಟ ಮುಖವಾಗಿ ರಚಿಸಿ ನಿಲ್ಲಿಸಲಾಗಿದೆ. ಮೇಲ್ಛಾವಣಿಗೆ ಕಲ್ಲಿನ ಚಪ್ಪಡಿಯನ್ನು ಹಾಸಿ ಮುಚ್ಚಲಾಗಿದೆ. ಈ ದೇವಾಲಯದ ಮುಖಮಂಟಪ ಪ್ರಕೃತಿಯ ವಿಕೋಪಕ್ಕೆ ತುತ್ತಾಗಿ ಸಂಪೂರ್ಣವಾಗಿ ನಾಶವಾಗಿದ್ದು ಈಗ ಅದರ ಯಾವುದೇ ಅವಶೇಷಗಳು ಕಾಣಬರುವುದಿಲ್ಲ.[158] ಈ ದೇವಾಲಯದ ನವರಂಗ ಸಂಪೂರ್ಣವಾಗಿ ಶಿಥಿಲವಾಗಿದ್ದು ಈಗ ಬಿದ್ದು ಹೋಗುವ ಸ್ಥಿತಿಯಲ್ಲಿದೆ. ಆದರೆ ಕಂಬಗಳ ಆಸರೆಯಲ್ಲಿ ಮೇಲ್ಛಾವಣಿ ನಿಂತಿದೆ. ಮುಖಮಂಟಪ ಸಂಪೂರ್ಣವಾಗಿ ಕಣ್ಮರೆಯಾಗಿದೆ ಮತ್ತು ದೇವಾಲಯದ ಅಧಿಷ್ಠಾನದ ಮೇಲೆ ನಿರ್ಮಿಸಲಾಗಿರುವ ಭಿತ್ತಿಯು ಅಲ್ಲಲ್ಲಿ ಬಿದ್ದು ಹೋಗಿದೆ.

**ಬೇಟೆರಾಯಸ್ವಾಮಿ ದೇವಾಲಯ-ತುರುವೇಕೆರೆ**

ತುರುವೇಕೆರೆ ಪಟ್ಟಣದ ಮಧ್ಯಭಾಗದಲ್ಲಿ ಪೂರ್ವಾಭಿಮುಖವಾಗಿ ಈ ದೇವಾಲಯವನ್ನು ನಿರ್ಮಾಣ ಮಾಡಲಾಗಿದೆ. ಇದೊಂದು ಏಕಕೂಟ ದೇವಾಲಯವಾಗಿದ್ದು ಇದನ್ನು ಕಣಶಿಲೆಯನ್ನು ಉಪಯೋಗಿಸಿ ನಿರ್ಮಿಸಲಾಗಿದೆ. ಇದರಲ್ಲಿ ಒಂದು ಗರ್ಭಗೃಹ, ಸುಖನಾಸಿ, ನವರಂಗ, ಮುಖಮಂಟಪ ಮತ್ತು ಪಾತಾಳಾಂಕಣವನ್ನು ಕಾಣಬಹುದಾಗಿದೆ.

ತುರುವೇಕೆರೆಯು ಹೊಯ್ಸಳರ ಕಾಲದಲ್ಲಿ ಒಂದು ಅಗ್ರಹಾರವಾಗಿತ್ತೆಂದು ಈಗಾಗಲೇ ನಮಗೆ ತಿಳಿದಿದ್ದು, ನಂತರ ವಿಜಯನಗರ ಅರಸರ ಆಳ್ವಿಕೆಗೆ ಒಳಪಟ್ಟಿತ್ತು. ಈ ದೇವಾಲಯವನ್ನು ವಿಜಯನಗರ ಅರಸನಾದ ನರಸನಾಯಕನ ಮಗ ವೀರನರಸಿಂಹನ ಆಳ್ವಿಕೆಯ ಕಾಲ ಅಂದರೆ ಕ್ರಿ.ಶ.1504-1509ರಲ್ಲಿ ನಿರ್ಮಾಣ ಮಾಡಲಾಗಿದೆ ಎಂದು ಶಾಸನಾ ಧಾರಗಳಿಂದ ತಿಳಿದು ಬರುತ್ತದೆ.[159] ದ್ವಾಪರ ಯುಗದಲ್ಲಿ ಬೇಟೆರಾಯ ದೇವನು ಪಕ್ಷಿವಾಹನ ಕೊಳದಲ್ಲಿ ಮಾಯವಾಗಿ ತುರುವೇಕೆರೆಯ ಹೆಬ್ಬಾರ್ ವೈಷ್ಣವನಾದ ಚೌಡಪ್ಪಯ್ಯನೆಂಬುವನ ಕನಸಿನಲ್ಲಿ ಕಾಣಿಸಿಕೊಂಡು ಚೌಡಪ್ಪಯ್ಯನ ಹಣೆಯ ಮೇಲೆ ನಾಮವನ್ನು ಇಟ್ಟು ತನ್ನ ಸೇವೆಯನ್ನು ಮಾಡುವಂತೆ ಅಜ್ಞಾಪಿಸಿದನು. ತದನಂತರ ಚೌಡಪ್ಪಯ್ಯನು ತನ್ನ ಹೆಸರನ್ನು "ವರದ ಬೇಟೆರಾಯ" ಪುನರ್ ನಾಮಕರಣ ಮಾಡಿಕೊಂಡು ಬೇಟೆರಾಯ ಸ್ವಾಮಿಗೆ ಕಲ್ಲಿನಲ್ಲಿ ಈ ದೇವಾಲಯವನ್ನು ಕಟ್ಟಿಸಿದನೆಂಬ ಐತಿಹ್ಯವಿದೆ.[160] ಪ್ರಸ್ತುತ ಈ ದೇವಾಲಯವನ್ನು "ವರದ ಬೇಟೆರಾಯ" ದೇವಾಲಯ ಎಂದು ಕರೆಯಲಾಗುತ್ತಿದೆ. ಈ ದೇವಾಲಯವು ವಿಜಯನಗರ ಕಾಲದಿಂದ ಹಿಡಿದು ಮೈಸೂರು ಒಡೆಯರ ತನಕ ಕಾಲಕಾಲಕ್ಕೆ ಹಲವಾರು ದಾನದತ್ತಿಗಳನ್ನು

ಪಡೆದುಕೊಂಡಿದೆ. ವಿಜಯನಗರ ಅರಸ ವೀರನರಸಿಂಹರಾಯನು ತನ್ನ ಮಗಳ ಮುಖಾಂತರ ಪಂಚಲೋಹದ ಉತ್ಸವಮೂರ್ತಿಯನ್ನು ಮತ್ತು ದೇವಾಲಯದ ಮುಂದೆ ಮೂರು ಅಂಕಣದ ಮಂಟಪವೊಂದನ್ನು ನಿರ್ಮಿಸಿ ಐದು ಹಳ್ಳಿಗಳು ಮತ್ತು 300 ವರಾಹಗಳನ್ನು ದೇವಾಲಯಕ್ಕೆ ದಾನ ನೀಡಿದ ವಿಷಯ ಹಾಗೂ ಇವನ ಹೆಂಡತಿಯಾದ ಲೋಕಮ್ಮ ತುರುವೇಕೆರೆ ತಾಲೂಕಿನ ಹೊಸೂರು ಎಂಬ ಹಳ್ಳಿಯನ್ನು ತನ್ನ ಹೆಸರಿನಲ್ಲಿ "ಲೋಕಮ್ಮನಹಳ್ಳಿ" ಎಂದು ಮರು ನಾಮಕರಣ ಮಾಡಿ ಈ ಗ್ರಾಮವನ್ನು ದೇವಾಲಯಕ್ಕೆ ದತ್ತಿಯಾಗಿ ನೀಡಿದಳೆಂದು ತಿಳಿದುಬರುತ್ತದೆ. ನಂತರ ಮಾಯಾಸಂದ್ರದ ಪಾಳೆಯಗಾರನಾದ ಸಂಕಣ್ಣನಾಯಕ, ಹಾಗಲವಾಡಿಯ ಪಾಳೆಯಗಾರರಾದ ರಾಜರಾಜಯ್ಯ, ಹರಿ ಭೈರನಾಯಕ, ಬಿಜಾಪುರ ಸುಲ್ತಾನರ ಕಾಲದಲ್ಲಿ ಶಿರಾ ತಾಲೂಕಿನಲ್ಲಿ ಆಳ್ವಿಕೆ ಮಾಡುತ್ತಿದ್ದ ಪ್ರಾಂತ್ಯಾಧಿಕಾರಿ ಮಲ್ಲಿಕ್ ರಿಹಾನ್ ಮುಂತಾದವರು ಈ ದೇವಾಲಯಕ್ಕೆ ದಾನದತ್ತಿಗಳನ್ನು ಉದಾರವಾಗಿ ನೀಡಿದರು.[161] ಮೈಸೂರು ಒಡೆಯರಾದ ನರಸಿಂಹರಾಜ ಒಡೆಯರು ತುರುವೇಕೆರೆಯನ್ನು ವಶಪಡಿಸಿಕೊಂಡ ನಂತರ ಈ ದೇವಾಲಯಕ್ಕೆ ಕ್ರಿ.ಶ.1686ರವರೆಗೆ ಎಲ್ಲಾ ದಾನದತ್ತಿಗಳನ್ನು ನೀಡಿದರು.[162] ತರುವಾಯ ದೇವಾಲಯದಲ್ಲಿ ಭಿನ್ನಾಭಿಪ್ರಾಯ ಉಂಟಾಗಿ ಕ್ರಿ.ಶ.1705ರಲ್ಲಿ ತಿರುಮಲ ಅಯ್ಯಂಗಾರ್ ಮತ್ತು ಪೆರುಮಾಳ್ ಎಂಬುವರು ಮೈಸೂರಿನ ರಾಣಿಯಲ್ಲಿ ಭಿನ್ನವತ್ತಳೆಯನ್ನು ಸಲ್ಲಿಸಿದ ಕಾರಣಗಳಿಂದ ದೇವಾಲಯಕ್ಕೆ ಸಲ್ಲಿಕೆಯಾಗುತ್ತಿದ್ದ ದಾನದತ್ತಿಗಳು ಕಡಿಮೆಯಾಗತೊಡಗಿತು.[163] ಕ್ರಿ.ಶ.1784ರಲ್ಲಿ ಟಿಪ್ಪುಸುಲ್ತಾನನು ಎಲ್ಲಾ ದಾನದತ್ತಿಗಳನ್ನು ಪುನಃ ಪ್ರಾರಂಭಮಾಡಿದನು.[164] ಕ್ರಿ.ಶ.1831ರಲ್ಲಿ ಮೈಸೂರಿನ ಮೂರನೇ ಕೃಷ್ಣರಾಜ ಒಡೆಯರು ದಂಗೆಕೋರರನ್ನು ಅಡಗಿಸುವ ಸಲುವಾಗಿ ತುರುವೇಕೆರೆಗೆ ಭೇಟಿ ನೀಡಿದ ಸಂದರ್ಭದಲ್ಲಿ ಈ ದೇವಾಲಯದ ಕೆಲವು ಸ್ಥಾನಿಕರು ತುರುವೇಕೆರೆ ತಾಲೂಕಿನ ತೊರೆಮಾವಿನ ಹಳ್ಳಿಯ ಲೋಕಮ್ಮಾಜಿ ಎಂಬುವಳ ಮುಖಾಂತರ ಮೂರನೇ ಕೃಷ್ಣರಾಜ ಒಡೆಯರಿಗೆ ಭಿನ್ನವತ್ತಳೆಯನ್ನು ಸಲ್ಲಿಸಲಾಗಿ ಕೃಷ್ಣರಾಜ ಒಡೆಯರು ಈ ದೇವಾಲಯಕ್ಕೆ ವಾರ್ಷಿಕವಾಗಿ 120 ಕಂಠೀರಾಯ ಪಣವನ್ನು ದತ್ತಿಯಾಗಿ ನೀಡಲು ಒಪ್ಪಿದರು.[165] ಹೀಗೆ ಪ್ರಾಚೀನ ಕಾಲದಿಂದಲೂ ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ ಮಹತ್ವ ಹೊಂದಿರುವ ಈ ದೇವಾಲಯದ ಸುತ್ತಲೂ ಇಂದಿಗೂ ಹೆಬ್ಬಾರ್ ವೈಷ್ಣವರ ವಾಸದ ಮನೆಗಳನ್ನು ನಾವು ಕಾಣಬಹುದಾಗಿದೆ.

**ಗರ್ಭಗೃಹ:-**ಗರ್ಭಗೃಹವು 8X8 ಅಡಿ ಉದ್ದ ಮತ್ತು ಅಗಲ ಹೊಂದಿದ್ದು ಚೌಕಾಕಾರವಾಗಿದೆ. ಈ ಗರ್ಭಗೃಹದ ಮಧ್ಯಭಾಗದಲ್ಲಿ ಸುಮಾರು 2 ಅಡಿ ಎತ್ತರವಿರುವ ಗರುಡ ಪೀಠದ ಮೇಲೆ ಬೇಟೆರಾಯಸ್ವಾಮಿ (ವಿಷ್ಣು) ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ಸುಮಾರು 5 ಅಡಿ

ಎತ್ತರವಿರುವ ಈ ದೇವಮೂರ್ತಿಯು ಚತುರ್ಭುಜವನ್ನು ಹೊಂದಿದ್ದು ಕೈಗಳಲ್ಲಿ ಶಂಖ, ಚಕ್ರ, ಗಧಾ ಮತ್ತು ವರದಹಸ್ತ ಹೊಂದಿದ್ದಾನೆ. **(ಚಿ.ಸಂ.118)** ಪೀಠಭಾಗವನ್ನು ಹೊರತುಪಡಿಸಿ ಉಳಿದೆಲ್ಲಾ ಭಾಗವನ್ನು ಬೆಳ್ಳಿಯ ಲೋಹದಿಂದ ಮಾಡಿಸಿದ ಕವಚವನ್ನು ಈ ಮೂರ್ತಿಗೆ ಹೊದಿಸಲಾಗಿದೆ. ಕಿರೀಟವು ಬೆಳ್ಳಿಯಿಂದ ಮಾಡಲ್ಪಟ್ಟಿದ್ದು, ನೋಡಲು ಆಕರ್ಷಣೀಯವಾಗಿದೆ. ಈ ದೇವನ ಹಿಂದೆ ಪಂಚಲೋಹದಿಂದ ಮಾಡಲ್ಪಟ್ಟ ಪ್ರಭಾವಳಿ ಇದ್ದು, ಹಂಸ ಮತ್ತು ಬಳ್ಳಿ ಸುರುಳಿಗಳ ಕೆತ್ತನೆ ಅಲಂಕರಣೆ ಇದೆ. ಅಂತ್ಯಭಾಗದಲ್ಲಿ ಕೀರ್ತಿಮುಖವನ್ನು ಕೆತ್ತನೆ ಮಾಡಲಾಗಿದೆ. ಈ ಗರ್ಭಗೃಹದ ಮೇಲ್ಛಾವಣಿ ಸರಳವಾಗಿದ್ದು ಯಾವುದೇ ಭುವನೇಶ್ವರಿ ಕಂಡುಬರುವುದಿಲ್ಲ. ಮೇಲ್ಛಾವಣಿಗೆ ಕಣಶಿಲೆಯ ಕಲ್ಲುಚಪ್ಪಡಿಗಳನ್ನು ಹಾಸಿ ಮುಚ್ಚಲಾಗಿದೆ. ಗರ್ಭಗೃಹದ ಬಾಗಿಲಿಗೆ ಹಿತ್ತಾಳೆಯ ತಗಡನ್ನು ಹೊದಿಸಿ ಅದರಲ್ಲಿ ಬಳ್ಳಿಸುರುಳಿಗಳ ಅಲಂಕರಣ, ಶಂಖ, ಚಕ್ರ ಮಧ್ಯದಲ್ಲಿ ಶ್ರೀನಾಮವನ್ನು ರಚಿಸಲಾಗಿದೆ.[166]

**ಅಂತರಾಳ:**–ದೇವಾಲಯದ ಗರ್ಭಗೃಹದ ಮುಂಭಾಗದಲ್ಲಿ 8X8 ಅಡಿ ಉದ್ದ ಮತ್ತು ಅಗಲವಾಗಿರುವ ಅಂತರಾಳವಿದ್ದು ನೆಲಕ್ಕೆ ಗ್ರಾನೈಟ್ ಶಿಲೆಯನ್ನು ಹಾಕಿ ಇತ್ತೀಚಿಗೆ ಜೀರ್ಣೋದ್ಧಾರ ಮಾಡಲಾಗಿದೆ. ಇಲ್ಲಿ ಯಾವುದೇ ಉತ್ಸವ ಮೂರ್ತಿಗಳು ಕಂಡುಬರುವುದಿಲ್ಲ. ದೇವರ ಅಲಂಕಾರಕ್ಕೆ ಸಂಬಂಧಿಸಿದ ವಸ್ತ್ರಾಭರಣಗಳನ್ನು ಇಡಲಾಗಿದೆ. ಮೇಲ್ಛಾವಣಿಯು ಸರಳವಾಗಿದ್ದು ಕಣಶಿಲೆಯ ಚಪ್ಪಡಿಗಳಿಂದ ನಿರ್ಮಿಸಲಾಗಿದೆ.

**ಸುಖನಾಸಿ:–** ಸುಖನಾಸಿಯು ಸಹ ಗರ್ಭಗೃಹದಷ್ಟೇ ಉದ್ದಗಲವನ್ನು ಹೊಂದಿದೆ. ಸುಖನಾಸಿಯಲ್ಲಿ ಯಾವುದೇ ಮೂರ್ತಿ ಶಿಲ್ಪಗಳು ಕಂಡುಬರುವುದಿಲ್ಲ. ಸುಖನಾಸಿಯ ದ್ವಾರವು ಮೂರು ಪಟ್ಟಿಕೆಗಳಿಂದ ಕೂಡಿದ್ದು, ಇತ್ತೀಚೆಗೆ ಪಂಚಲೋಹದ ತಗಡನ್ನು ಪಟ್ಟಿಕೆಗಳಿಗೆ ಹೊದಿಸಲಾಗಿದೆ. ದ್ವಾರದ ಇಕ್ಕೆಲಗಳಲ್ಲಿ ವೈಷ್ಣವ ದ್ವಾರಪಾಲಕರ ಕೆತ್ತನೆಗಳನ್ನು ಕಾಣಬಹುದು. ಲಲಾಟಬಿಂಬದಲ್ಲಿ ಗಜಲಕ್ಷ್ಮೀಯನ್ನು ಇರಿಸಲಾಗಿದೆ. **(ಚಿ.ಸಂ.119)**

**ನವರಂಗ:**–ನವರಂಗವು ಸುಮಾರು 25X30 ಅಡಿ ಉದ್ದ ಮತ್ತು ಅಗಲವಾಗಿದ್ದು ಚೌಕಾಕಾರವಾಗಿದೆ. ನವರಂಗದ ಮಧ್ಯಭಾಗದಲ್ಲಿ ವಿಜಯನಗರ ಶೈಲಿಯ ನಾಲ್ಕು ಕಂಬಗಳಿವೆ. **(ಚಿ.ಸಂ.120)** ಈ ಕಂಬಗಳು 8 ಅಡಿಗಳ ಎತ್ತರವನ್ನು ಹೊಂದಿದ್ದು, ನಾಲ್ಕು, ಹದಿನಾರು ಮೂಲೆಗಳನ್ನು ಹೊಂದಿವೆ. ಕಂಬಗಳ ಮೇಲ್ಭಾಗದಲ್ಲಿ ಆಧಾರ ಭೋದಿಗೆಯನ್ನು ನಿರ್ಮಿಸಿದ್ದು ಉಳಿದಂತೆ ಸರಳವಾಗಿವೆ. ನವರಂಗದ ಒಳಗೋಡೆಗೆ ಹೊಂದಿಕೊಂಡಂತೆ ನಾಲ್ಕು ಮತ್ತು ಎಂಟು ಮುಖ ಹೊಂದಿರುವ ಒಟ್ಟು ಹದಿನಾರು ಕಂಬಗಳನ್ನು ನಿಲ್ಲಿಸಲಾಗಿದೆ. ನವರಂಗದ ಮೇಲ್ಛಾವಣಿ ಸರಳವಾಗಿದ್ದು, ಕಲ್ಲುಚಪ್ಪಡಿಗಳನ್ನು ಹಾಕಿ ಮುಚ್ಚಲಾಗಿದೆ. ನವರಂಗದ ಉತ್ತರ

ದಿಕ್ಕಿನಲ್ಲಿ ಒಂದು ಸಣ್ಣ ಗರ್ಭಗೃಹವಿದ್ದು, ಈ ಗರ್ಭಗೃಹದಲ್ಲಿ ಯಾವುದೇ ಮೂರ್ತಿಶಿಲ್ಪಗಳು ಕಾಣಬರುವುದಿಲ್ಲ. ಅರ್ಚಕರು ದೇವಾಲಯಕ್ಕೆ ಸಂಬಂಧಿಸಿದ ಪರಿಕರಗಳನ್ನು ಸಂಗ್ರಹಿಸಿಟ್ಟಿದ್ದಾರೆ. ನವರಂಗದ ನೈರುತ್ಯ ಮೂಲೆಯಲ್ಲಿ ಸುಮಾರು ಐದು ಅಡಿಗಳ ಎತ್ತರವಿರುವ ಕೇಶವ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ಈ ದೇವನು ಸಮಭಂಗಿಯಲ್ಲಿ ನಿಂತಿದ್ದು ಚತುರ್ಭುಜ ಹೊಂದಿದ್ದಾನೆ. ಕೈಗಳಲ್ಲಿ ಶಂಖ, ಚಕ್ರ, ಗಧಾ, ಪದ್ಮ ಹಿಡಿದು ಕೊಂಡಿದ್ದಾನೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣಗಳ ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು ಸುಂದರವಾಗಿದೆ. ಇಕ್ಕೆಲಗಳಲ್ಲಿ ಫಲ ಮತ್ತು ಪದ್ಮವನ್ನು ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ದೇವಿಯರಿದ್ದಾರೆ. ಈ ದೇವನ ಹಿಂದಿರುವ ಪ್ರಭಾವಳಿ ದಶವಾತಾರದ ಮೂರ್ತಿಗಳಿದ್ದು ಮತ್ಸ್ಯ ಅವತಾರಕ್ಕೆ ಮತ್ತು ಕೂರ್ಮ ಅವತಾರಕ್ಕೆ ಸಂಬಂಧಿಸಿದ ಚೆನ್ಹೆಗಳನ್ನು ಬಿಡಿಸಲಾಗಿದೆ. ಅಂತ್ಯದಲ್ಲಿ ಕೀರ್ತಿಮುಖದ ಬದಲಾಗಿ ಕೂಡನ್ನು ಬಿಡಿಸಲಾಗಿದೆ. ದಕ್ಷಿಣ ದಿಕ್ಕಿನಲ್ಲಿ ಒಂದು ಪ್ರವೇಶದ್ವಾರವಿದ್ದು, ಪ್ರಸ್ತುತ ಅದನ್ನು ಮುಚ್ಚಲಾಗಿದೆ. ದೇವಾಲಯದ ಪ್ರವೇಶದ್ವಾರವು ಸರಳವಾಗಿದ್ದು, ಇತ್ತೀಚಿಗೆ ಕಬ್ಬಿಣದ ಸರಳುಗಳನ್ನು ಉಪಯೋಗಿಸಿ ಬಾಗಿಲನ್ನು ಮಾಡಿಸಲಾಗಿದೆ. ಬಾಗಿಲ ಇಕ್ಕೆಲಗಳಲ್ಲಿ ದ್ವಾರಪಾಲಕರನ್ನು ನಿಲ್ಲಿಸಲಾಗಿದೆ.

**ಮುಖಮಂಟಪ:-**ಮುಖಮಂಟಪದಲ್ಲಿ ನಾಲ್ಕು ಕಂಬಗಳಿವೆ. ಇವು ನಾಲ್ಕು ಮತ್ತು ಹದಿನಾರು ಮುಖಗಳನ್ನು ಹೊಂದಿರುವ ಪ್ರಧಾನ ನಾಲ್ಕು ಕಂಬಗಳ ಮೇಲೆ ಮೇಲ್ಛಾವಣಿಗೆ ಕಲ್ಲುಚಪ್ಪಡಿಗಳನ್ನು ಹಾಸಿ ಮುಖಮಂಟಪವನ್ನು ನಿರ್ಮಿಸಲಾಗಿದೆ. ಈ ಕಂಬಗಳು ೮ ಅಡಿಗಳ ಎತ್ತರವನ್ನು ಹೊಂದಿದ್ದು, ಯಾವುದೇ ಕೆತ್ತನೆಗಳಿಲ್ಲದೇ ನಿರಾಲಂಕೃತವಾಗಿವೆ ಹಾಗೂ ವಿಜಯನಗರ ಶೈಲಿಯ ಬೋಧಿಗೆಯನ್ನು ಹೊಂದಿವೆ. ದೇವಾಲಯಕ್ಕೆ ಪ್ರವೇಶಿಸಲು ಮುಖಮಂಟಪದಲ್ಲಿ ಉತ್ತರ ಮತ್ತು ದಕ್ಷಿಣ ಭಾಗಗಳಲ್ಲಿ ಸೋಪಾನಗಳನ್ನು ನಿರ್ಮಿಸಲಾಗಿದೆ. ಇದರ ಮುಂದೆ ಪಾತಾಳಂಕಣವನ್ನು ನಿರ್ಮಿಸಲಾಗಿದೆ.

**ಪಾತಾಳಂಕಣ:-**ದೇವಾಲಯದ ಮುಂಭಾಗದಲ್ಲಿ ೨೫X೩೦ ಅಡಿ ಉದ್ದ ಮತ್ತು ಅಗಲದ ಪಾತಾಳಾಂಕಣವನ್ನು ನಿರ್ಮಿಸಲಾಗಿದೆ. **(ಚಿ.ಸಂ.121)** ಪಾತಾಳಂಕಣದಲ್ಲಿ ಹನ್ನೆರಡು ಕಂಬಗಳನ್ನು ನಿಲ್ಲಿಸಲಾಗಿದ್ದು, ಕಂಬಗಳು ಹನ್ನೆರಡು ಅಡಿ ಎತ್ತರವಾಗಿದ್ದು ಎಂಟು ಮುಖಗಳನ್ನು ಹೊಂದಿವೆ. ದೇವಾಲಯದ ಮುಖಮಂಟಪಕ್ಕೆ ಹೊಂದಿಕೊಂಡಂತೆ ನಿರ್ಮಿಸಲಾಗಿರುವ ತೆರದ ಮಂಟಪವೇ ಪಾತಾಳಾಂಕಣ. ಈ ಅಂಕಣಕ್ಕೆ ಅಧಿಷ್ಠಾನವಿರುವುದಿಲ್ಲ. ಈ ಕಾರಣದಿಂದ ಇದರ ನೆಲವು ಸುತ್ತಲಿನ ದೇವಾಲಯದ ಅಂಗಳಕ್ಕೆ ಸಮತಲವಾಗಿರುತ್ತದೆ. ಈ ಕಾರಣದಿಂದಲೇ ಇದನ್ನು ಪಾತಾಳಾಂಕಣವೆಂದು ಕರೆಯುವರು.

ಪಾತಾಳಾಂಕಣದ ಉಲ್ಲೇಖವು ಶಾಸ್ತ್ರಗಂಥಗಳಲ್ಲಿ ದೊರಕದಿದ್ದರೂ ಶಾಸನಗಳಲ್ಲಿ ಇದರ ಪ್ರಸ್ತಾಪವನ್ನು ಕಾಣಬಹುದು. ಪಾತಾಳಾಂಕಣದ ನಿರ್ಮಾಣವು ವಿಜಯನಗರ ಕಾಲದಿಂದ ಪ್ರಾರಂಭವಾಯಿತು.[167] ಸಮಕಾಲೀನ ಧಾರ್ಮಿಕ ಪರಿಸ್ಥಿತಿಯ ಪ್ರಭಾವದಿಂದ ದೇವಾಲಯದಲ್ಲಿ ಹಲವಾರು ಉತ್ಸವ ಸಂಪ್ರದಾಯಗಳು ಹೆಚ್ಚಾದಾಗ ದೇವಾಲಯಕ್ಕೆ ಆಗಮಿಸುತ್ತಿದ್ದ ಭಕ್ತರ ಸಂಖ್ಯೆಯು ಸಹಜವಾಗಿಯೇ ಹೆಚ್ಚುತ್ತದೆ. ಈ ರೀತಿ ಹೆಚ್ಚಾದ ಜನಸಂಖ್ಯೆಗೆ ಬಿಸಿಲು, ಮಳೆಗಳಿಂದ ರಕ್ಷಣೆಯನ್ನು ಒದಗಿಸಲು ಪಾತಾಳಾಂಕಣದ ನಿರ್ಮಾಣವು ಅನಿವಾರ್ಯವಾಯಿತು. ಪಾತಾಳಾಂಕಣವು ಅಧಿಷ್ಠಾನವನ್ನು ಹೊಂದಿರದ ಕಾರಣ ಇದರ ಮೇಲ್ಛಾವಣಿಗೆ ಆಧಾರವಾಗಿ ಕಂಬಗಳು ದೇವಾಲಯದ ಅಂಗಳದ ನೆಲಮಟ್ಟದಿಂದಲೇ ತೊಡಗುತ್ತಿದ್ದವು. ಹೀಗಾಗಿ ಇಲ್ಲಿ ನಿರ್ಮಾಣವಾಗುತ್ತಿದ್ದ ಕಂಬಗಳ ಎತ್ತರವು ಹೆಚ್ಚಾಗಿಯೇ ಇರುತ್ತಿತ್ತು.[168] ಈ ದೇವಾಲಯದಲ್ಲೂ ಸಹ ಇದೇ ಲಕ್ಷಣಗಳು ಕಂಡುಬಂದಿದ್ದು, ಕಂಬಗಳ ಪೀಠದ ಮೇಲೆ ಕೈಮುಗಿಯುತ್ತಿರುವ ಭಕ್ತ, ಯೋಗನರಸಿಂಹ, ವಾನರ ಮುಂತಾದ ಕೆತ್ತನೆಗಳು ಕಂಡುಬರುತ್ತವೆ. ಕಣಶಿಲೆಯ ಕಲ್ಲುಚಪ್ಪಡಿಗಳನ್ನು ಹಾಸಿ ಮೇಲ್ಛಾವಣಿಯನ್ನು ನಿರ್ಮಿಸಲಾಗಿದೆ. ದೇವಾಲಯದ ಮುಂದೆ ಪಂಚಲೋಹದಿಂದ ಮಾಡಲಾದ ಸುಮಾರು 10 ಅಡಿ ಎತ್ತರದ ಧ್ವಜಸ್ಥಂಭವನ್ನು ಪ್ರತಿಷ್ಠಾಪಿಸಿದ್ದು ಧ್ವಜವು ಕಂಚಿನ ಘಂಟೆಗಳಿಂದ ನಿರ್ಮಾಣವಾಗಿದೆ. ಈ ಸ್ತಂಭದ ಪಕ್ಕದಲ್ಲಿಯೇ 3 ಅಡಿ ಎತ್ತರವಿರುವ ಬಲಿಪೀಠವಿದೆ.

**ದ್ವಾರಮಂಟಪ:**-ಪಾತಾಳಾಂಕಣದ ಮುಂಭಾಗದಲ್ಲಿ ದ್ವಾರಮಂಟಪವನ್ನು ನಿರ್ಮಿಸಲಾಗಿದ್ದು, ದೇವಾಲಯಕ್ಕೆ ಆಗಮಿಸುವ ಭಕ್ತಾದಿಗಳು ವಿಶ್ರಾಂತಿ ಪಡೆಯಲು ಎರಡೂ ಕಡೆ ಎತ್ತರದ ವೇದಿಕೆಗಳನ್ನು ದ್ವಾರಮಂಟಪದಲ್ಲಿ ನಿರ್ಮಿಸಲಾಗಿದೆ. ಎರಡೂ ಕಡೆ ವಿಜಯನಗರ ಶೈಲಿಯ ನಾಲ್ಕು ಕಂಬಗಳನ್ನು ಕಾಣಬಹುದಾಗಿದೆ. ಮೇಲ್ಛಾವಣಿಗೆ ಕಲ್ಲುಚಪ್ಪಡಿಗಳನ್ನು ಹಾಕಿ ಮುಚ್ಚಲಾಗಿದೆ. ಇತ್ತೀಚಿಗೆ ಈ ಮಹಾದ್ವಾರಮಂಟಪದ ಮೇಲೆ ಸುಮಾರು 50 ಅಡಿ ಎತ್ತರವಿರುವ ಗೋಪುರವನ್ನು ನಿರ್ಮಿಸಲಾಗಿದೆ. ಗೋಪುರವು ಮೇಲೆ ಹೋದಂತೆ ಕಿರಿದಾಗಿ ಸಾಗುತ್ತದೆ. ಗೋಪುರದ ನಾಲ್ಕು ದಿಕ್ಕುಗಳಲ್ಲಿ ವಿಷ್ಣುವಿನ ದಶಾವತಾರಕ್ಕೆ ಸಂಬಂಧಿಸಿದ ಮೂರ್ತಿಶಿಲ್ಪಗಳಾದ ಲಕ್ಷ್ಮೀ, ನರಸಿಂಹ, ಆಂಜನೇಯ, ಯಕ್ಷ, ಯಕ್ಷಿಣಿಯರು ದೇವಾನುದೇವತೆಗಳ ಶಿಲ್ಪಗಳನ್ನು ಸ್ಥಾಪಿಸಲಾಗಿದೆ. ಈ ಮಹಾಗೋಪುರದ ಮೇಲೆ ಪಂಚಲೋಹದ ಕಳಸವನ್ನು ಇಡಲಾಗಿದೆ. **(ಚಿ.ಸಂ.122)** ದ್ವಾರಮಂಟಪದ ಪ್ರವೇಶದ್ವಾರವು ಸೂಕ್ಷ್ಮ ಕೆತ್ತನೆಗಳಿಂದ ಕೂಡಿದ್ದು, ಅಲಂಕಾರಿಕ ಕಂಬಗಳನ್ನು ಹೊಂದಿದೆ. ಲಲಾಟಬಿಂಬದಲ್ಲಿ ಬಾಲಕೃಷ್ಣನು ಬೆಣ್ಣೆ ತಿನ್ನುತ್ತಿರುವ ಕೆತ್ತನೆ ಇದೆ ದ್ವಾರಬಾಗಿಲು ತೋರಣವು ಪದ್ಮಪುಷ್ಪದ

ಮೊಗ್ಗುಗಳ ಅಲಂಕರಣೆಯಿಂದ ಕೂಡಿದೆ. ಬಾಗಿಲ ಇಕ್ಕೆಲಗಳಲ್ಲಿ ವೈಷ್ಣವ ದ್ವಾರಪಾಲಕರ ಕೆತ್ತನೆಗಳಿವೆ. ದ್ವಾರಮಂಟಪದ ಮುಂಭಾಗದ ಗೋಡೆಯಲ್ಲಿ ಉತ್ತರ ಭಾಗಕ್ಕೆ ರಾಮ ಮತ್ತು ಸೀತೆ ಹಾಗೂ ಯೋಗಾನರಸಿಂಹ ಉಬ್ಬು ಶಿಲ್ಪಗಳ ಕೆತ್ತನೆ ಇದೆ. ದೇವಾಲಯದ ನವರಂಗಕ್ಕೆ ಹೊಂದಿಕೊಂಡಂತೆ ದಕ್ಷಿಣ ದಿಕ್ಕಿಗೆ ಹೊರಭಾಗದಲ್ಲಿ ಒಂದು ಮಂಟಪವಿದ್ದು, ಈ ಮಂಟಪವು ಸಹ ದೇವಾಲಯದ ಒಳಕ್ಕೆ ಪ್ರವೇಶದ್ವಾರವನ್ನು ಹೊಂದಿದೆ. ಇದು ತೆರೆದ ಮಂಟಪವಾಗಿದ್ದು, ಪೂರ್ವ ಮತ್ತು ಪಶ್ಚಿಮ ದಿಕ್ಕಿಗೆ ಸೋಪಾನಗಳನ್ನು ಹೊಂದಿದೆ. ಕಲ್ಲಿನ ಚಪ್ಪಡಿಗಳನ್ನು ಹಾಸಿ ಮೇಲ್ಛಾವಣಿಯನ್ನು ನಿರ್ಮಿಸಲಾಗಿದ್ದು, ಇದರ ಮೇಲೆ ಇತ್ತೀಚೆಗೆ ಇಟ್ಟಿಗೆ, ಗಾರೆ ಉಪಯೋಗಿಸಿ ಗೋಪುರವನ್ನು ನಿರ್ಮಿಸಲಾಗಿದೆ. ಇದು ಐದು ಹಂತಗಳಿಂದ ಕೂಡಿದ್ದು ಪಿರಮಿಡ್ಡಿನಾಕಾರವಾಗಿ ಮೇಲೆ ಹೋದಂತೆ ಚಿಕ್ಕದಾಗುತ್ತಾ ಹೋಗಿದೆ. ದ್ವಾರದ ಮುಂದೆ ದ್ವಾರಪಾಲಕರು ಒಂಟಿಕಾಲಿನಲ್ಲಿ ನಿಂತು ಚತುರ್ಭುಜ ಹೊಂದಿದ್ದಾರೆ. ಕೈಗಳಲ್ಲಿ ಶಂಖ, ಚಕ್ರ, ಗಧಾ ಹಿಡಿದು ವಿವಿಧ ಭಂಗಿಯಲ್ಲಿ ನಿಂತಿದ್ದಾರೆ. ಮೇಲೆ ದೋಣಿಯಾಕಾರದ ಸ್ತೂಫಿ ಮಾಡಿ ಅದರ ಮೇಲೆ ಐದು ಕಳಸಗಳನ್ನು ಇಡಲಾಗಿದೆ. ಈ ದೋಣಿಯ ಇಕ್ಕೆಲಗಳಲ್ಲಿ ಕೀರ್ತಿಮುಖ ಬಿಡಿಸಲಾಗಿದೆ.

**ಅಧಿಷ್ಠಾನ:**-ಅಧಿಷ್ಠಾನವು ಕಣಶಿಲೆಯ ಕಲ್ಲಿನ ದಿಮ್ಮಿಗಳನ್ನು ಉಪಯೋಗಿಸಿ ನಿರ್ಮಿಸಲಾಗಿದ್ದು, ಯಾವುದೇ ಹಿನ್ಸರಿತ ಮತ್ತು ಮುನ್ಸರಿತ ಕಂಡುಬರದೆ ಕೇವಲ ಒಂದೇ ಪಟ್ಟಿಕೆಯನ್ನುಹೊಂದಿದೆ. ವಿಜಯನಗರ ಶಿಲ್ಪಗಳು ತಮ್ಮ ದೇವಾಲಯದ ನಿರ್ಮಾಣ ರಚನೆಗಳ ಶಕ್ತಿ, ತಾಳಿಕೆಗಳನ್ನು ಹೆಚ್ಚಿಸಲು ಬಿರುಸಾದ ಬೆಣಚುಕಲ್ಲನ್ನೇ ಬಳಸಿದ್ದಾರೆ. ಪರಕೀಯರ ಆಕ್ರಮಣವನ್ನು ಎದುರಿಸಲು ಸ್ಥಾಪಿತವಾದ ಈ ಸಾಮ್ರಾಜ್ಯವು ತನ್ನ ಧೃಢ ಉದ್ದೇಶಕ್ಕೆ ಅನುಗುಣವಾಗಿಯೇ ಎಂಬಂತೆ ಮತ್ತೊಮ್ಮೆ ಈ ಬಿರುಸು ಮಾಧ್ಯಮವನ್ನೇ ಬಳಸಲಾರಂಭಿಸಿತು. ಆದರೆ ಹೊಯ್ಸಳರು ಮತ್ತು ಕಲ್ಯಾಣಿ ಚಾಲುಕ್ಯರು ಬಳಪದ ಕಲ್ಲನ್ನು ತಮ್ಮ ನಿರ್ಮಾಣ ಕಾರ್ಯದಲ್ಲಿ ಬಳಸಿದ್ದರು. [169] ಈ ದೇವಾಲಯದ ಉತ್ತರ ಮತ್ತು ದಕ್ಷಿಣದಲ್ಲಿ ಒಂದೊಂದು ಮುಖಮಂಟಪವನ್ನು ಮಾಡಿ ಮುಖಮಂಟಪದ ಒಳಗೆ ಒಂದು ಗರ್ಭಗೃಹ ರಚಿಸಿ ಅವುಗಳಲ್ಲಿ ಉತ್ತರದ ಗರ್ಭಗುಡಿಯಲ್ಲಿ ಬೆಣಚುಕಲ್ಲಿನ ಪಾಣಿಪೀಠದ ಮೇಲೆ ಸುಮಾರು ನಾಲ್ಕು ಅಡಿಗಳ ಎತ್ತರವಿರುವ ಕೇಶವ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ಇದು ಹೊಯ್ಸಳ ಶೈಲಿಯಲ್ಲಿ ತಯಾರಿಸಲಾಗಿರುವಂತಹ ಶಿಲ್ಪವಾಗಿದೆ. ಸಮಭಂಗಿಯಲ್ಲಿ ನಿಂತಿರುವ ಈ ದೇವನು ಚರ್ತುಭುಜ ಹೊಂದಿದ್ದಾನೆ.ಕೈಗಳಲ್ಲಿ ಶಂಖ, ಚಕ್ರ, ಗಧಾ ಪದ್ಮ ಹೊಂದಿದ್ದಾನೆ. ಮೈಮೇಲೆ ಸುಂದರವಾಗಿ ಬಿಡಿಸಲಾಗಿರುವ ವಸ್ತ್ರಾಭರಣಗಳಿವೆ. ಪೀಠದಲ್ಲಿ ಗರುಡನಿದ್ದಾನೆ. ಈ ದೇವನ ಇಕ್ಕೆಲಗಳಲ್ಲಿ ಫಲವನ್ನು ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ದೇವಿಯರಿದ್ದಾರೆ. ಪ್ರಭಾವಳಿಯಲ್ಲಿ ಬಳ್ಳಿಸುರುಳಿ ಕೀರ್ತಿಮುಖವನ್ನು

ಬಿಡಿಸಲಾಗಿದೆ. ದಕ್ಷಿಣದಲ್ಲಿರುವ ಮುಖಮಂಟಪದ ಹಿಂದಿರುವ ಗರ್ಭಗುಡಿಯ ಒಳಗೆ ಲಕ್ಷ್ಮಿಯನ್ನು ಇರಿಸಲಾಗಿದೆ.

**ಭಿತ್ತಿ**:–ಕಲ್ಲಿನ ದಿಮ್ಮಿಗಳನ್ನು ಸಮಾನಾಂತರವಾಗಿ ಜೋಡಿಸಿ ಭಿತ್ತಿಯನ್ನು ನಿರ್ಮಿಸಲಾಗಿದ್ದು, ಯಾವುದೇ ಅಲಂಕಾರಿಕ ಕೆತ್ತನೆ, ಉಬ್ಬು ಶಿಲ್ಪಗಳ ರಚನೆಗಳು ಕಂಡುಬರುವುದಿಲ್ಲ. ಸುಮಾರು ಅರ್ಧ ಅಡಿ ಮುಂಚಾಚಿದ ಮತ್ತು ಸಮಾನಾಂತರವಾಗಿರುವ ಕಪೋತವನ್ನು ಮಾಡಲಾಗಿದೆ. ಕಪೋತದ ಮೇಲ್ಭಾಗದಲ್ಲಿ ಇತ್ತೀಚಿಗೆ ಗಾರೆ ಮತ್ತು ಇಟ್ಟಿಗೆಯಿಂದ ಕೈಪಿಡಿ ಗೋಡೆಯನ್ನು ನಿರ್ಮಾಣ ಮಾಡಲಾಗಿದೆ.

**ಶಿಖರ**:– ಮೂಲ ಗರ್ಭಗೃಹದ ಮೇಲೆ ದ್ರಾವಿಡ ಶೈಲಿಯ ಶಿಖರವನ್ನು ನಿರ್ಮಿಸಲಾಗಿದೆ. ಈ ಶಿಖರವು ಚೌಕಾಕಾರವಾಗಿದ್ದು, ಮೇಲೆ ಹೋದಂತೆ ಕಿರಿದಾಗಿ ಸಾಗುತ್ತದೆ. ಮೂರು ತಲಗಳಲ್ಲಿ ನಿರ್ಮಾಣವಾಗಿದ್ದು, ಶಿಖರದ ಸುತ್ತಲೂ ಸಣ್ಣ ಸಣ್ಣ ಕಂಬಗಳನ್ನು ಸ್ಥಾಪಿಸಿ ಅವುಗಳ ಮೇಲೆ ಸಣ್ಣ ಶಿಖರಗಳನ್ನು ನಿರ್ಮಿಸಲಾಗಿದೆ. ಶಿಖರದ ಸುತ್ತಲೂ ವಿಷ್ಣುವಿನ ಅವತಾರಕ್ಕೆ ಸಂಬಂಧಿಸಿದಂತೆ ಮೂರ್ತಿಶಿಲ್ಪಗಳನ್ನು ರಚಿಸಲಾಗಿದೆ. ಅವುಗಳಲ್ಲಿ ಮುಖ್ಯವಾಗಿ ವೇಣುಗೋಪಾಲ, ವೆಂಕಟರಮಣ, ಹಯಗ್ರೀವ, ಸಿಂಹಮುಖಗಳು, ನವಿಲುಗಳು, ಕೂಡುಗಳು, ಕೀರ್ತಿಮುಖಗಳು, ಸಣ್ಣ ಸಣ್ಣ ಮಂಟಪಗಳನ್ನು ರಚಿಸಲಾಗಿದೆ. ಗ್ರೀವದ ಮೇಲೆ ವೆಂಕಟರಮಣ, ವರಹಾಮೂರ್ತಿ ಕೈಮುಗಿದು ಕುಳಿತಿರುವ ಶಿವ ಮುಂತಾದವು, ಅಲ್ಲಲ್ಲಿ ಯಕ್ಷ ಮತ್ತು ಯಕ್ಷಿಣಿಯ ಮೂರ್ತಿಶಿಲ್ಪಗಳಿವೆ. ಸ್ತೂಫಿಯು ವೃತ್ತಾಕಾರವಾಗಿದ್ದು, ಮೇಲೆ ಪುಷ್ಪ ರಚನೆಗಳ ಅಲಂಕರಣವಿದೆ. ಸ್ತೂಪಿಗೆ ಹೊಂದಿಕೊಂಡಂತೆ ನಾಲ್ಕು ದಿಕ್ಕುಗಳಲ್ಲಿಯೂ ಕೀರ್ತಿಮುಖ ರಚನೆ ಇದ್ದು, ಮೇಲ್ಭಾಗದಲ್ಲಿ ಲೋಹದ ಕಳಸ ಇರಿಸಲಾಗಿದೆ ಮತ್ತು ಉತ್ತರ ದಕ್ಷಿಣದ ಮಂಟಪದ ಮೇಲೆ ಒಂದೊಂದು ಶಿಖರವನ್ನು ಮಾಡಲಾಗಿದೆ. ಈ ದೇವಾಲಯದ ಮುಂದೆ ಸುಮಾರು 40 ಅಡಿ ಎತ್ತರವಿರುವ ಗರುಡಸ್ತಂಭ ಮತ್ತು ಆಗ್ನೇಯ ದಿಕ್ಕಿನಲ್ಲಿ ಉಯ್ಯಾಲೆ ಕಂಬಗಳನ್ನು ಮಾಡಲಾಗಿದೆ.

**ಅಮ್ಮನವರ ಗುಡಿ**:–ಮೂಲ ದೇವಾಲಯದ ಗರ್ಭಗೃಹದಲ್ಲಿ ಪ್ರತಿಷ್ಠಾಪಿಸಲಾಗಿರುವ ಪ್ರಧಾನ ದೇವತೆಯ ಸಹದೇವತೆಗಳು ಮತ್ತು ಪರಿವಾರ ದೇವತೆಗಳೂ ಸಹ ಪೂಜನೀಯರು. ಇಂತಹ ಪರಿವಾರ ದೇವತೆಗಳನ್ನು ಪ್ರತ್ಯೇಕವಾಗಿ ಸಣ್ಣ ಸಣ್ಣ ಗುಡಿಗಳನ್ನು ನಿರ್ಮಿಸಿ ಪ್ರತಿಷ್ಠಾಪಿಸಲಾಗುವುದು. ಪ್ರಧಾನ ದೇವತೆಯ ಸ್ವಪಂಥೀಯ ದೇವತೆಗಳೊಂದಿಗೆ ಅವನ ಅವತಾರಗಳು, ಲೀಲಾಮೂರ್ತಿಗಳು, ಸ್ವರೂಪ ಭೇದಗಳು ಮೊದಲಾದವುಗಳನ್ನು ಸಹ ಪ್ರತ್ಯೇಕವಾಗಿ ಪ್ರತಿಷ್ಠಾಪಿಸಿ ಪೂಜಿಸುವ ಪದ್ಧತಿಯುಂಟು. ಪರಿವಾರವೆಂದರೆ ವಾಹನ, ಮಕ್ಕಳು,

ಮಿತ್ರರು, ಉಪಶಕ್ತಿಗಳು, ಭಕ್ತರು, ದಾಸ ದಾಸಿಯರೊಂದಿಗೆ ಋಷಿಗಳು ಮತ್ತು ಯತಿಗಳು, ಪ್ರಧಾನ ದೇವತೆಯ ಶಕ್ತಿ ದೇವತೆಗೆ ಪ್ರತ್ಯೇಕವಾದ ಗುಡಿಯನ್ನು ನಿರ್ಮಿಸಿ ಪೂಜಿಸುವ ಪದ್ಧತಿಯು ಸುಮಾರು ಕ್ರಿ.ಶ. 12ನೇ ಶತಮಾನದ ವೇಳೆಗೆ ಆರಂಭವಾಗಿ ವಿಜಯನಗರ ಅರಸರ ಕಾಲದಲ್ಲಿ ಹೇರಳವಾಗಿ ನಿರ್ಮಾಣಗೊಂಡಿರುವುದನ್ನು ಕಾಣಬಹುದಾಗಿದೆ. ಇಂತಹ ಗುಡಿಗಳನ್ನು "ಅಮ್ಮನವರ ಗುಡಿ" ಎಂದು ಕರೆಯಲಾಗುವುದು.[170]

ಬೇಟೆರಾಯಸ್ವಾಮಿ ದೇವಾಲಯದ ನೈರುತ್ಯ ಮೂಲೆಯಲ್ಲಿ ಒಂದು ಅಮ್ಮನವರ ಗುಡಿಯನ್ನು ನಿರ್ಮಾಣ ಮಾಡಲಾಗಿದೆ. ಈ ಗುಡಿಯು ಗರ್ಭಗೃಹ ಹೊಂದಿದ್ದು ಚೌಕಾಕಾರವಾಗಿದೆ. ಗರ್ಭಗೃಹದ ಮಧ್ಯಭಾಗದಲ್ಲಿ ಲಕ್ಷ್ಮೀಯನ್ನು ಪ್ರತಿಷ್ಠಾಪನೆ ಮಾಡಲಾಗಿದೆ. ಗರ್ಭಗೃಹದ ಮೇಲ್ಛಾವಣಿ ಸರಳವಾಗಿದೆ. ಗರ್ಭಗೃಹದ ಬಾಗಿಲವಾಡವು ಬಳ್ಳಿಸುರುಳಿಗಳ ಅಲಂಕರಣೆಯಿಂದ ಕೂಡಿದ್ದು ಲಲಾಟಬಿಂಬದಲ್ಲಿ ವೇಣುಗೋಪಾಲನ ಕೆತ್ತನೆಯನ್ನು ಕಾಣಬಹುದಾಗಿದೆ. ಬಾಗಿಲ ಇಕ್ಕೆಲಗಳಲ್ಲಿ ತ್ರಿಭಂಗಿಯಲ್ಲಿ ನಿಂತಿರುವ ವೈಷ್ಣವ ದ್ವಾರಪಾಲಕರಿದ್ದಾರೆ. ಗರ್ಭಗೃಹದ ಮುಂದೆ ತೆರೆದ ಮುಖಮಂಟಪವಿದ್ದು ವಿಜಯನಗರ ಶೈಲಿಯ ಕಂಬಗಳ ಮೇಲೆ ಕಲ್ಲುಚಪ್ಪಡಿಗಳನ್ನು ಹಾಸಿ ಮೇಲ್ಛಾವಣಿಯನ್ನು ನಿರ್ಮಿಸಲಾಗಿದೆ. ಈ ಅಮ್ಮನವರ ಗುಡಿಯ ಮುಂದೆ ಪಾತಾಳಾಂಕಣ ನಿರ್ಮಾಣವಾಗಿದ್ದು 30X20 ಅಡಿ ಉದ್ದ ಮತ್ತು ಅಗಲವಿದೆ. ಪಾತಾಳಾಂಕಣದಲ್ಲಿ ಒಟ್ಟು 24 ಕಂಬಗಳನ್ನು ನಿಲ್ಲಿಸಿದ್ದು, ಈ ಕಂಬಗಳು 12 ಅಡಿ ಎತ್ತರವನ್ನು ಹೊಂದಿವೆ. ಆಧಾರ ಬೋಧಿಗೆಯ ಮೇಲೆ ಕಲ್ಲಿನ ತೊಲೆಗಳನ್ನು ಹಾಕಿ ಛಾವಣಿಗೆ ಕಣಶಿಲೆಯ ಕಲ್ಲುಚಪ್ಪಡಿಯನ್ನು ಬಳಸಲಾಗಿದೆ. ಈ ಕಂಬಗಳ ಪೀಠ ಭಾಗಗಳಲ್ಲಿ ಗರುಡ, ಸಂಗೀತಗಾರರು ಮುಂತಾದ ಕೆತ್ತನೆಗಳನ್ನು ಕಾಣಬಹುದು.

ಕಪೋತವನ್ನು ಇಳಿಜಾರಾಗಿ ಮಾಡಲಾಗಿದ್ದು ನೆಲಹಾಸನ್ನು ಇತ್ತೀಚಿಗೆ ನಿರ್ಮಿಸಲಾಗಿದೆ. ದೇವಾಲಯದ ಸುತ್ತಲೂ ಎತ್ತರವಾದ ಪ್ರಾಕಾರವಿದ್ದು, ಅಲ್ಲಲ್ಲಿ ಅರ್ಚಕರ ವಾಸದ ಕೊಠಡಿಗಳಿವೆ. ರಥಮನೆ, ಭಕ್ತರ ವಿಶ್ರಾಂತಿ ಗೃಹಗಳಿವೆ. ಈ ದೇವಾಲಯದ ಹೊರಭಾಗದಲ್ಲಿ ಆಗ್ನೇಯ ದಿಕ್ಕಿನಲ್ಲಿ ಎರಡು ಕಲ್ಲಿನ ಕಂಬಗಳ ಮೇಲೆ ಅಡ್ಡತೊಲೆ ಇಟ್ಟು ಅದರ ಮೇಲೆ ವೈಷ್ಣವ ಸಂಕೇತಗಳಾದ ಶಂಖ, ಚಕ್ರ ಮತ್ತು ನಾಮವನ್ನು ಪ್ರತಿಷ್ಠಾಪಿಸಲಾಗಿದೆ. ದೇವಾಲಯದ ಮಾನಸೂತ್ರಕ್ಕೆ ಸರಿಯಾಗಿ 25 ಅಡಿ ಎತ್ತರವಿರುವ ಕಣಶಿಲೆಯ ಗರುಡ ಸ್ತಂಭವನ್ನು ನಿಲ್ಲಿಸಲಾಗಿದೆ. ಈ ಕಂಬದ ಮೇಲೆ ಶಂಖ, ಚಕ್ರ, ನಾಮವನ್ನು ಬಿಡಿಸಲಾಗಿದೆ. ದೇವಾಲಯವು ಸುಸ್ಥಿತಿಯಲ್ಲಿದ್ದು, ವೈಷ್ಣವ ಬ್ರಾಹ್ಮಣರು ಇಂದಿಗೂ ಸಹ ಸಂಪ್ರದಾಯದಂತೆ ಪೂಜಾಕೈಂಕರ್ಯಗಳನ್ನು ನೆರವೇರಿಸುತ್ತಿದ್ದಾರೆ. [171]

**ಬೇಟೆರಾಯಸ್ವಾಮಿ ದೇವಾಲಯ–ಮಾವಿನಕೆರೆ**

ದಬ್ಬೇಘಟ್ಟ ಹೋಬಳಿ ಮಾವಿನಕೆರೆ ಗ್ರಾಮದ ಮಧ್ಯಭಾಗದಲ್ಲಿ ಪೂರ್ವಾಭಿಮುಖವಾಗಿ ಬೇಟೆರಾಯಸ್ವಾಮಿ ದೇವಾಲಯವು ನಿರ್ಮಾಣವಾಗಿದೆ. ಈ ದೇವಾಲಯವು ಏಕಕೂಟ ದೇವಾಲಯವಾಗಿದ್ದು ಇದರಲ್ಲಿ ಗರ್ಭಗೃಹ, ಸುಖನಾಸಿ ಮತ್ತು ನವರಂಗವನ್ನು ಹೊಂದಿದ್ದು ಮುಖಮಂಟಪ ನಶಿಸಿಹೋಗಿದೆ. ಈ ದೇವಾಲಯವು ವಿಜಯನಗರ ಅರಸರ ಕಾಲದಲ್ಲಿ ನಿರ್ಮಾಣವಾಗಿದ್ದು ಸಂಪೂರ್ಣವಾಗಿ ಕಣಶಿಲೆಯಲ್ಲಿ ನಿರ್ಮಾಣಗೊಂಡಿದೆ. [172]

**ಗರ್ಭಗೃಹ:**–ಗರ್ಭಗೃಹವು 8X8 ಅಡಿ ಉದ್ದ ಮತ್ತು ಅಗಲವಾಗಿದ್ದು ಚೌಕಾಕಾರವಾಗಿದೆ. ಮಧ್ಯಭಾಗದಲ್ಲಿ ಎರಡು ಅಡಿ ಗರುಡಪೀಠದ ಮೇಲೆ 4 ಎತ್ತರವಿರುವ ಬೇಟೆರಾಯಸ್ವಾಮಿಯ ಮೂರ್ತಿಯನ್ನು ಪ್ರತಿಷ್ಠಾಪನೆ ಮಾಡಲಾಗಿದೆ. ಸಮಭಂಗಿಯಲ್ಲಿ ನಿಂತಿರುವ ಈ ದೇವನು ಚತುರ್ಭುಜ ಹೊಂದಿದ್ದು ಶಂಖ, ಚಕ್ರ, ವರದಹಸ್ತ ಮತ್ತು ಗಧೆಯನ್ನು ಹಿಡಿದುನಿಂತಿದ್ದಾನೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣಗಳು ಸುಂದರವಾಗಿವೆ. ವಿವಿಧ ವಸ್ತ್ರಾಭರಣಗಳನ್ನು ಕಾಣಬಹುದು. ಪ್ರಾಭಾವಳಿಯಲ್ಲಿ ಬಳ್ಳಿ ಸುರಳಿಗಳವೆ ಅಂತ್ಯ ಭಾಗದಲ್ಲಿ ಕೀರ್ತಿಮುಖವನ್ನು ರಚಿಸಲಾಗಿದೆ. ಇಕ್ಕೆಲಗಳಲ್ಲಿ ಶ್ರೀದೇವಿ ಮತ್ತು ಭೂದೇವಿಯರು ಪದ್ಮಪುಷ್ಪ ಮತ್ತು ಫಲವನ್ನು ಹಿಡಿದು ನಿಂತಿದ್ದಾರೆ. **(ಚಿ.ಸಂ.123)**

**ಸುಖನಾಸಿ:**–ಸುಖನಾಸಿಯು ಸಹ ಗರ್ಭಗೃಹದಷ್ಟೇ ಉದ್ದ ಮತ್ತು ಅಗಲವನ್ನು ಹೊಂದಿದ್ದು ಚೌಕಾಕಾರವಾಗಿದೆ. ಸುಖನಾಸಿಯಲ್ಲಿ ಯಾವುದೇ ಮೂರ್ತಿಶಿಲ್ಪಗಳ ಕೆತ್ತನೆಗಳು ಕಂಡು ಬರುವುದಿಲ್ಲ ಹಾಗೂ ಇದು ಸರಳವಾಗಿದೆ. ಇದರ ಬಾಗಿಲ ಪಟ್ಟಿಕೆಗಳಲ್ಲಿ ಯಾವುದೇ ಅಲಂಕರಣದ ಕೆತ್ತನೆ ಕಾಣಬರುವುದಿಲ್ಲ.

**ನವರಂಗ;**–ನವರಂಗವು ಸುಮಾರು 25X25 ಅಡಿ ಉದ್ದ ಮತ್ತು ಅಗಲವಾಗಿದ್ದು ಚೌಕಾಕಾರವಾಗಿದೆ. ನವರಂಗದಲ್ಲಿ ವಿಜಯನಗರ ಶೈಲಿಯ ಆರು ಅಡಿ ಎತ್ತರವುಳ್ಳ ನಾಲ್ಕು, ಹದಿನಾರು ಮುಖಗಳನ್ನುಳ್ಳ ನಾಲ್ಕು ಕಂಬಗಳನ್ನು ನವರಂಗದಲ್ಲಿ ಕಾಣಬರುತ್ತವೆ. **(ಚಿ.ಸಂ.124)** ಈ ಕಂಬಗಳ ಮೇಲೆ ಹನುಮಂತನು ಕೈಮುಗಿಯುತ್ತಿರುವಂತೆ, ವಾನರವೊಂದು ಫಲವನ್ನು ತಿನ್ನುತ್ತಿರುವಂತಹ ಉಬ್ಬು ಶಿಲ್ಪಗಳನ್ನು ಕೆತ್ತಲಾಗಿದೆ. ಉಳಿದಂತೆ ಮೇಲ್ಛಾವಣಿಗೆ ಕಲ್ಲಿನ ಚಪ್ಪಡಿಗಳನ್ನು ಹಾಸಿ ಮುಚ್ಚಲಾಗಿದೆ. ನವರಂಗದಲ್ಲಿ ಗೋಡೆಗಳಿಗೆ ಹೊಂದಿಕೊಂಡಂತೆ ಹನ್ನೆರಡು ಕಂಬಗಳನ್ನು ಸೇರಿಸಲಾಗಿದೆ. ನವರಂಗದ ಬಾಗಿಲು ಪಟ್ಟಿಕೆಗಳಿಂದ ಕೂಡಿದ್ದು, ಪಟ್ಟಿಕೆಗಳಲ್ಲಿ ಕಮಲದ ದಳಗಳ ಬಳ್ಳಿಸುರುಳಿಗಳ ಕೆತ್ತನೆ ಮತ್ತು ಲಲಾಟಬಿಂಬದಲ್ಲಿ ಅರಳಿದ

ಪದ್ಮವನ್ನು ಬಿಡಿಸಲಾಗಿದೆ. ದ್ವಾರದ ಇಕ್ಕೆಲಗಳಲ್ಲಿ ತ್ರಿಭಂಗಿಯಲ್ಲಿ ನಿಂತಿರುವ ದ್ವಾರಪಾಲಕರಿದ್ದಾರೆ. ಇವರು ಚತುರ್ಭುಜ ಹೊಂದಿದ್ದು ಕೈಗಳಲ್ಲಿ ಶಂಖ, ಚಕ್ರ, ಗಧಾ ಹಾಗೂ ಕಠಿಹಸ್ತ ವನ್ನೊಂದಿದ್ದಾರೆ. ಪ್ರಭಾವಳಿಯಲ್ಲಿ ಬಳ್ಳಿ ಸುರುಳಿ ಕೀರ್ತಿಮುಖವನ್ನು ಬಿಡಿಸಲಾಗಿದೆ.

ಈ ದೇವಾಲಯಕ್ಕೆ ಮುಖಮಂಟಪ ಕಂಡುಬರುವುದಿಲ್ಲ. ದೇವಾಲಯದ ಮುಂದೆ 15 ಅಡಿ ಎತ್ತರವಿರುವ ಕಣ ಶಿಲೆಯ ಗರುಡ ಸ್ತಂಭವನ್ನು ಮತ್ತು ಇದರ ಪಕ್ಕದಲ್ಲಿಯೇ 5 ಅಡಿ ಎತ್ತರವಿರುವ ಉಪಸ್ತಂಭ ನಿಲ್ಲಿಸಲಾಗಿದ್ದು ಪೀಠ ಭಾಗದಲ್ಲಿ ಆಂಜನೇಯನ ಕೆತ್ತನೆಯನ್ನು ಮಾಡಲಾಗಿದೆ.

**ಅಧಿಷ್ಠಾನ**:– ಅಧಿಷ್ಠಾನದ ಮೇಲ್ಭಾಗದ ಪಟ್ಟಿಕೆಯೊಂದನ್ನು ಹೊರತುಪಡಿಸಿ ಇನ್ನುಳಿದ ಪಟ್ಟಿಕೆಗಳು ಭೂಮಿಯಲ್ಲಿ ಮುಚ್ಚಿವೆ. ದಕ್ಷಿಣ ಮತ್ತು ಉತ್ತರ ಭಾಗದ ಅಧಿಷ್ಠಾನದ ಪಟ್ಟಿಕೆಗಳಲ್ಲಿ ಕುಮುದ, ಕಪೋತ ಕಂಡುಬಂದಿದ್ದು ಸರಳವಾಗಿವೆ.

**ಭಿತಿ**:– ಕಣಶಿಲೆಯ ಕಲ್ಲಿನ ದೊಡ್ಡ ದೊಡ್ಡ ದಿಮ್ಮಿಗಳನ್ನು ಒಂದರ ಮೇಲೊಂದರಂತೆ ಕ್ರಮವಾಗಿ ಜೋಡಿಸಿ ಭಿತ್ತಿಯನ್ನು ನಿರ್ಮಿಸಲಾಗಿದೆ. ಭಿತ್ತಿಯು ಸರಳವಾಗಿದ್ದು ಯಾವುದೇ ಶಿಲ್ಪ ಕೆತ್ತನೆಗಳು ಕಂಡುಬರುವುದಿಲ್ಲ. ಭಿತ್ತಿಯ ಮೇಲ್ಭಾಗದಲ್ಲಿ ನಾಲ್ಕು ಇಂಚು ಕಲ್ಲಿನ ಚಪ್ಪಡಿ ಮುಂದೆ ಬರುವಂತೆ ನಿರ್ಮಿಸಿ ಕಪೋತವನ್ನು ರಚಿಸಲಾಗಿದೆ. ಅದರ ಮೇಲಿರುವ ಕೈಪಿಡಿ ಗೋಡೆಯನ್ನು ಗಾರೆ ಮತ್ತು ಇಟ್ಟಿಗೆಯಿಂದ ರಚಿಸಲಾಗಿದೆ. ಗರ್ಭಗೃಹದ ಭಿತ್ತಿಯಲ್ಲಿ ಕಾಳಿಂಗಮರ್ಧನ ಕೃಷ್ಣ, ಶ್ರೀರಾಮನಿಗೆ ನಮಿಸುತ್ತಿರುವ ಹನುಮಂತನ ಶಿಲ್ಪಗಳನ್ನು ಬಿಡಿಸಲಾಗಿದೆ.

**ಶಿಖರ**:– ಗರ್ಭಗೃಹದ ಮೇಲಿರುವ ಶಿಖರವು ದ್ರಾವಿಡ ಶೈಲಿಯಲ್ಲಿದ್ದು ಒಂದರ ಮೇಲೋದಂತೆ ತಲಗಳನ್ನು ನಿರ್ಮಿಸಿ ಮೇಲೆ ಹೋದಂತೆ ಕಿರಿದಾಗುತ್ತಾ ಸಾಗುತ್ತದೆ. ಶಿಖರದ ನಾಲ್ಕು ಮೂಲೆಗಳಲ್ಲಿ ಎರಡು ದೇಹ ಒಂದು ತಲೆ ಹೊಂದಿರುವ ಸಿಂಹಗಳು ಅಲ್ಲದೆ ಶಿಖರದಲ್ಲಿ ದೇವ ಕೋಷ್ಠಗಳು, ಏಕಶಿಲಾ ಮಂಟಪ ಕೋಷ್ಠಗುಡಿಗಳಲ್ಲಿ ವಿಷ್ಣುವಿನ ಅವತಾರಕ್ಕೆ ಸಂಬಂಧಿಸಿದ ಮೂರ್ತಿ ಶಿಲ್ಪಗಳನ್ನು ಕೆತ್ತಲಾಗಿದೆ. ಶಿಖರವು ಗಾರೆ ಮತ್ತು ಇಟ್ಟಿಗೆಯಿಂದ ನಿರ್ಮಾಣವಾಗಿದ್ದು ಎರಡನೇ ಹಂತದಲ್ಲಿ ಸಣ್ಣ ಸಣ್ಣ ಗೂಡುಗಳ ರಚನೆಯಿದ್ದು ಮೇಲ್ಭಾಗದಲ್ಲಿ ಗುಮ್ಮಟಾಕಾರದ ಸ್ತೂಪಿಯು ನಿರ್ಮಾಣವಾಗಿದೆ ಸ್ತೂಪಿಯ ಕೆಳಭಾಗದಲ್ಲಿ ಒಂದು ತಲೆ, ಎರಡು ದೇಹ ಹೊಂದಿರುವ ಸಿಂಹಗಳನ್ನು ನಾಲ್ಕು ಮೂಲೆಗಳಲ್ಲಿ ನಿರ್ಮಾಣ ಮಾಡಲಾಗಿದೆ. ಸ್ತೂಪಿಯ ನಾಲ್ಕು ದಿಕ್ಕುಗಳಲ್ಲಿಯೂ ಕೀರ್ತಿಮುಖಗಳಿವೆ. ಸ್ತೂಪಿಯ ಮೇಲ್ಭಾಗದಲ್ಲಿ ಕಳಸ ಇರಿಸಲಾಗಿದೆ. ಶಿಖರದ ಮುಂಭಾಗದಲ್ಲಿ ಸುಖನಾಸವನ್ನು ಮಾಡಲಾಗಿದೆ. ಇದರಲ್ಲಿ ಯಾವುದೇ ಮೂರ್ತಿಶಿಲ್ಪ ಈಗ

ಕಾಣಬರುವುದಿಲ್ಲ. **(ಚಿ.ಸಂ.125)** ದೇವಾಲಯಕ್ಕೆ ಯಾವುದೇ ಪ್ರಾಕಾರವಿಲ್ಲ. ಈ ದೇವಾಲಯದ ಉತ್ತರ ಭಾಗದಲ್ಲಿ ಸುಮಾರು ನಾಲ್ಕು ಅಡಿ ಎತ್ತರದ ತುಳಸಿ ಕಟ್ಟೆಯನ್ನು ಕಾಣಬಹುದಾಗಿದೆ. [173]

**ವೆಂಕಟರಮಣ ದೇವಾಲಯ-ಕಡೆಹಳ್ಳಿ**

ತುರುವೇಕೆರೆಯ ನೈರುತ್ಯ ಭಾಗದಲ್ಲಿ ಕಡೆಹಳ್ಳಿ ಗ್ರಾಮವು ಕಂಡುಬರುತ್ತದೆ. ಈ ಊರಿನ ಮಧ್ಯಭಾಗದಲ್ಲಿ ಪೂರ್ವಾಭಿಮುಖವಾಗಿ ವೆಂಕಟರಮಣ ದೇವಾಲಯವನ್ನು ನಿರ್ಮಿಸಲಾಗಿದೆ. ಇದೊಂದು ಏಕಕೂಟ ದೇವಾಲಯವಾಗಿದ್ದು ಒಂದು ಗರ್ಭಗೃಹ, ಸುಖನಾಸಿ, ನವರಂಗವನ್ನು ಹೊಂದಿದ್ದು ಮುಖಮಂಟಪ ಕಂಡುಬರುವುದಿಲ್ಲ. ಈ ದೇವಾಲಯವನ್ನು ಗಮನಿಸಿದಾಗ ವಿಜಯನಗರ ಅರಸರ ಕಾಲದ ದೇವಾಲಯದ ಲಕ್ಷಣಗಳನ್ನು ಹೊಂದಿದೆ.

**ಗರ್ಭಗೃಹ**:-ಗರ್ಭಗೃಹವು ಸುಮಾರು 8X8 ಅಡಿ ಉದ್ದ ಮತ್ತು ಅಗಲವಾಗಿದ್ದು ಚೌಕಾಕಾರವಾಗಿದೆ. ಇದರ ಮಧ್ಯದಲ್ಲಿ ಸುಮಾರು ಎರಡು ಅಡಿ ಎತ್ತರವಿರುವ ಗರುಡ ಪೀಠದ ಮೇಲೆ ನಾಲ್ಕು ಅಡಿ ಎತ್ತರವಿರುವ ವೆಂಕಟರಮಣ ಮೂರ್ತಿ ಶಿಲ್ಪವನ್ನು ಪ್ರತಿಷ್ಠಾಪನೆ ಮಾಡಲಾಗಿದೆ. ಈ ದೇವನು ಚತುರ್ಭುಜವನ್ನು ಹೊಂದಿದ್ದು, ಕೈಗಳಲ್ಲಿ ಶಂಖ, ಚಕ್ರ ಗಧಾ ಮತ್ತು ಕಟಿಹಸ್ತವನ್ನು ಹೊಂದಿದ್ದಾನೆ. ಈ ದೇವನ ಹಿಂದೆ ಪ್ರಭಾವಳಿಯನ್ನು ರಚಿಸಲಾಗಿದ್ದು ಪ್ರಭಾವಳಿಯಲ್ಲಿ ಬಳ್ಳಿ ಸುರುಳಿಗಳ ಅಲಂಕರಣದ ಕೆತ್ತನೆ ಹೊಂದಿದೆ. ಅಂತ್ಯ ಭಾಗದಲ್ಲಿ ಕೀರ್ತಿಮುಖವನ್ನು  ಬಿಡಿಸಲಾಗಿದೆ. ಇಕ್ಕೆಲಗಳಲ್ಲಿ ಫಲ ಮತ್ತು ಪದ್ಮ ಪುಷ್ಪವನ್ನು ಹಿಡಿದು ನಿಂತಿರುವ ಶ್ರೀದೇವಿ ಮತ್ತು ಭೂದೇವಿ ದೇವತೆಯರಿದ್ದಾರೆ. ಗರ್ಭಗೃಹದ ಮೇಲ್ಛಾವಣಿ ಮತ್ತು ದ್ವಾರವು ಸರಳವಾಗಿದೆ.

**ಸುಖನಾಸಿ**:- ಸುಖನಾಸಿಯು ಗರ್ಭಗೃಹದಷ್ಟೇ ಉದ್ದ ಮತ್ತು ಅಗಲವಾಗಿದ್ದು ಚೌಕಾಕಾರವಾಗಿದೆ. ಇದರಲ್ಲಿ ಯಾವುದೇ ಮೂರ್ತಿ ಶಿಲ್ಪಗಳು ಕಂಡುಬರುವುದಿಲ್ಲ. ಸುಖನಾಸಿಯ ದ್ವಾರದ ಇಕ್ಕೆಲಗಳಲ್ಲಿ ಒಂಟಿ ಕಾಲಿನಲ್ಲಿ ನಿಂತಿರುವ ವೈಷ್ಣವ ದ್ವಾರಪಾಲಕರಿದ್ದಾರೆ. **(ಚಿ.ಸಂ.126)** ಇವರು ಚತುರ್ಭುಜ ಹೊಂದಿದ್ದು ಶಂಖ, ಚಕ್ರ, ಗಧಾ ಮತ್ತು ಎಡಗೈಯನ್ನು ಸೊಂಟದ ಮೇಲಿಸಿರಿದ್ದಾರೆ.

**ನವರಂಗ**:- ನವರಂಗವು 20X20 ಅಡಿ ಉದ್ದ ಮತ್ತು ಅಗಲವಾಗಿದ್ದು ಚೌಕಾಕಾರವಾಗಿದೆ. ಇದರ ಮಧ್ಯದಲ್ಲಿ ವಿಜಯನಗರ ಶೈಲಿಯ ನಾಲ್ಕು ಕಂಬಗಳು ಕಂಡುಬರುತ್ತವೆ.  ಇವುಗಳು ಚೌಕ ಮತ್ತು ಅಷ್ಟಮುಖಗಳನ್ನು ಹೊಂದಿವೆ. ಕಂಬಗಳ ಚೌಕದ ಮೇಲೆ ಭಕ್ತ ದಂಪತಿಗಳ

ಶಿಲ್ಪಗಳನ್ನು ಬಿಡಿಸಲಾಗಿದೆ. ನವರಂಗದ ಮೇಲ್ಛಾವಣಿಯನ್ನು ಕಲ್ಲು ಚಪ್ಪಡಿಗಳನ್ನು ಹಾಸಿ ಮುಚ್ಚಲಾಗಿದೆ ನವರಂಗದ ದ್ವಾರವು ಸರಳವಾಗಿದೆ.

**ಅಧಿಷ್ಠಾನ:-** ಅಧಿಷ್ಠಾನದಲ್ಲಿ ವಿಜಯನಗರ ಶೈಲಿಯ ಕಲ್ಲಿನ ಅಧಿಷ್ಠಾನವನ್ನು ನಿರ್ಮಿಸಲಾಗಿದೆ. ಭಿತ್ತಿಯನ್ನು ಸಹ ಉದ್ದವಾದ ಕಲ್ಲಿನ ದಿಮ್ಮಿಗಳನ್ನು ಜೋಡಿಸಿ ನಿರ್ಮಿಸಲಾಗಿದೆ ಭಿತ್ತಿಯಲ್ಲಿ ಯಾವುದೇ ಶಿಲ್ಪಗಳು ಕಂಡುಬರುವುದಿಲ್ಲ. ಭಿತ್ತಿಯ ಮೇಲೆ ಕಪೋತದ ಬದಲು ಗಾರೆಯ ದಿಂಡನ್ನು ಮಾಡಲಾಗಿದೆ.

ಗರ್ಭಗೃಹದ ಮೇಲೆ ಇಟ್ಟಿಗೆ ಮತ್ತು ಗಾರೆಯಿಂದ ಮಾಡಲಾದ ಚೌಕಾಕಾರದ ಶಿಖರವಿದೆ. ಈ ಶಿಖರ ನಾಲ್ಕು ದಿಕ್ಕುಗಳಲ್ಲಿಯೂ ಕೋಷ್ಠ ಗುಡಿಗಳನ್ನು ಹೊಂದಿದ್ದು, ಕೋಷ್ಠ ಗುಡಿಯ ಮಧ್ಯದ ಭಾಗವನ್ನು ಚೌಕ ಸ್ತಂಭಗಳಿಂದ ಅಲಂಕರಣೆ ಮಾಡಲಾಗಿದೆ. ವೃತ್ತಾಕಾರದ ಸ್ತೂಪಿಯನ್ನು ನಿರ್ಮಾಣ ಮಾಡಿದ್ದು ಸ್ತೂಪಿಯ ನಾಲ್ಕು ದಿಕ್ಕುಗಳಲ್ಲಿಯೂ ಕೀರ್ತಿಮುಖವನ್ನು ರಚಿಸಲಾಗಿದೆ. ದೇವಾಲಯದ ಮುಂಭಾಗ ಹಾರದ ಮೇಲೆ ಇಟ್ಟಿಗೆ ಮತ್ತು ಗಾರೆಯನ್ನು ಉಪಯೋಗಿಸಿ ಮೂರು ಗೂಡುಗಳನ್ನು ರಚಿಸಲಾಗಿದೆ. **(ಚಿ.ಸಂ.127)** ದೇವಾಲಯಕ್ಕೆ ಮೇಲೇರಲು ಮುಂದೆ ಕಣಶಿಲೆಯ ಕಲ್ಲಿನ ಸೋಪಾನವನ್ನು ಮಾಡಲಾಗಿದೆ. [174]

**ತಿರುಮಲರಾಯ ದೇವಾಲಯ-ವಿಠಲಾಪುರ**

ವಿಠಲಾಪುರದ ಮಧ್ಯಭಾಗದಲ್ಲಿ ನಿರ್ಮಾಣ ಮಾಡಲಾಗಿರುವ ಈ ತಿರುಮಲರಾಯ ದೇವಾಲಯವನ್ನು ಜೀರ್ಣೋದ್ಧಾರ ಮಾಡಲಾಗಿದೆ. ಇದೊಂದು ಏಕಕೂಟ ದೇವಾಲಯ ವಾಗಿದ್ದು ಒಂದು ಗರ್ಭಗೃಹ, ಸುಖನಾಸಿ ಮತ್ತು ನವರಂಗ ಮಾತ್ರ ಕಂಡುಬರುತ್ತವೆ. ಈ ದೇವಾಲಯದ ಗರ್ಭಗೃಹದಲ್ಲಿ ಪ್ರತಿಷ್ಠಾಪಿಸಲಾಗಿರುವ ಮೂರ್ತಿ ರಂಗನಾಥ ಆದರೆ ಸ್ಥಳೀಯರು ಇದನ್ನು ತಿರುಮಲರಾಯ ಎಂದು ಕರೆಯುತ್ತಾರೆ.

**ಗರ್ಭಗೃಹ:-** ಗರ್ಭಗೃಹವು 8X8 ಅಡಿ ಉದ್ದಗಲವಾಗಿ ಚೌಕಾಕಾರವಾಗಿದೆ. ಈ ಗರ್ಭಗೃಹದ ಮಧ್ಯದಲ್ಲಿ ಸುಮಾರು 2 ಅಡಿ ಎತ್ತರವಿರುವ ನಕ್ಷತ್ರಾಕಾರದ ಗರುಡಪೀಠದ ಮೇಲಿರುವ ಪದ್ಮಪೀಠದ ಮೇಲೆ ಸುಮಾರು 4 ಅಡಿ ಎತ್ತರವಾಗಿ ರಂಗನಾಥ ಸ್ವಾಮಿಯನ್ನು ರಚಿಸಿ ಪ್ರತಿಷ್ಠಾಪಿಸಲಾಗಿದೆ. **(ಚಿ.ಸಂ.128)** ಸಮಭಂಗಿಯಲ್ಲಿ ನಿಂತಿರುವ ಈ ದೇವನು ಚತುರ್ಭುಜ ಹೊಂದಿದ್ದು ಕೈಗಳಲ್ಲಿ ಶಂಖ, ಚಕ್ರ, ಗಧಾ, ಪದ್ಮವನ್ನು ಹಿಡಿದುಕೊಂಡಿದ್ದಾನೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ. ಈ ದೇವನ ಇಕ್ಕೆಲಗಳಲ್ಲಿ ಫಲವನ್ನು ಹಿಡಿದು

ನಿಂತಿರುವ ದೇವಿಯರಿದ್ದಾರೆ. ಪ್ರಭಾವಳಿಯಲ್ಲಿ ಬಳ್ಳಿಸುರುಳಿ ಕೀರ್ತಿಮುಖವಿದೆ. ಈ ಗರ್ಭಗೃಹದ ಬಾಗಿಲು ಸರಳವಾಗಿದೆ. ಮೇಲ್ಛಾವಣಿಗೆ ಕಲ್ಲಿನ ಚಪ್ಪಡಿ ಉಪಯೋಗಿಸಿ ಮುಚ್ಚಲಾಗಿದೆ.

**ಸುಖನಾಸಿ:-** ಸುಖನಾಸಿಯು ಗರ್ಭಗೃಹದಷ್ಟೇ ವಿಶಾಲವಾಗಿದ್ದು ಇದರ ದಕ್ಷಿಣದ ಗೋಡೆಯ ಮುಂದೆ ಉತ್ಸವ ಮೂರ್ತಿಯನ್ನು ಇರಿಸಲಾಗಿದೆ. ಸುಖನಾಸಿಯ ದ್ವಾರವು ಸರಳವಾಗಿದ್ದು ಇಕ್ಕೆಲಗಳಲ್ಲಿ ಒಂಟಿ ಕಾಲಿನಲ್ಲಿ ನಿಂತಿರುವ ವೈಷ್ಣವ ದ್ವಾರಪಾಲಕರಿದ್ದಾರೆ. ಚತುರ್ಭುಜ ಹೊಂದಿರುವ ಇವರು ಶಂಖ, ಚಕ್ರ, ಗಧೆ ಹಿಡಿದು ಸೊಂಟದ ಮೇಲೆ ಕೈ ಇಟ್ಟುಕೊಂಡು ನಿಂತಿರುವಂತೆ ಕೆತ್ತನೆ ಮಾಡಲಾಗಿದೆ. ಪ್ರಭಾವಳಿಯಲ್ಲಿ ಬಳ್ಳಿ ಸುರುಳಿ ಕೀರ್ತಿಮುಖ ಬಿಡಿಸಲಾಗಿದೆ.

**ನವರಂಗ:-** ನವರಂಗವು 25X25 ಅಡಿ ಉದ್ದ ಮತ್ತು ಅಗಲವಾಗಿದ್ದು ಚೌಕಾಕಾರವಾಗಿದೆ. ಇದರ ಮಧ್ಯದಲ್ಲಿ ವಿಜಯನಗರ ಶೈಲಿಯ 4 ಕಂಬಗಳಿವೆ. **(ಚಿ.ಸಂ.129)** ಈ ಕಂಬಗಳ ಮೇಲೆ ಭಕ್ತಿಯಿಂದ ಕೈ ಮುಗಿದು ನಿಂತಿರುವ ದಂಪತಿಗಳು ಹಾಗೂ ಹನುಮಂತನ ಶಿಲ್ಪಗಳನ್ನು ಬಿಡಿಸಲಾಗಿದೆ. ನವರಂಗದ ಬಾಗಿಲು ಸರಳವಾಗಿದೆ. ಇದರ ಪಟ್ಟಿಕೆಗಳಲ್ಲಿ ಯಾವುದೇ ರೀತಿಯ ಅಲಂಕರಣದ ಕೆತ್ತನೆ ಕಾಣಬರುವುದಿಲ್ಲ.

**ಅಧಿಷ್ಠಾನ:-**ಅಧಿಷ್ಠಾನವು ಭೂಮಿಯಲ್ಲಿ ಊತುಹೋಗಿದೆ. ಭಿತ್ತಿಗೆ ಸೈಜುಗಲ್ಲನ್ನು ಉಪಯೋಗಿಸಿ ಪುನಃ ನಿರ್ಮಾಣ ಮಾಡಿ ಜೀರ್ಣೋದ್ಧಾರ ಮಾಡಲಾಗಿದೆ. ಕಪೋತವು ಸರಳವಾಗಿದ್ದು, ಇತ್ತೀಚೆಗೆ ಇಟ್ಟಿಗೆ ಮತ್ತು ಗಾರೆಯಿಂದ ಕೈಪಿಡಿಯನ್ನು ನಿರ್ಮಿಸಿದ್ದು ಶಿಖರವು ಕಂಡುಬರುವುದಿಲ್ಲ. ಹೀಗೆ ಮೇಲೆ ತಿಳಿಸಿದಂತಹ ಎಲ್ಲಾ ವೈಷ್ಣವ ಧರ್ಮಕ್ಕೆ ಸಂಬಂಧಿಸಿದ ದೇವಾಲಯಗಳು ಏಕಕೂಟ ದೇವಾಲಯವಾಗಿದ್ದು ಗರ್ಭಗೃಹ, ಸುಖನಾಸಿ, ನವರಂಗ ಮತ್ತು ಮುಖಮಂಟಪ ಹೊಂದಿದೆ. ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಇತಿಹಾಸವನ್ನು ಸಾರುವಲ್ಲಿ ಹೆಚ್ಚಿನ ಮಹತ್ವ ಪಡೆದುಕೊಂಡಿದೆ ಎನ್ನಬಹುದು. [175]

**ರಂಗನಾಥ ದೇವಾಲಯ-ಚಿಕ್ಕಶೆಟ್ಟಿಕೆರೆ**

ರಂಗನಾಥ ದೇವಾಲಯವು ಚಿಕ್ಕಶೆಟ್ಟಿ ಕೆರೆಯ ದಕ್ಷಿಣ ಭಾಗದಲ್ಲಿರುವ ಚಿಕ್ಕ ಬೆಟ್ಟದ ಮೇಲೆ ಈ ದೇವಾಲಯವನ್ನು ಪೂರ್ವಾಭಿಮುಖವಾಗಿ ನಿರ್ಮಿಸಲಾಗಿದೆ **(ಚಿ.ಸಂ.130)** ಕಣ ಶಿಲೆಯನ್ನು ಉಪಯೋಗಿಸಿ ದೇವಾಲಯವನ್ನು ನಿರ್ಮಾಣ ಮಾಡಲಾಗಿದೆ. ಆದರೆ ಇತ್ತೀಚೆಗೆ ಸಾಕಷ್ಟು ಜೀರ್ಣೋದ್ಧಾರಗೊಂಡಿದೆ. ಇದರಲ್ಲಿ ಒಂದು ಗರ್ಭಗೃಹ, ಸುಖನಾಸಿ, ನವರಂಗ

ಮತ್ತು ಮುಖಮಂಟಪಗಳು ಕಂಡುಬರುತ್ತವೆ. ಈ ದೇವಾಲಯದ ಉತ್ತರ ಭಾಗದಲ್ಲಿ ಬೆಟ್ಟದ ಕೆಳಗೆ ಒಂದು ಕೆರೆಯನ್ನು ನಿರ್ಮಾಣ ಮಾಡಲಾಗಿದೆ.

**ಗರ್ಭಗೃಹ**:- ಸುಮಾರು 6X6 ಅಡಿ ಉದ್ದ ಮತ್ತು ಅಗಲವಾಗಿದ್ದು, ಚೌಕಾಕಾರವಾಗಿದೆ. ಈ ಗರ್ಭಗೃಹದ ಮಧ್ಯದಲ್ಲಿ ಗರುಡಪೀಠದ ಮೇಲೆ ಸುಮಾರು ನಾಲ್ಕು ಅಡಿ ಎತ್ತರವಿರುವ ರಂಗನಾಥನನ್ನು ಪ್ರತಿಷ್ಠಾಪಿಸಲಾಗಿದೆ. ಸಮಭಂಗಿಯಲ್ಲಿ ನಿಂತಿರುವ ಈ ದೇವನು ಚತುರ್ಭುಜ ಹೊಂದಿದ್ದು ಕೈಗಳಲ್ಲಿ ಶಂಖ, ಚಕ್ರ, ಗಧಾ, ಮತ್ತು ವರದ ಹಸ್ತವನ್ನು ಹೊಂದಿದ್ದಾನೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸರಳವಾಗಿದೆ. ಈ ದೇವನ ಇಕ್ಕೆಲಗಳಲ್ಲಿ ಫಲ ಮತ್ತು ಪದ್ಮವನ್ನು ಹಿಡಿದುನಿಂತಿರುವ ದೇವಿಯರಿದ್ದಾರೆ. ಪ್ರಭಾವಳಿಯಲ್ಲಿ ಬಳ್ಳಿ ಸುರುಳಿ ಕೀರ್ತಿಮುಖವಿದೆ. ಗರ್ಭಗೃಹದ ಬಾಗಿಲು ಸರಳವಾಗಿದೆ. ಆದರೆ ಬಾಗಿಲ ಇಕ್ಕೆಲಗಳಲ್ಲಿ ವೈಷ್ಣವ ದ್ವಾರಪಾಲಕರು ಒಂಟಿಕಾಲಿನಲ್ಲಿ ನಿಂತಿದ್ದಾರೆ. ಚತುರ್ಭುಜ ಹೊಂದಿರುವ ಇವರು ಶಂಖ, ಚಕ್ರ, ಗಧಾ, ಸೊಂಟದ ಮೇಲೆ ಕೈಗಳನ್ನು ಇಟ್ಟುಕೊಂಡಿದ್ದಾನೆ.

**ಸುಖನಾಸಿ**:-ಸುಖನಾಸಿಯು ಗರ್ಭಗೃಹದಷ್ಟೇ ಉದ್ದ ಮತ್ತು ಅಗಲವಾಗಿದ್ದು ಚೌಕಾಕಾರವಾಗಿದೆ, ಸುಖನಾಸಿ ಗೋಡೆಗೆ ಇತ್ತೀಚೆಗೆ ಗ್ರಾನೈಟ್ ಅನ್ನು ಅಂಟಿಸಲಾಗಿದೆ. ಸುಖನಾಸಿಯ ದ್ವಾರವು ಸರಳವಾಗಿದೆ. ಇಕ್ಕೆಲಗಳಲ್ಲಿ ವೈಷ್ಣವ ದ್ವಾರಪಾಲಕರು ಒಂಟಿ ಕಾಲಿನಲ್ಲಿ ನಿಂತು ಶಂಖ, ಚಕ್ರ, ಗಧೆಯನ್ನು ಹೊಂದಿದ್ದಾರೆ.

**ನವರಂಗ**:-ನವರಂಗವು ಸುಮಾರು 20X20 ಅಡಿ ಉದ್ದ ಮತ್ತು ಅಗಲವಾಗಿದ್ದು ಚೌಕಾಕಾರ ವಾಗಿದೆ. ಇದರಲ್ಲಿ ವಿಜಯನಗರ ಶೈಲಿಯ ದೃಢವಾದ 4 ಕಂಬಗಳಿವೆ. **(ಚಿ.ಸಂ.131)** ಇವುಗಳನ್ನು ಚೌಕ, ಅಷ್ಟ ಮುಖಗಳಂತೆ ರಚಿಸಲಾಗಿದೆ. ನವರಂಗದ ದ್ವಾರವು ಸರಳವಾಗಿದೆ.

**ಮುಖಮಂಟಪ**:-ಮುಖಮಂಟಪದಲ್ಲಿ ವಿಜಯನಗರ ಶೈಲಿಯ ನಾಲ್ಕು ಕಂಬಗಳಿವೆ ಇದನ್ನು ಆಯತಾಕಾರವಾಗಿ ರಚಿಸಿ ಮೇಲ್ಛಾವಣಿಗೆ ಕಲ್ಲು ಚಪ್ಪಡಿಯನ್ನು ಹೊದಿಸಲಾಗಿದೆ. ಈ ದೇವಾಲಯದ ಮುಂದೆ ಸುಮಾರು 25 ಅಡಿ ಎತ್ತರವಿರುವ ಕಣ ಶಿಲೆಯ ಗರುಡ ಸ್ತಂಭವಿದೆ. ಇದು ಚೌಕ, ಅಷ್ಟ ಮುಖಗಳನ್ನು ಹೊಂದಿದ್ದು, ಬೋದಿಗೆಯ ಭಾಗವು ಗಾಲಿಯಾಕಾರವಾಗಿದ್ದು ಅದರ ಮೇಲೆ ಪದ್ಮಪುಷ್ಪದ ಚೌಕಟ್ಟಿರುವ ಫಲಗೈ ಹೊಂದಿದೆ. **(ಚಿ.ಸಂ.132)**

ಈ ದೇವಾಲಯವನ್ನು ಬೆಟ್ಟದ ಮೇಲಿರುವ ಬಂಡೆಯ ಮೇಲೆ ನಿರ್ಮಾಣ ಮಾಡಿರುವುದರಿಂದ ಅಧಿಷ್ಠಾನವಿಲ್ಲ. ಭಿತ್ತಿಯ ಭಾಗವನ್ನು ಸಿಮೆಂಟಿನಿಂದ ಲೇಪಿಸಲಾಗಿದೆ. ಕಪೋತವು ಭಿತ್ತಿಯ ಮುಂದೆ ಚಾಚಿದ್ದು ಇತ್ತೀಚೆಗೆ ಕಪೋತದ ಮೇಲ್ಭಾಗದ ಹಾರದಲ್ಲಿ ಕೋಷ್ಠ

ಗುಡಿಗಳನ್ನು ಮಾಡಿ ಅವುಗಳಲ್ಲಿ ವಿಷ್ಣುವಿನ ಅವತಾರಕ್ಕೆ ಸಂಬಂಧಿಸಿದ ಗಾರೆ ಶಿಲ್ಪಗಳನ್ನು ಕೆತ್ತನೆ ಮಾಡಲಾಗಿದೆ. ಅವುಗಳಲ್ಲಿ ಕೃಷ್ಣ, ರಾಮ, ಸೀತೆ, ಲಕ್ಷ್ಮಣ, ವಿಷ್ಣು ಇನ್ನೂ ಮುಂತಾದ ಶಿಲ್ಪಗಳನ್ನು ಬಿಡಿಸಲಾಗಿದೆ.

**ಶಿಖರ**:-ಗರ್ಭಗೃಹದ ಮೇಲೆ ನಿರ್ಮಿಸಲಾಗಿರುವ ಶಿಖರವು ಇಟ್ಟಿಗೆ ಮತ್ತು ಗಾರೆಯಿಂದ ಮಾಡಲಾಗಿದೆ. **(ಚಿ.ಸಂ.133)** ಶಿಖರದ ಮೂಲೆಗಳಲ್ಲಿ ಎರಡು ದೇಹ ಒಂದು ತಲೆಯ ಸಿಂಹ, ವಿಷ್ಣುವಿನ ಶಿಲ್ಪಗಳನ್ನು ಬಿಡಿಸಲಾಗಿದೆ. ಸ್ತೂಪಿಯ ಭಾಗದಲ್ಲಿ ನಾಲ್ಕು ದಿಕ್ಕುಗಳಲ್ಲಿ ಕೀರ್ತಿಮುಖವಿದೆ. ದೇವಾಲಯದ ಶಿಖರದ ಮೇಲಿದ್ದ ಕಳಶ ಕಣ್ಮರೆಯಾಗಿದೆ. ದೇವಾಲಯದ ವಾಯುವ್ಯ ಮೂಲೆಯಲ್ಲಿ ಕಣಶಿಲೆಯ ಸುಮಾರು ಹನ್ನೆರೆಡು ಅಡಿ ಎತ್ತರವಿರುವ ದೀಪ ಸ್ಥಂಭವನ್ನು ನಿಲ್ಲಿಸಲಾಗಿದೆ. [176]

**ರಂಗನಾಥ ದೇವಾಲಯ-ಬುಗುಡನ ಹಳ್ಳಿ**

ಬುಗುಡನ ಹಳ್ಳಿಯ ಉತ್ತರ ಭಾಗದಲ್ಲಿ ಪೂರ್ವಾಭಿಮುಖವಾಗಿ ಕಣಶಿಲೆಯನ್ನು ಉಪಯೋಗಿಸಿ ಈ ದೇವಾಲಯವನ್ನು ನಿರ್ಮಾಣ ಮಾಡಲಾಗಿದೆ. ಇದೊಂದು ಏಕಕೂಟ ದೇವಾಲಯವಾಗಿದ್ದು, ಗರ್ಭಗೃಹ, ಸುಖನಾಸಿ, ನವರಂಗ ಮುಖಮಂಟಪ ಮತ್ತು ಪಾತಾಳಾಂಕಣವನ್ನು ಇಲ್ಲಿ ಕಾಣಬಹುದು. ಈ ದೇವಾಲಯದ ನಿರ್ಮಾಣ ಕಾಲಕ್ಕೆ ಸಂಬಂಧಿಸಿದ ಯಾವುದೇ ಶಾಸನಾಧಾರಗಳು ನಮಗೆ ನೇರವಾಗಿ ದೊರೆಯದಿದ್ದರೂ ಈ ದೇವಾಲಯದ ರಚನೆಯು ವಿಜಯನಗರ ಶೈಲಿಯನ್ನು ಒಳಗೊಂಡಿದೆ. [177]

**ಗರ್ಭಗೃಹ**:- ಗರ್ಭಗೃಹವು ಸುಮಾರು 8x8 ಅಡಿ ಉದ್ದಗಲವಾಗಿದ್ದು ಚೌಕಾಕಾರವಾಗಿದೆ. ಈ ಗರ್ಭಗೃಹದ ಮಧ್ಯದಲ್ಲಿ ಒಂದು ಅಡಿ ಎತ್ತರವಿರುವ ಗರುಡ ಪೀಠದ ಮೇಲೆ ರಂಗನಾಥ ಮೂರ್ತಿಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಈ ದೇವನು ಚತುರ್ಭುಜವನ್ನು ಹೊಂದಿದ್ದು ಕೈಗಳಲ್ಲಿ ಶಂಖ, ಚಕ್ರ, ಗಧಾ ಮತ್ತು ವರದಹಸ್ತವನ್ನು ಹೊಂದಿದ್ದಾನೆ. ಈ ದೇವನ ಮೈ ಮೇಲೆ ಬಿಡಿಸಲಾಗಿರುವ ವಸ್ತ್ರಾಭರಣಗಳು ಸರಳವಾಗಿವೆ. ಪ್ರಭಾವಳಿಯಲ್ಲಿ ಪದ್ಮಧಳದ ಅಲಂಕರಣ ಮತ್ತು ಕೀರ್ತಿ ಮುಖವನ್ನು ಮಾಡಲಾಗಿದೆ. ಈ ದೇವನ ಇಕ್ಕೆಲಗಳಲ್ಲಿ ಕಮಲದ ಪುಷ್ಪ ಇಡಿದು ನಿಂತಿರುವ ದೇವಿಯರಿದ್ದಾರೆ. **(ಚಿ.ಸಂ.134)** ಗರ್ಭಗೃಹದ ಮೇಲ್ಛಾವಣಿ ಮತ್ತು ಬಾಗಿಲು ಸರಳವಾಗಿದೆ.

**ಸುಖನಾಸಿ**:- ಸುಖನಾಸಿಯು ಗರ್ಭಗೃಹದಷ್ಟೇ ಉದ್ದ ಮತ್ತು ಅಗಲವಾಗಿದ್ದು ಚೌಕಾಕಾರವಾಗಿದೆ. ಇದರಲ್ಲಿ ಪೂಜಾ ಸಾಮಗ್ರಿಗಳನ್ನು ಇರಿಸಲಾಗಿದೆ. ಇದರ ಮೇಲ್ಛಾವಣಿ ಸರಳವಾಗಿದೆ.

ಸುಖನಾಸಿಯ ದ್ವಾರವು ಕಲಾತ್ಮಕ ಕೆತ್ತನೆಯಿಂದ ಕೂಡಿದ್ದು, ಬಳ್ಳಿಸುರುಳಿಗಳ ಅಲಂಕರಣದ ಕೆತ್ತನೆ ಮಾಡಲಾಗಿದೆ. ದ್ವಾರದ ಇಕ್ಕೆಲಗಳಲ್ಲಿ ವೈಷ್ಣವ ದ್ವಾರಪಾಲಕರಿದ್ದಾರೆ. ಇವರು ಒಂಟಿ ಕಾಲಿನಲ್ಲಿ ನಿಂತು ಚತುರ್ಭುಜ ಹೊಂದಿದ್ದಾರೆ. ಕೈಗಳಲ್ಲಿ ಶಂಖ, ಚಕ್ರ, ಅಭಯ ಹಸ್ತವಿದ್ದು ಗದೆಯನ್ನು ಹಿಡಿದುಕೊಂಡಿದ್ದಾರೆ.

**ನವರಂಗ**:-ನವರಂಗವು ಸುಮಾರು 20X20 ಅಡಿ ಉದ್ದ ಮತ್ತು ಅಗಲವಾಗಿದ್ದು ಚೌಕಾಕಾರವಾಗಿದೆ. ಇದರ ಮಧ್ಯಭಾಗದಲ್ಲಿ ವಿಜಯನಗರ ಶೈಲಿಯ ನಾಲ್ಕು ಕಂಬಗಳಿವೆ. **(ಚಿ.ಸಂ.135)** ಈ ಕಂಬಗಳ ಚೌಕಾಕಾರದ ಭಾಗದಲ್ಲಿ ವಿಷ್ಣುವಿನ ವಿವಿಧ ಬಗೆಯ ಶಿಲ್ಪಗಳು ಹಾಗೂ ಕಮಲದ ಪುಷ್ಪವನ್ನು ಬಿಡಿಸಲಾಗಿದೆ. ಮೇಲ್ಛಾವಣಿ ಸರಳವಾಗಿದೆ. ಈ ನವರಂಗದ ನೈರುತ್ಯ ಮೂಲೆಯಲ್ಲಿ ಅಮ್ಮನವರ ಗುಡಿಯಿದೆ. ಈ ದೇವಿಯು ಪದ್ಮಾಸನದಲ್ಲಿ ಕುಳಿತಿದ್ದು ಚತುರ್ಭುಜವನ್ನು ಹೊಂದಿದ್ದಾಳೆ. ಕೈಗಳಲ್ಲಿ ಶಂಖ, ಚಕ್ರ, ಫಲ ಮತ್ತು ಪದ್ಮವನ್ನು ಹಿಡಿದುಕೊಂಡಿದ್ದಾಳೆ. ಹಿಂಭಾಗದಲ್ಲಿರುವ ಪ್ರಭಾವಳಿಯಲ್ಲಿ ಬಳ್ಳಿ ಸುರುಳಿ ಕೀರ್ತಿಮುಖವನ್ನು ಬಿಡಿಸಲಾಗಿದೆ. ನವರಂಗದ ಬಾಗಿಲು ಸರಳವಾಗಿದ್ದು ಪಟ್ಟಿಕೆಗಳಲ್ಲಿ ದಳಗಳ ಅಲಂಕರಣ ಮಾಡಲಾಗಿದೆ. ಇಕ್ಕೆಲಗಳಲ್ಲಿ ಒಂಟಿ ಕಾಲಿನಲ್ಲಿ ನಿಂತಿರುವ ವಿಷ್ಣುವಿನ ದ್ವಾರಪಾಲಕರಿದ್ದಾರೆ. ಚತುರ್ಭುಜವನ್ನು ಹೊಂದಿರುವ ಇವರ ಕೈಗಳಲ್ಲಿ ಶಂಖ, ಚಕ್ರ, ಗಧಾ ಹಿಡಿದು ಎಡಗೈ ಮತ್ತು ಬಲಗೈಗಳನ್ನು ಮೇಲಿರಿಸಿಕೊಂಡಿದ್ದಾರೆ. ಇವರ ಹಿಂಭಾಗದಲ್ಲಿ ಕೀರ್ತಿಮುಖವುಳ್ಳ ಪ್ರಭಾವಳಿಯಿದೆ. ಈ ದ್ವಾರದ ಇಕ್ಕೆಲಗಳಲ್ಲಿ ಇರುವ ಚೌಕಾಕಾರದ ಕಂಬದ ಪೀಠದಲ್ಲಿ ಕಳಸ ಮತ್ತೊಂದರಲ್ಲಿ ಕುಳಿತಿರುವ ಸಿಂಹವನ್ನು ಬಿಡಿಸಲಾಗಿದೆ. [178]

**ಮುಖಮಂಟಪ**:- ಮುಖಮಂಟಪವು ಆಯತಾಕಾರವಾಗಿದೆ. ಇದರಲ್ಲಿ ನಾಲ್ಕು ವಿಜಯನಗರ ಶೈಲಿಯ ಕಂಬಗಳಿವೆ ಈ ಮುಖಮಂಟಪಕ್ಕೆ ಉತ್ತರ ಮತ್ತು ದಕ್ಷಿಣದಲ್ಲಿ ಸೋಪಾನಗಳನ್ನು ಮಾಡಲಾಗಿದೆ. ಮುಖಮಂಟಪದ ಪಶ್ಚಿಮದ ಗೋಡೆಯ ಮೇಲೆ ಹಂಸ ಮತ್ತು ಕಾಳಿಂಗಮರ್ಧನ ಕೃಷ್ಣನನ್ನು ಬಿಡಿಸಲಾಗಿದೆ.

**ಪಾತಾಳಾಂಕಣ**:- ಪಾತಾಳಾಂಕಣವು ಚೌಕಾಕಾರವಾಗಿದ್ದು ಇದರಲ್ಲಿ ವಿಜಯನಗರ ಶೈಲಿಯ ಸುಮಾರು 12 ಕಂಬಗಳಿವೆ ಈ ಕಂಬಗಳ ಪೀಠದ ಭಾಗವು ಚೌಕಾಕಾರವಾಗಿದೆ. ಮಧ್ಯಭಾಗ 32 ಮೂಲೆಗಳಿಂದ ಕೂಡಿದೆ. ಮೇಲ್ಭಾಗವು ಚೌಕಾಕಾರವಾಗಿದ್ದು ಕಪೋತವು ಸರಳವಾಗಿದೆ. ಈ 12 ಕಂಬಗಳ ಮೇಲೆ ಮೇಲ್ಛಾವಣಿ ನಿರ್ಮಿಸಲಾಗಿದ್ದು, ಛಾವಣಿಯ ಅಂಚಿನಲ್ಲಿ ಇಳಿಜಾರಾಗಿ ಕಲ್ಲಿನ ಚಪ್ಪಡಿಗಳನ್ನು ಪಾತಾಳಾಂಕಣದ ಸುತ್ತಲೂ ಜೋಡಿಸಲಾಗಿದೆ. ಇದರ ಮೇಲೆ ಇತ್ತೀಚೆಗೆ ನಿರ್ಮಿಸಲಾಗಿರುವ ಗಾರೆ ಮತ್ತು ಇಟ್ಟಿಗೆಯಿಂದ ಮಾಡಲಾಗಿರುವ ಕೈಪಿಡಿ ಗೋಡೆಯಿದೆ. ಈ

ದೇವಾಲಯದ ದಕ್ಷಿಣ ಭಾಗದಲ್ಲಿ ಒಂದು ಮುಖಮಂಟಪವಿದೆ. ಈ ಮುಖಮಂಟಪದಲ್ಲಿ ವಿಜಯನಗರ ಶೈಲಿಯ ಎರಡು ಕಂಬಗಳಿವೆ ಮೇಲ್ಛಾವಣಿಯನ್ನು ಇಳಿಜಾರಾಗಿ ಮಾಡಲಾಗಿದೆ. **(ಚಿ.ಸಂ.136)**

**ಅಧಿಷ್ಠಾನ**:–ಅಧಿಷ್ಠಾನವು ಸಂಪೂರ್ಣವಾಗಿ ಭೂಮಿಯಲ್ಲಿ ಊತುಹೋಗಿದೆ. ಭಿತ್ತಿಯಲ್ಲಿ ದೊಡ್ಡ ದೊಡ್ಡ ಕಲ್ಲಿನ ದಿಮ್ಮಿಗಳನ್ನು ಸೇರಿಸಿ ಗೋಡೆಗಳನ್ನು ನಿರ್ಮಿಸಲಾಗಿದೆ. ಭಿತ್ತಿಯ ಅಲ್ಲಲ್ಲಿ ನಾಗಶಿಲ್ಪ, ಮತ್ಸ್ಯ, ಗಜ, ಸ್ವಸ್ತಿಕ, ಶಿಲ್ಪಗಳನ್ನು ಬಿಡಿಸಲಾಗಿದೆ. ಭಿತ್ತಿಯ ಮೇಲಿರುವ ಕಪೋತವನ್ನು ಕಲ್ಲಿನ ದಿಂಡುಗಳನ್ನು ಭಿತ್ತಿಯಿಂದ ಸ್ವಲ್ಪ ಮುಂಚಾಚಿದಂತೆ ಜೋಡಿಸಲಾಗಿದೆ. ಇದರ ಮೇಲೆ ಇತ್ತೀಚೆಗೆ ಇಟ್ಟಿಗೆ ಮತ್ತು ಗಾರೆಯನ್ನು ಉಪಯೋಗಿಸಿ ನಿರ್ಮಿಸಲಾದ ಕೈಪಿಡಿ ಗೋಡೆಯಿದೆ. ಪಾತಾಳಾಂಕಣದ ಮೇಲೆ ಇತ್ತೀಚೆಗೆ ಸಿಮೆಂಟ್‌ನಿಂದ ಮಾಡಲಾದ ಮೂರು ಕೋಷ್ಠಗಳಿವೆ. ಈ ಕೋಷ್ಠಗಳ ಒಳಗಡೆ ವಿಷ್ಣು, ಕೃಷ್ಣ, ಲಕ್ಷ್ಮೀಯ ಶಿಲ್ಪಗಳನ್ನು ಇರಿಸಲಾಗಿದೆ.

**ಶಿಖರ**:–ಶಿಖರವನ್ನು ದ್ರಾವಿಡ ಶೈಲಿಯಲ್ಲಿ ಇಟ್ಟಿಗೆ ಮತ್ತು ಗಾರೆಯನ್ನು ಉಪಯೋಗಿಸಿ ನಿರ್ಮಿಸಲಾಗಿದೆ. ಇದರಲ್ಲಿ ಚಿಕ್ಕ ಚಿಕ್ಕ ಕೋಷ್ಠಗಳು, ಎರಡು ದೇಹ ಒಂದು ಶಿರವುಳ್ಳ ಸಿಂಹಗಳು, ವಿಷ್ಣುವಿನ ಅವತಾರಕ್ಕೆ ಸಂಬಂಧಿಸಿದ ಶಿಲ್ಪಗಳು, ಶಿಖರದ ಮೇಲಿರುವ ಸ್ತೂಪಿಯಲ್ಲಿ ನಾಲ್ಕು ದಿಕ್ಕುಗಳಲ್ಲಿ ಕೀರ್ತಿಮುಖ ಸ್ತೂಪಿಯ ಮೇಲೆ ಕಳಸ ಇಡಲಾಗಿದೆ. ಈ ದೇವಾಲಯದ ಮುಂದೆ ಸುಮಾರು 25 ಅಡಿ ಎತ್ತರವಿರುವ ಕಣಶಿಲೆಯ ಗರುಡ ಸ್ತಂಭವಿದೆ. ಈ ದೇವಾಲಯದ ದಕ್ಷಿಣ ಭಾಗದಲ್ಲಿ ಪಾಳು ಬಿದ್ದಿರುವ ಒಂದು ಮಹಾದ್ವಾರವಿದೆ. ಆದರೆ ಮೂಲತಃ ನಿರ್ಮಿಸಲಾಗಿದ್ದ ಪ್ರಾಕಾರ ಸಂಪೂರ್ಣವಾಗಿ ಬಿದ್ದುಹೋಗಿದೆ.

**ವೀರಭದ್ರಸ್ವಾಮಿ ದೇವಾಲಯ–ಸೂಳೆಕೆರೆ**

ತುರುವೇಕೆರೆ ವಾಯುವ್ಯ ಭಾಗದಲ್ಲಿ ಸೂಳೆಕೆರೆ ಗ್ರಾಮ ಕಂಡುಬರುತ್ತದೆ. ಗ್ರಾಮದ ಈಶಾನ್ಯ ಭಾಗದಲ್ಲಿ ಪೂರ್ವಾಭಿಮುಖವಾಗಿ ವೀರಭದ್ರಸ್ವಾಮಿ ದೇವಾಲಯವನ್ನು ನಿರ್ಮಿಸಲಾಗಿದೆ. ಇತ್ತೀಚೆಗೆ ಈ ದೇವಾಲಯವನ್ನು ಜೀರ್ಣೋದ್ಧಾರ ಮಾಡಿ ಸಂರಕ್ಷಿಸಲಾಗಿದೆ. ಇದೊಂದು ಏಕಕೂಟ ದೇವಾಲಯವಾಗಿದ್ದು ಇದರಲ್ಲಿ ಒಂದು ಗರ್ಭಗೃಹ, ಸುಖನಾಸಿ, ನವರಂಗ ಮತ್ತು ಮುಖಮಂಟಪ ಕಂಡುಬರುತ್ತವೆ.[179]

ಈ ದೇವಾಲಯದ ನಿರ್ಮಾಣ ಕಾಲಕ್ಕೆ ಸಂಬಂಧಿಸಿದ ಯಾವುದೇ ಶಾಸನಾಧಾರಗಳು ನಮಗೆ ದೊರೆಯುವುದಿಲ್ಲ. ಆದರೆ ದೇವಾಲಯದ ರಚನಾ ಶೈಲಿಯನ್ನು ಗಮನಿಸಿದಾಗ ಇದು ವಿಜಯನಗರ ಅರಸರ ಕಾಲದಲ್ಲಿ ನಿರ್ಮಾಣವಾಗಿದೆ ಎಂಬ ಅಂಶ ನಮಗೆ ತಿಳಿದುಬರುತ್ತದೆ.

ಸಂಪೂರ್ಣವಾಗಿ ಕಣಶಿಲೆಯಲ್ಲಿ ದೇವಾಲಯ ನಿರ್ಮಾಣವಾಗಿದ್ದು ದೇವಾಲಯವು ಸುಸ್ಥಿತಿಯಲ್ಲಿದೆ.

**ಗರ್ಭಗೃಹ**:-ಗರ್ಭಗೃಹವು ಸುಮಾರು 8x8 ಅಡಿಗಳ ಉದ್ದ ಮತ್ತು ಅಗಲವಾಗಿದ್ದು, ಚೌಕಾಕಾರವಾಗಿದೆ. ಗರ್ಭಗೃಹದ ಮಧ್ಯದಲ್ಲಿ ಸುಮಾರು ಒಂದು ಅಡಿ ಎತ್ತರವಾಗಿರುವ ಪಾಣಿ ಪೀಠದ ಮೇಲೆ ಸುಮಾರು ನಾಲ್ಕು ಅಡಿ ಎತ್ತರವಿರುವ ವೀರಭದ್ರ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. **(ಚಿ.ಸಂ.137)** ಸಮಭಂಗಿಯಲ್ಲಿ ನಿಂತಿರುವ ಈ ದೇವನು ಕತ್ತಿ ಮತ್ತು ಗುರಾಣಿ ಹಿಡಿದಿದ್ದಾನೆ. ಮೈಮೇಲೆ ಸುಂದರವಾದ ವಸ್ತ್ರಭಾರಣಗಳನ್ನು ಹೊಂದಿದ್ದು ಪ್ರಭಾವಳಯಲ್ಲಿ ಬಳ್ಳಿ ಸುರುಳಿಗಳ ಸುಂದರವಾದ ಕೆತ್ತನೆಯಿದೆ. ಇಕ್ಕೆಲಗಳಲ್ಲಿ ಸ್ತ್ರೀ ಸೇವಕಿಯರ ಶಿಲ್ಪಗಳನ್ನು ಕೆತ್ತಲಾಗಿದೆ. ಗರ್ಭಗೃಹ ಬಾಗಿಲಿಗೆ ಇತ್ತೀಚೆಗೆ ಪಂಚಲೋಹದ ತಗಡನ್ನು ಹೊದಿಸಿ ಬಳ್ಳಿಸುರುಳಿಗಳ ಅಲಂಕರಣೆಗಳನ್ನು ಮಾಡಿಸಲಾಗಿದ್ದು, ಲಲಾಟಬಿಂಬದಲ್ಲಿ ನಂದಿಯನ್ನು ಬಿಡಿಸಲಾಗಿದೆ. ಗರ್ಭಗೃಹದ ಬಾಗಿಲಿನ ಇಕ್ಕೆಲಗಳಲ್ಲಿ ಒಂಟಿಕಾಲಿನಲ್ಲಿ ನಿಂತ ದ್ವಾರಪಾಲಕರನ್ನು ಕೆತ್ತಲಾಗಿದ್ದು ಬಾಗಿಲ ತೋರಣದ ಮೇಲೆ ಶಿವ ಪಾರ್ವತಿಯರ ಉಬ್ಬುಶಿಲ್ಪ ಕೆತ್ತನೆಯನ್ನು ಕಾಣಬಹುದು.

**ಸುಖನಾಸಿ**:- ಸುಖನಾಸಿಯು ಗರ್ಭಗೃಹದಷ್ಟೇ ಉದ್ದ ಮತ್ತು ಅಗಲವಾಗಿದ್ದು ಚೌಕಾಕಾರವಾಗಿದೆ. ಇದರಲ್ಲಿ ಯಾವುದೇ ಮೂರ್ತಿ ಶಿಲ್ಪಗಳು ಕಾಣಬರುವುದಿಲ್ಲ. ಸುಖನಾಸಿಯ ದ್ವಾರಕ್ಕೆ ಪಂಚಲೋಹದ ತಗಡನ್ನು ಹೊದಿಸಿ ತಗಡಿನಲ್ಲಿ ಬಳ್ಳಿಸುರುಳಿ, ಪದ್ಮಪುಷ್ಪದ ದಳಗಳ ಅಲಂಕರಣೆಯನ್ನು ಮಾಡಲಾಗಿದೆ. ಲಲಾಟಬಿಂಬದಲ್ಲಿ ಗಣೇಶನ ಕೆತ್ತನೆಯಿದ್ದು ಬಾಗಿಲ ಇಕ್ಕೆಲಗಳಲ್ಲಿ ಗಧೆ ಮತ್ತು ಅಭಯ ಹಸ್ತ ಹೊಂದಿರುವ ದ್ವಾರಪಾಲಕರಿದ್ದಾರೆ.

**ನವರಂಗ**:- ನವರಂಗವು 20x20 ಅಡಿ ಉದ್ದ ಮತ್ತು ಅಗಲವಾಗಿದೆ ಇದರ ಮಧ್ಯದಲ್ಲಿ ವಿಜಯನಗರ ಶೈಲಿಯ ನಾಲ್ಕು ಕಂಬಗಳಿವೆ. ಈ ಕಂಬಗಳು ಎಂಟು ಅಡಿ ಎತ್ತರವನ್ನು ಹೊಂದಿದ್ದು ನಾಲ್ಕು, ಎಂಟು ಮುಖವನ್ನು ಹೊಂದಿವೆ. ನವರಂಗದ ದಕ್ಷಿಣ ಗೋಡೆಯ ಮುಂದೆ ಲಕ್ಷ್ಮೀದೇವಿಯನ್ನು ಪ್ರತಿಷ್ಠಾಪಿಸಲಾಗಿದೆ.ಈ ದೇವಿಯು ಪದ್ಮಾಸನದಲ್ಲಿ ಕುಳಿತ್ತಿದ್ದು ಚತುರ್ಭುಜ ಹೊಂದಿದ್ದಾಳೆ. ಕೈಗಳಲ್ಲಿ ಶಂಖ, ಚಕ್ರ, ಕಳಸ ಅಭಯ ಹಸ್ತ ಹೊಂದಿದ್ದಾಳೆ. ಪ್ರಭಾವಳಿಯಲ್ಲಿ ಬಳ್ಳಿ ಸುರುಳಿಗಳಿವೆ ಈ ಶಿಲ್ಪ ಸಾಕಷ್ಟು ಹಾಳಾಗಿದೆ ಮತ್ತು ದೇವಿಯ ಮೇಲೆ ಎಣ್ಣೆ ಮಜ್ಜನ ಮಾಡಿರುವುದರಿಂದ ಸ್ವಚ್ಛಮಾಡದೆ ಇರುವುದರಿಂದ ಲಕ್ಷಣಗಳು ಸ್ಪಷ್ಟವಾಗಿ ಕಾಣುವುದಿಲ್ಲ. ಮೇಲ್ಛಾವಣಿಗೆ ಕಲ್ಲು ಚಪ್ಪಡಿಗಳನ್ನು ಹಾಸಿ ಮುಚ್ಚಲಾಗಿದ್ದು ಯಾವುದೇ ಭುವನೇಶ್ವರಿಯು ಕಂಡುಬರದೆ ಸರಳವಾಗಿದೆ. ನವರಂಗದ ಬಾಗಿಲು ಸರಳವಾಗಿದ್ದು ಇಕ್ಕೆಲಗಳಲ್ಲಿ ದ್ವಾರಪಾಲಕರನ್ನು ಇರಿಸಲಾಗಿದೆ.

**ಮುಖಮಂಟಪ:-** ಮುಖಮಂಟಪದಲ್ಲಿ ಪ್ರಧಾನವಾಗಿ ನಾಲ್ಕು ಕಂಬಗಳನ್ನು ಕಾಣಬಹುದು ಈ ಕಂಬಗಳು ಎಂಟು ಅಡಿ ಎತ್ತರವನ್ನು ಹೊಂದಿದ್ದು ವಿವಿಧ ದೇವದೇವತೆಯರ ಉಬ್ಬುಶಿಲ್ಪಗಳನ್ನು ಒಳಗೊಂಡಿವೆ. ಈ ಕಂಬಗಳ ನಾಲ್ಕು ದಿಕ್ಕುಗಳಲ್ಲಿ ಬೇಡರ ಕಣ್ಣಪ್ಪ, ಒಂಟಿಕಾಲಿನಲ್ಲಿ ನಿಂತಿರುವ ಧನುರ್ಧಾರಿಗಳು, ಸಿಂಹದ ದೇಹ ಮಾನವನ ಶಿರವುಳ್ಳ ಮನುಷ್ಯನು ಶಿವ ಲಿಂಗಕ್ಕೆ ಪೂಜೆ ಸಲ್ಲಿಸುತ್ತಿದ್ದಾನೆ. ಶಿವನಿಗೆ ಹಾಲುಣಿಸುತ್ತಿರುವ ಕಾಮಧೇನು, ನಂದಿಯ ಮೇಲೆ ಕುಳಿತಿರುವ ಶಿವ ಪಾರ್ವತಿಯರು, ಕಮಲದ ಮೊಗ್ಗನ್ನು ಹಿಡಿದು ನಿಂತಿರುವ ದಂಪತಿಗಳು, ಕಂಬಕ್ಕೆ ಪೂಜೆ ಸಲ್ಲಿಸುತ್ತಿರುವ ದಂಪತಿಗಳು, ಪುರುಷನ ತಲೆಯ ಜುಟ್ಟನ್ನು ಹಿಡಿದಿರುವ ಸ್ತ್ರೀ, ಅಶ್ವರೋಹಿ, ಹಂಸ, ಒಂದೇ ಶಿಲ್ಪದಲ್ಲಿ ನಂದಿ ದೇಹ, ಆನೆತಲೆ ಕಾಣುವಂತೆ ರಚಿಸಲಾಗಿರುವ ಶಿಲ್ಪ, ಧ್ಯಾನ ಮುದ್ರೆಯಲ್ಲಿರುವ ಪುರುಷ ಮುಂತಾದ ಕೆತ್ತನೆಗಳು ಈ ಸ್ಥಂಭಗಳ ಮೇಲೆ ಕಂಡುಬರುತ್ತವೆ. **(ಚಿ.ಸಂ.138)** ದೇವಾಲಯಕ್ಕೆ ಪ್ರವೇಶಿಸಲು ಉತ್ತರ ದಿಕ್ಕಿನಲ್ಲಿ ಹಸ್ತಿ ಹಸ್ತ ಸೋಪಾನವನ್ನು ಮಾಡಲಾಗಿದೆ.

**ಅಧಿಷ್ಠಾನ:-**ಅಧಿಷ್ಠಾನವನ್ನು ವಿಜಯನಗರ ಶೈಲಿಯಲ್ಲಿ ನಿರ್ಮಾಣ ಮಾಡಲಾಗಿದೆ. ಭಿತ್ತಿ ಮತ್ತು ಕಪೋತ ಹಾಗೂ ಶಿಖರವನ್ನು ಇತ್ತೀಚೆಗೆ ಜೀರ್ಣೋದ್ಧಾರ ಮಾಡಲಾಗಿದೆ. ಶಿಖರದ ಮೇಲೆ ಶಿವ, ಸುಬ್ರಹ್ಮಣ್ಯ, ನಂದಿ, ಗಣೇಶ, ಶಿವಪಾರ್ವತಿ ಮುಂತಾದ ದೇವತೆಗಳ ಮೂರ್ತಿಶಿಲ್ಪಗಳನ್ನು ಬಿಡಿಸಲಾಗಿದೆ. ಮುಖ ಮಂಟಪದ ಮೇಲೆ ಕೈಪಿಡಿ ಗೋಡೆಯಲ್ಲಿ ಕೋಷ್ಠ ಗುಡಿಗಳನ್ನು ನಿರ್ಮಿಸಿ ಶಿವ ಪಾರ್ವತಿ, ಗಣೇಶ ಮತ್ತು ಸುಬ್ರಮಣ್ಯರ ಶಿಲ್ಪಗಳನ್ನು ಇರಿಸಲಾಗಿದೆ. ದೇವಾಲಯದ ಮುಂದೆ ಸುಮಾರು 30 ಅಡಿ ಎತ್ತರವಿರುವ ಕಣಶಿಲೆಯ ಗರುಡಗಂಭವನ್ನು ನಿಲ್ಲಿಸಲಾಗಿದೆ. ದೇವಾಲಯದ ಪಕ್ಕದಲ್ಲಿ ಬೆಣಚುಕಲ್ಲಿನಲ್ಲಿ ರಚಿಸಲಾಗಿರುವ ದಂಪತಿಗಳಿಬ್ಬರ ವೀರಗಲ್ಲನ್ನು ನಿಲ್ಲಿಸಲಾಗಿದೆ. ದಂಪತಿಗಳಿಬ್ಬರೂ ಆಶೀರ್ವಾದ ಮಾಡುತ್ತಿರುವಂತೆ ಕೈಯಲ್ಲಿ ಫಲವನ್ನು ಹಿಡಿದುಕೊಂಡಿರುವಂತೆ ಶಿಲ್ಪವನ್ನು ಕೆತ್ತಲಾಗಿದೆ.[180]

**ರಂಗನಾಥ ದೇವಾಲಯ-ಜಡೇಯ**

ಈ ದೇವಾಲಯವನ್ನು ಊರಿನ ದಕ್ಷಿಣ ಭಾಗದಲ್ಲಿ ಪೂರ್ವಾಭಿಮುಖವಾಗಿ ನಿರ್ಮಿಸಲಾಗಿದೆ. ಈ ದೇವಾಲಯವು ಚಿಕ್ಕದಾಗಿದ್ದು ಸಂಪೂರ್ಣವಾಗಿ ನವೀಕರಿಸಲಾಗಿದ್ದು ಇದರಲ್ಲಿ ಗರ್ಭಗೃಹ ಮತ್ತು ನವರಂಗವನ್ನು ಮಾತ್ರ ಕಾಣಬಹುದು.

**ಗರ್ಭಗೃಹ:-** ಗರ್ಭಗೃಹದಲ್ಲಿ ಗರುಡ ಪೀಠದ ಮೇಲೆ ಸುಮಾರು ನಾಲ್ಕು ಅಡಿ ಎತ್ತರವಿರುವ ರಂಗನಾಥ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ಈ ದೇವನು ಚತುರ್ಭುಜ ಹೊಂದಿದ್ದು,

ಶಂಖ, ಚಕ್ರ, ಗಧಾ, ಹಸ್ತ ಹೊಂದಿದ್ದಾನೆ. ಪ್ರಭಾವಳಯಲ್ಲಿ ಬಳ್ಳಿ ಸುರುಳಿ ಕೀರ್ತಿಮುಖವಿದೆ. ಇಕ್ಕೆಲಗಳಲ್ಲಿ ಚಾಮರ ಹಿಡಿದಿರುವ ದೇವಿಯರಿದ್ದಾರೆ. ಗರ್ಭಗೃಹದ ಬಾಗಿಲು ನವೀಕರಣಗೊಂಡಿದ್ದು ಕಲ್ಲು ಚಪ್ಪಡಿಗಳನ್ನು ಹೊದಿಸಲಾಗಿದೆ. **(ಚಿ.ಸಂ.139)**

**ನವರಂಗ:-** ನವರಂಗದಲ್ಲಿ ವಿಜಯನಗರ ಶೈಲಿಯ ನಾಲ್ಕು ಕಂಬಗಳಿವೆ. ಈ ಕಂಬಗಳನ್ನು ನಾಲ್ಕು, ಮೂವತ್ತೆರಡು ಮೂಲೆಗಳ ರೀತಿ ಕೆತ್ತಲಾಗಿದೆ. **(ಚಿ.ಸಂ.140)** ಕಂಬಗಳ ಮೇಲೆ ಭಕ್ತಾದಿಗಳು, ಕಾಳಿಂಗಮರ್ಧನ, ಅರ್ಜುನ, ಗಣಪತಿ, ಮೊದಲಾದ ಶಿಲ್ಪಗಳನ್ನು ಬಿಡಿಸಲಾಗಿದೆ. ನವರಂಗದ ಬಾಗಿಲು ಸರಳವಾಗಿದೆ. ಭಿತ್ತಿಯ ಭಾಗದಲ್ಲಿ ಇತ್ತೀಚೆಗೆ ದೊಡ್ಡ ದೊಡ್ಡ ಕಲ್ಲುಗಳನ್ನು ಸೇರಿಸಿ ಜೀರ್ಣೋದ್ಧಾರ ಮಾಡಿದ್ದಾರೆ. ಮೇಲ್ಛಾವಣಿಗೆ ಕಲ್ಲನ್ನು ಹಾಕಿ ನಿರ್ಮಿಸಲಾಗಿದ್ದು ಗರ್ಭಗೃಹದ ಮೇಲೆ ಶಿಖರ ಕಂಡುಬರುವುದಿಲ್ಲ. [181]

**ರಂಗನಾಥ ದೇವಾಲಯ-ಕಡೇಹಳ್ಳಿ**

ತುರುವೇಕೆರೆ ತಾಲೂಕು ಕೇಂದ್ರದಿಂದ ಸುಮಾರು 15 ಕಿ.ಮೀ. ದೂರದಲ್ಲಿರುವ ಕಡೇಹಳ್ಳಿ ಗ್ರಾಮದ ಪೂರ್ವ ದಿಕ್ಕಿನಲ್ಲಿರುವ ಚಿಕ್ಕದೊಂದು ಬೆಟ್ಟದ ಮೇಲೆ ಈ ದೇವಾಲಯವನ್ನು ಪೂರ್ವಾಭಿಮುಖವಾಗಿ ನಿರ್ಮಿಸಲಾಗಿದೆ. **(ಚಿ.ಸಂ.141)** ಇದೊಂದು ಏಕಕೂಟ ದೇವಾಲಯವಾಗಿದ್ದು ಇದರಲ್ಲಿ ಒಂದು ಗರ್ಭಗೃಹ ಮತ್ತು ನವರಂಗ ಮಾತ್ರ ಹೊಂದಿದೆ. ಇತ್ತೀಚೆಗೆ ದಿಂಡುಗಲ್ಲನ್ನು ಉಪಯೋಗಿಸಿ ಭಿತ್ತಿಯನ್ನು ನಿರ್ಮಾಣ ಮಾಡಿದಂತೆ ಕಂಡುಬರುತ್ತದೆ. [182]

**ಗರ್ಭಗೃಹ:-** ಗರ್ಭಗೃಹವು ಸುಮಾರು 8X8 ಅಡಿ ಉದ್ದ ಮತ್ತು ಅಗಲವಾಗಿದೆ. ಇದರ ಮಧ್ಯದಲ್ಲಿ ಗರುಡ ಪೀಠದ ಮೇಲೆ ಸುಮಾರು ನಾಲ್ಕು ಅಡಿ ಎತ್ತರವಿರುವ ರಂಗನಾಥ ಮೂರ್ತಿಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಸಮಭಂಗಿಯಲ್ಲಿ ನಿಂತಿರುವ ಈ ದೇವನು ಚತುರ್ಭುಜವನ್ನು ಹೊಂದಿದ್ದಾನೆ. ಕೈಗಳಲ್ಲಿ ಶಂಖ, ಚಕ್ರ, ಪದ್ಮ, ಗಧೆಯನ್ನು ಹಿಡಿದಿದ್ದಾನೆ. ಈ ದೇವನ ಇಕ್ಕೆಲಗಳಲ್ಲಿ ಫಲವನ್ನು ಹಿಡಿದು ನಿಂತಿರುವ ದೇವಿಯರಿದ್ದಾರೆ. ಪ್ರಭಾವಳಿಯಲ್ಲಿ ಬಳ್ಳಿಸುರುಳಿಗಳ ಅಲಂಕರಣೆಯಿದ್ದು ಅಂತ್ಯ ಭಾಗದಲ್ಲಿ ಕೀರ್ತಿಮುಖವಿದೆ. **(ಚಿ.ಸಂ.142)** ಗರ್ಭಗೃಹವನ್ನು ಸಂಪೂರ್ಣವಾಗಿ ನವೀಕರಣಗೊಳಿಸಲಾಗಿದೆ. ಗರ್ಭಗೃಹದ ಮೇಲ್ಛಾವಣಿ ಸರಳವಾಗಿದೆ. ಗರ್ಭಗೃಹದ ಬಾಗಿಲು ಸರಳವಾಗಿದ್ದು ಬಾಗಿಲ ಇಕ್ಕೆಲಗಳಲ್ಲಿ ಒಂಟಿ ಕಾಲಿನಲ್ಲಿ ನಿಂತಿರುವ ವೈಷ್ಣವ ದ್ವಾರಪಾಲಕರಿದ್ದಾರೆ. ಇವರು ಕೈಗಳಲ್ಲಿ ಶಂಖ, ಚಕ್ರ, ಗಧಾ ಮತ್ತು ಎಡಗೈಯನ್ನು ಸೊಂಟದ ಮೇಲಿರಿಸಿದ್ದಾರೆ.

**ನವರಂಗ:-** ನವರಂಗವು ಸುಮಾರು 20X20 ಅಡಿ ಉದ್ದ ಮತ್ತು ಅಗಲವಾಗಿದ್ದು ದಕ್ಷಿಣದ ಗೋಡೆಯ ಮುಂದೆ ಭಕ್ತ ದಂಪತಿಗಳಿಬ್ಬರನ್ನು ಇರಿಸಲಾಗಿದೆ. ಸತಿಯು ಪದ್ಮಾಸನದಲ್ಲಿ ಕುಳಿತು ದೇವರಿಗೆ ಕೈಮುಗಿಯುತ್ತಿದ್ದಾಳೆ. ಪುರುಷನು ಎಡಗೈಯಲ್ಲಿ ಕಳಸ, ಬಲಗೈಯಲ್ಲಿ ಅಕ್ಷ ಮಾಲೆಯನ್ನು ಹಿಡಿದು ಧ್ಯಾನಮುದ್ರೆಯಲ್ಲಿ ಕುಳಿತಿದ್ದಾನೆ. ನವರಂಗದಲ್ಲಿ ಸರಳವಾಗಿರುವ ನಾಲ್ಕು ಕಣಶಿಲೆಯ ಕಂಬಗಳಿವೆ. ನವರಂಗದ ಬಾಗಿಲು ಇತ್ತೀಚಿನದ್ದಾಗಿದೆ. ಈ ದೇವಾಲಯದ ಮುಂದೆ ಚೌಕಾಕಾರದ ವೇದಿಕೆಯ ಮೇಲೆ ನಿಲ್ಲಿಸಲಾಗಿರುವ ಸುಮಾರು 15 ಅಡಿ ಎತ್ತರದ ದೀಪ ಕಂಬವಿದೆ. **(ಚಿ.ಸಂ.143)**

**ಅಧಿಷ್ಠಾನ:-** ಅಧಿಷ್ಠಾನವು ಕಂಡುಬರದೆ ಭಿತ್ತಿಯನ್ನು ಸಂಪೂರ್ಣವಾಗಿ ದಿಂಡುಗಲ್ಲು ಮತ್ತು ಗಾರೆಯನ್ನು ಉಪಯೋಗಿಸಿ ನಿರ್ಮಿಸಲಾಗಿದೆ. ಭಿತ್ತಿಯ ಮೇಲಿರುವ ಕಪೋತವನ್ನು ಇಳಿಜಾರಾಗಿರುವಂತೆ ಜೋಡಿಸಲಾಗಿದೆ. ಶಿಖರವನ್ನು ಇತ್ತೀಚೆಗೆ ಇಟ್ಟಿಗೆ ಮತ್ತು ಸಿಮೆಂಟ್ ಉಪಯೋಗಿಸಿ ನಿರ್ಮಿಸಲಾಗಿದೆ ಕಳಸ ಕಂಡುಬರುವುದಿಲ್ಲ. [183] **(ಚಿ.ಸಂ.144)**

**ಆಂಜನೇಯ ದೇವಾಲಯ-ಸೂಳೆಕೆರೆ**

ಸೂಳೆಕೆರೆ ಗ್ರಾಮದ ಆಗ್ನೇಯ ಭಾಗಕ್ಕೆ ದಕ್ಷಿಣಾಭಿಮುಖವಾಗಿ ಈ ದೇವಾಲಯವನ್ನು ನಿರ್ಮಾಣ ಮಾಡಲಾಗಿದೆ. ಈ ದೇವಾಲಯವು ಈಗಾಗಲೇ ರಕ್ಷಣೆಯಿಲ್ಲದೆ ಪ್ರಕೃತಿಯ ವಿಕೋಪಕ್ಕೆ ತುತ್ತಾಗಿ ಸಾಕಷ್ಟು ಭಗ್ನವಾಗಿದೆ. ಆದರೆ ಈ ದೇವಾಲಯದ ಗರ್ಭಗೃಹವನ್ನು ಮಾತ್ರ ಕಾಡುಗಲ್ಲಿನಲ್ಲಿ ಕಟ್ಟಿ ರಕ್ಷಿಸಿದ್ದಾರೆ.

**ಗರ್ಭಗೃಹ:-**ಗರ್ಭಗೃಹವು ಸುಮಾರು 8X8 ಅಡಿ ಉದ್ದ ಮತ್ತು ಅಗಲವಾಗಿದ್ದು ಪಶ್ಚಿಮದ ಗೋಡೆಗೆ ಹೊಂದಿಕೊಂಡಂತೆ ಕಣಶಿಲೆಯ ಕಲ್ಲನ್ನು ಉಪಯೋಗಿಸಿ ಈ ಆಂಜನೇಯ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ಈ ಆಂಜನೇಯನು ಎಡಗಾಲನ್ನು ಹಿಂದಿರಿಸಿ ಬಲಗಾಲನ್ನು ಮುಂದಿರಿಸಿದ್ದಾನೆ. ಬಲಗೈಯನ್ನು ಮೇಲಕ್ಕೆತ್ತಿ ಎಡಗೈಯಲ್ಲಿ ಪುಷ್ಪದ ಗೊಂಚಲನ್ನು ಹಿಡಿದಿದ್ದು ಬಾಲವನ್ನು ಮೇಲೆಕ್ಕೆತ್ತಿದ್ದಾನೆ. ಇತ್ತೀಚೆಗೆ ಗ್ರಾಮಸ್ಥರು ಪಂಚಲೋಹದ ಪ್ರಭಾವಳಿ ಮಾಡಿ ಇರಿಸಿದ್ದಾರೆ. **(ಚಿ.ಸಂ.145)** ಗರ್ಭಗೃಹದ ಮುಂದೆ ಸುಖನಾಸಿ ಕಾಣಬರುವುದಿಲ್ಲ. ಈ ದೇವಾಲಯ ಸಾಕಷ್ಟು ಹಾಳಾಗಿದೆ. ನವರಂಗವು ಸುಮಾರು 20X20 ಅಡಿಗಳ ಉದ್ದ ಅಗಲವಾಗಿದ್ದು ಚೌಕಾಕಾರವಾಗಿದೆ. ಇದರ ಮಧ್ಯದಲ್ಲಿ ನಾಲ್ಕು ಎಂಟು ಮುಖ ಹೊಂದಿರುವ ಕಂಬಗಳಿವೆ. ನವರಂಗದ ಮೇಲ್ಛಾವಣಿಯಲ್ಲಿ ಮಧ್ಯದಲ್ಲಿ ಒಂದೇ ಒಂದು

ಭುವನೇಶ್ವರಿ ಇದೆ. ಇದರ ಉತ್ತರದ ಗೋಡೆಯ ಮುಂದೆ ಭೈರವ ಮೂರ್ತಿಯನ್ನು ಇರಿಸಲಾಗಿದೆ.

**ಭೈರವ:–** ಈ ದೇವಾಲಯದ ಒಳಭಾಗದಲ್ಲಿ ಸುಮಾರು ಮೂರು ಅಡಿ ಎತ್ತರವಿರುವ ಭೈರವ ಮೂರ್ತಿ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. **(ಚಿ.ಸಂ.146)** ತ್ರಿಭಂಗಿಯಲ್ಲಿ ನಿಂತಿರುವ ಈ ದೇವನು ತನ್ನ ಕೈಯಲ್ಲಿ ಕತ್ತಿ, ರುಂಡವನ್ನು ಹಿಡಿದಿದ್ದಾನೆ, ಉಳಿದೆರಡು ಕೈಗಳಲ್ಲಿ ತ್ರಿಶೂಲ ಮತ್ತು ಢಮರುಗವನ್ನು ಹಿಡಿದುಕೊಂಡಿದ್ದಾನೆ ಎಡಭಾಗದಲ್ಲಿ ನಾಯಿಯೊಂದು ರುಂಡವನ್ನು ನೋಡುತ್ತಿದ್ದು ಬಲಭಾಗದಲ್ಲಿ ಸೇವಕನಿದ್ದಾನೆ. ಪ್ರಭಾವಳಿಯಲ್ಲಿ ಕೀರ್ತಿಮುಖವನ್ನು ಕಾಣಬಹುದು. ಗರ್ಭಗೃಹದ ಮೇಲ್ಛಾವಣಿಯಲ್ಲಿ ನಕ್ಷತ್ರಾಕಾರದ ಭುವನೇಶ್ವರಿಯಿದ್ದು ಮಧ್ಯಭಾಗದಲ್ಲಿ ಎರಡು ಸುತ್ತು ಅರಳಿದ ಪದ್ಮಪುಷ್ಪಗಳನ್ನು ಬಿಡಿಸಲಾಗಿದೆ. ಮೂಲೆಗಳಲ್ಲಿ ಎಂಟು ಅರಳಿದ ಪದ್ಮಪುಷ್ಪಗಳನ್ನು ಬಿಡಿಸಲಾಗಿದೆ. ನವರಂಗದ ಮಧ್ಯದಲ್ಲಿರುವ ಕಂಬಗಳು ವಿಜಯನಗರ ಶೈಲಿಯ ಕಂಬಗಳಂತಿವೆ. ಇವುಗಳನ್ನು ಚೌಕ ಮತ್ತು ಅಷ್ಟಮುಖಗಳಲ್ಲಿ ಕೆತ್ತನೆ ಮಾಡಿ ನಿಲ್ಲಿಸಲಾಗಿದೆ. ಈ ದೇವಾಲಯದ ಮುಂದೆ ಮುಖಮಂಟಪ ಕಾಣಬರುವುದಿಲ್ಲ ಮತ್ತು ಈ ದೇವಾಲಯದ ಹೊರಗೋಡೆ ಬಿದ್ದುಹೋಗಿದ್ದು ಈಗ ಶಿಥಿಲಾವಸ್ಥೆಯಲ್ಲಿದೆ. [184] **(ಚಿ.ಸಂ.147)**

ತುರುವೇಕೆರೆ ತಾಲೂಕಿನಲ್ಲಿರುವ ದೇವಾಲಯಗಳನ್ನು ಸಂಶೋಧನೆಯ ಮೂಲಕ ಅಧ್ಯಯನ ಮಾಡಿರುವ ಉದ್ದೇಶ ಈ ತಾಲೂಕಿನಲ್ಲಿರುವ ದೇವಾಲಯಗಳಲ್ಲಿ ಕೆಲವೇ ದೇವಾಲಯಗಳನ್ನು ವಿದ್ವಾಂಸರು, ಇತಿಹಾಸ ಆಸಕ್ತರು ಮತ್ತು ಕಲಾಭಿಮಾನಿಗಳು ಅಧ್ಯಯನ ಮಾಡಿ ವರದಿಯನ್ನು ನೀಡಿದ್ದಾರೆ. ಇವುಗಳಲ್ಲದೆ ಇನ್ನುಳಿದ ಗಂಗ, ಹೊಯ್ಸಳ, ವಿಜಯನಗರ ಅರಸರು ಮತ್ತು ನಾಯಕರ ಕಾಲದಲ್ಲಿ ನಿರ್ಮಿಸಲಾಗಿರುವ ಅನೇಕ ದೇವಾಲಯಗಳು ಅಜ್ಞಾತವಾಗಿದ್ದು ಬೆಳಕಿಗೆ ಬಾರದೆ ಕಾಲಘಟ್ಟದ ಕತ್ತಲೆಯಲ್ಲಿ ಕಣ್ಮರೆಯಾಗಿ ಉಳಿದಿದ್ದವು. ಅಂತಹ ದೇವಾಲಯಗಳಿಗೆ ನಾನು ಬೇಟಿನೀಡಿ ಕ್ಷೇತ್ರಕಾರ್ಯ ಮಾಡಿ ಆ ದೇವಾಲಯಗಳ ಆಕೃತಿ, ನಿರ್ಮಾಣ ಕಾಲ, ಈಗ ಅವುಗಳು ಇರುವ ಸ್ಥಿತಿಗಳ ಬಗ್ಗೆ ಸಂಶೋಧನೆ ಮಾಡಿ ನನಗೆ ಲಭ್ಯವಾದ ಮಾಹಿತಿಯನ್ನು ಪರಾಮರ್ಶಿಸಿ ವಿಮರ್ಶಾತ್ಮಕವಾಗಿ ಅಧ್ಯಯನ ಮಾಡಿದ್ದೇನೆ. ದೇವಾಲಯಗಳಿಗೆ ಸಂಬಂಧಿಸಿದ ಪ್ರಾಥಮಿಕ ಹಾಗೂ ದ್ವಿತೀಯ ಆಧಾರಗಳನ್ನು ಸಂಯೋಜನೆ ಮಾಡಿ ಇಡೀ ತಾಲೂಕಿನಲ್ಲಿರುವ ದೇವಾಲಯಗಳನ್ನು ಕಾಲಾನುಕ್ರಮದ ಆಧಾರದ ಮೇಲೆ ವಿಂಗಡಿಸಿ ವರದಿಮಾಡಿ ನನ್ನ ಸಂಶೋಧನಾ ಮಹಾಪ್ರಬಂಧದಲ್ಲಿ ತರುವಂತಹ ಒಂದು ಪ್ರಯತ್ನವನ್ನು ಮಾಡಿದ್ದೇನೆ.

## ಅಡಿಟಿಪ್ಪಣಿಗಳು

1. ಅ.ಸುಂದರ. ಎಕ್ಸವೇಶನ್ ಆಫ್ ಸನ್ನತಿ, 1986-87, ಪುರಾತತ್ವ ಸಂ.17, ಇಂಡಿಯನ್ ಆರ್ಕಿಯಾಲಾಜಿಕಲ್ ಸೊಸೈಟಿ, ದೆಹಲಿ ಹಾಗೂ ಅ.ಸುಂದರ. ಸಮ್ ನೋಟವರ್ದಿ ಸ್ಕಲ್ಪ್‌ಚರ್ಸ್ ಫ್ರಂ ಸನ್ನತಿ, ಇಂಡಿಯನ್ ಆರ್ಕಿಯಾಲಾಜಿಕಲ್ ಹೆರಿಟೇಜ್, ಆಗಮ ಕಲಾ ಪ್ರಕಾಶನ, ದೆಹಲಿ, 1990

2. ಇಂಡಿಯನ್ ಆಂಟಿಕ್ವೈರಿ. ಸಂ. 14, ಪು.ಸಂ.333

3. ಎ.ಕ. (ಹಳೆಯದು) ಸಂ. 8, ಶಿಕಾ ಪು.ಸಂ.263

4. ಕೆ.ಜಿ.ಕೃಷ್ಣನ್. ಉಚ್ಚಂಕಿತ ಸಂಸ್ಕೃತ ವಿದ್ಯಾ ಅರಣ್ಯ ಎಪಿಗ್ರಾಫ್ಸ್, ಸಂ.3 (ಪ್ರಾಕೃತ ಅಂಡ್ ಸಂಸ್ಕೃತ ಇನ್‌ಸ್ಕ್ರಿಪ್‌ಷನ್ಸ್, ಕ್ರಿ.ಪೂ.257 ರಿಂದ ಕ್ರಿ.ಶ.320), ಶಾ.ಸಂ.177-376

5. ಅ.ಸುಂದರ. ಇಂಡಸ್ ಸರಸ್ವತಿ ಸಿವಿಲೈಝೇಶನ್ ಅರ್ಲಿ ಶೈವ ಕಲ್ಟ್, ಶ್ರೀ ಪುಷ್ಪಾಂಜಲಿ, ಸಿ.ಆರ್. ಶ್ರೀನಿವಾಸನ್, ಸಂಸ್ಕರಣ ಗ್ರಂಥ (ಸಂ), ಕೆ.ವಿ.ರಮೇಶ್ ಮತ್ತು ಇತರರು

6. ಎ.ಕ. (ಹಳೆಯ) ಸಂ. 8, ಶಿಕಾ-176

7. ಅ.ಸುಂದರ. ದ ಅರ್ಲಿ ಕದಂಬ ಟೆಂಪಲ್ ಆರ್ಕಿಟೆಕ್ಚರ್ ರೀಸೆಂಟ್ ನೋಟ್ಸ್, ಕ್ಯೂ.ಜೆ.ಎಂ.ಎಸ್., IXXV, ಪು.ಸಂ.265

8. ಬಾ.ರಾ.ಗೋಪಾಲ. ಕಾ.ಕ. ಇನ್ಸ್, (ಸಿಕೆಐ), ನಂ.23, ಪು.ಸಂ.81-87

9. ಅದೇ, ಬನವಾಸಿ ಕದಂಬರು, ಪು.ಸಂ.21

10. ಮೇಲಿನ ಟಿಪ್ಪಣಿ 39ರಂತೆ

11. ಡಾ.ಡಿ.ಜಿ.ಕುಲಕರ್ಣಿ. ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳು, ಪು.ಸಂ.7, 2007-2008

12. ಪರ್ಸಿಬ್ರೌನ್. ಇಂಡಿಯನ್ ಆರ್ಕಿಟೆಕ್ಚರ್ (ಬುದ್ಧಿಸ್ಟ್ ಅಂಡ್ ಹಿಂದೂ), ಪು.ಸಂ.52.

13. ಇಂಡಿಯನ್ ಆಂಟಿಕ್ವೈರಿ, ಸಂ. 3, ಪು.ಸಂ.305.

14. ಪಿ.ಕೆ.ಆಚಾರ್ಯ. ಇಂಡಿಯನ್ ಆರ್ಕಿಟೆಕ್ಚರ್ ಅಕಾರ್ಡಿಂಗ್ ಟು ಮಾನಸಾರ, ಪು.ಸಂ.4.

15. ಬ್ರೂನೋ ಡಗೆನ್ಸ್ (ಸಂ) ಮಯಮತ, ಪು.ಸಂ. 35.

ಅಮರ್ತ್ಯಾಶ್ಚೈವ ಮರ್ತ್ಯಾಶ್ಚ ಯತ್ರ ಯತ್ರ
ವಸಂತಿ ಹೀ ತದ್ವಸ್ತು ಇತಿಮತಂ
ಪ್ರಾಸಾದಾದೀನಿ ವಾಸ್ತುನಿ ವಸ್ತುತ್ವಾದ್ ವಸ್ತುಸಂಶ್ರಯತ್ ಎಂದು ಮಯಮತದಲ್ಲಿ ಹೇಳಲಾಗಿದೆ.

16. ಗರುಡ ಪುರಾಣ, ಅಧ್ಯಾಯ-46.

ಅವಾಸವಾಸ ವೇಶ್ಮಾದೌಪುರೆ ಗ್ರಾಮೇ ವಣಿಕ್ವಥೇ
ಪ್ರಾಸಾದಾರಾಮದುರ್ಗೇಷು ದೇವಾಲಯ ಮತೇಷುಚ ಎಂದು ಗರುಡ ಪುರಾಣದಲ್ಲಿ ಹೇಳಲಾಗಿದೆ.

17. ವಾಸ್ತುಶಾಸ್ತ್ರಕ್ಕೆ ಸಂಬಂಧಿಸಿದ ಶಬ್ದಕೋಶದ ಮುನ್ನುಡಿಯಲ್ಲಿ ವಿದ್ವಾಂಸರಾ ಪಿ.ಕೆ.ಆಚಾರ್ಯ ಅವರು "ವಾಸ್ತುಶಾಸ್ತ್ರ" ಹಾಗೂ "ಶಿಲ್ಪಶಾಸ್ತ್ರ" ಪದಗಳನ್ನು ಪರ್ಯಾಯ ಪದಗಳೆಂಬಂತೆ ಬಳಸಿದ್ದಾರೆ

18. ಜಿ.ಜ್ಞಾನಾನಂದ. ಪೂರ್ವೋಕ್ತ, ಸಂ.1, ಪು.ಸಂ.5

19. ಸ್ಟೆಲ್ಲಾ ಕ್ರಮ್ರಿಶ್. ದ ಹಿಂದೂ ಟೆಂಪಲ್ಸ್, ಸಂ.1, ಪು.ಸಂ.25

20. ಅದೇ, ಪು.ಸಂ. 29-39

21. ಬಾ.ರಾ. ಗೋಪಾಲ. ಕರ್ನಾಟಕ ಕಲೆಗಳ ವಾಸ್ತು, ಪು.ಸಂ.23

22. ಡಿ.ಎಸ್.ಶುಕ್ಲಾ. ವಾಸ್ತುಶಾಸ್ತ್ರ, ಹಿಂದೂ ಸೈನ್ಸ್ ಆಫ್ ಆರ್ಕಿಟೆಕ್ಚರ್, ಸಂ.1, ಪು.ಸಂ.460

23. ಸ್ಟೆಲ್ಲಾ ಕ್ರಮ್ರಿಶ್. ಪೂರ್ವೋಕ್ತ, ಪು.ಸಂ.48

24. ಡಿ.ಜಿ.ಕುಲಕರ್ಣಿ. ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳು, ಪು.ಸಂ.9

25. ಜಿ.ಜ್ಞಾನಾನಂದ. ಪೂರ್ವೋಕ್ತ, ಪು.ಸಂ. 299

26. ಡಿ.ಎನ್.ಶುಕ್ಲಾ. ಪೂರ್ವೋಕ್ತ, ಪು.ಸಂ.400

27. ಅದೇ, ಪು.ಸಂ.166

28. ಸ್ಟೆಲ್ಲಾ ಕ್ರಮ್ರಿಶ್. ಪೂರ್ವೋಕ್ತ, ಪು.ಸಂ.161

29. ಡಾ.ಡಿ.ಜಿ.ಕುಲಕರ್ಣಿ. ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳು, ಪು.ಸಂ.10, 2007-2008.

30. ಎಂ.ಎ.ಢಾಕೆ. ದ ಇಂಡಿಯನ್ ಟೆಂಪಲ್ಸ್ ಫಾರ್ಮ (ಇನ್ ಕರ್ನಾಟಕ ಇನ್ಸ್‌ಕ್ರಿಪ್‌ಷನ್ಸ್ ಅಂಡ್ ಆರ್ಕಿಟೆಕ್ಚರ್, ಪು.ಸಂ.1-7.

ಹೊಳಲು ಗ್ರಾಮದ ಶಾಸನವು (ಎ.ಕ.ಸಂ.VII) (ಹಳೆಯ ಸೊರಬ ಶಾ.ಸಂ.275)
ಸ್ವಸ್ತಿ ಸಮಸ್ತ ಸಿವ ಪಾದ ಶೇಖರ ಕಲಿಯುಗ ವಿಶ್ವಕರ್ಮ ಚೌಷಷ್ಠಿ ಕಲಾ ವಿದ್ಯಾ
ಪ್ರವೀನ ಚೌಷಷ್ಠ ಪ್ರಸಾದ ವಿಶಾರದ ನಾಗರ ಕಳಿಂಗ ದ್ರಾವಿಲ ವೇಸರ
ಚತುರ್ಜಾತಿ ಛಾಕ್ರ ಒಮ್ಮೋಜನು ಬೂ (ಒಕೊ) ಕೋಜನ ಪುತ್ರನು ಶ್ರೀಕಾರನಾಮ
ಕಂಬಗಳ ಮಾಡಿದನ್ ಎಂದು.

ಸೋಗೆಯ ಪಿಂದೋಜನ ಶಿಷ್ಯ ಬಮ್ಮೋಜನನ್ನು, ನಾಗರ, ಕಳಿಂಗ, ದ್ರಾವಿಡ, ವೇಸರ ಚತುರ್ಜಾತಿ ಪ್ರಾಸಾದ ವಿನಿರ್ಮ್ಮಿತವೆಂದೂ, ಚೌಷಷ್ಠಿ ಪ್ರಾಸಾದ
ವಿಶಾರದನೆಂದೂ ವರ್ಣಿಸಿದೆ. ದೊಡ್ಡಗದ್ದವಳ್ಳಿ ಶಾಸನದಲ್ಲಿ ವಿಮಾನ, ಸರ್ವತೋಭದ್ರ, ವೃಷಭ, ನಳಿನೀಕ, ಉತ್ತುಂಗ, ವೈರಾಜ, ಗರುಡ, ವರ್ಧಮಾನ, ಶಂಖ, ವೃತ್ತ, ಪುಷ್ಪಕ ಮತ್ತು ಗೃಹರಾಜವೆಂಬ ಭಿನ್ನ ಶೈಲಿಗಳ ಉಲ್ಲೇಖವಿದೆ. ಕುಪ್ಪಟೂರಿನ ಶಾಸನದಲ್ಲಿ ದ್ರಾವಿಡ, ಭೂಮಿಜ ಹಾಗೂ ನಾಗರಗಳೆಂಬ ಶೈಲಿಗಳ ಪ್ರಸ್ತಾಪವಿದೆ.

31. ಡಿ.ಕೃಷ್ಣರಾಯ ಮತ್ತು ವಿ.ಜಿ.ಆಷ್ಟೆ-ಕಾಶ್ಯಪ ಶಿಲ್ಪ, ಪು.ಸಂ.54.

32. ಅದೇ,

33. ಸ್ಟೆಲ್ಲಾ ಕ್ರಮ್ರಿಶ್. ಪೂರ್ವೋಕ್ತ, ಪು.ಸಂ.280

34. ಅದೇ, ಪು.ಸಂ.291

35. ಎಂ.ಎ.ಢಾಕೆ. ಪೂರ್ವೋಕ್ತ, ಪು.ಸಂ.21

36. ಎಂ.ಎನ್.ಪ್ರಭಾಕರ. ದೇವಾಲಯ ವಾಸ್ತು ಚಂದಿಕೆ, ಪು.ಸಂ.39

37. ಎಂ.ಎ.ಢಾಕೆ. ಪೂರ್ವೋಕ್ತ, ಪು.ಸಂ.18

38. ಅದೇ, ಪು.ಸಂ. 39.

39. ಸ್ಟೆಲ್ಲಾ ಕ್ರಮ್ರಿಶ್. ಪೂರ್ವೋಕ್ತ, ಸಂ.-2, ಪು.ಸಂ. 356.

40. ಸರ್ ಜಾನ್ ಮಾರ್ಷಲ್. ಮೆಹಂಜಾದೋರ್ ಅಂಡ್ ಇಂಡಸ್ ಸಿವಿಲೈಜೇಷನ್-ಭಾಗ-1, ಪು.ಸಂ-52

41. ಎಂ.ಚಿದಾನಂದ ಮೂರ್ತಿ.ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಸ್ವಪ್ನ ಬುಕ್‌ಹೌಸ್, ಬೆಂಗಳೂರು-2014, ಪು.ಸಂ.139

42. ಎಂ.ಚಿದಾನಂದ ಮೂರ್ತಿ. ಪೂರ್ವೋಕ್ತ, ಪು.ಸಂ.140

43. ಸರ್ ಚಾರ್ಲ್ಸ್ ಎಲಿಯಟ್. ಹಿಂದೂಯಿಸಮ್ ಅಂಡ್ ಬುದ್ಧಿಸಮ್, ಸಂಪುಟ-2, ಪು.ಸಂ.143

44. ಇಂಡಿಯನ್ ಆಂಟಿಕ್ವೈರಿ. ಸಂ-19, ಪು.ಸಂ.7

45. ದಿವಾಕರ.ಆರ್.ಆರ್. ಕರ್ನಾಟಕ ಪರಂಪರೆ, ಸಂ-1, ಪು.ಸಂ.180

46. ಎಸ್.ರಾಜಶೇಖರ, ದಕ್ಷಿಣ ಭಾರತದ ವಾಸ್ತುಶಿಲ್ಪಕ್ಕೆ ಬಾದಾಮಿ ಚಾಲುಕ್ಯರ ಕೊಡುಗೆ, ಪು.ಸಂ.12

47. ಶ್ರೀಪಾದ ಭಟ್. ಎಲ್.ಪುಟ್ಟರಾಜು. (ಸಂಪಾದಕರು) ಡಿ.ಶಿವಲಿಂಗಯ್ಯ., ತುಮಕೂರು ಜಿಲ್ಲೆಯ ಸ್ಥಳನಾಮಗಳು, ತುಮಕೂರು ವಿಶ್ವವಿದ್ಯಾನಿಲಯ, ತುಮಕೂರು-2011, ಪು.ಸಂ.149

48. ದೇವರಕೊಂಡಾರೆಡ್ಡಿ. ತಲಕಾಡಿನ ಗಂಗರ ದೇವಾಲಯಗಳು-ಒಂದು ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪು.ಸಂ.165

49. ಎಂ.ಎ.ಆರ್. 1916, ಪು.ಸಂ.4

50. ಎಸ್.ಶ್ರೀಕಂಠಶಾಸ್ತ್ರಿ, ಹೊಯ್ಸಳ ವಾಸ್ತುಶಿಲ್ಪ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು-1965, ಪು.ಸಂ.100

51. ಎಂ.ಎ.ಆರ್. 1916, ಪು.ಸಂ.4

52. ಸಿ. ಹಯವದನರಾವ್, Gazetter, Compiled for Government, Vol-V, B.R. Publishing Corporation, Delhi-1927-1930, Page No-541

53. ಬಿ.ಎಲ್.ರೈಸ್, ಎ.ಕ.12, ಶಾ.ಸಂ.31, ಪು.ಸಂ.135

54. ಡಿ.ಶಿವಲಿಂಗಯ್ಯ, (ಸಂ) ತುಮಕೂರು ಜಿಲ್ಲೆಯ ಸ್ಥಳನಾಮಗಳು-2011, ಪು.ಸಂ.153

55. ದೇವರಕೊಂಡಾರೆಡ್ಡಿ, ಪೂರ್ವೋಕ್ತ, ಪು.ಸಂ.165

56. ಕೂ.ಸ.ಅಪರ್ಣ, ದೇವಾಲಯ ವಾಸ್ತು ಪರಿಚಯ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ-1999, ಪು.ಸಂ.97

57. ಬಿ.ಎಲ್.ರೈಸ್, ಎ.ಕ.12, ಶಾ.ಸಂ.30, ಪು.ಸಂ.135

58. ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ಬರೆಯಲಾಗಿದೆ

59. ದೇವರಕೊಂಡಾರೆಡ್ಡಿ. ತಲಕಾಡಿನ ಗಂಗರ ದೇವಾಲಯಗಳು-ಒಂದು ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪು.ಸಂ.165

60. ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ಬರಯಲಾಗಿದೆ

61. ಬಿ.ಎಲ್.ರೈಸ್,ಎ.ಕ.12,ಶಾಸನ ಸಂಖ್ಯೆ, 28, ಪು.ಸಂ.131

62. ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ಬರೆಯಲಾಗಿದೆ

63. ಎಸ್.ಶೆಟ್ಟರ್, ಸೋಮನಾಥಪುರ, ಬೆಂಗಳೂರು, ಪು.ಸಂ.39

64. ಎ.ಕ.ಸಂ,16, ಶಾ.ಸಂ.151, ಪು.ಸಂ.71

65. ಕೆಲ್ಲಿಸನ್ ಕೊಯ್ಲರ್., ದಿ ಹೊಯ್ಸಳ ಆರ್ಟಿಸ್ಟ್ ದೇರ್ ಐಡೆಂಟಿಟಿ ಅಂಡ್ ಸ್ಟೈಲ್ಸ್, ಪುರಾತತ್ವ ಮತ್ತು ವಸ್ತುಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು-1990, ಪು.ಸಂ.190

66. ಎಂ.ಎ.ಆರ್. 1934, ಪು.ಸಂ.28

67. ಮೈಸೂರು ನಾಗರಾಜ ಶರ್ಮ, ಹೊಯ್ಸಳ ಶಿಲ್ಪದಲ್ಲಿ ಶಿವ, ಪ್ರಸರಾಂಗಾ, ಮೈಸೂರು, 2010 ಪು.ಸಂ. 222

68. ಎಚ್.ಎಂ. ನಾಗರಾಜರಾವ್, ಹೊಯ್ಸಳ ವಾಸ್ತುಶಿಲ್ಪ, ಅವಲೋಕನ, ಕರ್ನಾಟಕ ಪರಂಪರೆ ಸಮೀಕ್ಷೆ, (ಸಂ) ಎಚ್ಎಸ್ಕೆ, ವಿಶ್ವಕನ್ನಡ ಸಮ್ಮೇಳನ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ಪು.ಸಂ.108

69. The Hoysala Artists, Their Identity and Styles, Kelleson Collyer, Directorate of Archaeology and Museums, Mysore, 1990, page No.190

70. ಕೂ.ಸ.ಅಪರ್ಣ, ದೇವಾಲಯ ವಾಸ್ತು ಪರಿಚಯ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ-1999, ಪು.ಸಂ.64

71. ಎಂ. ಪ್ರಭಾಕರ್, ದೇವಾಲಯ ವಾಸ್ತು, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, 1999, ಪು.ಸಂ.141

72. ಪೂರ್ವೋಕ್ತ, ಪು.ಸಂ.142

73. ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ಬರೆಯಲಾಗಿದೆ.

74. ಎಂ.ಎ.ಆರ್.1916, ಪು.ಸಂ.6

75. ಎಚ್.ಎಂ.ನಾಗರಾಜರಾವ್, ಶಿವಮುಖ, ಈಶ್ವರಿ ಪ್ರಕಾಶನ, ಉತ್ತರಾಧಿಮಠ, ಮೈಸೂರು, 2005, ಪು.ಸಂ.37

76. ಡಾ.ಎ.ವಿ.ನರಸಿಂಹಮೂರ್ತಿ, ಚಾಲುಕ್ಯ ವಾಸ್ತುಶಿಲ್ಪ ಪರಿಚಯ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, 1984, ಪು.ಸಂ.31

77. ಮೈಸೂರು ನಾಗರಾಜ ಶರ್ಮಾ, ಹೊಯ್ಸಳ ಶಿಲ್ಪದಲ್ಲಿ ಶಿವ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 2010, ಪು.ಸಂ.123

78. ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ಬರೆಯಲಾಗಿದೆ

79. ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ಬರೆಯಲಾಗಿದೆ

80. ಹಿಂದೂ ದೇವಿಯರು, ಡಾ.ಹೆಚ್. ರಾಮಚಂದ್ರಸ್ವಾಮಿ, ಶ್ರೀರಾಮಕೃಷ್ಣ ಆಶ್ರಮ, ಮೈಸೂರು, 2009, ಪು.ಸಂ.84

81. ಕೃ. ನಾರಾಯಣ ರಾವ್, ಪುರಾಣದ ದೇವಾನು ದೇವತೆಗಳು, ವಿದ್ಯಾರ್ಥಿ ಪ್ರಕಾಶನ, ಬಳೇಪೇಟೆ, ಬೆಂಗಳೂರು, 2011, ಪು.ಸಂ.19

82. ಎಚ್.ಎನ್.ನಾಗರಾಜ ರಾವ್, ಈಶ್ವರಿ ಪ್ರಕಾಶನ, ಉತ್ತರಾಧಿಮಠದ ರಸ್ತೆ, ಮೈಸೂರು, ಪು.ಸಂ.37

83. ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ಬರೆಯಲಾಗಿದೆ

84. ಮೈಸೂರು ನಾಗರಾಜ ಶರ್ಮ, ಹೊಯ್ಸಳ ಶಿಲ್ಪದಲ್ಲಿ ಶಿವ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು-2010, ಪು.ಸಂ.293

85. ಎಂ.ಎ.ಆರ್., 1916, ಪು.ಸಂ.4

86. ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ಬರಯಲಾಗಿದೆ

87. ಜಿ.ಮನೋಜ್, ದೇವಾಲಯ ವಾಸ್ತು ವಿಜ್ಞಾನ, ಶಾಸ್ತ್ರಗಳ ಹಿನ್ನೆಲೆಯಲ್ಲಿ, ಸುಬೋಧಿನಿಬುಕ್ ಪಬ್ಲಿಷರ್ಸ್ ಮತ್ತು ನಾಲೆಡ್ಜ್ ಅಕಾಡೆಮಿ, ಚಿತ್ರದುರ್ಗ,2015, ಪು.ಸಂ.63

88. ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ಬರಯಲಾಗಿದೆ

89. ಮೈಸೂರು ಗ್ಯಾಸಿಟಿಯರ್, Vol-5, ಸಿ. ಹಯವದನರಾವ್, ಬಿ.ಆರ್.ಪಬ್ಲಿಷಿಂಗ್ ಕಾರ್ಪೋರೇಷನ್, ದೆಹಲಿ, 1930, ಪು.ಸಂ.475

90. ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ಬರಯಲಾಗಿದೆ

91. ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ಬರೆಯಲಾಗಿದೆ

92. ಎ.ಕ.ಸಂ.16, ಶಾ.ಸಂ.76, ಪು.ಸಂ.41

93. ಎಸ್.ಶೆಟ್ಟರ್, ಸೋಮನಾಥಪುರ, ಅಭಿನವ ಪ್ರಕಾಶನ, ಬೆಂಗಳೂರು, 2008, ಪು.ಸಂ.73-74

94. ಪೂರ್ವೋಕ್ತ

95. ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ಬರೆಯಲಾಗಿದೆ

96. ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ಬರೆಯಲಾಗಿದೆ

97. ಕರ್ನಾಟಕ ರಾಜ್ಯ ಗೆಜಿಟಿಯರ್, 1969, ತುಮಕೂರು ಜಿಲ್ಲೆ, ಪು.ಸಂ.599

98. ಎಂ.ಎ.ಆರ್.1916, ಪು.ಸಂ.5

99. ಪುಲುಮತಿ ಶಾಮರಾವ್, ವಿಜಯನಗರದ ಕಲೆ ಮತ್ತು ಸಾಹಿತ್ಯ ಪು. ಸಂ, 36

100. ಜಿ.ಮನೋಜ್, ದೇವಾಲಯ ವಾಸ್ತುವಿಜ್ಞಾನ, ಪು.ಸಂ.106-108

101. ಕೂ.ಸ. ಅಪರ್ಣ, ದೇವಾಲಯ ವಾಸ್ತು ಪರಿಚಯ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ-1999, ಪು.ಸಂ.86

102. ಪೂರ್ವೋಕ್ತ, ಪು.ಸಂ.86

103. ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ಬರೆಯಲಾಗಿದೆ

104. ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ಬರೆಯಲಾಗಿದೆ

105. ಎಂ.ಎ.ಆರ್.1916, ಪು.ಸಂ.3

106. ಹೊಯ್ಸಳ ಶಿಲ್ಪದಲ್ಲಿ ಶಿವ ಪು. ಸಂ, 284

107. ಕೂ.ಸ.ಅಪರ್ಣ, ದೇವಾಲಯ ವಾಸ್ತು ಪರಿಚಯ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ-1999, ಪು.ಸಂ.86

108. ಪೂರ್ವೋಕ್ತ

109. ಎಂ.ಎ.ಆರ್, 1934, ಪು.ಸಂ.29

110. ಪೂರ್ವೋಕ್ತ

111. ಕರ್ನಾಟಕ ರಾಜ್ಯ ಗೆಜಿಟಿಯರ್, 1969, ತುಮಕೂರು ಜಿಲ್ಲೆ, ಪು.ಸಂ.3-4

112. ಎಂ.ಎ.ಆರ್, 1916, ಪು.ಸಂ.3-4

113. ಎಂ.ಎ.ಆರ್. 1916, ಪು.ಸಂ.2

114. ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ಬರೆಯಲಾಗಿದೆ

115. ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ಬರೆಯಲಾಗಿದೆ

116. ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ಬರಯಲಾಗಿದೆ

117. ಎಂ.ಚಿದಾನಂದ ಮೂರ್ತಿ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಸಪ್ನ ಬುಕ್ ಹೌಸ್, ಬೆಂಗಳೂರು-2014, ಪು.ಸಂ.179

118. ಎದುರ್ಕುಳ.ಕೆ., ಶಂಕರನಾರಾಯಣ ಭಟ್ಟ, ಹಿಂದೂ ಧರ್ಮದ ಪರಿಚಯ, ಪು.ಸಂ.360

119. ಕನ್ನಡ ರತ್ನಕೋಶ. ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು, ಪು.ಸಂ.311

120. ಎಂ.ಚಿದಾನಂದ ಮೂರ್ತಿ. ಪೂರ್ವೋಕ್ತ, ಪು.ಸಂ.179-180

121. ಘೋಷ್.ಎ. (ಸಂ) ಜೈನ ಆರ್ಟ್ ಅಂಡ್ ಆರ್ಕಿಟೆಕ್ಚರ್, ಸಂಪುಟ-1, ನ್ಯೂಡೆಲ್ಲಿ, 1975, ಪು.ಸಂ.25

122. ಆರ್.ಗೋಪಾಲ್ (ಸಂ) ತುಮಕೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ-2009, ಪು.ಸಂ.160

123. ಎಂ.ಎ.ಆರ್., 1936, ಪು.ಸಂ.73

124. ಆರ್.ಆರ್. ದಿವಾಕರ. ಕರ್ನಾಟಕ ಪರಂಪರೆ, ಸಂ-1, ಬೆಂಗಳೂರು-1970, ಪು.ಸಂ.388-389

125. ಎಂ.ಎ.ಆರ್.1916, ಪು.ಸಂ.5

126. Hayavadana Rao, Mysore District Gazeeter, Page. No. 515

127. M. Radha Patel. Life and Times of Hoysla Narasimha 3, Prasaranga, University of Mysore-2001, Page No. 132

128. ಮೈಸೂರು ನಾಗರಾಜಶರ್ಮ. ಹೊಯ್ಸಳ ಶಿಲ್ಪದಲ್ಲಿ ಶಿವ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು-2010, ಪುಟ ಸಂಖ್ಯೆ: 128

129. ಆರ್.ಗೋಪಾಲ್, ತುಮಕೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, 2009, ಪು.ಸಂ. 160

130. ಪೂರ್ವೋಕ್ತ

131. ಕನ್ನಡ ವಿಷಯ ವಿಶ್ವಕೋಶ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ಪು.60

132. ಎಸ್. ಶ್ರೀಕಂಠಶಾಸ್ತ್ರಿ. ಹೊಯ್ಸಳ ವಾಸ್ತುಶಿಲ್ಪ, ಪರಿಶ್ರೀ ಪ್ರಕಾಶಕರು, ಬೆಂಗಳೂರು, 2016. ಪು.ಸಂ.96

133. ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ಬರೆಯಲಾಗಿದೆ

134. ಕನ್ನಡ ವಿಶ್ವಕೋಶ, ಸಂ.9, ಪು.ಸಂ.60

135. ಎ.ಕ.ಸಂ.12, ಶಾ.ಸಂ.2, ಪು.ಸಂ.117

136. Life and Times of Hoysala Narasimha-III, M. Radha Patel, Prasaranga,University of Mysore, 2001, Page No.123

137. ಎ.ಕ.ಸಂ.16, ಶಾ.ಸಂ.5, ಪು.ಸಂ.65

138. ಎ.ಕ.ಸಂ.12, ಶಾ.ಸಂ.2, ಪು.ಸಂ.117-119

139. The Hoysala Temples, S.Settar, Karnataka University, Kala Yatra Publications, 1992, Page No.151

140. ಬಿ.ಎಲ್.ರೈಸ್. ಎ.ಕ.ಸಂ.12,ಶಾ.ಸಂ.31, ಪು.ಸಂ.135

141. ಎಸ್.ಶ್ರೀಕಂಠಶಾಸ್ತ್ರಿ, ಹೊಯ್ಸಳ ವಾಸ್ತುಶಿಲ್ಪ, ಪು.ಸಂ.99

142. ಎನ್.ಎಸ್.ರಂಗರಾಜು., ದಿ ಹೊಯ್ಸಳ ಟೆಂಪಲ್ಸ್ ಇನ್ ಮಂಡ್ಯ ಅಂಡ್ ತುಮಕೂರು ಡಿಸ್ಟ್ರಿಕ್ಟ್, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು-1998, ಪು.ಸಂ.186

143. ಕನ್ನಡ ವಿಶ್ವಕೋಶ, ಸಂ.9, ಪು.ಸಂ.60

144. ಎಂ.ಎ.ಆರ್.1916, ಪು.ಸಂ.4

145. ಜಿ.ಮನೋಜ್. ದೇವಾಲಯ ವಾಸ್ತುವಿಜ್ಞಾನ, ಸುಬೋಧಿನಿ ಬುಕ್ ಪಬ್ಲಿಷರ್ಸ್ ಮತ್ತು ನಾಲೆಡ್ಜ್ ಅಕಾಡೆಮಿ, ಚಿತ್ರದುರ್ಗ, 2015, ಪು.ಸಂ.66-67

146. ಪೂರ್ವೋಕ್ತ. ಪು.ಸಂ.124

147. ಎಸ್.ಶ್ರೀಕಂಠಶಾಸ್ತ್ರಿ, ಪು.ಸಂ.99

148. ಜಿ.ಮನೋಜ. ಪು.ಸಂ.47

149. ಕ್ಷೇತ್ರಕಾರ್ಯವರದಿ ಆಧರಿಸಿ ಬರೆಯಲಾಗಿದೆ

150. ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ಬರೆಯಲಾಗಿದೆ

151. ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ಬರೆಯಲಾಗಿದೆ

152. ಡಿ.ಶಿವಲಿಂಗಯ್ಯ. ತುಮಕೂರು ಜಿಲ್ಲೆಯ ಸ್ಥಳನಾಮಗಳು, ಪು.ಸಂ. 156

153. ಕರ್ನಾಟಕ ಸ್ಟೇಟ್ ಗ್ಯಾಸಿಟಿಯರ್, 1969, ಪು.ಸಂ.592

154. ಎಸ್.ಪಿ.ಗುಪ್ತ, ಎಲಿಮೆಂಟ್ಸ್ ಆಫ್ ಇಂಡಿಯನ್ ಆರ್ಟ್ಸ್, ಇಂದ್ರಪಸ್ಥ ಮ್ಯೂಸಿಯಂ ಆಫ್‌ಆರ್ಟ್ ಅಂಡ್ ಆರ್ಕಿಯಾಲಜಿ-2009, ಪು.ಸಂ.2009

155. ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ಬರೆಯಲಾಗಿದೆ

156. ಎಂ.ಎ.ಆರ್. 1916, ಪು.ಸಂ.7

157. ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ಬರೆಯಲಾಗಿದೆ

158. Edith Tomory, A History of Fine Arts in India and the West, 1989, Orient Blackswan Private Ltd., page No.136

159. ಎಂ.ಎ.ಆರ್.1916, ಪು.ಸಂ.3

160. ಪೂರ್ವೋಕ್ತ, ಪು.ಸಂ.3

161. ಪೂರ್ವೋಕ್ತ, ಪು.ಸಂ.3

162. ಪೂರ್ವೋಕ್ತ, ಪು.ಸಂ.3

163. ಪೂರ್ವೋಕ್ತ, ಪು.ಸಂ.3

164. ಪೂರ್ವೋಕ್ತ, ಪು.ಸಂ.3

165. ಪೂರ್ವೋಕ್ತ, ಪು.ಸಂ.3

166. ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ಬರೆಯಲಾಗಿದೆ

167. ಜಿ.ಮನೋಜ್, ಪು.ಸಂ.37

168. ಪೂರ್ವೋಕ್ತ, ದೇವಾಲಯ ವಾಸ್ತು ವಿಜ್ಞಾನ, ಪು.ಸಂ.37

169. ಸೂರ್ಯನಾಥ ಯು ಕಾಮತ್, ಕರ್ನಾಟಕದ ಸಂಕ್ಷಿಪ್ತ ಇತಿಹಾಸ, ಎಂ.ಸಿ.ಸಿ. ಪಬ್ಲಿಕೇಷನ್ಸ್, ಬೆಂಗಳೂರು, 1999, ಪು.ಸಂ.172

170. ಜಿ.ಮನೋಜ್, ದೇವಾಲಯ ವಾಸ್ತುವಿಜ್ಞಾನ, ಶುಭೋಧಿನಿ ಬುಕ್ ಪಬ್ಲಿಷರ್ಸ್ ಮತ್ತು ನಾಲೆಡ್ಜ್ ಅಕಾಡೆಮಿ, ಚಿತ್ರದುರ್ಗ, 2015, ಪು.ಸಂ.28

171. ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ಬರೆಯಲಾಗಿದೆ

172. ಎಂ.ಎ.ಆರ್.1916, ಪು.ಸಂ.6

173. ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ಬರೆಯಲಾಗಿದೆ.

174. ಕೂ.ಸ.ಅಪರ್ಣ, ಪೂರ್ವೋಕ್ತ, ಪು.ಸಂ.97

175. ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ಬರೆಯಲಾಗಿದೆ

176. ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ಬರೆಯಲಾಗಿದೆ

177. ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ಬರೆಯಲಾಗಿದೆ

178. ಪಲುಮತಿ ಶಾಮರಾವ್, ವಿಜಯನಗರದ ಕಲೆ ಮತ್ತು ಸಾಹಿತ್ಯ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, 2014, ಪು.ಸಂ.41

179. ಎಂ.ಎ.ಆರ್.1916, ಪು.ಸಂ.7

180. ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ಬರೆಯಲಾಗಿದೆ

181. ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ಬರೆಯಲಾಗಿದೆ

182. ಪಲುಮತಿ ಶಾಮರಾವ್, ವಿಜಯನಗರದ ಕಲೆ ಮತ್ತು ಸಾಹಿತ್ಯ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, 2014, ಪು.ಸಂ.41

183. ಕೂ.ಸ. ಅಪರ್ಣ. ಪೂರ್ವೋಕ್ತ, ಪು.ಸಂ.97

184. ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ಬರೆಯಲಾಗಿದೆ

# ಅಧ್ಯಾಯ–4

## ಶಾಸನಗಳ ಅಧ್ಯಯನ

ಕನ್ನಡ ನಾಡಿನ ಅನೇಕ ಪ್ರದೇಶಗಳಲ್ಲಿ ಇತಿಹಾಸವು ಅಂತರ್ಗತವಾಗಿದೆ ಎಂಬುದು ಸರ್ವವಿಧಿತವಾದ ಸಂಗತಿ. ಏಕೆಂದರೆ ಒಂದು ಪ್ರದೇಶದ ಇತಿಹಾಸವನ್ನು ಪುನರ್‌ರಚಿಸುವುದಕ್ಕೆ ಲಿಖಿತ ಆಧಾರಗಳು ಪ್ರಮುಖ ಸಾಕ್ಷಿ. ಈ ರೀತಿಯ ಆಧಾರಗಳಲ್ಲಿ ಲಿಖಿತವಾಗಿರುವ ಶಾಸನಧಾರಗಳು ಮಹತ್ವದ ಸ್ಥಾನವನ್ನು ಪಡೆದುಕೊಂಡಿದೆ.

ಶಾಸನಗಳು ಈ ನಾಡಿನ ಸಂಪತ್ತು ಹೀಗಾಗಿ ತೇದಿ ಮತ್ತು ತೇದಿರಹಿತ ಸಹಸ್ರಾರು ಶಾಸನಗಳು ನಮಗೆ ಲಭ್ಯವಾಗಿ ಕನ್ನಡ ನಾಡಿನ ರಾಜಕೀಯ, ಸಾಮಾಜಿಕ, ಧಾರ್ಮಿಕ, ಆರ್ಥಿಕ, ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಇತಿಹಾಸ ರಚನೆಯಲ್ಲಿ ಪ್ರಮುಖ ಪಾತ್ರವಹಿಸಿವೆ.[1] ಮೂಲಭೂತವಾಗಿ ಐತಿಹಾಸಿಕ ಆಧಾರಗಳು ಅನುಷಂಗಿಕವಾಗಿ ಅವುಗಳ ಭಾಷೆ, ಸಾಹಿತ್ಯ, ಧರ್ಮ, ಸಮಾಜ ಮತ್ತು ಸಂಸ್ಕೃತಿ ಇತ್ಯಾದಿ ವಿಷಯಗಳ ಮೇಲೆ ಬೆಳಕನ್ನು ಚೆಲ್ಲುತ್ತವೆ.

ಇತಿಹಾಸದ ಪ್ರಮಾಣಿಭೂತ ಪುನರ್ ನಿರ್ಮಾಣಕ್ಕೆ ಇರುವ ಅತಿ ಪ್ರಮುಖವಾದ ಆಧಾರಗಳೆಂದರೆ ಶಾಸನಗಳು, ಕನ್ನಡ ಸಾಹಿತ್ಯ, ಕಲಾಕೃತಿಗಳು, ನಾಣ್ಯಗಳು, ವಿದೇಶಿ ಯಾತ್ರಿಕರ ವರದಿಗಳು, ಭೂಮಿಯ ಉತ್ಖನನದಿಂದ ಹೊರಬಿದ್ದ ಅಂಶಗಳೆಲ್ಲವೂ ಸಹಾಯಕವಾದರೂ ಕರ್ನಾಟಕದ ರಾಜಕೀಯ ಮತ್ತು ಸಾಮಾಜಿಕ ಪರಂಪರೆಯನ್ನು ತಿಳಿಯಲು ಇರುವ ಪ್ರಮುಖ ಆಧಾರಗಳೆಂದರೆ ಶಾಸನಗಳು.[2]

ಕರ್ನಾಟಕದಲ್ಲಿ ಇದುವರೆವಿಗೂ ಸುಮಾರು 25000ಕ್ಕೂ ಹೆಚ್ಚು ಶಾಸನಗಳು ಕಂಡುಬಂದಿವೆ. ನೆರೆಯ ರಾಜ್ಯವಾದ ತಮಿಳುನಾಡನ್ನು ಬಿಟ್ಟರೆ ಅತಿ ಹೆಚ್ಚು ಶಾಸನಗಳನ್ನು ಹೊಂದಿರುವ ಎರಡನೇ ರಾಜ್ಯ ಕರ್ನಾಟಕವಾಗಿದೆ. ಕರ್ನಲ್ ಮೆಕೆಂಜೀಯವರು ಕ್ರಿ.ಶ.1783 ರಿಂದ ಕ್ರಿ.ಶ.1821ರ ಅವಧಿಯಲ್ಲಿ ಕರ್ನಾಟಕ ಸೇರಿದಂತೆ ದಕ್ಷಿಣ ಭಾರತದ ನಾನಾ ಭಾಗಗಳಲ್ಲಿ ಶಾಸನಗಳನ್ನು ಸಂಗ್ರಹಿಸಿ ಸುವ್ಯವಸ್ಥಿತ ಅಧ್ಯಯನ ನಡೆಸಿದರು. ಇಲಿಯಟ್ ನಂತರ ಬಿ.ಎಲ್.ರೈಸ್‌ರವರು ಎಪಿಗ್ರಾಫಿಯ ಕರ್ನಾಟಿಕ ಎಂಬ ಸಂಪುಟವನ್ನು ಕ್ರಿ.ಶ.1879ರಲ್ಲಿ ಪ್ರಕಟಿಸಿದರು.[3] ಕ್ರಿ.ಶ.1890ರ ವೇಳೆಗೆ ಜೆ.ಎಫ್.ಫ್ಲೀಟ್ ಕರ್ನಾಟಕದ ಶಾಸನಗಳನ್ನು ಪ್ರಕಟಿಸುವ ಕೆಲಸವನ್ನು ಪ್ರಾರಂಭಿಸಿದರು.[4] ಬಿ.ಎಲ್.ರೈಸ್‌ರವರು ಕ್ರಿ.ಶ.1886 ರಿಂದ ಕ್ರಿ.ಶ.1906ರ ವೇಳೆಯಲ್ಲಿ ಹಳೆಯ ಮೈಸೂರು ಸಂಸ್ಥಾನ ಮತ್ತು ಕೊಡಗಿನಲ್ಲಿ ಕ್ರಮಬದ್ಧವಾಗಿ ಶಾಸನಗಳನ್ನು ಸಂಗ್ರಹಿಸಿ ಎಪಿಗ್ರಾಫಿಯ ಕರ್ನಾಟಿಕ ಸಂಪುಟಗಳನ್ನು ಹೊರತಂದರು.[5] ಶಾಸನಗಳನ್ನು

ಸಂಗ್ರಹಿಸಿದ ಇತರೆ ವಿದ್ವಾಂಸರುಗಳೆಂದರೆ ಆರ್.ನರಸಿಂಹಾಚಾರ್, ಆರ್.ರಾಮಶಾಸ್ತ್ರಿ, ಎನ್.ಲಕ್ಷ್ಮೀನಾರಾಯಣ, ಪಾಂಡುರಂಗರಾವ್, ದೇಸಾಯಿ.ಪಿ.ಬಿ, ಎಂ.ಎಚ್.ಕೃಷ್ಣ ಮೊದಲಾದವರ ನಂತರ ಆರ್.ಎಸ್.ಪಂಚಮುಖಿಯವರು ಶಾಸನಗಳನ್ನು ಸಂಗ್ರಹಣೆ ಮಾಡಿ ಕರ್ನಾಟಕದ ಶಾಸನಗಳ ಸಂಪುಟ, ಆರ್.ರಾಮಶಾಸ್ತ್ರಿ ಮತ್ತು ಲಕ್ಷ್ಮೀನಾರಾಯಣರಾಯರು ದಕ್ಷಿಣ ಭಾರತದ ಶಾಸನಗಳ ಸಂಪುಟಗಳನ್ನು ಹೊರತಂದರು.[6] ಪ್ರಸ್ತುತ ತುರುವೇಕೆರೆ ತಾಲೂಕಿಗೆ ಸಂಬಂಧಿಸಿದಂತೆ ಎಪಿಗ್ರಾಫಿಯ ಸಂಪುಟ 12, 16, 24ನೆಯ ಸಂಪುಟಗಳಲ್ಲಿ ಶಾಸನಗಳು ಪ್ರಕಟಗೊಂಡಿವೆ. ಗಂಗರಿಂದ ವಿಜಯನಗರದ ಅರಸರ ಕಾಲದವರೆಗೆ ಶಾಸನಗಳು ದೊರೆಯುತ್ತವೆ. ಇವುಗಳು ಆಯಾಕಾಲದ ರಾಜಕೀಯ, ಸಾಮಾಜಿಕ, ಧಾರ್ಮಿಕ, ಆರ್ಥಿಕ ಮತ್ತು ಇನ್ನಿತರೆ ವಿಚಾರಗಳನ್ನು ತಿಳಿಸುವಲ್ಲಿ ಪ್ರಮುಖಪಾತ್ರ ವಹಿಸುತ್ತವೆ. ಈ ಶಾಸನಗಳನ್ನು ಸ್ಥೂಲವಾಗಿ ಅಧ್ಯಯನ ಮಾಡುವ ಮೂಲಕ ಈ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಕೆಲವು ಪ್ರಮುಖ ಶಾಸನಗಳನ್ನು ಅಧ್ಯಯನ ನಡೆಸಿ ಸಾರಾಂಶವನ್ನು ಈ ಕೆಳಕಂಡಂತೆ ಪಟ್ಟಿಮಾಡಿ ವಿವರಿಸಿದ್ದೇನೆ.

**ಕ್ರಮ ಸಂಖ್ಯೆ–1**

**ಶಾಸನ ಸಂಖ್ಯೆ–10**

| | | |
|---|---|---|
| ಊರು | – | ಮಾದಿಹಳ್ಳಿ |
| ಶಾಸನ ದೊರೆತ ಸ್ಥಳ | – | ಉತ್ತರ ಕೆಳಗಿನ ಮನೆ ಹುಚ್ಚನ ಹೊಲದಲ್ಲಿ |
| ರಾಜವಂಶ | – | ಗಂಗ |
| ರಾಜ | | ಕಚ್ಚೆಯ ಗಂಗ |
| ಭಾಷೆ | – | ಹಳೇಗನ್ನಡ |
| ಕಾಲ | – | ಕ್ರಿ.ಶ.10ನೇ ಶತಮಾನ |
| ಲಿಪಿ | – | ಕನ್ನಡ |
| ಉಲ್ಲೇಖ | – | ಎ.ಕ.ಸಂ.12 |

**ಸಾರಾಂಶ:–** ಈ ಶಾಸನವು ಗಂಗರ ಕಾಲದ ಶಾಸನವಾಗಿದ್ದು ಶ್ರೀ ಕಚ್ಚೆಯ ಗಂಗ ಎಂಬ ನಾಮಾಂಕಿತ ಉಲ್ಲೇಖಗೊಂಡಿದೆ. ಆದರೆ ಈ ಕಚ್ಚೆಯ ಗಂಗನು ಮುಖ್ಯ ಗಂಗವಂಶಕ್ಕೆ ಸೇರಿರಲಿಲ್ಲ ಎಂಬುದು ವಿದ್ವಾಂಸರ ಅಭಿಪ್ರಾಯ.[7]

**ಕ್ರಮ ಸಂಖ್ಯೆ–2**

**ಶಾಸನ ಸಂಖ್ಯೆ–22**

| | | |
|---|---|---|
| ಊರು | – | ಕೊಂಡಜ್ಜಿ |
| ಶಾಸನ ದೊರೆತ ಸ್ಥಳ | – | ಹೊಸಮನೆ ವೆಂಕಟೇಶಶಾಸ್ತ್ರಿಗಳ ವಶದಲ್ಲಿದ್ದ ತಾಮ್ರಶಾಸನ |
| ರಾಜವಂಶ | – | ಗಂಗರು |
| ರಾಜ | – | ಶ್ರೀ ಪುರುಷ |
| ಭಾಷೆ | – | ಸಂಸ್ಕೃತ |
| ಕಾಲ | – | ತಿಳಿದು ಬಂದಿಲ್ಲ |
| ಲಿಪಿ | – | ಕನ್ನಡ |
| ಉಲ್ಲೇಖ | – | ಎ.ಕ.ಸಂ.24 |

**ಸಾರಾಂಶ:**–ಈ ತಾಮ್ರ ಶಾಸನವು ಸಂಸ್ಕೃತ ಭಾಷೆಯಲ್ಲಿದ್ದು ಐದು ತಾಮ್ರದ ಹಲಗೆಗಳಲ್ಲಿ ಬರೆಸಲಾಗಿದೆ. ಈ ಶಾಸನವು ಗಜ ಮುದ್ರೆಯನ್ನು ಹೊಂದಿದ್ದು ಕಷ್ಯಪ ಗೋತ್ರದ ಅಮ್ಮಭಟ್ಟ ಎಂಬುವನಿಗೆ ಕೆರಗೋಡು ಮುಂತಾದ ಗ್ರಾಮಗಳ ಸುಂಕವನ್ನು ದಾನ ನೀಡಿದುದರ ಬಗ್ಗೆ ತಿಳಿಸುತ್ತದೆ. ಈ ಶಾಸನವು ಗಂಗರಾಜ ಶ್ರೀಪುರುಷ ಮಾನ್ಯಪುರದಲ್ಲಿ ಬೀಡು ಬಿಟ್ಟಿದ್ದಾಗ ಆತನ ಮಗ ವಿನಯಾದಿತ್ಯ ಇದೇ ಸಮಯದಲ್ಲಿ ನಾಡು ಗಂಗವಾಡಿ 96,000ವನ್ನು ಆಳ್ವಿಕೆ ಮಾಡುತ್ತಿದ್ದ ಬಗ್ಗೆ ಉಲ್ಲೇಖವಿದೆ.[8]

**ಕ್ರಮ ಸಂಖ್ಯೆ–3**

**ಶಾಸನ ಸಂಖ್ಯೆ–30**

| | | |
|---|---|---|
| ಊರು | – | ತಂಡಗ |
| ಶಾಸನ ದೊರೆತ ಸ್ಥಳ | – | ದಬ್ಬೇಗಟ್ಟದ ಹೋಬಳಿ ತಂಡಗದ ಈಶ್ವರ ದೇವಾಲಯದ ಪ್ರಾಕಾರದಲ್ಲಿ |
| ರಾಜವಂಶ | – | ಹೊಯ್ಸಳ |
| ರಾಜ | – | ಪೊಯ್ಸಳ ದೇವ |
| ಭಾಷೆ | – | ಕನ್ನಡ |
| ಕಾಲ | – | ಕ್ರಿ.ಶ.1102 |
| ಲಿಪಿ | – | ಕನ್ನಡ |
| ಉಲ್ಲೇಖ | – | ಎ.ಕ.ಸಂ.12 |

**ಸಾರಾಂಶ**:-ಕ್ರಿ.ಶ.1102ರ ತಂಡಗದ ಪೊಯ್ಸಳದೇವನ ಕಾಲದ ಶಾಸನದಲ್ಲಿ ಮೂಲಸ್ಥಾನ ದೇವರಿಗೆ ನಿತ್ಯ ನೈವೇದ್ಯಕ್ಕೋಸ್ಕರ ಭೀಮಣ್ಣ ಎಂಬುವನು ದತ್ತಿಬಿಟ್ಟ ವಿವರವಿದೆ.[9]

**ಕ್ರಮ ಸಂಖ್ಯೆ-4**

**ಶಾಸನ ಸಂಖ್ಯೆ-14**

| | | |
|---|---|---|
| ಊರು | - | ಬೆಂಕಿಕೆರೆ |
| ಶಾಸನ ದೊರೆತ ಸ್ಥಳ | - | ಗ್ರಾಮದ ಈಶ್ವರ ದೇವಸ್ಥಾನದ ಬಳಿ |
| ರಾಜವಂಶ | - | ಹೊಯ್ಸಳ |
| ರಾಜ | - | ಪಾಳೆಯಗಾರ ಬೀರನಾಯಕ |
| ಭಾಷೆ | - | ಕನ್ನಡ |
| ಕಾಲ | - | ಕ್ರಿ.ಶ. 1137 |
| ಲಿಪಿ | - | ಕನ್ನಡ |
| ಉಲ್ಲೇಖ | - | ಎ.ಕ.ಸಂ.12 |

**ಸಾರಾಂಶ:**-ಈ ಶಾಸನವು ಕ್ರಿ.ಶ.1137ಕ್ಕೆ ಸೇರಿದ್ದು ಹೊಯ್ಸಳರ ಅರಸರ ಕಾಲವನ್ನು ಸೂಚಿಸುತ್ತದೆ. ಹೊಯ್ಸಳರ ಆಡಳಿತ ಕಾಲದಲ್ಲಿ ಅವರ ಆಡಳಿತದ ಕೇಂದ್ರಗಳಾದ ಬೆಂಕಿಯ ಕೆರೆಯನ್ನು ಆಳುತ್ತಿದ್ದ ಬೀರನಾಯಕ ಹುಲಿವೇ ಚತಿಗೌಡನ ಮಗ ಮಲ್ಲೇಗೌಡ, ಮಲ್ಲೇಗೌಡನ ತಮ್ಮ ಬಮ್ಮಗೌಡ ಹಾಗೂ ಜಕ್ಕಗೌಡರ ಆಳ್ವಿಕೆಯ ಕಾಲದಲ್ಲಿ ಆ ಗ್ರಾಮದಲ್ಲಿ ಮಹಾದೇವರನ್ನು ಪ್ರತಿಷ್ಠಾಪನೆ ಮಾಡಿ ಈ ದೇವಾಲಯಕ್ಕೆ ಬಿಟ್ಟ ದಾನದ ವಿವರವನ್ನು ಉಲ್ಲೇಖಿಸುತ್ತದೆ.[10]

**ಕ್ರಮ ಸಂಖ್ಯೆ–5**

**ಶಾಸನ ಸಂಖ್ಯೆ–35**

| | | |
|---|---|---|
| ಊರು | – | ಹುಲಿಕಲ್ |
| ಶಾಸನ ದೊರೆತ ಸ್ಥಳ | – | ಹುಲಿಕಲ್ಲು ಗ್ರಾಮದ ಕೌಟೇಶ್ವರ ದೇವಾಲಯದ ಬಳಿ ಇರುವ ವೀರಗಲ್ಲು |
| ರಾಜವಂಶ | – | ಹೊಯ್ಸಳ |
| ರಾಜ | – | ಬಲ್ಲಾಳ |
| ಭಾಷೆ | – | ಕನ್ನಡ |
| ಕಾಲ | – | ಕ್ರಿ.ಶ. 1173 |
| ಲಿಪಿ | – | ಕನ್ನಡ |
| ಉಲ್ಲೇಖ | – | ಎ.ಕ.ಸಂ.12 |

**ಸಾರಾಂಶ:**–ಈ ಶಾಸನವು ಹೊಯ್ಸಳ ಅರಸ ಬಲ್ಲಾಳನ ಕಾಲಕ್ಕೆ ಸೇರಿದ್ದು ಇಲ್ಲಿ ನೀರಗುಂದ ನಾಡನ್ನು ಆಳುತ್ತಿದ್ದ ಜಯಗೊಂಡನ ಗೊಟ್ಟಿಶೆಟ್ಟಿ ಎಂಬುವನು ಮತ್ತು ಮಲ್ಲಿನಾಯಕನ ಎಂಬುವನು ಯುದ್ಧದಲ್ಲಿ ಹೋರಾಡಿ ಸ್ವರ್ಗಸ್ಥರಾದ ವಿಷಯದ ಉಲ್ಲೇಖವಿದೆ.[11]

**ಕ್ರಮ ಸಂಖ್ಯೆ–6**

**ಶಾಸನ ಸಂಖ್ಯೆ–31**

| | | |
|---|---|---|
| ಊರು | – | ತಂಡಗ |
| ಶಾಸನ ದೊರೆತ ಸ್ಥಳ | – | ಈಶ್ವರ ದೇವಾಲಯದ ಒಂದನೇ ವೀರಗಲ್ಲು |
| ರಾಜವಂಶ | – | ಹೊಯ್ಸಳ |
| ರಾಜ | – | ವೀರಬಲ್ಲಾಳ |
| ಭಾಷೆ | – | ಕನ್ನಡ |
| ಕಾಲ | – | ಕ್ರಿ.ಶ.1193 |
| ಲಿಪಿ | – | ಕನ್ನಡ |
| ಉಲ್ಲೇಖ | – | ಎ.ಕ.ಸಂ.12 |

**ಸಾರಾಂಶ**:– ಕ್ರಿ.ಶ.1193ರ ವೀರಬಲ್ಲಾಳನ ಶಾಸನವಾಗಿದೆ. ಪ್ರಾಚೀನ ಕಾಲದಲ್ಲಿ ತಂಡಗವನ್ನು ಶ್ರೀಶಂಕರನಾರಾಯಣ ಪುರ ಎಂದು ಕರೆಯುತ್ತಿದ್ದು ಅಲ್ಲಿನ ಗೋವುಗಳನ್ನು ಗೋಕಳ್ಳರಿಂದ ಬಿಡಿಸಿಕೊಂಡು ಬರುವಾಗ ವೀರನೊಬ್ಬ ಹೋರಾಡಿ ಮಡಿದ ಸ್ಮರಣಾರ್ಥವಾಗಿ ಆ ವ್ಯಕ್ತಿಯ ಅಣ್ಣನ ಹೆಂಡತಿ ನಿಲ್ಲಿಸಿದ ವೀರಗಲ್ಲಾಗಿದೆ ಎಂಬ ವಿಷಯ ಬೆಳಕಿಗೆ ಬರುತ್ತದೆ.[12]

**ಕ್ರಮಸಂಖ್ಯೆ–7**

**ಶಾಸನ ಸಂಖ್ಯೆ–40**

| | | |
|---|---|---|
| ಊರು | – | ದಂಡಿನಶಿವರ |
| ಶಾಸನ ದೊರೆತ ಸ್ಥಳ | – | ವಿಘ್ನೇಶ್ವರ ದೇವಾಲಯದ ಬಳಿ ನೆಟ್ಟಿರುವ ಕಲ್ಲು |
| ರಾಜವಂಶ | – | ಹೊಯ್ಸಳ |
| ರಾಜ | – | ಎರಡನೇ ನರಸಿಂಹ |
| ಭಾಷೆ | – | ಕನ್ನಡ |
| ಕಾಲ | – | ಕ್ರಿ.ಶ.1233 |
| ಲಿಪಿ | – | ಕನ್ನಡ |
| ಉಲ್ಲೇಖ | – | ಎ.ಕ.ಸಂ.24 |

**ಸಾರಾಂಶ:**–ಈ ಶಾಸನವು ಹೊಯ್ಸಳರ ಎರಡನೇ ನರಸಿಂಹ ಕಾಲಕ್ಕೆ ಸೇರಿದ್ದು ಶ್ರೀ ಮಹಾಸಾಮಂತ ಬಲ್ಲೆಯ ನಾಯಕನು ಬಲ್ಲೇಶ್ವರ ದೇವಾಲಯದ ಪೂಜಾ ಕೈಂಕಾರ್ಯ ಮತ್ತು ಭೋಜನಕೋಸ್ಕರ ಹಾಗೂ ಜೀರ್ಣೋದ್ಧಾರ ಕಾರ್ಯಕ್ಕಾಗಿ ದಾನ ನೀಡಿದ ದಾಖಲೆಯಿದೆ. ಮುಂದಿನ ಶಾಸನಪಾಠ ಅಲ್ಲಲ್ಲಿ ತ್ರುಟಿತವಾಗಿದ್ದು ಅಸ್ಪಷ್ಟವಾಗಿದೆ.[13]

**ಕ್ರಮ ಸಂಖ್ಯೆ–8**

**ಶಾಸನ ಸಂಖ್ಯೆ–21**

| | | |
|---|---|---|
| ಊರು | – | ಕಾಡಸೂರು ಗ್ರಾಮ |
| ಶಾಸನ ದೊರೆತ ಸ್ಥಳ | – | ಇದೇ ಹೋಬಳಿ ಕಡಸೂರು ಗ್ರಾಮ ಬೈರೇದೇವರ ಗುಡಿ ಮುಂದೆ ನೆಟ್ಟ ವೀರಗಲ್ಲು |
| ರಾಜವಂಶ | – | ಹೊಯ್ಸಳ |
| ರಾಜ | – | ಸೋಮೇಶ್ವರ |
| ಭಾಷೆ | – | ಕನ್ನಡ |
| ಕಾಲ | – | ಕ್ರಿ.ಶ.1237 |
| ಲಿಪಿ | – | ಕನ್ನಡ |
| ಉಲ್ಲೇಖ | – | ಎ.ಕ.ಸಂ.12 |

**ಸಾರಾಂಶ:**–ಈ ಶಾಸನವು ಕ್ರಿ.ಶ.1237ರ ಕಾಲದ್ದಾಗಿದ್ದು 1ನೇ ಸೋಮೇಶ್ವರನ ಆಳ್ವಿಕೆಯ ಕಾಲಘಟ್ಟದಲ್ಲಿ ಕಾವಗೌಡನ ಮಗ ಕೇತಯ್ಯನು ಕುದುರೆ ಕಾಳಗದಲ್ಲಿ ಮಡಿದ ವಿಷಯವನ್ನು ತಿಳಿಸುತ್ತದೆ.[14]

**ಕ್ರಮ ಸಂಖ್ಯೆ–9**

**ಶಾಸನ ಸಂಖ್ಯೆ–79**

| | | |
|---|---|---|
| ಊರು | – | ಸಂಪಿಗೆ |
| ಶಾಸನ ದೊರೆತ ಸ್ಥಳ | – | ಮಲ್ಲಿಕಾರ್ಜುನ ದೇವಾಲಯದ ಮುಂದಿರುವ ತುಂಡು ಶಾಸನ |
| ರಾಜವಂಶ | – | ಹೊಯ್ಸಳ |
| ರಾಜ | – | ಎರಡನೇ ನರಸಿಂಹ |
| ಭಾಷೆ | – | ಕನ್ನಡ |
| ಕಾಲ | – | ಕ್ರಿ.ಶ.1238 |
| ಲಿಪಿ | – | ಕನ್ನಡ |
| ಉಲ್ಲೇಖ | – | ಎ.ಕ.ಸಂ.24 |

**ಸಾರಾಂಶ:**– ಹೊಯ್ಸಳ ದೊರೆ 2ನೇ ನರಸಿಂಹನ ಕ್ರಿ.ಶ.1238ರ ಶಾಸನವಾಗಿದ್ದು ಇದೊಂದು ದಾನ ಶಾಸನವಾಗಿದೆ. ದಾನಿಯೊಬ್ಬನು ಸಂಪಿಗೆಯ ಮಲ್ಲಿಕಾರ್ಜುನ ದೇವಾಲಯಕ್ಕೆ

ಭೂಮಿಯನ್ನು ದಾನನೀಡಿ, ಕೆರೆಯೊಂದನ್ನು ನಿರ್ಮಾಣ ಮಾಡಿದ ಬಗ್ಗೆ ತಿಳಿಸುತ್ತದೆ. ದಾನ ನೀಡಿದವರ ಹೆಸರು ತ್ರುಟಿತವಾಗಿದ್ದು ಅವನನ್ನು ಈ ಶಾಸನದಲ್ಲಿ ಮಹಾ-ವಡ್ಡ-ವ್ಯವಹಾರಿ ಎಂದು ಉಲ್ಲೇಖಿಸಿದೆ.[15]

**ಕ್ರಮ ಸಂಖ್ಯೆ-10**

**ಶಾಸನ ಸಂಖ್ಯೆ-42**

| | | |
|---|---|---|
| ಊರು | – | ದಂಡಿನಶಿವರ |
| ಶಾಸನ ದೊರೆತ ಸ್ಥಳ | – | ಶಂಕರೇಶ್ವರ ದೇವಾಲಯದ ಸಮೀಪದಲ್ಲಿರುವ ವೀರಗಲ್ಲು |
| ರಾಜವಂಶ | – | ಹೊಯ್ಸಳ |
| ರಾಜ | – | 1ನೇ ನರಸಿಂಹ |
| ಭಾಷೆ | – | ಕನ್ನಡ |
| ಕಾಲ | – | ಕ್ರಿ.ಶ.12ನೇ ಶತಮಾನ |
| ಲಿಪಿ | – | ಕನ್ನಡ |
| ಉಲ್ಲೇಖ | – | ಎ.ಕ.ಸಂ.24 |

**ಸಾರಾಂಶ:**-ಈ ಶಾಸನವು ಹೊಯ್ಸಳ ದೊರೆ 1ನೇ ನರಸಿಂಹನ ಆಡಳಿತದ ಬಗ್ಗೆ ತಿಳಿಸುತ್ತದೆ. ಈ ಶಾಸನವು ಹೆಚ್ಚು ತ್ರುಟಿತವಾಗಿದ್ದು ಅಸ್ಪಷ್ಟವಾಗಿದೆ.[16]

**ಕ್ರಮ ಸಂಖ್ಯೆ–11**

**ಶಾಸನ ಸಂಖ್ಯೆ–13**

| | | |
|---|---|---|
| ಊರು | – | ತುಂಬೇಪುರ |
| ಶಾಸನ ದೊರೆತ ಸ್ಥಳ | – | ಮಲ್ಲೇಶ್ವರ ಗುಡಿಯ ಮುಂದೆ |
| ರಾಜವಂಶ | – | ಹೊಯ್ಸಳ |
| ರಾಜ | – | ವೀರಸೋಮೇಶ್ವರ |
| ಭಾಷೆ | – | ಕನ್ನಡ |
| ಕಾಲ | – | ಕ್ರಿ.ಶ.10–12ನೇ ಶತಮಾನ |
| ಲಿಪಿ | – | ಕನ್ನಡ |
| ಉಲ್ಲೇಖ | – | ಎ.ಕ.ಸಂ.12 |

**ಸಾರಾಂಶ:–** ಈ ಶಾಸನವು ಶಿವನ (ಶೈವ ಧರ್ಮದ) ಸ್ತುತಿಯೊಂದಿಗೆ ಪ್ರಾರಂಭವಾಗಿ ಹೊಯ್ಸಳ ಅರಸ ವೀರ ಸೋಮೇಶ್ವರನ ಕಾಲಕ್ಕೆ ಸೇರುತ್ತದೆ. ಶಾಸನದಲ್ಲಿ ಕಾಲದ ಉಲ್ಲೇಖವನ್ನು ತಿಳಿಸದೆ ಬರಿ ಸಂವತ್ಸರವನ್ನು ಉಲ್ಲೇಖಿಸಲಾಗಿದೆ. ಶಾಸನದ ಪ್ರಾರಂಭದಲ್ಲಿ ವೀರನರಸಿಂಹನ ಬಿರುದಾವಳಿಗಳನ್ನು ಬರೆದು ನಂತರ ಆ ಪ್ರಾಂತ್ಯದ ಅಧಿಕಾರಿಗಳಾದ ಹಟ್ಟಿಗಾರ ನಾಯಕ, ಅಯಿಬಯ ನಾಯಕನು ಇವರು ಸೋಮೇಶ್ವರ ದೇವರನ್ನು ಪೂಜಿಸಿ ಆ ದೇವಾಲಯಕ್ಕೆ ಬಿಟ್ಟ ದಾನವನ್ನು ಶಾಸನವನ್ನು ಉಲ್ಲೇಖಿಸುತ್ತದೆ.[17]

**ಕ್ರಮ ಸಂಖ್ಯೆ–12**

**ಶಾಸನ ಸಂಖ್ಯೆ–76**

| | | |
|---|---|---|
| ಊರು | – | ಕೊಂಡಜ್ಜಿ ಅಗ್ರಹಾರ |
| ಶಾಸನ ದೊರೆತ ಸ್ಥಳ | – | ತ್ರಿಕೂಟ ಸೋಮೇಶ್ವರ ದೇವಾಲಯದ ಒಳಗಿರುವ ಕಲ್ಲು |
| ರಾಜವಂಶ | – | ಹೊಯ್ಸಳ |
| ರಾಜ | – | ವೀರಸೋಮೇಶ್ವರ |
| ಭಾಷೆ | – | ಕನ್ನಡ |
| ಕಾಲ | – | ಕ್ರಿ.ಶ.1252 |
| ಲಿಪಿ | – | ಕನ್ನಡ |
| ಉಲ್ಲೇಖ | – | ಎ.ಕ.ಸಂ.16 |

**ಸಾರಾಂಶ:**–ಕ್ರಿ.ಶ.1252ರ ಕಾಲಮಾನಕ್ಕೆ ಸೇರುವ ಈ ಶಾಸನವು ಹೊಯ್ಸಳ ದೊರೆ ವೀರಸೋಮೇಶ್ವರನ ಆಡಳಿತದ ಬಗ್ಗೆ ಉಲ್ಲೇಖಿಸುತ್ತದೆ. ಸೋಮೇಶ್ವರನ ದಂಡನಾಯಕ ಸಂಧಿವಿಗ್ರಹಿ ಬೊಮ್ಮಣ ದಂಡನಾಯಕನು ಊರಿನ ಹಿರಿಯರ ಸಮ್ಮುಖದಲ್ಲಿ ಕೊಂಡಜ್ಜಿ ಗ್ರಾಮವನ್ನು ದೇವದೀಕ್ಷ ಪುತ್ರನಾದ ಚಿಕ್ಕದೇವರು ಆ ಶಿವಪುರವನ್ನು ಮೂವತ್ತೆರಡು ಗಣಗಳಾಗಿ ವಿಂಗಡಿಸಿ ತ್ರಿಕೂಟ ಸೋಮೇಶ್ವರ ದೇವಾಲಯಕ್ಕೆ ದಾನ ನೀಡಿದುದರ ಬಗ್ಗೆ ತಿಳಿಸುತ್ತದೆ.[18]

**ಕ್ರಮ ಸಂಖ್ಯೆ–13**

**ಶಾಸನ ಸಂಖ್ಯೆ–23**

| | | |
|---|---|---|
| ಊರು | – | ಕಾಡಸೂರು ಗ್ರಾಮ |
| ಶಾಸನ ದೊರೆತ ಸ್ಥಳ | – | ಅದೇ ಸ್ಥಳದಲ್ಲಿ ದೊರೆತ 3ನೇ ವೀರಗಲ್ಲು |
| ರಾಜವಂಶ | – | ಹೊಯ್ಸಳ |
| ರಾಜ | – | ಸೋಮೇಶ್ವರ |
| ಭಾಷೆ | – | ಕನ್ನಡ |
| ಕಾಲ | – | ಕ್ರಿ.ಶ. 1246 |
| ಲಿಪಿ | – | ಕನ್ನಡ |
| ಉಲ್ಲೇಖ | – | ಎ.ಕ.ಸಂ.12 |

**ಸಾರಾಂಶ:**–ಈ ಶಾಸನವು ಕ್ರಿ.ಶ.1246ರ ಹೊಯ್ಸಳರ ಕಾಲಕ್ಕೆ ಸೇರಿದ್ದು ಮಹಾವೀರರಾಜೇಂದ್ರ ಚೋಳನು ಕುಕ್ಕಲನಾಡನ್ನು ಆಳುತ್ತಿದ್ದ ಸಂದರ್ಭದಲ್ಲಿ ಭೀಮಸಿ ತಾರಗಂಡ ಕಾಡಸೂರ ಅಪ್ಪಯ್ಯ ನಾಯಕ, ಕಾಡಯ್ಯ ನಾಯಕ, ಮಲೆಯ ನಾಯಕ ಎಂಬುವರು ಕಾಳಗದಲ್ಲಿ ಹೋರಾಡಿ ಮಡಿದ ವಿಷಯವನ್ನು ತಿಳಿಸುತ್ತದೆ.[19]

**ಕ್ರಮ ಸಂಖ್ಯೆ–14**

**ಶಾಸನ ಸಂಖ್ಯೆ–28**

| | | |
|---|---|---|
| ಊರು | – | ಜಡೇಯ |
| ಶಾಸನ ದೊರೆತ ಸ್ಥಳ | – | ಜಡೇಯದ ಈಶ್ವರ ದೇವಸ್ಥಾನದ ಮುಂದೆ ನೆಟ್ಟಕಲ್ಲು |
| ರಾಜವಂಶ | – | ಹೊಯ್ಸಳ |
| ರಾಜ | – | ವೀರನರಸಿಂಹ |
| ಭಾಷೆ | – | ಕನ್ನಡ |
| ಕಾಲ | – | ಕ್ರಿ.ಶ.1259 |
| ಲಿಪಿ | – | ಕನ್ನಡ |
| ಉಲ್ಲೇಖ | – | ಎ.ಕ.ಸಂ.12 |

**ಸಾರಾಂಶ:**–ಈ ಶಾಸನವು ಹೊಯ್ಸಳ ದೊರೆ ವೀರನರಸಿಂಹ ಕಾಲಕ್ಕೆ ಸೇರಿದ್ದು ಚೈತ್ರಮಾಸಾ ಶುದ್ಧ ಸೋಮವಾರದಂದು ಮಲ್ಲಿದೇವ ಎಂಬುವನ ಮಗನಾದ ಗಂಗದೇವನು ಈ ದೇವಾಲಯವನ್ನು ಪ್ರತಿಷ್ಠಾಪಿಸಿ ಬ್ರಾಹ್ಮಣರಿಗೆ ಜಡೇಯದ ಕೆರೆಯ ಕೆಳಗಿನ ಗದ್ದೆಬೆದ್ದಲನ್ನು ಮತ್ತು ಜಡೇಯದ ಹತ್ತಿರದ ದಾಸಿಹಳ್ಳಿ ಚತುರ್ಸಿಮೇಯನ್ನು ದಾನವಾಗಿ ನೀಡಿದ್ದನ್ನು ಉಲ್ಲೇಖಿಸುತ್ತದೆ.[20]

**ಕ್ರಮ ಸಂಖ್ಯೆ–15**

**ಶಾಸನ ಸಂಖ್ಯೆ–2**

| | | |
|---|---|---|
| ಊರು | – | ತುರುವೇಕೆರೆ |
| ಶಾಸನ ದೊರೆತ ಸ್ಥಳ | – | ಚೆನ್ನಿಗರಾಯ ದೇವಸ್ಥಾನದ ಮಂಟಪದ ತೊಲೆಕಲ್ಲಿನಲ್ಲಿ |
| ರಾಜವಂಶ | – | ಹೊಯ್ಸಳ |
| ರಾಜ | | 3 ನೇ ನರಸಿಂಹ |
| ಭಾಷೆ | – | ಕನ್ನಡ |
| ಕಾಲ | – | ಕ್ರಿ.ಶ. 1263 |
| ಲಿಪಿ | – | ಕನ್ನಡ |
| ಉಲ್ಲೇಖ | – | ಎ.ಕ.ಸಂ.12 |

**ಸಾರಾಂಶ**:– ಕ್ರಿ.ಶ.1263ಕ್ಕೆ ಸೇರಬಹುದಾದ ತುರುವೇಕೆರೆ ಚೆನ್ನಿಗರಾಯ ದೇವಾಲಯದ ಶಾಸನದಲ್ಲಿ 'ಸಮಸ್ತ ಪ್ರಶಸ್ತಿ ಸಹಿತಂ ಶ್ರೀ ಮತ್ಸರ್ವ ಸಮಸ್ತದ ಪಿರಿಯ ಅಗ್ರಹಾರಂ ಸರ್ವಜ್ಞ ಶ್ರೀ' ವಿಜಯನರಸಿಂಹಪುರವಾದ ತುರುವೇಕೆರೆಯ ಮಹಾಜನಗಳು ಐಕ್ಯಮತ್ಯದಿಂದ ಗೋವಿಂದ ಕ್ರಮಿತರ ಮಾಸವೆಗ್ಗಡೆಯ ಹಿರಿತನದಲ್ಲಿ ಪ್ರಸನ್ನ ಚೆನ್ನಕೇಶವ ದೇವರ ದೇವಾಲಯದಲ್ಲಿ ಸಭೆ ಸೇರಿ ಅನೇಕ ಹಳ್ಳಿಗಳಿಂದ ಕಂಬಗಳ ಅಳತೆಯಲ್ಲಿ ಭೂಮಿಯನ್ನು ಪಡೆದು ಏಕಸ್ಥಳವಾಗಿ ಮಾಡಿಸಿದ ವಿವರ ಉಲ್ಲೇಖವಾಗಿದೆ.[21]

**ಕ್ರಮ ಸಂಖ್ಯೆ–16**

**ಶಾಸನ ಸಂಖ್ಯೆ–3**

| | | |
|---|---|---|
| ಊರು | – | ತುರುವೇಕೆರೆ |
| ಶಾಸನ ದೊರೆತ ಸ್ಥಳ | – | ಚೆನ್ನಿಗರಾಯ ದೇವಾಲಯದ ಮುಖಮಂಟಪದ ಮೇಲ್ಭಾಗದಲ್ಲಿ |
| ರಾಜವಂಶ | – | ಹೊಯ್ಸಳ |
| ರಾಜ | – | 3 ನೇ ನರಸಿಂಹ |
| ಭಾಷೆ | – | ಕನ್ನಡ |
| ಕಾಲ | – | ಕ್ರಿ.ಶ.1263 |
| ಲಿಪಿ | – | ಕನ್ನಡ |
| ಉಲ್ಲೇಖ | – | ಎ.ಕ.ಸಂ.12 |

**ಸಾರಾಂಶ**:–ಈ ಶಾಸನವು 3ನೇ ನರಸಿಂಹನ ಕಾಲಕ್ಕೆ ಸಂಬಂಧಿಸಿದ್ದು ತುರುವೇಕೆರೆ ಚೆನ್ನಿಗಾಯ ದೇವಸ್ಥಾನದ ಶಾಸನದಲ್ಲಿ 'ಸಮಸ್ತ ಪ್ರಶಸ್ತಿ ಸಹಿತಂ ಶ್ರೀ ಮತ್ಸರ್ವಸಮಸ್ತದ ಪಿರಿಯ ಅಗ್ರಹಾರಂ ಸರ್ವಜ್ಞ ಶ್ರೀ' ವಿಜಯನರಸಿಂಹಪುರವಾದ ತುರುವೇಕೆರೆಯ ಮಹಾಜನಗಳು ಐಕ್ಯಮತ್ಯದಿಂದ ಗೋವಿಂದ ಕ್ರಮಿತರ ಮಾಸವೆಗ್ಗಡೆಯ ಹಿರಿತನದಲ್ಲಿ ಪ್ರಸನ್ನ ಚೆನ್ನಕೇಶವ ದೇವರ ದೇವಾಲಯದಲ್ಲಿ ಸಭೆ ಸೇರಿ ಅನೇಕ ಹಳ್ಳಿಗಳಿಂದ ಕಂಬಗಳ ಅಳತೆಯಲ್ಲಿ ಭೂಮಿಯನ್ನು ಪಡೆದು ಏಕಸ್ಥಳವಾಗಿ ಮಾಡಿಸಿದ ವಿವರ ಉಲ್ಲೇಖವಾಗಿದೆ.[22]

**ಕ್ರಮ ಸಂಖ್ಯೆ–17**

**ಶಾಸನ ಸಂಖ್ಯೆ–22**

| | | |
|---|---|---|
| ಊರು | – | ಕಾಡಸೂರು ಗ್ರಾಮ |
| ಶಾಸನ ದೊರೆತ ಸ್ಥಳ | – | ಅದೇ ಸ್ಥಳದಲ್ಲಿ ದೊರೆತ 2ನೇ ವೀರಗಲ್ಲು |
| ರಾಜವಂಶ | – | ಹೊಯ್ಸಳ |
| ರಾಜ | – | ಸೋಮೇಶ್ವರ |
| ಭಾಷೆ | – | ಕನ್ನಡ |
| ಕಾಲ | – | ಕ್ರಿ.ಶ.1265 |
| ಲಿಪಿ | – | ಕನ್ನಡ |
| ಉಲ್ಲೇಖ | – | ಎ.ಕ.ಸಂ.12 |

**ಸಾರಾಂಶ:–** ಕ್ರಿ.ಶ.1265ರ ಕಡಸೂರು ಗ್ರಾಮದ ಶಾಸನವು ತಿಳಿಸುವಂತೆ ವೀರನರಸಿಂಹ ದೇವರು ಮಹಾಸಾಮಂತ ಚೋಳರ ದಂಡನಾಯಕನಾದ ಕಾಡಸೂರ ಕಾಡಯ್ಯ ನಾಯಕನನ್ನು ಯುದ್ಧದಲ್ಲಿ ದಾಳಿಮಾಡಿ ಕಾಡಯ್ಯನ ಮಗನು ನಾಸಯ್ಯನು ಮಡಿದ ವಿಷಯವನ್ನು ತಿಳಿಸುತ್ತದೆ.[23]

**ಕ್ರಮ ಸಂಖ್ಯೆ–18**

**ಶಾಸನ ಸಂಖ್ಯೆ–4**

| | | |
|---|---|---|
| ಊರು | – | ತುರುವೇಕೆರೆ |
| ಶಾಸನ ದೊರೆತ ಸ್ಥಳ | – | ಅದೇ ದೇವಾಲಯದ ತೊಲೆಗಲ್ಲಿನಲ್ಲಿ |
| ರಾಜವಂಶ | – | ಹೊಯ್ಸಳ |
| ರಾಜ | – | 3ನೇ ನರಸಿಂಹ |
| ಭಾಷೆ | – | ಕನ್ನಡ |
| ಕಾಲ | – | ಕ್ರಿ.ಶ.1267 |
| ಲಿಪಿ | – | ಕನ್ನಡ |
| ಉಲ್ಲೇಖ | – | ಎ.ಕ.ಸಂ.12 |

**ಸಾರಾಂಶ**:-ಕ್ರಿ.ಶ.1267ರ ಕಾಲಕ್ಕೆ ಸೇರಿದ ಈ ಶಾಸನ ಪಿರಿಯ ಅಗ್ರಹಾರ ಸರ್ವಜ್ಞ ಶ್ರೀ ವಿಜಯನರಸಿಂಗ ಪುರವಾದ ತುರುವೇಕೆರೆಯ ಸ್ರೀಮದಸೇಷ ಮಹಾಜನರು ಐಕ್ಯಮತ್ಯದಿಂದ ಸಂಕಣ್ಣನ ಮಾಸೆವೆಗ್ಗಡೆತನದಲ್ಲಿ ಮಹಾಪ್ರಧಾನಿ ಸಂಧಿವಿಗ್ರಹಿ ಸೋಮಣ್ಣ ದಂಡನಾಯಕನಿಗೆ ಪ್ರಸನ್ನ ಚನ್ನಕೇಶವ ದೇವರ ಕೇರಿಯ ಬಡಗಬಾಗಿಲ ಮೊದಲ ಮನೆಯ 26ಕ್ಕೆ ಅಳತೆಯ ನಿವೇಶನವನ್ನು ದ್ವಿತೀಯ ತೋಟ ಸ್ಥಳವನ್ನು ದಾನ ಕೊಟ್ಟರು. ಗೋವಿಂದಭಟ್ಟರಿಗೆ ಆ ಮಹಾಜನರು ದಾನರೂಪದಲ್ಲಿ 36 ಮೆಟ್ಟಿನ ಗೆಳೆಯಲ್ಲಿ ಗದ್ದೆ, ಸಾಸವೆಯ ದಿಣ್ಣೆಯಲ್ಲಿ 31 ಕಂಬ, ಆಡನಹಳ್ಳಿಯ ಕೆರೆಯ ಕೆಳಗೆ 40 ಕಂಬ, ಆ ಬೆದ್ದಲು ಊರಿನ ತೆಂಕದ 600 ಈ ಗದ್ದೆ ಬೆದ್ದಲಗೆ ಆ ಗೋವಿಂದ ಭಟ್ಟರಿಗೆ ಕ್ರಯವ ಕೊಡಿಸಿ ಸೋಮಣ್ಣ ದಂಡನಾಯಕನನ್ನು ಮುಂದಿಟ್ಟುಕೊಂಡು ದಾನಕೊಟ್ಟ ವಿಷಯ ತಿಳಸುತ್ತದೆ. ಆ ತೆತ್ತಿನವರಿಗೆ ಪ್ರತಿಯಾಗಿ ಮಾವಿನಗೊಂಡಿ ಕ್ಷೇತ್ರವನ್ನು ಮಹಾಜನಗಳ ಹಸ್ತದ ಸಹಿ ಹಾಕಿಸಿ ದಾನ ಮಾಡಿದ್ದನ್ನು ತಿಳಸುತ್ತದೆ.[24]

**ಕ್ರಮ ಸಂಖ್ಯೆ-19**

**ಶಾಸನ ಸಂಖ್ಯೆ–12**

| | | |
|---|---|---|
| ಊರು | – | ಗೊಟ್ಟಕೆರೆ |
| ಶಾಸನ ದೊರೆತ ಸ್ಥಳ | – | ತುರುವೇಕೆರೆ ಹೋಬಳಿ ಗೊಟ್ಟಕೆರೆ ಈಶ್ವರ ದೇವಸ್ಥಾನದ ಬಳಿ |
| ರಾಜವಂಶ | – | ಹೊಯ್ಸಳ |
| ರಾಜ | – | ಒಂದನೇ ನರಸಿಂಹ |
| ಭಾಷೆ | – | ಕನ್ನಡ |
| ಕಾಲ | – | ಕ್ರಿ.ಶ.1285 |
| ಲಿಪಿ | – | ಕನ್ನಡ |
| ಉಲ್ಲೇಖ | – | ಎ.ಕ.ಸಂ.12 |

**ಸಾರಾಂಶ**:-ಕ್ರಿ.ಶ.1285ರ ನರಸಿಂಹನ ತುರುವೇಕೆರೆ ಶಾಸನದಲ್ಲಿ ಪಟ್ಟಣ ಸ್ವಾಮಿಯಾದ ಕೀರ್ತಿಶೆಟ್ಟಿ ಎಂಬುವನು ಶಿವಲಿಂಗ ಪ್ರತಿಷ್ಠೆ ಮಾಡಿ ಗೊಟ್ಟಕೆರೆಯಲ್ಲಿ ಲಿಂಗ ಪ್ರತಿಷ್ಠಾಪನೆ ಮಾಡಿ ಮಂಚೇಶ್ವರ ದೇವರ ನಿತ್ಯ ಪೂಜೆ ಅಂಗಭೋಗಕ್ಕೋಸ್ಕರ ಮಾಯಸಂದ್ರದ ಯಂಚವ್ವೆಯ ಪುತ್ರದಾನ ನೀಡಿದ ದಾಖಲೆಯಿದೆ.[25]

**ಕ್ರಮ ಸಂಖ್ಯೆ-20**

**ಶಾಸನ ಸಂಖ್ಯೆ-8**

| | | |
|---|---|---|
| ಊರು | – | ತುರುವೇಕೆರೆ |
| ಶಾಸನ ದೊರೆತ ಸ್ಥಳ | – | ತುರುವೇಕೆರೆ ಶಂಖರೇಶ್ವರ ದೇವಾಲಯದ ಶಾಸನ |
| ರಾಜವಂಶ | – | ಹೊಯ್ಸಳ |
| ರಾಜ | – | 3ನೇ ನರಸಿಂಹ |
| ಭಾಷೆ | – | ಕನ್ನಡ |
| ಕಾಲ | – | ಕ್ರಿ.ಶ.1318 |
| ಲಿಪಿ | – | ಕನ್ನಡ |
| ಉಲ್ಲೇಖ | – | ಎ.ಕ.ಸಂ.12 |

**ಸಾರಾಂಶ**:- ತುರುವೇಕೆರೆ ಶಂಖರೇಶ್ವರ ದೇವಾಲಯದ ಕ್ರಿ.ಶ.1318ರ ಶಾಸನ ಹೊಯ್ಸಳ ನರಸಿಂಹದೇವರ ಮಹಾಪ್ರಧಾನ ಸಂಧಿವಿಗ್ರಹಿ ಸೋಮಣ್ಣ ದಂಡನಾಯಕರು ಶ್ರೀ ವಿಜಯ ನರಸಿಂಹಪುರವಾದ ತುರುವೇಕೆರೆಯನ್ನು ಅಗ್ರಹಾರ ಮಾಡುವಲ್ಲಿ ಮಹಾಸಾಮಂತ ಕಡಬ ಕಂಟೀರವ ಮರುಗಲು ನಾಡಾಳ್ವ ಶ್ರೀ ರಾಮರಾಥದೇವರ ಪಾದಾರಾಧಕ ಕೈದಾಳದ ಮಲ್ಲದೇವನ ಮಗ ಗಂಗದೇವನು ತುರುವೇಕರೆಯಲ್ಲಿನ ತಾಳಕೆರೆ, ಕಲ್ಲಕೆರೆ, ದೊಂಕಿಯಹಳ್ಳಿ, ಗೊಟ್ಟೆಯಕೆರೆ, ಸೆಟ್ಟಿಯಹಳ್ಳಿ, ಹೊಣಕೆರೆ ಮುಂತಾದ ಸಮಸ್ತ ಹಳ್ಳಿಯ ಹಿರಿಯರಲ್ಲಿ ಹೊನ್ನನ್ನು 'ವಿಜಯನರಸಿಂಹಪುರ'ವಾದ ತುರುವೇಕೆರೆಯ ಮಹಾಜನರಿಗೆ ಗಂಗದೇವನು ಸ್ವರುಚಿಯಾಗಿ ವೊಡಂಬಟ್ಟು ಧಾರೆಯೆರೆದ ವಿಷಯ ಉಲ್ಲೇಖವಾಗಿದೆ. [26]

**ಕ್ರಮ ಸಂಖ್ಯೆ–21**

**ಶಾಸನ ಸಂಖ್ಯೆ–24**

| | | |
|---|---|---|
| ಊರು | – | ಕಾಡಸೂರು ಗ್ರಾಮ |
| ಶಾಸನ ದೊರೆತ ಸ್ಥಳ | – | ಅದೇ ಸ್ಥಳದಲ್ಲಿ ದೊರೆತ 4ನೇ ವೀರಗಲ್ಲು |
| ರಾಜವಂಶ | – | ಹೊಯ್ಸಳ |
| ರಾಜ | – | 3ನೇ ಬಲ್ಲಾಳ |
| ಭಾಷೆ | – | ಕನ್ನಡ |
| ಕಾಲ | – | ಕ್ರಿ.ಶ.1325 |
| ಲಿಪಿ | – | ಕನ್ನಡ |
| ಉಲ್ಲೇಖ | – | ಎ.ಕ.ಸಂ.12 |

**ಸಾರಾಂಶ:**–ಈ ಶಾಸನವು ಹೊಯ್ಸಳರ ಕಾಲಕ್ಕೆ ಸೇರಿದ್ದು ಮಹಾಪ್ರಧಾನ ಬೇಟೆ ದಂಡನಾಯಕ ಮತ್ತು ಸಿಂಗೆಯ ದಂಡನಾಯಕನು ರಾಜ್ಯ ಆಳುತ್ತಿದ್ದಾಗ ಮಹಾಸಾಮಂತಾಪತಿ ಸಿಂಗಯ್ಯ ದಂಡನಾಯಕ ಯುದ್ಧದಲ್ಲಿ ಕೊಂದ ವಿಷಯವನ್ನು ತಿಳಸುತ್ತದೆ. ಈ ಶಾಸನವು ಅಲ್ಲಲ್ಲಿ ತೃಟಿತವಾಗಿದ್ದು ಅಸ್ಪಷ್ಟವಾಗಿದೆ.[27]

**ಕ್ರಮ ಸಂಖ್ಯೆ–22**

**ಶಾಸನ ಸಂಖ್ಯೆ–77**

| | | |
|---|---|---|
| ಗ್ರಾಮ | – | ಸಂಪಿಗೆ |
| ಶಾಸನ ದೊರೆತ ಸ್ಥಳ | – | ಮಲ್ಲಿಕಾರ್ಜುನ ದೇವಾಲಯದ ಮುಂದಿರುವ ಕಲ್ಲು |
| ರಾಜವಂಶ | – | ಹೊಯ್ಸಳ |
| ರಾಜ | – | 3ನೇ ಬಲ್ಲಾಳ |
| ಭಾಷೆ | – | ಕನ್ನಡ |
| ಕಾಲ | – | ಕ್ರಿ.ಶ.1331 |
| ಲಿಪಿ | – | ಕನ್ನಡ |
| ಉಲ್ಲೇಖ | – | ಎ.ಕ.ಸಂ.24 |

**ಸಾರಾಂಶ:–** ಈ ಶಾಸನವು ಕ್ರಿ.ಶ.1331ರ ಹೊಯ್ಸಳ ದೊರೆ 3ನೇ ಬಲ್ಲಾಳನ ದಾನ ಶಾಸನವಾಗಿದೆ. ಈ ಶಾಸನವನ್ನು ನಾಗಲಾಪುರದ ಚೌಡಚಾರ್ಯನ ಮಗ ಮಸಣಚಾರ್ಯ ರಚಿಸಿದ್ದಾನೆ. 3ನೇ ಬಲ್ಲಾಳನ ಮಗ ವಿರೂಪಾಕ್ಷ ಹೊಸದುರ್ಗದಲ್ಲಿ ಆಳ್ವಿಕೆ ನಡೆಸುತ್ತಿರುವ ಸಮಯದಲ್ಲಿ ಕಾಮೆಯ ದಂಡನಾಯಕ ಹಾಗೂ ಪ್ರಧಾನ ದಂಡನಾಯಕನಾಗಿದ್ದ ಪಟ್ಟಣಸ್ವಾಮಿ ಕಲಿಸೆಟ್ಟಿಯವರ ಮಕ್ಕಳಾದ ಸಿಂಗೆಸೆಟ್ಟಿಯವರು ವೀರಬಲ್ಲಾಳ ದೇವರನ್ನು ಕಾಣಲು ಮಹಾರಾಜ 3ನೇ ವೀರಬಲ್ಲಾಳನು ಕಾರುಣ್ಯ ಚಿತ್ತರಾಗಿ ಸಂಪಿಗೆಯ ಸ್ಥಳವನ್ನು ದಾನವಾಗಿ ನೀಡಿದ ಬಗ್ಗೆ ತಿಳಿಸುತ್ತದೆ.[28]

**ಕ್ರಮ ಸಂಖ್ಯೆ–23**

**ಶಾಸನ ಸಂಖ್ಯೆ–78**

| | | |
|---|---|---|
| ಊರು | – | ಸಂಪಿಗೆ |
| ಶಾಸನ ದೊರೆತ ಸ್ಥಳ | – | ಅದೇ ಕಲ್ಲಿನ ಹಿಂಭಾಗ |
| ರಾಜವಂಶ | – | ವಿಜಯನಗರ |
| ರಾಜ | – | ವಿರೂಪಾಕ್ಷ |
| ಭಾಷೆ | – | ಕನ್ನಡ |
| ಕಾಲ | – | ಕ್ರಿ.ಶ.1350 |
| ಲಿಪಿ | – | ಕನ್ನಡ |
| ಉಲ್ಲೇಖ | – | ಎ.ಕ.ಸಂ.24 |

**ಸಾರಾಂಶ:–** ಕ್ರಿ.ಶ.1350ರ ವಿಜಯನಗರ ಅರಸು ವಿರೂಪಾಕ್ಷನ ಶಾಸನವಾಗಿದ್ದು ಕಲ್ಲರಸಿಯಮ್ಮ ಎಂಬುವಳು ಕಪಿಲ ಸಿದ್ಧಮಲ್ಲಿಕಾರ್ಜುನ ದೇವಾಲಯದ ಮುಖಮಂಟಪ, ಗರ್ಭಗೃಹ ಮುಂತಾದವುಗಳನ್ನು ಜೀರ್ಣೋದ್ಧಾರಗೊಳಿಸಿದ್ದರ ಬಗ್ಗೆ ತಿಳಿಸುತ್ತದೆ. ಕಲ್ಲರ ಸಿಯಮ್ಮ ಸ್ಥಾನಿಕ ಸೋಮಯ್ಯ ದೇವನು ಮತ್ತು ಆತನ ಅಕ್ಕ ಹೊನ್ನದೇವಿ ಎಂಬುವಳಿಗೆ ದಾನ ನೀಡಿದ ವಿಷಯ ತಿಳಿದುಬರುತ್ತದೆ.[29]

**ಕ್ರಮ ಸಂಖ್ಯೆ–24**

**ಶಾಸನ ಸಂಖ್ಯೆ–9**

| | | |
|---|---|---|
| ಊರು | – | ತುರುವೇಕೆರೆ |
| ಶಾಸನ ದೊರೆತ ಸ್ಥಳ | – | ತುರುವೇಕೆರೆಯಲ್ಲಿರುವ ಗೋಪಾಲದೀಕ್ಷಿತರಲ್ಲಿದ್ದ ತಾಮ್ರ ಶಾಸನ |
| ರಾಜವಂಶ | – | ವಿಜಯನಗರ ಸಾಮ್ರಾಜ್ಯ |
| ರಾಜ | – | ಹರಿಹರ |
| ಭಾಷೆ | – | ಕನ್ನಡ |
| ಕಾಲ | – | ಕ್ರಿ.ಶ.1388 |
| ಲಿಪಿ | – | ಕನ್ನಡ |
| ಉಲ್ಲೇಖ | – | ಎ.ಕ.ಸಂ.12 |

**ಸಾರಾಂಶ**:–ಕ್ರಿ.ಶ.1388ರ ಈ ಶಾಸನವು ಇಯರಸಹನ ಹಳ್ಳಿ ಎಂಬ ಗ್ರಾಮವನ್ನು ಮಲ್ಲಿಭಟ್ಟ ಎಂಬ ಬ್ರಾಹ್ಮಣನಿಗೆ ದಾನವಾಗಿ ನೀಡಿದುದ್ದರ ಬಗ್ಗೆ ಈ ಶಾಸನವು ತಿಳಿಸುತ್ತದೆ. ಈ ಶಾಸನವನ್ನು ರಚಿಸಿದವನು ಮಲ್ಲಣಾರಾಧ್ಯ ಮತ್ತು ಕೆತ್ತನೆ ಮಾಡಿದವನು ಶಾಸನಚಾರ್ಯ ನಾಗದೇವ.[30]

**ಕ್ರಮ ಸಂಖ್ಯೆ–25**

**ಶಾಸನ ಸಂಖ್ಯೆ–1**

| | | |
|---|---|---|
| ಗ್ರಾಮ | – | ಕಸಬಾ |
| ಶಾಸನ ದೊರೆತ ಸ್ಥಳ | – | ತುರುವೇಕೆರೆ ಹೋಬಳಿ ತುರುವೇಕೆರೆಯಲ್ಲಿ ಅಚಲಾನಂದರ ಲಕ್ಷ್ಮೀನರಸಿಂಹಶಾಸ್ತ್ರಿಗಳ ಮಕ್ಕಳಾದ ವಿಠಲಯ್ಯನವರ ವಶದಲ್ಲಿರುವ ತಾಮ್ರಶಾಸನ |
| ರಾಜವಂಶ | – | ವಿಜಯನಗರ |
| ರಾಜ | – | ಅಚ್ಯುತರಾಯ |
| ಭಾಷೆ | – | ಸಂಸ್ಕೃತ |
| ಕಾಲ | – | ಕ್ರಿ.ಶ.1533 |
| ಲಿಪಿ | – | ನಾಗರಾಕ್ಷಕ |
| ಉಲ್ಲೇಖ | – | ಎ.ಕ.ಸಂ.12 |

**ಸಾರಾಂಶ**:- ಈ ಶಾಸನವು ವಿಜಯನಗರ ಅರಸ ಅಚ್ಯುತರಾಯನ ಕಾಲಕ್ಕೆ ಸೇರಿದ್ದು ಯೋಗನಾಥ ದೇವರಿಗೆ ಮತ್ತು ಲಕ್ಷ್ಮೀನಾರಾಯಣ ದೇವರಿಗೆ, ಶ್ರೀ ಗೋಪಾಲ ದೇವರಿಗೆ, ಶ್ರೀ ವಿಘ್ನೇಶ ದೇವರಿಗೆ ಹಾಗೂ ಶ್ರೀದುರ್ಗ ದೇವರಿಗೆ ಈ ಐದು ದೇವರುಗಳ ನಿತ್ಯ ಅಮೃತಪಡಿಗೆ ಕೆಲವು ಮಹಾ ಜನರು ದಾನ ನೀಡಿದ ಉಲ್ಲೇಖವಿದೆ.[31]

**ಕ್ರಮ ಸಂಖ್ಯೆ-26**

**ಶಾಸನ ಸಂಖ್ಯೆ**–17

| | | |
|---|---|---|
| ಊರು | – | ನಾಗಲಾಪುರ |
| ಶಾಸನ ದೊರೆತ ಸ್ಥಳ | – | ಊರ ಮುಂದೆ ಬಿದ್ದಿರುವ ಕಲ್ಲು |
| ರಾಜವಂಶ | – | ವಿಜಯನಗರ |
| ರಾಜ | – | ತಿಳಿದು ಬರುವುದಿಲ್ಲ |
| ಭಾಷೆ | – | ಕನ್ನಡ |
| ಕಾಲ | – | 15ನೇ ಶತಮಾನ |
| ಲಿಪಿ | – | ಕನ್ನಡ |
| ಉಲ್ಲೇಖ | – | ಎ.ಕ.ಸಂ.12 |

**ಸಾರಾಂಶ:**-ಈ ಶಾಸನವು ಸಂಪೂರ್ಣವಾಗಿ ತೃಟಿತಗೊಂಡಿದ್ದು ಕ್ರಿ.ಶ ಸುಮಾರು 15ನೇ ಶತಮಾನದ ಶಾಸನವಾಗಿದೆ. ನಾಗಲಾಪುರ ಗ್ರಾಮದ ನಾಯಕರ ಆಳ್ವಿಕೆಯನ್ನು ತಿಳಿಸುವ ಶಾಸನ ಇದಾಗಿದೆ.[32]

**ಕ್ರಮ ಸಂಖ್ಯೆ–27**

**ಶಾಸನ ಸಂಖ್ಯೆ–29**

ಊರು – ಹೊಸಹಳ್ಳಿ

ಶಾಸನ ದೊರೆತ ಸ್ಥಳ – ಕುಳವಾಡಿ ದೊಡ್ಡನ ಹೊಲದಲ್ಲಿ

ರಾಜವಂಶ – ವಿಜಯನಗರ

ರಾಜ – ಅಚ್ಯುತರಾಯ

ಭಾಷೆ – ಕನ್ನಡ

ಕಾಲ – ಕ್ರಿ.ಶ.1535

ಲಿಪಿ – ಕನ್ನಡ

ಉಲ್ಲೇಖ – ಎ.ಕ.ಸಂ.12

**ಸಾರಾಂಶ:–** ಈ ಶಾಸನವು ವಿಜಯನಗರ ಅರಸ ಅಚ್ಯುತರಾಯನ ಕಾಲ ಕ್ರಿ.ಶ.1535ಕ್ಕೆ ಸೇರಿದ್ದು ಅಚ್ಯುತರಾಯನ ಅಳಿಯ ರಘುಪತಿ ಮಹಾರಾಜನಿಗೆ ಧರ್ಮವಾಗಲಿ ಎಂದು ಕೊನ್ತಮರಸರು ದೇವರಸನಿಗೆ ಗೌಡ ಪ್ರಜೆಗಳು ಚಿನ್ನಹಮಾಡಿ ತಂಡಗದ ಸುತ್ತಲಿನ ಗ್ರಾಮಗಳಾದ ಅರೆದಾಸನಹಳ್ಳಿ ಇನ್ನೂ ಮುಂತಾದ ಗ್ರಾಮಗಳನ್ನು ದಾನಬಿಟ್ಟ ವಿಷಯವನ್ನು ತಿಳಿಸುತ್ತದೆ.[33]

**ಕ್ರಮ ಸಂಖ್ಯೆ–28**

**ಶಾಸನ ಸಂಖ್ಯೆ–5**

ಊರು – ತುರುವೇಕೆರೆ

ಶಾಸನ ದೊರೆತ ಸ್ಥಳ – ಅದೇ ದೇವಾಲಯದ ಮುಖಮಂಟಪ ಕಲ್ಲಿನಲ್ಲಿ

ರಾಜವಂಶ – ವಿಜಯನಗರ ಸಾಮ್ರಾಜ್ಯ

ರಾಜ – ವೆಂಕಟಾದ್ರಿ

ಭಾಷೆ – ಕನ್ನಡ

ಕಾಲ – ಕ್ರಿ.ಶ.1549

ಲಿಪಿ – ಕನ್ನಡ

ಉಲ್ಲೇಖ – ಎ.ಕ.ಸಂ.12

**ಸಾರಾಂಶ:–** ಈ ಶಾಸನವು ವಿಜಯನಗರ ಅರಸರ ಕಾಲಕ್ಕೆ ಸೇರಿದ್ದು ವಿಜಯನಗರ ಅರಸರ ವೆಂಕಟಾದ್ರಿ ರಾಜನಿಗೆ ಪುಣ್ಯ ಪ್ರಾಪ್ತಿಯಾಗಲೆಂದು ತಂಡಗದಲ್ಲಿ ತಿಮ್ಮರಾಜಯ್ಯ ಮತ್ತು

ಸಂಗದಾಸಿ ಅಯ್ಯನು ತಂಡಗದ ಸುತ್ತ ಮುತ್ತಲಿನ ಹಳ್ಳಿಗಳನ್ನು ದಾನ ನೀಡಿದ ಬಗ್ಗೆ ಬೆಳಕು ಚೆಲ್ಲುತ್ತದೆ.[34]

## ಅಡಿ ಟಿಪ್ಪಣಿಗಳು

1. ಚಿದಾನಂದ ಮೂರ್ತಿ.ಎಂ. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಬೆಂಗಳೂರು-2011
2. ಕೃಷ್ಣಕುಮಾರ್.ಸಿ.ಪಿ. ಶಾಸನಶಾಸ್ತ್ರ ಪ್ರವೇಶ. ಚೇತನ್ ಬುಕ್ ಹೌಸ್, ಮೈಸೂರು, 2001 ಪು.ಸಂ.6
3. ಅದೇ, ಪು.ಸಂ.7
4. ಅದೇ, ಪು.ಸಂ.9
5. ತಿಪ್ಪೇರುದ್ರಸ್ವಾಮಿ. ಎಚ್. ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪು.ಸಂ.231
6. ಅದೇ, ಪು.ಸಂ.239
7. ಎಪಿಗ್ರಾಫಿಯ ಕರ್ನಾಟಿಕ. ಸಂಪುಟ. 12, ಶಾಸನಸಂಖ್ಯೆ 10, ಪುಟಸಂಖ್ಯೆ 125
8. ಎ.ಕ.ಸಂ.24, ಶಾ.ಸಂ.22, ಪು.ಸಂ. 285
9. ಎ.ಕ.ಸಂ.12, ಶಾ.ಸಂ. 30, ಪು.ಸಂ. 33
10. ಎ.ಕ.ಸಂ.12, ಶಾ.ಸಂ.14, ಪು.ಸಂ.126-127
11. ಎ.ಕ.ಸಂ.12, ಶಾ.ಸಂ.35, ಪು.ಸಂ.134-135
12. ಎ.ಕ.ಸಂ.12, ಶಾ.ಸಂ.31, ಪು.ಸಂ.133
13. ಎ.ಕ.ಸಂ.24, ಶಾ.ಸಂ.40, ಪು.ಸಂ.309-310
14. ಎ.ಕ.ಸಂ.12, ಶಾ.ಸಂ.21, ಪು.ಸಂ.128-129
15. ಎ.ಕ.ಸಂ.24, ಶಾ.ಸಂ.79, ಪು.ಸಂ.343
16. ಎ.ಕ.ಸಂ.24, ಶಾ.ಸಂ.42, ಪು.ಸಂ.312
17. ಎ.ಕ.ಸಂ.12, ಶಾ.ಸಂ.13, ಪು.ಸಂ.126
18. ಎ.ಕ.ಸಂ.16, ಶಾ.ಸಂ.76, ಪು.ಸಂ.41-42
19. ಎ.ಕ.ಸಂ.12, ಶಾ.ಸಂ.23, ಪು.ಸಂ.129
20. ಎ.ಕ.ಸಂ.12, ಶಾ.ಸಂ.28, ಪು.ಸಂ.131

21. ಎ.ಕ.ಸಂ.12, ಶಾ.ಸಂ.2, ಪು.ಸಂ.117-119

22. ಎ.ಕ.ಸಂ.12, ಶಾ.ಸಂ.3, ಪು.ಸಂ.119-120

23. ಎ.ಕ.ಸಂ.12, ಶಾ.ಸಂ.22, ಪು.ಸಂ.129

24. ಎ.ಕ.ಸಂ.12, ಶಾ.ಸಂ.4, ಪು.ಸಂ.120

25. ಎ.ಕ.ಸಂ.12, ಶಾ.ಸಂ.12, ಪು.ಸಂ.125

26. ಎ.ಕ.ಸಂ.12, ಶಾ.ಸಂ.8, ಪು.ಸಂ.122

27. ಎ.ಕ.ಸಂ.12, ಶಾ.ಸಂ.24, ಪು.ಸಂ.130

28. ಎ.ಕ.ಸಂ.24, ಶಾ.ಸಂ.77, ಪು.ಸಂ.339-340

29. ಎ.ಕ.ಸಂ.24, ಶಾ.ಸಂ.78, ಪು.ಸಂ.341

30. ಎ.ಕ.ಸಂ.12, ಶಾ.ಸಂ.9, ಪು.ಸಂ.122-124

31. ಎ.ಕ.ಸಂ.12, ಶಾ.ಸಂ.1, ಪು.ಸಂ.114

32. ಎ.ಕ.ಸಂ.12, ಶಾ.ಸಂ.17, ಪು.ಸಂ.127-128

33. ಎ.ಕ.ಸಂ.12, ಶಾ.ಸಂ.29, ಪು.ಸಂ.132-133

34. ಎ.ಕ.ಸಂ.12, ಶಾ.ಸಂ.5, ಪು.ಸಂ.120-121

## ಅಧ್ಯಾಯ–5

## ವೀರಗಲ್ಲುಗಳು ಮತ್ತು ಮಾಸ್ತಿಕಲ್ಲುಗಳು ಹಾಗೂ ಪ್ರಮುಖ ಶಿಲ್ಪಗಳು

ಕರ್ನಾಟಕದ ಶಾಸನಗಳಲ್ಲಿ ದೊರೆಯುವಂತಹ ಮೂಲ ಸಾಮಾಗ್ರಿಗಳನ್ನು ವಿಭಿನ್ನವಾದ ದೃಷ್ಟಿಯಿಂದ ವಿಶ್ಲೇಷಿಸಿದ ಯಶಸ್ಸು ಡಾ.ಎಂ.ಚಿದಾನಂದ ಮೂರ್ತಿಯವರಿಗೆ ಸಲ್ಲಬೇಕು. ಇವರ "ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ" ಎಂಬ ಕೃತಿಯಲ್ಲಿ ಉಲ್ಲೇಖಿಸಿರುವುದನ್ನು ಇಲ್ಲಿ ಹೇಳುವುದು ಔಚಿತ್ಯಪೂರ್ಣವೆಂದೆನಿಸುತ್ತದೆ. ಜನತೆ ಮತ್ತು ರಾಜರು ಕಾಲದಿಂದ ಕಾಲಕ್ಕೆ ಆಡಳಿತ ನಡೆಸಿರುವುದಕ್ಕೆ ಇತಿಹಾಸವೆಂಬ ಭಾವನೆ ಬಹಳ ಪ್ರಚಲಿತವಾಗಿದೆ. ಜನತೆ ಬಾಳಿಬದುಕಿದ ರೀತಿ, ಅನುಸರಿಸಿದ ಧರ್ಮ, ಬೆಳೆಸಿದ ಕಲೆ ಅವರ ಜೀವನ ಸಮಸ್ಯೆಗಳು ಅವರ 'ಜೀವನ ಮೌಲ್ಯಗಳು' ಇತ್ಯಾದಿಗಳ ವಿವರಣೆಯೇ ಆ ದೇಶದ ಮತ್ತು ಜನತೆಯ ಇತಿಹಾಸ.[1] ಈ ರೀತಿಯ ಇತಿಹಾಸವನ್ನು ಒದಗಿಸುವುದರಲ್ಲಿ ವೀರಗಲ್ಲುಗಳು ಬಹಳ ಪ್ರಮುಖವಾದವು.

ಜೀವನದ ಹಂಗನ್ನು ತೊರೆದು ಗ್ರಾಮವನ್ನು ಕಳ್ಳರಿಂದ ರಕ್ಷಿಸಿ, ಗೋಗಳ್ಳರ ಜೊತೆ ಹೋರಾಡಿ ಅಬಲೆಯರ ಮೇಲೆರಗುವ ಕಾಮುಕರ ವಿರುದ್ಧ ಹೋರಾಡಿ ಹಾಗೂ ತಮ್ಮ ಅರಸರ ಪರವಾಗಿ ಹೋರಾಡಿ ಮಡಿದ ವೀರರ ಸ್ಮರಣಾರ್ಥವಾಗಿ ಹಾಕಿಸಿದ ಕಲ್ಲುಗಳನ್ನು ವೀರಗಲ್ಲುಗಳು ಎನ್ನಬಹುದು.[2] ಈ ವೀರರು ತಮ್ಮ ಸ್ವಾರ್ಥಕ್ಕಾಗಿ ಮಡಿಯದೆ ಸಮಾಜದ ಒಳಿತಿಗಾಗಿ ಪ್ರಾಣತ್ಯಾಗ ಮಾಡಿದ್ದರಿಂದ ಇವರ ಸ್ಮರಣಾರ್ಥವಾಗಿ ಹಾಕಿಸಿದ ಕಲ್ಲುಗಳೇ ವೀರಗಲ್ಲುಗಳು.[3] ಅವರು ಮಾಡಿದ ಹೋರಾಟ ಇಂದಿನ ನಮ್ಮ ದೃಷ್ಟಿಯಲ್ಲಿ ಏನಾದರೂ ಆಗಿರಲಿ, ಸಮಾಜದಲ್ಲಿ ಜೀವದ ಹಂಗನ್ನು ತೊರೆದು ಅವರ ಧೀಮಂತಿಕೆಯನ್ನು ಊಹಿಸಲು ಸಾಧ್ಯವಾದುದು. ಅವರ ಹೋರಾಟವು ಸಾಮಾಜಿಕ ನಿಷ್ಠೆ, ಸ್ವಾಮಿ ಭಕ್ತಿ, ಸ್ವಾಭಿಮಾನಗಳಿಂದ ಕೂಡಿದುದಾಗಿದೆ.[4]

ಯುದ್ಧದಲ್ಲಿ ಗೆದ್ದರೆ ಲಕ್ಷ್ಮಿ ದೊರಕುವಳು, ಸತ್ತರೆ ಪರಲೋಕದಲ್ಲಿ ಸುರಾಂಗನೆಯರು ದೊರಕುವರು ಎಂಬ ನಂಬಿಕೆಯಿತ್ತು. ಈ ನಂಬಿಕೆಯ ಪ್ರಕಾರ ರಣರಂಗದಲ್ಲಿ ಸತ್ತ ವೀರನಿಗಾಗಿ ದೇವಲೋಕದಲ್ಲಿ ಕನ್ಯೆಯರು ಕಾದುಕೊಂಡಿರುತ್ತಿದ್ದರಷ್ಟೇ ಅಲ್ಲ ಅವನನ್ನು ಪಡೆಯಲು ಅವರಲ್ಲಿ ಪೈಪೋಟಿಯು ನಡೆಯುತ್ತಿತ್ತು. ಅವನನ್ನು ದೇವಾಂಗನೆಯರು ಸ್ವರ್ಗಕ್ಕೋ, ಶಿವನೋಲಗಕ್ಕೋ

ಕೊಂಡೊಯ್ಯುತ್ತಾರೆ ಎಂದು ಜನರು ನಂಬಿದ್ದರು. ಯುದ್ಧದಲ್ಲಿ ಗೆದ್ದು ಹಿಂದಕ್ಕೆ ಬರುವುದು ಅಥವಾ ಸೋತು ಪ್ರಾಣ ಬಿಡುವುದು ಎರಡಕ್ಕೂ ಸಮಾನವಾದ ಗೌರವವಿದೆ. ಸೋತು ಹಿಂದಕ್ಕೆ ಬರುವುದು ಸಾವಿಗಿಂತ ಕಡೆಯಾದುದು ಎಂದೂ ಸಹ ನಂಬಿದ್ದರು. ಇದನ್ನು ಜನರು ಅಕ್ಷರಶಃ ನಂಬಿದ್ದರೋ ಇಲ್ಲವೋ ತಿಳಿಯದು. ಬಹುಶಃ ನಂಬಿದ್ದರು ಎಂದು ಊಹಿಸಬಹುದು. ಇಂತಹ ವೀರಗಲ್ಲುಗಳ ಬಗ್ಗೆ ಹಲವಾರು ವಿದ್ವಾಂಸರು ತಮ್ಮದೇ ಆದ ರೀತಿಯಲ್ಲಿ ವೈಜ್ಞಾನಿಕ ದೃಷ್ಟಿಯಲ್ಲಿ ಅಧ್ಯಯನ ನಡೆಸಿದ್ದಾರೆ.[5] ಚಿದಾನಂದಮೂರ್ತಿಯವರ "ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ" ಹಾಗೂ "ವೀರಗಲ್ಲುಗಳು ಮತ್ತು ಮಾಸ್ತಿಕಲ್ಲುಗಳು" ಎಂಬ ಪುಸ್ತಕದಲ್ಲಿ ಸ್ವವಿವರವಾದ ಮಾಹಿತಿ ಒದಗಿಸಿದ್ದಾರೆ. ಇವು ಇನ್ನಿತರ ಸಂಶೋಧನಾ ಗ್ರಂಥಗಳಿಗೆ ಸ್ಫೂರ್ತಿ ಎಂದರೆ ತಪ್ಪಾಗಲಾರದು. ನಂತರದಲ್ಲಿ ಆರ್.ಶೇಷಶಾಸ್ತ್ರಿಯವರ "ಕರ್ನಾಟಕದ ವೀರಗಲ್ಲುಗಳು" ಎಂಬ ತಮ್ಮ ಸಂಶೋಧನಾ ಗ್ರಂಥದಲ್ಲಿ ವೀರಗಲ್ಲುಗಳನ್ನು ಹಲವಾರು ವಿಭಾಗ ಮಾಡಿ ಅರ್ಥಪೂರ್ಣವಾದಂತಹ ವಿವರಣೆಯನ್ನು ನೀಡಿದ್ದಾರೆ. ಇದೇ ರೀತಿಯಲ್ಲಿ ಎಸ್.ಶೆಟ್ಟರ್ ಅವರ "ಮೆಮೊರಿಯಲ್ ಸ್ಟೋನ್ಸ್" ಡಿ.ವಿ.ಪರಶಿವಮೂರ್ತಿ ಅವರ "ಕನ್ನಡ ಶಾಸನ ಶಿಲ್ಪ", ಕೆ.ವಿ.ರಮೇಶ ಅವರ "ಕರ್ನಾಟಕದ ಶಾಸನ ಸಮೀಕ್ಷೆ" ತಿ.ತಾ.ಶರ್ಮ ಅವರ "ವೀರಗಲ್ಲು-ಮಾಸ್ತಿಕಲ್ಲು" ಬಿ.ಆರ್.ಹಿರೇಮಠ ಅವರ "ವೀರಗಲ್ಲುಗಳು" ಎಂ.ಎಂ.ಕಲಬುರ್ಗಿ ಅವರ "ಸಮಾಧಿ-ಬಲಿದಾನ-ವೀರಮರಣ" ಸ್ಮಾರಕಗಳು, ಬಿ.ಎಸ್. ಶೇಠೆಯವರ "ಕರ್ನಾಟಕದಲ್ಲಿ ಸತಿಪದ್ಧತಿ" ಮುಂತಾದ ಗ್ರಂಥಗಳು ವೀರಗಲ್ಲುಗಳ ಬಗ್ಗೆ ಮಾಹಿತಿ ಒದಗಿಸುತ್ತವೆ. ಇವುಗಳೆಲ್ಲದರ ಆಧಾರದ ಮೇಲೆ ಹಾಗೂ ಕ್ಷೇತ್ರಕಾರ್ಯದಲ್ಲಿ ಮಾಹಿತಿ ಪಡೆದು ನನ್ನ ಸಂಶೋಧನೆಗೆ ಸಂಬಂಧಿಸಿದಂತೆ ತುರುವೇಕೆರೆ ತಾಲೂಕು ಕ್ಷೇತ್ರದಲ್ಲಿ ದೊರೆಯುವ ವೀರಗಲ್ಲು, ಮಹಾಸತಿಗಲ್ಲು ಹಾಗೂ ಪ್ರಮುಖ ಬಿಡಿಶಿಲ್ಪಗಳ ಬಗ್ಗೆ ಮಾಹಿತಿಯನ್ನು ನೀಡಲು ಸಾಧ್ಯವಾದಷ್ಟು ಮಟ್ಟಿಗೆ ಪ್ರಯತ್ನಿಸಿದ್ದೇನೆ.

**ಮಾಸ್ತಿಕಲ್ಲುಗಳು**:- ಪತಿಯೊಡನೆ ಸಹಗಮನವನ್ನು ಮಾಡಿದ ಸತಿಯರ ಸ್ಮಾರಕಕ್ಕಾಗಿ ನಿಲ್ಲಿಸಿದ ಕಲ್ಲುಗಳನ್ನು ಮಾಸ್ತಿಕಲ್ಲು ಅಥವಾ ಮಹಾಸತಿಕಲ್ಲು ಎಂದು ಹೇಳಬಹುದು.[6] ಈ ಸತಿ ಅಥವಾ ಸಹಗಮನ ಪದ್ಧತಿಯೂ ಸಾರ್ವತ್ರಿಕವಾಗಿರಲಿಲ್ಲ ಹಾಗೂ ಬಲವಂತವಾಗಿ ಅಲ್ಲಿರಲಿಲ್ಲವೆಂಬುದು ಗಮನಿಸಬೇಕಾದ ಸಂಗತಿ. ಪತಿಯೇ ಪರದೈವವೆಂಬ ಭಾವನೆಯಲ್ಲಿ ಬೆಳೆದ ಹೆಣ್ಣು, ಪತಿಯ ಮರಣವನ್ನು ಸಹಿಸಲಾರದೆ ಏಕೈಕ ನಿಷ್ಠೆಯಿಂದ ಆತನನ್ನು ಹಿಂಬಾಲಿಸಿ ಸಂತೋಷದಿಂದ ಒಪ್ಪಿಕೊಂಡು ಸಹಗಮನವನ್ನು ಪ್ರಾರಂಭಿಸಿರುವುದೇ ಮೂಲವಾಗಿರಬೇಕು. ಏಕೆಂದರೆ

ಧರ್ಮಶಾಸ್ತ್ರಗಳಲ್ಲಿಯೂ ಬಲವಂತದ ಸಹಗಮನಕ್ಕೆ ಒಪ್ಪಿಗೆಯನ್ನು ನೀಡಿಲ್ಲ. ಆದರೂ ಕೆಲವು ಕಡೆಗಳಲ್ಲಿ ಧಾರ್ಮಿಕ ಸ್ವರೂಪ ಒಂದು ಹೆಣ್ಣಿಗೆ ಇಷ್ಟವಿಲ್ಲದಿದ್ದರೂ ಆ ವಿಧಿ ನಡೆಯುತ್ತಿದ್ದಂತೆ ತೋರುತ್ತದೆ. ಎಂ.ಚಿದಾನಂದಮೂರ್ತಿಯವರು ಅಭಿಪ್ರಾಯಪಡುವಂತೆ ಪ್ರಾಚೀನ ಜನಾಂಗಗಳು ಈ ಲೋಕದಂತಹ ಇನ್ನೊಂದು ಲೋಕವಿದೆಯೆಂದು ಜನರು ದೃಢವಾಗಿ ನಂಬಿದ್ದರು. ವ್ಯಕ್ತಿ ಮಡಿದಾಗ ಅವನು ಪರಲೋಕಕ್ಕೆ ಹೋಗುವನೆಂದು ಅಲ್ಲಿ ಅವನ ಭೋಗಕ್ಕೆ ಅವನಿಗಿಷ್ಟವಾದ ವಸ್ತುಗಳನ್ನು ಕಳುಹಿಸಬೇಕೆಂದೂ ಭಾವಿಸಿದ್ದರು. ಬಹುಶಃ ಸಹಗಮನ ಪದ್ಧತಿಗೆ ಇದೇ ಮೂಲವಿರಬಹುದು ಎಂಬ ಅವರ ಅಭಿಪ್ರಾಯವನ್ನು ಅಲ್ಲಗೆಳೆಯುವಂತಿಲ್ಲ. ಗಂಡನು ಇಂಥದ್ದೇ ಕಾರಣಕ್ಕಾಗಿ ಮಡಿದಿರಬೇಕೆಂಬ ಯಾವುದೇ ನಿಯಮವಿದ್ದಂತೆ ಕಾಣುವುದಿಲ್ಲ. ಗಂಡನು ಯುದ್ಧದಲ್ಲಿಯೋ, ಆತ್ಮಬಲಿ ಮಾಡಿಕೊಂಡೊ ಅಥವಾ ಸಹಜವಾದ ಮರಣವನ್ನೊ ಪಡೆದಿರಬಹುದು. ಗಂಡನು ಯಾವ ಕಾರಣಕ್ಕಾಗಿ ಮಡಿದನು ಎಂಬುದನ್ನು ತಿಳಿಯಲು ಶಿಲೆಯ ಪ್ರಕಾರವನ್ನು ಮತ್ತು ಶಿಲ್ಪವನ್ನು ನಿರ್ಣಯಿಸುವಲ್ಲಿ ಬಹಳ ಕಷ್ಟವಾಗುತ್ತದೆ. ಅಂತಹ ಸಂದರ್ಭಗಳಲ್ಲಿ ಆ ಸ್ಮಾರಕ ಶಿಲೆಗಳ ಪಾಠವನ್ನಾಗಲೀ, ಶಿಲ್ಪವನ್ನಾಗಲೀ ಗಮನಿಸಿದಾಗ ಅವುಗಳನ್ನು ವೀರಗಲ್ಲು ಎಂಬುದಾಗಿ ಗುರುತಿಸಬೇಕೆ ಅಥವಾ ಮಹಾಸತಿಕಲ್ಲು ಎಂಬುದಾಗಿ ಗುರುತಿಸಬೇಕೆ ಅಥವಾ ವೀರನಿಗೂ ಮಹಾಸತಿಗೂ ಇಬ್ಬರಿಗೂ ಸ್ಮಾರಕವಾಗಿದೆಯೇ ಎಂಬುದು ಸಂಶಯಕ್ಕೀಡಾಗುತ್ತದೆ. ಇವೆಲ್ಲವೂ ಕೆಲವು ಸಮಯದಲ್ಲಿ ಪ್ರಶ್ನಾತೀತವಾಗಿಯೇ ಉಳಿದುಕೊಂಡಿವೆ. ಒಟ್ಟಾರೆಯಾಗಿ ಇದರ ಬಗ್ಗೆ ಹೇಳಬೇಕೆಂದರೆ ಪತಿಯನ್ನು ಹಿಂಬಾಲಿಸಿದ ಮಹಾಸಾಧ್ವಿಯರ ಸ್ಮರಣೆಗಾಗಿ ನೆಟ್ಟಂತಹ ಕಲ್ಲುಗಳೇ ಮಹಾಸತಿ ಕಲ್ಲುಗಳು ಎನ್ನಬಹುದು.

ಕ್ರಿ.ಶ.10ನೆಯ ಶತಮಾನದ ಆರಂಭದಲ್ಲಿ ಪ್ರವಾಸ ಮಾಡಿದ ಅರಬ್ಬಿ ವರ್ತಕ ಸುಲೇಮಾನನು ಹೇಳುವಂತೆ ಎಲ್ಲೋ ವಿರಳವಾಗಿ ಮಾತ್ರ ರಾಣಿಯರು ತಮ್ಮ ಗಂಡಂದಿರ ಚಿತೆಗಳನ್ನೇರುತ್ತಿದ್ದರು ಅಲ್ಲಿಯೂ ಬಲವಂತವಿರಲಿಲ್ಲ, ಚಿತೆ ಏರುವುದು ಬಿಡುವುದು ಅವರಿಗೆ ಸೇರಿದುದಾಗಿತ್ತು ಎಂದು ಹೇಳಿದ್ದಾನೆ. ಕ್ರಿ.ಶ. 6ನೇ ಶತಮಾನದಿಂದ 12ನೇ ಶತಮಾನದ ಮಧ್ಯಭಾಗದವರೆಗೆ ಸಹಗಮನದ ನಿದರ್ಶನಗಳು ದೊರಕುವುದು ಬಹಳ ಕಡಿಮೆ. ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಗಂಗರು, ನೊಳಂಬರ ಕಾಲದಲ್ಲಿ ಯಾವುದೇ ಸಹಗಮನದ ಸೂಚನೆಗಳು ಕಂಡುಬರುವುದಿಲ್ಲ. ಆದರೆ ಕರ್ನಾಟಕದಲ್ಲಿ ವೀರಯುಗದೊಡನೆ ಪ್ರಬಲಗೊಂಡ ಸಹಗಮನ ಪದ್ಧತಿಯು ಹೊಯ್ಸಳ, ವಿಜಯನಗರ ಸಾಮ್ರಾಜ್ಯಗಳ ಕಾಲದಲ್ಲಿ ತನ್ನ ತುದಿಯನ್ನು ತಲುಪಿದೆ ಎನ್ನಬಹುದು.

**ಮಹಾಸತಿ ಕಲ್ಲು (ಅಜ್ಜಹಳ್ಳಿ):-** ಇದು ಅಜ್ಜಹಳ್ಳಿ ಗ್ರಾಮದ ದಕ್ಷಿಣ ಭಾಗದಲ್ಲಿರುವ ನಾಗರಾಜು ಅವರ ಮನೆಯ ಹತ್ತಿರವಿರುವ ನೀರಿನ ಟ್ಯಾಂಕ್ ಪಕ್ಕದಲ್ಲಿ ಅನಾಥವಾಗಿ ಬಿದ್ದಿದೆ. ಈ ಸತಿಕಲ್ಲು ಸುಮಾರು ಐದು ಅಡಿ ಎತ್ತರ ಮೂರು ಅಡಿ ಅಗಲ ಹತ್ತು ಇಂಚು ದಪ್ಪವಾಗಿದೆ. ಇದೊಂದು ಕಣಶಿಲೆಯಲ್ಲಿ ರಚಿಸಲಾಗಿರುವ ಸತಿಕಲ್ಲಾಗಿದ್ದು, ಮೂರು ಹಂತಗಳಲ್ಲಿ ಶಿಲ್ಪಗಳನ್ನು ರಚಿಸಲಾಗಿದೆ. ಕೆಳಹಂತದಲ್ಲಿ ಇಬ್ಬರು ಸತಿಯರು ಬಿಲ್ಲು, ಬಾಣ, ಕತ್ತಿ, ಗುರಾಣಿ ಹಿಡಿದು ಹೋರಾಟದಲ್ಲಿ ತೊಡಗಿದ್ದಾರೆ. ಇದಕ್ಕೂ ಮುನ್ನ ಹೋರಾಟದಲ್ಲಿ ತೊಡಗಿದ್ದ ಮಹಿಳೆ ಯೋರ್ವಳು ಸಾವನ್ನಪ್ಪಿ ನೆಲದ ಮೇಲೆ ಮಲಗಿದ್ದಾಳೆ. ಹೀಗೆ ಹೋರಾಟದಲ್ಲಿ ತೊಡಗಿದ ಮಹಿಳೆ ವೀರ ಮರಣವನ್ನು ಹೊಂದಿದ ಮೇಲೆ, ಮರಣವನ್ನಪ್ಪಿದ ಸತಿಯನ್ನು ಇಬ್ಬರು ಗಂಧರ್ವ ಕನ್ಯೆಯರು ಎರಡನೇ ಹಂತದಲ್ಲಿ ಸ್ವರ್ಗಲೋಕಕ್ಕೆ ಕರೆದೊಯ್ಯುತ್ತಿರುವ ದೃಶ್ಯವನ್ನು ಬಿಡಿಸಲಾಗಿದೆ. ಇವರ ಹಿಂಬದಿಯಲ್ಲಿ ಗೋವುಗಳ ಶಿಲ್ಪಗಳನ್ನು ಬಿಡಿಸಲಾಗಿದೆ. ಮೂರನೇ ಹಂತದಲ್ಲಿ ಶಿವಲಿಂಗ, ಶಿವಲಿಂಗಕ್ಕೆ ಪೂಜೆಯನ್ನು ಸಲ್ಲಿಸುತ್ತಿರುವ ಪುರೋಹಿತ ಇದರ ಹಿಂದೆ ಪದ್ಮಾಸನದಲ್ಲಿ ಕುಳಿತು ಧ್ಯಾನಮಗ್ನಳಾಗಿರುವ ಮಹಿಳೆ ಶಿಲ್ಪವನ್ನು ಬಿಡಿಸಲಾಗಿದೆ. ಇದೊಂದು ಗೋವುಗಳಿಗೋಸ್ಕರವಾಗಿ ಗೋವುಗಳ್ಳರೊಟ್ಟಿಗೆ ಹೋರಾಟ ಮಾಡಿದ ದೃಶ್ಯ ಸನ್ನಿವೇಶದ ಮಹಾಸತಿ ಕಲ್ಲಾಗಿದೆ.

**ಎರಡನೇ ವೀರಗಲ್ಲು:-** ಕಾಡುಮೃಗದ ಜೊತೆ ಹೋರಾಡಿ ಮಡಿದ ವೀರಗಲ್ಲಾಗಿದೆ. ಈ ವೀರಗಲ್ಲು ಸುಮಾರು 5 ಅಡಿ ಎತ್ತರವಾಗಿದ್ದು, ಎರಡೂವರೆ ಅಡಿ ಅಗಲವಾಗಿದೆ ಹಾಗೂ ಒಂದುವರೆ ಅಡಿ ದಪ್ಪವಾಗಿದೆ. ಇದರಲ್ಲಿ ಮೂರು ಹಂತಗಳಲ್ಲಿ ಶಿಲ್ಪಗಳನ್ನು ಕೆತ್ತಲಾಗಿದೆ. ಕೆಳಹಂತದಲ್ಲಿ ವೀರನೋರ್ವನು ಹುಲಿಯ ಜೊತೆ ಹೋರಾಟದಲ್ಲಿ ತೊಡಗಿದ್ದಾನೆ. ಭರ್ಜಿಯನ್ನು ಹಿಡಿದು ಹುಲಿಯ ಎದೆಗೆ ಚುಚ್ಚಿದ್ದಾನೆ. ಅದನ್ನು ತಾಳಲಾರದೆ ಈ ಪ್ರಾಣಿಯು ತನ್ನ ಪ್ರಾಣ ರಕ್ಷಣೆಗಾಗಿ ಪ್ರತಿಭಟಿಸುತ್ತಾ ಬಲಗಾಲನ್ನು ಎತ್ತಿ ಅವನ ದಂಡ ಅಥವಾ ಭರ್ಜಿಯನ್ನು ತಳ್ಳುತ್ತಿರುವಂತಿದೆ. ಎರಡನೇ ಹಂತದಲ್ಲಿ ಈ ಕಾಡುಮೃಗದಿಂದ ಮಡಿದ ವೀರನು ಪದ್ಮಾಸನದಲ್ಲಿ ಕೈಮುಗಿದು ಕುಳಿತಿದ್ದಾನೆ. ಇವನ ಮುಂದಿರುವ ಶಿಲ್ಪಕೆತ್ತನೆಗಳು ಅಸ್ಪಷ್ಟವಾಗಿವೆ. ಮೂರನೇ ಹಂತದಲ್ಲಿ ಶಿವಲಿಂಗದ ಮುಂದೆ ಪುರೋಹಿತರು ನಿಂತು ಪೂಜೆ ಸಲ್ಲಿಸುತ್ತಿದ್ದಾನೆ. ವೀರ ಮರಣವನ್ನಪ್ಪಿದ ಮಹಾವೀರನು ತನ್ನ ಎರಡೂ ಕೈಗಳನ್ನು ಮೇಲೆತ್ತಿ ಮುಗಿಯುತ್ತಿರುವಂತೆ ಕಂಡು ಬಂದಿದ್ದು ಇವರ ಮೇಲ್ಭಾಗದಲ್ಲಿ ಸೂರ್ಯ ಮತ್ತು ಚಂದ್ರನ ಕೆತ್ತನೆಯನ್ನು ಮಾಡಲಾಗಿದೆ.

**ಬಡಗರ ಹಳ್ಳಿ ವೀರಗಲ್ಲುಗಳು:-** ತುರುವೇಕೆರೆ ದಬ್ಬೇಘಟ್ಟಕ್ಕೆ ಹೋಗುವ ರಸ್ತೆಯಲ್ಲಿ ಊರಿನ ಶಕ್ತಿ ದೇವತೆಯಾದ ದೊಡ್ಡಮ್ಮ ದೇವಾಲಯದ ಮುಂದೆ ಎರಡು ವೀರಗಲ್ಲುಗಳನ್ನು ಇರಿಸಲಾಗಿದೆ. ಈ ವೀರಗಲ್ಲುಗಳು ಪಶ್ಚಿಮಾಭಿಮುಖವಾಗಿದ್ದು ಗಾತ್ರದಲ್ಲಿ ಸಣ್ಣದಾಗಿದೆ. **(ಚಿ.ಸಂ.148)** ಮೊದಲನೆಯ ವೀರಗಲ್ಲು ಬಳಪದ ಕಲ್ಲಿನಲ್ಲಿ ಕೆತ್ತಲಾಗಿದ್ದು, ಕೇವಲ ಒಂದು ದೃಶ್ಯ ಮಾತ್ರ ಕಂಡುಬರುತ್ತದೆ. ಅಶ್ವಾರೋಹಿಯಾದ ಈ ವೀರನು ಬಲಗೈಯಲ್ಲಿ ಖಡ್ಗ ಹಿಡಿದು ಎಡಗೈಯಲ್ಲಿ ಕುದುರೆಯ ಲಗಾಮು ಹಿಡಿದು ಯುದ್ಧಕ್ಕೆ ಹೊರಟಂತೆ ಚಿತ್ರಿಸಲಾಗಿದೆ. ಮೊದಲನೆಯ ವೀರಗಲ್ಲಿನ ಪಕ್ಕದಲ್ಲಿಯೇ ಕಣಶಿಲೆಯಲ್ಲಿ ಮಾಡಲಾದ ಒಂದೂವರೆ ಅಡಿ ಎತ್ತರ ಮತ್ತು ಒಂದೂವರೆ ಅಡಿ ಅಗಲ ಹೊಂದಿರುವ ಮತ್ತೊಂದು ವೀರಗಲ್ಲನ್ನು ಕಾಣಬಹುದು. ಬಿಲ್ಲನ್ನು ಹಿಡಿದು ಬಾಣವನ್ನು ಹೂಡುತ್ತಿರುವಂತೆ ವೀರನ ಶಿಲ್ಪವನ್ನು ಕೆತ್ತಲಾಗಿದೆ.

**ಬೆನಕನ ಕೆರೆ ವೀರಗಲ್ಲು:-** ದಬ್ಬೇಘಟ್ಟ ಹೋಬಳಿಯ ಬೆನಕನ ಕೆರೆ ಎಂಬ ಗ್ರಾಮದಲ್ಲಿ, ಊರಿನ ಮಧ್ಯಭಾಗದಲ್ಲಿ ಪೂರ್ವಾಭಿಮುಖವಾಗಿ ನಿರ್ಮಾಣವಾಗಿರುವ ಈಶ್ವರ ದೇವಾಲಯದ ಮುಖಮಂಟಪದ ಕಂಬಕ್ಕೆ ಈ ವೀರಗಲ್ಲನ್ನು ಒರಗಿಸಿ ನಿಲ್ಲಿಸಲಾಗಿದೆ. **(ಚಿ.ಸಂ.149)** ಒಂದನೇ ವೀರಗಲ್ಲು ಬಳಪದ ರಚನೆಯಾಗಿದ್ದು, ಸುಮಾರು 5 ಅಡಿ ಎತ್ತರವಾಗಿದ್ದು, ಎರಡೂವರೆ ಅಡಿ ಅಗಲವಾಗಿದೆ ಹಾಗೂ ಒಂದು ಅಡಿ ದಪ್ಪವಾಗಿದೆ. ಇದರ ಮೂರು ಹಂತಗಳಲ್ಲಿ ಶಿಲ್ಪಗಳನ್ನು ಕೆತ್ತಲಾಗಿದೆ. ಅಲ್ಲದೇ ಮಧ್ಯದಲ್ಲಿರುವ ಅಡ್ಡಪಟ್ಟಿಕೆಗಳ ಮೇಲೆ ಶಾಸನವನ್ನು ಬರೆಸಲಾಗಿದೆ. ಕೆಳಗಿನ ಹಂತದಲ್ಲಿ ಕುದುರೆಯನ್ನೇರಿ ಬಂದ ವೀರನೋರ್ವನು ವೇಗವಾಗಿ ಬಂದು ಆಟವಾಡುತ್ತಿದ್ದ ಮಕ್ಕಳ ಮೇಲೆ ಕುದುರೆಯನ್ನು ಹಾಯಿಸಿದ್ದಾನೆ. ಇದರಿಂದಾಗಿ ಕುದುರೆಯ ಕಾಲಿನ ತುಳತಕ್ಕೆ ಸಿಕ್ಕಿ ಒಂದು ಮಗು ಸತ್ತು ಹೋಗಿದೆ. ಮತ್ತೊಂದು ಮಗು ಹೆದರಿ ಹಿಂದಕ್ಕೆ ಓಡುತ್ತಿರುವಾಗ ಕುದುರೆಯು ಅದರ ಮೇಲೂ ಹಾದು ಕುದುರೆಯ ಮುಂಗಾಲು ಆ ಮಗುವಿನ ಸೊಂಟದ ಮೇಲೆ ಇಟ್ಟು ತುಳಿಯುತ್ತಿದೆ. ಇದನ್ನು ಕಂಡ ಮಹಿಳೆಯರಿಬ್ಬರೂ ಅವನ ವಿರುದ್ಧವಾಗಿ ಬಿಲ್ಲುಬಾಣಗಳನ್ನು ಹಿಡಿದು ಹೋರಾಟದಲ್ಲಿ ತೊಡಗಿ ಕುದುರೆ ಸವಾರನ ಎದೆಗೆ ಬಾಣವನ್ನು ಬಿಟ್ಟಿದ್ದಾರೆ ಮತ್ತು ರುಂಡವು ಕತ್ತರಿಸಿ ಹೋಗುವಂತೆ ಬಾಣದಿಂದ ಹೊಡೆದಿದ್ದಾರೆ. ಸವಾರನು ಮುಂಡದೊಂದಿಗೆ ಕುದುರೆಯ ಮೇಲೆಯೇ ಕುಳಿತಿದ್ದಾನೆ. ಹೋರಾಡಿ ವೀರಮರಣ ಹೊಂದಿದ ಮಹಿಳೆಯನ್ನು ಚಾಮರ ಮತ್ತು ಫಲವನ್ನು ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ಗಂಧರ್ವ ಕನ್ಯೆಯರು ಪಲ್ಲಕ್ಕಿಯೊಂದರ ಮೇಲೆ ಕೂರಿಸಿಕೊಂಡು ದೇವಲೋಕಕ್ಕೆ ಕರೆದೊಯ್ಯುತ್ತಿದ್ದಾರೆ. ದೇವಲೋಕದಲ್ಲಿ ಶಿವನಿಗೆ ಪೂಜೆಯನ್ನು ಸಲ್ಲಿಸುತ್ತಿರುವ ಪುರೋಹಿತರು, ಶಿವಲಿಂಗದ ಮುಂದೆ ನಂದಿ, ನಂದಿಯ ಪಕ್ಕದಲ್ಲಿ ಪುರುಷನೊಬ್ಬನು ನಿಂತಿದ್ದಾನೆ. ಮರಣ

ಹೊಂದಿದ ವೀರ ಮಹಿಳೆ ದೇವರ ಮುಂದೆ ಪದ್ಮಾಸನದಲ್ಲಿ ಕೈಮುಗಿದು ಕುಳಿತು ಪ್ರಾರ್ಥಿಸುತ್ತಿದ್ದಾಳೆ. **(ಚಿ.ಸಂ.150)** ಮೇಲ್ಭಾಗದಲ್ಲಿ ಸೂರ್ಯ-ಚಂದ್ರ ಕೀರ್ತಿಮುಖವನ್ನು ಬಿಡಿಸಲಾಗಿದೆ.

**ಅದೇ ಗ್ರಾಮದಲ್ಲಿರುವ ಮೂರನೇ ಮಾಸ್ತಿಕಲ್ಲು:-** ಈ ದೇವಾಲಯದ ಪಕ್ಕದಲ್ಲಿರುವ ಮಾಸ್ತಿಕಲ್ಲನ್ನು ದೇವಾಲಯದ ಉತ್ತರ ಗೋಡೆಯ ಮುಂದೆ ಇರಿಸಲಾಗಿದೆ. ಇದನ್ನು ಬಳಪದ ಕಲ್ಲಿನಲ್ಲಿ ರಚಿಸಲಾಗಿದೆ. ಒಂದೇ ದೃಶ್ಯ ಸನ್ನಿವೇಶ ಒಳಗೊಂಡ ಈ ಮಹಾಸತಿ ಕಲ್ಲನಲ್ಲಿ ಒಬ್ಬ ಸ್ತ್ರೀಯು ಬಿಲ್ಲು ಬಾಣವನ್ನು ಹಿಡಿದುಕೊಂಡಿದ್ದಾಳೆ. ಬಲಗೈಯಲ್ಲಿ ಬಾಣ ಹಿಡಿದು ಮೇಲಕ್ಕೆ ಎತ್ತಿದ್ದಾಳೆ. ಮೈಮೇಲೆ ಧರಿಸಿರುವ ವಸ್ತ್ರಾಭರಣ ಕಲಾತ್ಮಕವಾಗಿದೆ. ಈ ಮಹಿಳೆಯ ಎಡಭಾಗದಲ್ಲಿ ಮತ್ತೋರ್ವ ಮಹಿಳೆಯು ಬಲಗೈಯಲ್ಲಿ ಆಯುಧ ಹಿಡಿದು ಅದನ್ನು ಇಳಿಮುಖವಾಗಿ ಹಿಡಿದಿದ್ದಾಳೆ. ಎಡಗೈಯಲ್ಲಿ ಪುಷ್ಪ ಹಿಡಿದಿರುವಂತೆ ಕಂಡುಬರುತ್ತದೆ. ತ್ರಿಭಂಗಿಯಲ್ಲಿ ನಿಂತಿರುವ ಈ ಸ್ತ್ರೀಯು ಕಿವಿಯಲ್ಲಿ ಓಲೆ ಮೈಮೇಲೆ ವಿವಿಧ ಬಗೆಯ ವಸ್ತ್ರಾಭರಣ ಹೊಂದಿದ್ದು, ಸುಂದರವಾಗಿ ಕಾಣುವಂತೆ ರಚಿಸಲಾಗಿದೆ. ಈ ವೀರಮಹಾಸತಿ ಕಲ್ಲಿನ ಮೇಲ್ಭಾಗದಲ್ಲಿ ಸೂರ್ಯ ಚಂದ್ರರನ್ನು ಕೆತ್ತಲಾಗಿದೆ.

**ಬೆಂಕಿಕೆರೆ ವೀರಗಲ್ಲು:-** ಬೆಂಕಿಕೆರೆ ಗ್ರಾಮವು ದಬ್ಬೇಘಟ್ಟ ಹೋಬಳಿಗೆ ಸೇರಿದ್ದು ತುರುವೇಕೆರೆ ತಾಲೂಕು ಕೇಂದ್ರದಿಂದ 12 ಕಿ.ಮೀ. ದೂರದಲ್ಲಿ ಕಂಡುಬರುತ್ತದೆ. ಊರಿನ ದಕ್ಷಿಣ ಭಾಗದಲ್ಲಿ ಪೂರ್ವಾಭಿಮುಖವಾಗಿ ನಿರ್ಮಾಣವಾಗಿರುವ ಈಶ್ವರ ದೇವಾಲಯದ ಮುಂದೆ ಒಂದು ವೀರಗಲ್ಲು ಮತ್ತು ಮತ್ತೊಂದು ತುರುಗೋಳ್ ವೀರಮಹಾಸತಿಗಲ್ಲನ್ನು ನಿಲ್ಲಿಸಲಾಗಿದೆ.

**ಮೊದಲನೆಯ ಮಹಾಸತಿ ಕಲ್ಲು:-** ಈ ವೀರಗಲ್ಲನ್ನು ಬಳಪದ ಕಲ್ಲಿನಲ್ಲಿ ರಚಿಸಲಾಗಿದೆ. ಸುಮಾರು 5 ಅಡಿ ಎತ್ತರವಾಗಿದ್ದು, ಎರಡು ಅಡಿ ಅಗಲವಾಗಿದೆ ಹಾಗೂ ಒಂದು ಅಡಿ ದಪ್ಪವಾಗಿದೆ. ಇದರ ಮೂರು ಹಂತಗಳಲ್ಲಿ ಶಿಲ್ಪಗಳನ್ನು ಕಂಡರಿಸಲಾಗಿದೆ. ಕೆಳಹಂತದಲ್ಲಿ ಯುದ್ಧದಲ್ಲಿ ಹೋರಾಡಿ ಇಬ್ಬರು ಸ್ತ್ರೀಯರು ಎದುರಾಳಿ ಸ್ತ್ರೀಯರ ಜೊತೆ ಯುದ್ಧ ಮಾಡುತ್ತಿರುವ ದೃಶ್ಯಾವಳಿ ಇದೆ. ಈ ವೀರ ಸ್ತ್ರೀಯರು ಬಿಲ್ಲು ಬಾಣಗಳನ್ನು ಹಿಡಿದುಕೊಂಡಿದ್ದಾರೆ. ಇವರ ಹಿಂಬದಿಯಲ್ಲಿ ಸಹಾಯಕ್ಕಾಗಿ ಬಂದ ಇಬ್ಬರೂ ಸ್ತ್ರೀಯರಿದ್ದಾರೆ. ಈ ದೃಶ್ಯ ಸನ್ನಿವೇಶ ಬಹಳ ಸುಂದರವಾಗಿದೆ **(ಚಿ.ಸಂ.151)** ಎರಡನೇ ಹಂತದಲ್ಲಿ ವೀರಮರಣವನ್ನಪ್ಪಿದ ಸ್ತ್ರೀಯನ್ನು ಗಂಧರ್ವ ಕನ್ಯೆಯರು ಪಲ್ಲಕ್ಕಿಯಲ್ಲಿ ಕೂರಿಸಿಕೊಂಡು ದೇವಲೋಕಕ್ಕೆ ಕರೆದೊಯ್ಯುತ್ತಿರುವ ದೃಶ್ಯವನ್ನು ಬಿಡಿಸಲಾಗಿದೆ. ಮೂರನೇ ಹಂತದಲ್ಲಿ ಶಿವಲಿಂಗ, ಶಿವಲಿಂಗಕ್ಕೆ ಪೂಜೆ

ಸಲ್ಲಿಸುತ್ತಿರುವ ಪುರೋಹಿತ, ಬಲಭಾಗದಲ್ಲಿ ಮರಣ ಹೊಂದಿದ ಸ್ತ್ರೀಯು ಶಿವಲಿಂಗಕ್ಕೆ ನಮಿಸುತ್ತಿರುವಂತೆ ಕೆತ್ತಲಾಗಿದ್ದು, ಸ್ತ್ರೀಯ ಮೈಮೇಲೆ ವಿವಿಧ ಬಗೆಯ ಆಭರಣಗಳನ್ನು ಕೆತ್ತಲಾಗಿದ್ದು, ಪುರೋಹಿತನ ಹಿಂಭಾಗದಲ್ಲಿ ನಂದಿಯ ಕೆತ್ತನೆ ಇದ್ದು ಈ ಮಹಾಸತಿ ಕಲ್ಲಿನ ಮೇಲ್ಭಾಗದಲ್ಲಿ ಸೂರ್ಯ ಚಂದ್ರರನ್ನು ಕೆತ್ತಲಾಗಿದೆ.

**ತುರುಗೋಳ್ ವೀರಗಲ್ಲು:-** ಈಶ್ವರ ದೇವಾಲಯದ ಮುಂಭಾಗದಲ್ಲಿರುವ ಈ ಮಹಾಸತಿ ಕಲ್ಲಿನ ಪಕ್ಕದಲ್ಲಿ ಮತ್ತೊಂದು ತುರುಗೋಳ್ ವೀರಗಲ್ಲಿದೆ. ಪ್ರಾಚೀನ ಕಾಲದಲ್ಲಿ ಗೋವುಗಳನ್ನು ಕದಿಯುತ್ತಿದ್ದ ಕಳ್ಳರ ವಿರುದ್ಧ ಗೋರಕ್ಷಣೆಗಾಗಿ ಯುದ್ಧ ಮಾಡಿ ಮಡಿದ ವೀರರ ಸ್ಮರಣಾರ್ಥವಾಗಿ ಸ್ಥಾಪಿಸಲಾಗುತ್ತಿದ್ದ ವೀರಗಲ್ಲುಗಳನ್ನು ತುರುಗೋಳ್ ವೀರಗಲ್ಲು ಎಂದು ಕರೆಯಲಾಗುತ್ತಿತ್ತು. ತುರುಗೋಳ್ ವೀರಗಲ್ಲಿನ ಶಿಲ್ಪದಲ್ಲಿ ವೀರನ ಬೆನ್ನಹಿಂದೆ ಹಸುಗಳನ್ನು ಹಿಂದಕ್ಕೆ ಮುಖಮಾಡಿರುವಂತೆ ಕಂಡರಿಸಲಾಗಿರುತ್ತದೆ. ವೀರನು ಆ ಹಸುಗಳನ್ನು ರಕ್ಷಿಸಿ ಹಿಂದಕ್ಕೆ ಕಳುಹಿಸಿದನು ಎಂಬ ಅರ್ಥವನ್ನು ಈ ಶಿಲ್ಪವು ಸಂಕೇತಿಸುತ್ತದೆ. ಈ ವೀರಗಲ್ಲು ಸುಮಾರು 5 ಅಡಿ ಎತ್ತರವಾಗಿದ್ದು, ಮೂರು ಅಡಿ ಅಗಲವಾಗಿದ್ದು ಇದನ್ನು ಬಳಪದ ಕಲ್ಲಿನಲ್ಲಿ ರಚಿಸಲಾಗಿದೆ. ಇದರಲ್ಲಿ ಮೂರು ಹಂತಗಳಲ್ಲಿ ಶಿಲ್ಪಗಳನ್ನು ಬಿಡಿಸಲಾಗಿದೆ. **(ಚಿ.ಸಂ.152)** ಮೊದಲನೆಯ ಹಂತದಲ್ಲಿ ಗೋವುಗಳ್ಳರ ವಿರುದ್ಧ ವೀರಪುರುಷನೋರ್ವನು ಗೋವುಗಳನ್ನು ರಕ್ಷಿಸಲು ಹೊರಟು ಎಡಗೈಯಲ್ಲಿ ಬಿಲ್ಲು ಮತ್ತು ಬಲಗೈಯಲ್ಲಿ ಬಾಣ ಹಿಡಿದು ಬಾಣವನ್ನು ಬಿಲ್ಲಿಗೆ ಹೂಡುವುದಕ್ಕೆ ಸಿದ್ಧವಾಗಿರುವಂತೆ ಕೆತ್ತಲಾಗಿದೆ. ಎದುರಾಳಿಗಳು ಸಹ ಯುದ್ಧದಲ್ಲಿ ತೊಡಗಿದ್ದ ಪುರುಷನೋರ್ವನು ಸತ್ತು ಕೆಳಗೆ ಅಂಗಾತ ಬಿದ್ದಿದ್ದಾನೆ. ವೀರಪುರುಷನಿಂದ ರಕ್ಷಿಸಲ್ಪಟ್ಟ ಗೋವುಗಳು ತಮ್ಮ ಪೂರ್ವನೆಲೆಯ ಸ್ಥಳಗಳಿಗೆ ಮುಖಮಾಡಿ ಹಿಂದಿರುಗುವಂತಿದೆ. ಎರಡನೆಯ ಹಂತದಲ್ಲಿ ಈ ಕಾದಾಟದಲ್ಲಿ ಹೋರಾಡಿ ವೀರಮರಣ ಹೊಂದಿದ ವೀರನನ್ನು ಪಲ್ಲಕ್ಕಿಯಲ್ಲಿ ಗಂಧರ್ವ ಕನ್ಯೆಯರು ಕೂರಿಸಿಕೊಂಡು ದೇವಲೋಕಕ್ಕೆ ಕರೆದೊಯ್ಯುತ್ತಿರುವ ದೃಶ್ಯವನ್ನು ರಚಿಸಲಾಗಿದೆ. ಮೂರನೆ ಹಂತದ ಮಂಟಪದಲ್ಲಿ ಶಿವಲಿಂಗ, ಶಿವಲಿಂಗಕ್ಕೆ ಪೂಜೆ ಸಲ್ಲಿಸುತ್ತಿರುವ ಪುರೋಹಿತರು, ವೀರಮರಣ ಹೊಂದಿದ ವೀರನು ಶಿವಲಿಂಗಕ್ಕೆ ನಮಿಸುತ್ತಿದ್ದಾನೆ. ಹಾಗೂ ಶಿವನ ವಾಹನ ನಂದಿಯನ್ನು ಮುಂದೆ ಇರಿಸಲಾಗಿದೆ. ಇವರ ಮೇಲ್ಭಾಗದಲ್ಲಿ ಬಲಭಾಗದಲ್ಲಿ ಸೂರ್ಯ ಎಡಭಾಗದಲ್ಲಿ ಚಂದ್ರರನ್ನು ಕೆತ್ತಲಾಗಿದೆ.

**ಚಿಕ್ಕಮಲ್ಲಿಗೆರೆಯ ಕಲ್ಲೇಶ್ವರ ದೇವಾಲಯದ ಪಕ್ಕದಲ್ಲಿರುವ ವೀರಗಲ್ಲು:-** ತುರುವೇಕೆರೆ ತಾಲೂಕು ಕೇಂದ್ರದಿಂದ ಸಂಪಿಗೆ ಗ್ರಾಮಕ್ಕೆ ತೆರಳುವ ರಸ್ತೆಯಲ್ಲಿ ತುರುವೇಕೆರೆಯಿಂದ 10 ಕಿ.ಮೀ. ದೂರದಲ್ಲಿ ಚಿಕ್ಕಮಲ್ಲಿಗೆರೆ ಕಂಡುಬರುತ್ತದೆ. ಈ ಗ್ರಾಮದ ಈಶಾನ್ಯ ಭಾಗಕ್ಕೆ ತೋಟವೊಂದರಲ್ಲಿ

ಶಿಥಿಲಾವಸ್ಥೆಯಲ್ಲಿರುವ ಒಂದು ಸಣ್ಣ ಈಶ್ವರ ಗುಡಿ ಇದೆ. ಈ ಗುಡಿಯ ಬಲಭಾಗದಲ್ಲಿ ಪೂರ್ವಾಭಿಮುಖವಾಗಿ ಒಂದು ವೀರಗಲ್ಲನ್ನು ನಿಲ್ಲಿಸಲಾಗಿದೆ. **(ಚಿ.ಸಂ.153)** ಈ ವೀರಗಲ್ಲನ್ನು ಸುಮಾರು 4 ಅಡಿ ಎತ್ತರವಿರುವ ಬಳಪದ ಕಲ್ಲಿನಲ್ಲಿ ರಚಿಸಲಾಗಿದೆ. ಮೂರು ಅಡಿ ಅಗಲ, 10 ಇಂಚು ದಪ್ಪವಿರುವ ಈ ವೀರಗಲ್ಲಿನಲ್ಲಿ ಮೂರು ಹಂತಗಳಲ್ಲಿ ಶಿಲ್ಪಗಳನ್ನು ಕೆತ್ತಲಾಗಿದೆ. ಕೆಳಹಂತದಲ್ಲಿ ನಾಲ್ಕು ಜನ ವೀರ ಪುರುಷರು ಬಿಲ್ಲು, ಬಾಣ ಮತ್ತು ಕತ್ತಿಯನ್ನು ಹಿಡಿದು ನಿಂತಿದ್ದಾರೆ. ಇದಕ್ಕೂ ಮುನ್ನ ಹೋರಾಟದಲ್ಲಿ ತೊಡಗಿದ ವೀರಪುರುಷನು ಇವರ ಕಾಲ ಕೆಳಗೆ ಬೋರಲಾಗಿ ಮಲಗಿ ಸಾವನ್ನಪ್ಪಿ ಬಿದ್ದಿದ್ದಾನೆ. ವೀರನು ಕತ್ತಿಯಿಂದ ಎಡಭಾಗದಲ್ಲಿರುವ ವೀರನ ಹೊಟ್ಟೆಗೆ ಚುಚ್ಚುತ್ತಿದ್ದಾನೆ ಎಡಗೈಯನ್ನು ಕತ್ತಿಯಿಂದ ಚುಚ್ಚುತ್ತಿರುವ ವೀರನ ಭುಜದ ಮೇಲಿರಿಸಿದ್ದಾನೆ. ಈ ವೀರರ ಮೈಮೇಲೆ ವಿವಿಧ ಬಗೆಯ ವಸ್ತ್ರಾಭರಣಗಳು ಕಂಡುಬರುತ್ತವೆ. ವೀರರು ತಮ್ಮ ತಲೆಯ ಕೂದಲನ್ನು ತುರುಬಿನಂತೆ ಎರಡು ಭಾಗಮಾಡಿ ಕಟ್ಟಿದ್ದಾರೆ. ಇಬ್ಬರು ಪುರುಷರ ಕಿವಿಯಲ್ಲಿ ಕುಂಡಲಿಗಳನ್ನು ಕಾಣಬಹುದು. ಈ ವೀರರ ಎರಡೂ ಕಡೆ ಸಹ ವೀರ ಸೈನಿಕರು ಬಿಲ್ಲುಗಳನ್ನು ಹಿಡಿದು ನಿಂತಿದ್ದಾರೆ.

ಎರಡನೆಯ ಹಂತದಲ್ಲಿ ಈ ಕಾದಾಟದಲ್ಲಿ ಮಡಿದ ವೀರನನ್ನು ಪಲ್ಲಕ್ಕಿಯಲ್ಲಿ ಪದ್ಮಾಸನದಲ್ಲಿ ಕೂರಿಸಿಕೊಂಡು ಗಂಧರ್ವ ಕನ್ಯೆಯರು ಚಾಮರವನ್ನು ಹಿಡಿದು ದೇವಲೋಕಕ್ಕೆ ಕರೆದೊಯ್ಯುತ್ತಿರುವ ದೃಶ್ಯವನ್ನು ರಚಿಸಲಾಗಿದೆ. ದೇವಲೋಕದಲ್ಲಿ ಪುರೋಹಿತನೋರ್ವನು ಶಿವಲಿಂಗಕ್ಕೆ ಅಭಿಷೇಕ ಮಾಡುತ್ತಿದ್ದಾನೆ. ಇವನ ಹಿಂಬದಿಯಲ್ಲಿ ವೀರಮರಣವನ್ನಪ್ಪಿದ ಪುರುಷನು ಪದ್ಮಾಸನದಲ್ಲಿ ಕುಳಿತು ಲಿಂಗಕ್ಕೆ ಕೈಮುಗಿಯುತ್ತಿರುವಂತೆ ಕೆತ್ತಲಾಗಿದೆ. ಈ ವೀರಗಲ್ಲಿನ ಎಡಭಾಗವು ಮುರಿದು ಹೋಗಿದೆ. ಪಕ್ಕದಲ್ಲಿ ಶಾಸನಗಲ್ಲೊಂದು ಕಂಡುಬಂದಿದ್ದು, ಇದು ಸಂಪೂರ್ಣವಾಗಿ ಅಳಿಸಿ ಹೋಗಿದೆ.

**ಚಿಕ್ಕ ಶೆಟ್ಟಿಕೆರೆ ವೀರಗಲ್ಲುಗಳು:-** ಮಾಯಾಸಂದ್ರದಿಂದ ನಾಗಮಂಗಲ ರಸ್ತೆಯಲ್ಲಿ ಚಿಕ್ಕಶೆಟ್ಟಿಕೆರೆ ಗ್ರಾಮ ಕಂಡುಬರುತ್ತದೆ. ಈ ಗ್ರಾಮದ ಕೇಶವ ದೇವಾಲಯದ ಪೂರ್ವದ ಭಾಗದಲ್ಲಿ ಸುಮಾರು ಐದು ವೀರಗಲ್ಲುಗಳನ್ನು ತಂದು ಇಲ್ಲಿ ಇಡಲಾಗಿದೆ. ಇವುಗಳಲ್ಲಿ ಮಹಾಸತಿ ಕಲ್ಲು ಮತ್ತು ವೀರಗಲ್ಲುಗಳು ಸಹ ಕಂಡುಬರುತ್ತದೆ ಹಾಗೂ ಭಗ್ನವಾಗಿರುವ ಬಳಪದ ಕಲ್ಲಿನಲ್ಲಿ ರಚಿಸಲಾದ ನಂದಿಯ ರುಂಡ ಮತ್ತು ರಥದ ಕಲ್ಲಿನ ಗಾಲಿಗಳನ್ನು ಸಹ ಇರಿಸಲಾಗಿದೆ.

**ಒಂದನೇ ಮಹಾಸತಿ ಕಲ್ಲು:-** ಬಳಪದ ಕಲ್ಲಿನಲ್ಲಿ ಕೊರೆದು ರಚಿಸಲಾಗಿರುವ ಈ ಮಹಾಸತಿ ಕಲ್ಲು ಸುಮಾರು 5 ಅಡಿ ಎತ್ತರವಾಗಿದ್ದು, ಎರಡೂವರೆ ಅಡಿ ಅಗಲವಾಗಿದೆ ಹಾಗೂ ಒಂದು ಅಡಿ

ದಪ್ಪವಾಗಿದೆ. ಇದರಲ್ಲಿ ಮೂರು ಹಂತಗಳಲ್ಲಿ ಶಿಲ್ಪಗಳನ್ನು ಕೆತ್ತಲಾಗಿದೆ. **(ಚಿ.ಸಂ.154)** ಕೆಳಗಿನ ಹಂತದಲ್ಲಿ ಸ್ತ್ರೀಪುರುಷರ ಕೆತ್ತನೆಗಳಿವೆ. ಪುರುಷನು ಬಲಗೈಯನ್ನು ಆಶೀರ್ವಧಿಸುತ್ತಿರುವಂತೆ ಅಭಯಹಸ್ತವನ್ನು ಹೊಂದಿದ್ದಾನೆ ತನ್ನ ಎಡಗೈಯನ್ನು ಕೆಳಗೆ ಇಳಿಬಿಟ್ಟಿದ್ದಾನೆ. ಇವನ ಮೈಮೇಲೆ ವಿವಿಧ ಬಗೆಯ ಆಭರಣಗಳು ಮತ್ತು ವಸ್ತ್ರಗಳನ್ನು ಧರಿಸಿದ್ದಾನೆ. ಈ ಪುರುಷನ ಎಡಭಾಗದಲ್ಲಿ ನಿಂತಿರುವ ಅವನ ಮಡದಿಯು ಎಡಗೈಯನ್ನು ಮೇಲಕ್ಕೆ ಎತ್ತಿ ಆಶೀರ್ವದಿಸಲು ಕೆತ್ತಲ್ಪಡಬೇಕಾಗಿದ್ದ ಹಸ್ತದ ಭಾಗವನ್ನು ಕೆತ್ತದೆ ಹಾಗೇ ಉಳಿಸಲಾಗಿದೆ. ಮೈಮೇಲೆ ವಿವಿಧ ಬಗೆಯ ವಸ್ತ್ರಾಭರಣ ಇದ್ದು ಕೇಶರಾಶಿಯನ್ನು ಅಲಂಕರಿಸಲಾಗಿದೆ. ಕಿವಿಯ ಓಲೆ, ಕಂಠಾಹಾರ, ಡಾಬು, ತೋಳಬಂಧಿ ಮುಂತಾದ ಆಭರಣಗಳನ್ನು ಧರಿಸಿದ್ದಾಳೆ. ಆದರೆ ಕಾಲಪುರುಷನ ಹಾವಳಿಯಿಂದ ಮುಖಭಾಗವು ಸವೆದು ಹೋಗಿದೆ. ಎರಡನೆಯ ಹಂತದಲ್ಲಿ ಮರಣವನ್ನಪ್ಪಿದ ಈ ದಂಪತಿಗಳನ್ನು ಗಂಧರ್ವ ಕನ್ಯೆಯರು ಸ್ವರ್ಗಕ್ಕೆ ಕರೆದೊಯ್ಯುತ್ತಿರುವ ದೃಶ್ಯವಿದೆ. ಮೂರನೇ ಹಂತದಲ್ಲಿ ಶಿವಲಿಂಗ, ಶಿವಲಿಂಗಕ್ಕೆ ಕೈಮುಗಿದು ಪ್ರಾರ್ಥಿಸುತ್ತಿರುವ ದಂಪತಿ ಇವರ ಮೇಲ್ಭಾಗದಲ್ಲಿ ಸೂರ್ಯನ ಚಿಹ್ನೆ ಕಂಡುಬರುತ್ತದೆ.

**ಎರಡನೇ ವೀರಗಲ್ಲು:-** ಈ ವೀರಗಲ್ಲನ್ನು ಬಳಪದ ಕಲ್ಲಿನಲ್ಲಿ ರಚಿಸಲಾಗಿದ್ದು, ಒಂದೇ ಒಂದು ದೃಶ್ಯವನ್ನು ಕಾಣಬಹುದು. ಈ ದೃಶ್ಯದಲ್ಲಿ ವೀರ ಪುರುಷನೋರ್ವನು ಕುದುರೆಯನ್ನೇರಿ ಬಲಗೈಯಲ್ಲಿ ಕತ್ತಿ ಹಿಡಿದು ಮೇಲಕ್ಕೆತ್ತಿ ಮುನ್ನಡೆಯುತ್ತಿದ್ದಾನೆ. ಹಿಂಭಾಗ ಸ್ತ್ರೀಯೋರ್ವಳು ಕೈಮುಗಿದು ನಿಂತಿದ್ದಾಳೆ. ಇವರ ಮೇಲೆ ಸೂರ್ಯನನ್ನು ಬಿಡಿಸಲಾಗಿದೆ. **(ಚಿ.ಸಂ.155)**

**ಮೂರನೇ ವೀರಗಲ್ಲು:-** ಈ ವೀರಗಲ್ಲನ್ನು ಸಹ ಬಳಪದ ಕಲ್ಲಿನಲ್ಲಿ ರಚಿಸಲಾಗಿದೆ. ಸುಮಾರು 4 ಅಡಿ ಎತ್ತರವಾಗಿದ್ದು, 3 ಅಡಿ ಅಗಲವಾಗಿದೆ. ಇದರಲ್ಲಿ ಮೂರು ಹಂತಗಳಲ್ಲಿ ಶಿಲ್ಪಗಳನ್ನು ಕಂಡರಿಸಲಾಗಿದೆ. ಕೆಳಹಂತದಲ್ಲಿ ಕುದುರೆಯನ್ನೇರಿ ಹೊರಟ ವೀರಪುರುಷನು ಭರ್ಜಿಯನ್ನು ಹಿಡಿದು ಮೇಲಕ್ಕೆ ಎತ್ತಿದ್ದಾನೆ. ಈ ವೀರಪುರುಷನ ಹಿಂಬದಿಯಲ್ಲಿ ಛತ್ರಿ ಹಿಡಿದು ಸೇವಕ ಮತ್ತು ಅವನ ಹಿಂಬದಿಯಲ್ಲಿ ಸೈನಿಕರನ್ನು ಕಾಣಬಹುದು. ಕುದುರೆಯ ಮುಂಭಾಗದಲ್ಲಿ ಎದುರಾಳಿ ಇಬ್ಬರು ಪುರುಷರಿದ್ದಾರೆ. ಎರಡನೇ ಹಂತದಲ್ಲಿ ವೀರ ಮರಣವನ್ನಪ್ಪಿದ ಪುರುಷನು ಕೈಮುಗಿಯುತ್ತಾ ಪದ್ಮಾಸನದಲ್ಲಿ ಮಂಟಪವೊಂದರ ಒಳಗೆ ಕುಳಿತಿದ್ದಾನೆ. ಗಂಧರ್ವ ಕನ್ಯೆಯರು ದೇವಲೋಕಕ್ಕೆ ಹುತಾತ್ಮನನ್ನು ಕರೆದೊಯ್ಯುತ್ತಿರುವ ದೃಶ್ಯವನ್ನು ರಚಿಸಲಾಗಿದೆ. ಮೂರನೇ ಹಂತದಲ್ಲಿ ಶಿವಲಿಂಗಕ್ಕೆ ಪೂಜೆ ಸಲ್ಲಿಸುತ್ತಿರುವ ಪುರೋಹಿತ, ನಂದಿ, ಎಡಭಾಗದಲ್ಲಿ ಸೂರ್ಯ ಚಂದ್ರರಿದ್ದಾರೆ. **(ಚಿ.ಸಂ.156)**

**ನಾಲ್ಕನೇ ವೀರಗಲ್ಲು:–** 3ನೇ ವೀರಗಲ್ಲಿನ ಎಡಭಾಗದಲ್ಲಿ ಮತ್ತೊಂದು ವೀರಗಲ್ಲನ್ನು ಇರಿಸಲಾಗಿದೆ. ಇದು ಎರಡು ಅಡಿ ಎತ್ತರವಾಗಿದ್ದು, ಒಂದೂವರೆ ಅಡಿ ಅಗಲವಾಗಿದ್ದು, ಇದು ಸಹ ಬಳಪದ ಕಲ್ಲಿನ ರಚನೆಯಾಗಿದೆ. ಇದರಲ್ಲಿ ಒಂದೇ ಒಂದು ದೃಶ್ಯ ಸನ್ನಿವೇಶವನ್ನು ಬಿಡಿಸಲಾಗಿದೆ. ಈ ದೃಶ್ಯದಲ್ಲಿ ವೀರಪುರುಷನೋರ್ವನು ಬಿಲ್ಲು ಬಾಣ ಹಿಡಿದುಕೊಂಡಿದ್ದಾನೆ. ಸೊಂಟಕ್ಕೆ ಭರ್ಜಿಯನ್ನು ಸಿಕ್ಕಿಸಿಕೊಂಡಿರುವ ಈ ವೀರನ ಹಿಂಬದಿಯಲ್ಲಿ ಸ್ತ್ರೀಯೋರ್ವಳು ನಿಂತಿದ್ದಾಳೆ.

**ಐದನೇ ವೀರಗಲ್ಲು:–** ಮೇಲ್ಕಂಡ ವೀರಗಲ್ಲುಗಳ ಎಡಭಾಗದಲ್ಲಿ ಮತ್ತೊಂದು ವೀರಗಲ್ಲು ಕಂಡುಬರುತ್ತದೆ. ಈ ವೀರಗಲ್ಲು 5 ಅಡಿ ಎತ್ತರವಿರುವ ಬಳಪದ ಕಲ್ಲಿನಲ್ಲಿ ರಚಿಸಲಾಗಿದೆ ಎರಡೂವರೆ ಅಡಿ ಅಗಲ ಒಂದೂವರೆ ಅಡಿ ದಪ್ಪವಿದ್ದು, ಇದರಲ್ಲಿ ನಾಲ್ಕು ದೃಶ್ಯ ಸನ್ನಿವೇಶಗಳು ಕಂಡುಬರುತ್ತವೆ. ಕೆಳಗಿನ ಹಂತದಲ್ಲಿ ಇಬ್ಬರು ಕುದುರೆ ಸವಾರರು ಇಬ್ಬರು ವೀರ ಯೋಧರೊಂದಿಗೆ ಹೋರಾಟದಲ್ಲಿ ತೊಡಗಿದ್ದಾರೆ. ಕುದುರೆ ಸವಾರರ ಕಾಲ ಕೆಳಗೆ ಪುರುಷನೋರ್ವ ಬಿದ್ದಿದ್ದಾನೆ. ಕುದುರೆ ಸವಾರರ ಹಿಂಬದಿಯಲ್ಲಿ ಕತ್ತಿ ಹಿಡಿದು ನಿಂತಿರುವ ಪುರುಷನಿದ್ದಾನೆ. ಇವರ ಮೇಲ್ಭಾಗದಲ್ಲಿ ಆನೆಗಳನ್ನು ಏರಿ ಬಂದಂತಹ ಸೈನಿಕರು ಶತ್ರುಗಳ ಮೇಲೆ ಯುದ್ಧದಲ್ಲಿ ನಿರತರಾಗಿದ್ದಾರೆ. ಶತ್ರು ಸೈನಿಕರು ಕತ್ತಿ ಗುರಾಣ ಹಿಡಿದು ಹೋರಾಡುತ್ತಿರುವ ದೃಶ್ಯವಿದೆ.

**ಎರಡನೇ ಹಂತ**

ಈ ಹಂತದಲ್ಲಿ ವೀರಾವೇಶದಿಂದ ಹೋರಾಡಿ ವೀರಮರಣವನ್ನಪ್ಪಿದ ದಂಪತಿಗಳನ್ನು ಅಡ್ಡ ಪಲ್ಲಕ್ಕಿಯಲ್ಲಿ ಕೂರಿಸಿಕೊಂಡು ದೇವಲೋಕಕ್ಕೆ ಕರೆದೊಯ್ಯುತ್ತಿರುವ ಗಂಧರ್ವ ಕನ್ಯೆಯರ ಶಿಲ್ಪಗಳು ಸುಂದರವಾಗಿ ಮೂಡಿ ಬಂದಿದೆ. ಇದೇ ಪಟ್ಟಿಕೆಯ ಮೇಲ್ಭಾಗದಲ್ಲಿ ವೀರ ಪುರುಷನೋರ್ವನು ಮುಂಭಾಗದಲ್ಲಿ ಪದ್ಮಾಸನದಲ್ಲಿ ಕುಳಿತಿರುವ ಸ್ತ್ರೀಯ ರುಂಡವನ್ನು ಕಡಿದು ತನ್ನ ಎಡಗೈಯಲ್ಲಿ ಹಿಡಿದುಕೊಂಡಿದ್ದಾನೆ. ಪದ್ಮಾಸನದಲ್ಲಿ ಕುಳಿತಿರುವ ಸ್ತ್ರೀಯ ಮುಂಭಾಗದಲ್ಲಿ ಪುರುಷನ ರುಂಡವಿದೆ. ಈ ದೃಶ್ಯವು ಕುತೂಹಲದಿಂದ ಕೂಡಿದ್ದು, ಸಹಜವಾಗಿಯೇ ಮೂಡಿಬಂದಿದೆ. ಇವರ ಮೇಲೆ ಮೂರು ಅರಳಿದ ಪದ್ಮಪುಷ್ಪಗಳನ್ನು ಬಿಡಿಸಲಾಗಿದೆ.

**ಮೂರನೇ ಹಂತ**

ಮೇಲ್ಭಾಗದಲ್ಲಿ ಶಿವಲಿಂಗ, ಈ ಶಿವಲಿಂಗಕ್ಕೆ ಘಂಟೆ ಹಿಡಿದುಕೊಂಡು ಮಂಗಳಾರತಿ ಮಾಡುತ್ತಿರುವ ಪುರೋಹಿತ, ಪುರೋಹಿತನ ಹಿಂಭಾಗದಲ್ಲಿ ನಂದಿಯ ಕೆತ್ತನೆಯನ್ನು ಕಾಣಬಹುದಾಗಿದೆ. ಶಿವಲಿಂಗದ ಪಕ್ಕದಲ್ಲಿ ವೀರಪುರುಷನು ತನ್ನ ಪತ್ನಿಯನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಶಿವಲಿಂಗಕ್ಕೆ ನಮಿಸುತ್ತಿರುವ ಚಿತ್ರಣವಿದೆ. ಇವರ ಮೇಲ್ಭಾಗದಲ್ಲಿ ಸೂರ್ಯ, ಚಂದ್ರರನ್ನು ಕೆತ್ತಲಾಗಿದೆ. ಇವರ ಮಧ್ಯದಲ್ಲಿ ಪುಷ್ಪಗಳ ಗೊಂಚಲನ್ನು ಕೆತ್ತನೆ ಮಾಡಲಾಗಿದ್ದು, ಬಳ್ಳಿಸುರುಳಿಗಳ ಅಲಂಕರಣವಿದೆ.

**ಚಿಕ್ಕೋನಹಳ್ಳಿ ಗೇಟ್ ವೀರಗಲ್ಲುಗಳು:-** ತುರುವೇಕೆರೆ ತಾಲೂಕು ಕೇಂದ್ರದಿಂದ ಮಾಯಸಂದ್ರಕ್ಕೆ ಹೋಗುವ ರಸ್ತೆಯಲ್ಲಿ ಚಿಕ್ಕೋನಹಳ್ಳಿ ಬಸ್‌ನಿಲ್ದಾಣ ಕಂಡುಬರುತ್ತದೆ. ಈ ಗ್ರಾಮದಲ್ಲಿರುವ ಹಿರಿಯ ಪ್ರಾಥಮಿಕ ಶಾಲೆಯ ಮುಂಭಾಗ ದಕ್ಷಿಣಾಭಿಮುಖವಾಗಿ ಎರಡು ವೀರಗಲ್ಲುಗಳನ್ನು ನಿಲ್ಲಿಸಲಾಗಿದೆ. **(ಚಿ.ಸಂ.157)**

**ಮೊದಲನೇ ವೀರಗಲ್ಲು:-** ಈ ವೀರಗಲ್ಲು ಸುಮಾರು 4 ಅಡಿ ಎತ್ತರವಾಗಿದ್ದು, 3 ಅಡಿ ಅಗಲವಾಗಿದೆ ಮತ್ತು 10 ಇಂಚು ದಪ್ಪವಾಗಿದೆ. ಇದರಲ್ಲಿ ಮೂರು ಹಂತಗಳಲ್ಲಿ ದೃಶ್ಯ ಸನ್ನಿವೇಶಗಳನ್ನು ಕಂಡರಿಸಲಾಗಿದೆ. ಕೆಳಹಂತದಲ್ಲಿ ಕುದುರೆಯನ್ನೇರಿ ಬಂದ ವೀರಪುರುಷರು ಹೋರಾಟದಲ್ಲಿ ತೊಡಗಿದ್ದಾರೆ. ಒಬ್ಬ ಪುರುಷನು ವೀರಮರಣವನ್ನಪ್ಪಿ ಕುದುರೆಗಳ ಕಾಲ್ತುಳಿತಕ್ಕೆ ಸಿಕ್ಕಿ ಕೆಳಗೆ ಮುಖ ಮೇಲ್ಮಾಡಿ ಬಿದ್ದಿದ್ದಾನೆ.

ಎರಡನೇ ಹಂತದಲ್ಲಿ ಮರಣ ಹೊಂದಿದ ಸ್ತ್ರೀಪುರುಷನನ್ನು ಪಲ್ಲಕ್ಕಿಯಲ್ಲಿ ಕೂರಿಸಿಕೊಂಡು ಸ್ವರ್ಗಕ್ಕೆ ಗಂಧರ್ವ ಕನ್ಯೆಯರು ಕರೆದೊಯ್ಯುತ್ತಿರುವ ದೃಶ್ಯವಿದೆ. ಮೇಲ್ಭಾಗದಲ್ಲಿ ದೇವಲೋಕದಲ್ಲಿರುವ ಶಿವಲಿಂಗ, ಶಿವಲಿಂಗಕ್ಕೆ ಪೂಜೆ ಸಲ್ಲಿಸುತ್ತಿರುವ ಪುರೋಹಿತ ಹಾಗೂ ವೀರಮರಣವನ್ನಪ್ಪಿದ ದಂಪತಿಗಳು ಶಿವಲಿಂಗಕ್ಕೆ ಕೈಮುಗಿದು ಕುಳಿತಿರುವಂತೆ ರಚಿಸಲಾಗಿದೆ. ನಂದಿ, ಸೂರ್ಯನ ಚಿಹ್ನೆಗಳು ಕಂಡುಬರುತ್ತವೆ. ಈ ವೀರಗಲ್ಲಿನ ಎಡಭಾಗದಲ್ಲಿ ಸುಮಾರು 2 ಅಡಿ ಎತ್ತರ ಒಂದೂವರೆ ಅಡಿ ಅಗಲವಾಗಿರುವ ಒಂದು ವೀರಗಲ್ಲು ಇದ್ದು, ಇದರಲ್ಲಿ ಬಲಭಾಗದಲ್ಲಿ ಗೋವುಗಳು, ಅವುಗಳನ್ನು ರಕ್ಷಣೆ ಮಾಡುತ್ತಿರುವ ಸ್ತ್ರೀಪುರುಷರ ಕೆತ್ತನೆಗಳಿವೆ. ಮೇಲ್ಭಾಗದಲ್ಲಿ ದೇವಲೋಕದಲ್ಲಿರುವ ಶಿವಲಿಂಗ ಮತ್ತು ನಂದಿ,

ಶಿವಲಿಂಗಕ್ಕೆ ಪೂಜೆ ಸಲ್ಲಿಸುತ್ತಿರುವ ಪುರೋಹಿತರಿದ್ದಾರೆ. ಇವರ ಮೇಲ್ಭಾಗದಲ್ಲಿ ಸೂರ್ಯ ಚಂದ್ರರನ್ನು ಬಿಡಿಸಲಾಗಿದೆ.

**ದೊಡ್ಡೇರಿ ವೀರಗಲ್ಲುಗಳು:–** ತುರುವೇಕೆರೆ ತಾಲೂಕು ಕೇಂದ್ರದಿಂದ 25 ಕಿ.ಮೀ. ದೂರದಲ್ಲಿ ದೊಡ್ಡೇರಿ ಗ್ರಾಮವು ಕಂಡುಬರುತ್ತದೆ. ಊರಿನ ಮಧ್ಯಭಾಗದಲ್ಲಿ ಆಂಜನೇಯಸ್ವಾಮಿ ದೇವಾಲಯದ ಬಲಭಾಗಕ್ಕೆ ಅರಳೀಮರದ ಕೆಳಗೆ ಪೂರ್ವಾಭಿಮುಖವಾಗಿ ಸುಮಾರು ಎಂಟು ವೀರಗಲ್ಲುಗಳನ್ನು ಸಾಲಾಗಿ ನಿಲ್ಲಿಸಲಾಗಿದೆ. **(ಚಿ.ಸಂ.158)**

**ಒಂದನೆಯ ವೀರಗಲ್ಲು:–** ಈ ವೀರಗಲ್ಲನ್ನು ಬಳಪದ ಕಲ್ಲಿನಲ್ಲಿ ರಚಿಸಲಾಗಿದ್ದು, ಸುಮಾರು 4 ಅಡಿ ಎತ್ತರವಿದ್ದಂತೆ ಕಂಡುಬರುತ್ತದೆ. ಆದರೆ ಭೂಮಿಯಲ್ಲಿ ಈ ವೀರಗಲ್ಲಿನ ಮುಕ್ಕಾಲು ಭಾಗ ಊತು ಹೋಗಿದೆ. ಈ ವೀರಗಲ್ಲಿನ ಸ್ಪಷ್ಟ ಚಿತ್ರಣ ನಮಗೆ ದೊರೆಯುವುದಿಲ್ಲ.

**ಎರಡನೆಯ ವೀರಗಲ್ಲು:–** ಸುಮಾರು 3 ಅಡಿ ಎತ್ತರ ಒಂದೂವರೆ ಅಡಿ ಅಗಲವಾಗಿದೆ. ಇದರಲ್ಲಿ ವೀರನೋರ್ವನು ಎಡಗಾಲನ್ನು ಹಿಂದಿಟ್ಟು ಬಲಗಾಲನ್ನು ಮುಂದಿಟ್ಟು ನಿಂತಿದ್ದಾನೆ. ಎಡಗೈಯಲ್ಲಿ ಗುರಾಣಿ ಹಿಡಿದು ಬಲಗೈಯಲ್ಲಿ ಕತ್ತಿಯನ್ನು ಮೇಲಕ್ಕೆತ್ತಿ ಯುದ್ಧಕ್ಕೆ ಸಜ್ಜಾಗಿದ್ದಾನೆ. ಇವನ ಹಿಂಬದಿಯಲ್ಲಿ ಸ್ತ್ರೀಯೋರ್ವಳು ಕೈಮುಗಿದು ನಿಂತಿದ್ದಾಳೆ. ಅಂತ್ಯದಲ್ಲಿ ಸೂರ್ಯನ ಚಿಹ್ನೆ ಇದೆ.

**ಮೂರನೆಯ ವೀರಗಲ್ಲು:–** ಈ ವೀರಗಲ್ಲು ಬಳಪದ ಕಲ್ಲಿನ ರಚನೆಯಾಗಿದ್ದು, 3 ಅಡಿ ಎತ್ತರ 2 ಅಡಿ ಅಗಲವನ್ನು ಹೊಂದಿದ್ದು, 5 ಇಂಚು ದಪ್ಪವಾಗಿದೆ. ಈ ವೀರಗಲ್ಲಿನಲ್ಲಿ ವೀರಪುರುಷ ಮತ್ತು ಆತನ ಪತ್ನಿಯ ಶಿಲ್ಪಗಳನ್ನು ಬಿಡಿಸಲಾಗಿದೆ. ವೀರಪುರುಷನು ಬಲಗೈಲಿ ಕತ್ತಿ ಹಿಡಿದು ಮೇಲಕ್ಕೆತ್ತಿದ್ದಾನೆ. ಎಡಗೈಯಲ್ಲಿ ಗುರಾಣಿ ಹಿಡಿದಿದ್ದಾನೆ. ಮೈಮೇಲೆ ವಿವಿಧ ಬಗೆಯ ವಸ್ತ್ರಾಭರಣಗಳು ಕಂಡುಬರುತ್ತವೆ. ಇವನ ಎಡಬದಿಯಲ್ಲಿ ನಿಂತಿರುವ ಆತನ ಮಡದಿ ಬಲಗೈಯನ್ನು ಮೇಲಕ್ಕೆತ್ತಿ ತನ್ನ ಪತಿಯನ್ನು ಯುದ್ಧಕ್ಕೆ ಕಳುಹಿಸುತ್ತಿರುವಂತೆ ರಚಿಸಲಾಗಿದೆ. ಈ ಸ್ತ್ರೀಯ ಮೈಮೇಲೆ ವಸ್ತ್ರಾಭರಣಗಳಿವೆ. ಕೇಶಾಲಂಕಾರ ಸುಂದರವಾಗಿದ್ದು, ಮೇಲ್ಭಾಗದಲ್ಲಿ ಸೂರ್ಯ ಚಂದ್ರರನ್ನು ಬಿಡಿಸಲಾಗಿದೆ.

**ನಾಲ್ಕನೆಯ ವೀರಗಲ್ಲು:–** ಈ ವೀರಗಲ್ಲನ್ನು ಬೆಣಚು ಕಲ್ಲಿನಲ್ಲಿ ರಚಿಸಲಾಗಿದ್ದು, ಇದು 3 ಅಡಿ ಎತ್ತರ 2 ಅಡಿ ಅಗಲವಾಗಿದೆ. ಒಂದೇ ಒಂದು ದೃಶ್ಯಾವಳಿ ಇದ್ದು ಸ್ತ್ರೀಯೋರ್ವಳು ತನ್ನ ಬಲಗೈಯಲ್ಲಿ ಕತ್ತಿ ಹಿಡಿದು ಹೋರಾಡುತ್ತಿರುವಂತೆ ಕೆತ್ತಲ್ಪಟ್ಟಿದ್ದು, ಈ ವೀರಸ್ತ್ರೀಯ

ಮುಂಭಾಗದಲ್ಲಿ ಮತ್ತೊಬ್ಬ ಸ್ತ್ರೀಯು ನಿಂತಿದ್ದಾಳೆ. ಈ ಶಿಲ್ಪಗಳು ಅಸ್ಪಷ್ಟವಾಗಿ ಗೋಚರ ವಾಗುತ್ತದೆ.

**ಐದನೆಯ ವೀರಗಲ್ಲು**:- ಈ ವೀರಗಲ್ಲುನ್ನು ಕಣಶಿಲೆಯಲ್ಲಿ ರಚಿಸಲಾಗಿದ್ದು, ಮೇಲ್ಭಾಗ ತೃಟಿತವಾಗಿದೆ. ಇದರಲ್ಲಿ ವೀರ ಪುರುಷನೋರ್ವನು ಭರ್ಜಿಯನ್ನು ಹಿಡಿದುಕೊಂಡಿದ್ದಾನೆ. ಬಲಗೈಯಲ್ಲಿ ತನ್ನ ಪತ್ನಿಯ ಸೊಂಟ ಹಿಡಿದು ಯುದ್ಧಕ್ಕೆ ಕರೆದೊಯ್ಯುತ್ತಿರುವಂತೆ ಕೆತ್ತಲಾಗಿದೆ. ಮೈಮೇಲೆ ವಿವಿಧ ಬಗೆಯ ವಸ್ತ್ರಾಭರಣಗಳಿವೆ.

**ಆರನೆಯ ವೀರಗಲ್ಲು**:- ವೀರಪುರುಷನ ಕೆತ್ತನೆಯೊಂದಿದ್ದು ದೃಶ್ಯವು ಅಸ್ಪಷ್ಟವಾಗಿದೆ.

**ಏಳನೆಯ ವೀರಗಲ್ಲು**:- ಈ ವೀರಗಲ್ಲನ್ನು ಕಣಶಿಲೆಯಲ್ಲಿ ರಚಿಸಲಾಗಿದ್ದು, ಇದರಲ್ಲಿ ಪುರುಷನೋರ್ವನು ಬಲಗೈಯಲ್ಲಿ ಆಯುಧ ಹಿಡಿದಿರುವಂತೆ ಕೆತ್ತಲಾಗಿದೆ. ಮೇಲ್ಭಾಗದಲ್ಲಿ ಶಿವಲಿಂಗ, ಶಿವಲಿಂಗದ ಮುಂದೆ ನಂದಿ, ವೀರಮರಣವನ್ನಪ್ಪಿದ ಪುರುಷನ ಶಿಲ್ಪ ಕಂಡುಬರುತ್ತದೆ.

**ಎಂಟನೆಯ ವೀರಗಲ್ಲು**:- ಈ ವೀರಗಲ್ಲನ್ನು ಬಳಪದ ಕಲ್ಲಿನಲ್ಲಿ ರಚಿಸಲಾಗಿದ್ದು, ಇದರಲ್ಲಿ ಕಂಡುಬರುವ ದೃಶ್ಯಾವಳಿಗಳು ಕಾಲಪುರುಷನ ಹಾವಳಿಗೆ ತುತ್ತಾಗಿ ಅಸ್ಪಷ್ಟವಾಗಿ ಕಾಣುತ್ತದೆ. ಇದರಲ್ಲಿರುವ ವೀರಪುರುಷನು ಬಲಗೈ ಮುಂದಿರಿಸಿ ಎಡಗೈಯಲ್ಲಿ ಆಯುಧ ಹಿಡಿದಿದ್ದಾನೆ.

**ಗೋಣಿ ತುಮಕೂರಿನ ವೀರಗಲ್ಲುಗಳು**:- ತುರುವೇಕೆರೆ ತಾಲ್ಲೂಕು ಕೇಂದ್ರದಿಂದ 12 ಕಿ.ಮೀ ದೂರದಲ್ಲಿ ಗೋಣಿ ತುಮಕೂರು ಗ್ರಾಮವು ಕಂಡುಬರುತ್ತದೆ. ಇಲ್ಲಿ ಪೂರ್ವಾಭಿಮುಖವಾಗಿ ಹೊಯ್ಸಳರ ಕಾಲದ ಕಲ್ಲೇಶ್ವರ ದೇವಾಲಯವು ನಿರ್ಮಾಣವಾಗಿದ್ದು, ದೇವಾಲಯದ ಬಲಭಾಗದಲ್ಲಿ ಅಂಚೆ ಕಛೇರಿಯ ಮುಂದೆ ಐದು ವೀರಗಲ್ಲು ಒಳಗೊಂಡಂತೆ ಮಹಾಸತಿ ಕಲ್ಲುಗಳನ್ನು ನಿಲ್ಲಿಸಲಾಗಿದೆ. **(ಚಿ.ಸಂ.159)**

**ಒಂದನೆಯ ವೀರಗಲ್ಲು**:- ಈ ವೀರಗಲ್ಲನ್ನು ಬಳಪದ ಕಲ್ಲಿನಲ್ಲಿ ರಚಿಸಲಾಗಿದ್ದು, ದುರಾದೃಷ್ಟವಶಾತ್ ಈ ವೀರಗಲ್ಲಿನ ಅರ್ಧಭಾಗ ಭೂಮಿಯಲ್ಲಿ ಊತು ಹೋಗಿದೆ. ಉಳಿದರ್ಧದ ಮೇಲ್ಭಾಗದಲ್ಲಿ ಅಶ್ವಾರೂಢನಾದ ವೀರಪುರುಷನು ಬಲಗೈಯಲ್ಲಿ ಆಯುಧ ಹಿಡಿದು ಎಡಗೈಯಲ್ಲಿ ಕುದುರೆಯ ಕಡಿವಾಣವನ್ನು ಹಿಡಿದು ಯುದ್ಧಕ್ಕೆ ಹೊರಟಂತಿದೆ. ಈ ವೀರ ಯೋಧನ ಮುಂಭಾಗದಲ್ಲಿ ಸ್ತ್ರೀಯರಿಬ್ಬರು ಕೈಮುಗಿದು ಯುದ್ಧಭೂಮಿಗೆ ಕಳುಹಿಸುತ್ತಿರುವಂತೆ

ಕೆತ್ತನೆ ಮಾಡಲಾಗಿದ್ದು, ಸ್ತ್ರೀಯರ ಮೈಮೇಲೆ ವಿವಿಧ ಬಗೆಯ ಆಭರಣಗಳ ಅಲಂಕರಣೆಯನ್ನು ಮಾಡಲಾಗಿದೆ. **(ಚಿ.ಸಂ.160)**

**ಎರಡನೆಯ ವೀರಗಲ್ಲು:-** ಈ ವೀರಗಲ್ಲು ಸುಮಾರು 4 ಅಡಿ ಎತ್ತರವನ್ನು ಹೊಂದಿದ್ದು, ಮೂರು ಹಂತಗಳಲ್ಲಿ ಶಿಲ್ಪಗಳನ್ನು ಬಿಡಿಸಲಾಗಿದೆ. ಕೆಳಗಿನ ಹಂತದಲ್ಲಿ ವೀರಪುರುಷರು ಮತ್ತು ಅವರ ಶತ್ರುಗಳು ಕತ್ತಿ, ಗುರಾಣಿ, ಬಿಲ್ಲು, ಬಾಣ ಮತ್ತು ಗಧೆಯನ್ನು ಹಿಡಿದು ಹೋರಾಡುತ್ತಿರುವ ದೃಶ್ಯವಿದೆ. ಈ ವೀರಪುರುಷರ ಜೊತೆ ಸ್ತ್ರೀಯರು ಯುದ್ಧದಲ್ಲಿ ಭಾಗಿಯಾಗಿದ್ದಾರೆ. ವೀರಯೋಧನೊಬ್ಬ ರಣರಂಗದಲ್ಲಿ ಮಡಿದು ಕೆಳಭಾಗದಲ್ಲಿ ಬಿದ್ದಿರುವ ದೃಶ್ಯಾವಳಿ ಇದೆ.

ಎರಡನೇ ಹಂತದಲ್ಲಿ ಚಾಮರವನ್ನು ಹಿಡಿದಿರುವ ಗಂಧರ್ವ ಕನ್ಯೆಯರು ಮರಣ ಹೊಂದಿದ ವೀರಪುರುಷನನ್ನು ಸ್ವರ್ಗಕ್ಕೆ ಕರೆದೊಯ್ಯುತ್ತಿರುವಂತೆ ಚಿತ್ರಿಸಲಾಗಿದೆ. ಮೂರನೇ ಹಂತದಲ್ಲಿ ಶಿವಲಿಂಗ, ಶಿವಲಿಂಗಕ್ಕೆ ಪೂಜೆ ಸಲ್ಲಿಸುತ್ತಿರುವ ಪುರೋಹಿತ, ವೀರ ಮರಣ ಹೊಂದಿದ ಪುರುಷ ದೇವರಿಗೆ ನಮಿಸುತ್ತಿರುವಂತೆ ಕೆತ್ತಲಾಗಿದ್ದು, ಸೂರ್ಯ, ಚಂದ್ರ ಮತ್ತು ನಂದಿಯನ್ನು ಕೆತ್ತಲಾಗಿದೆ. ಈ ವೀರಗಲ್ಲು ಅಲ್ಲಲ್ಲಿ ಹಾನಿಗೊಳಗಾಗಿದ್ದು, ಗ್ರಾಮಸ್ಥರು ತಮ್ಮ ಕೃಷಿ ಉಪಕರಣಗಳನ್ನು ಅರಿತಗೊಳಿಸಲು ಈ ವೀರಗಲ್ಲಿನ ಮೇಲೆ ಮಸೆದಿರುವುದು ಕಂಡುಬರುತ್ತದೆ. **(ಚಿ.ಸಂ.161)**

**ಮೂರನೆಯ ಮಹಾಸತಿ ಕಲ್ಲು:-** ಈ ಮಹಾಸತಿ ಕಲ್ಲು ಸುಮಾರು 2 ಅಡಿ ಎತ್ತರವಾಗಿದ್ದು, ಒಂದೂವರೆ ಅಡಿ ಅಗಲವಾಗಿದೆ. ಇದೂ ಸಹ ಬಳಪದ ಕಲ್ಲಿನ ರಚನೆಯಾಗಿದ್ದು, ಒಂದೇ ಒಂದು ದೃಶ್ಯವಾಳಿ ಕಂಡುಬರುತ್ತದೆ. ಇದರಲ್ಲಿ ಸತಿಪತಿ ಇಬ್ಬರೂ ಬಿಲ್ಲು ಬಾಣಗಳನ್ನು ಹಿಡಿದು ಯುದ್ಧಕ್ಕೆ ಹೊರಟಂತಿದೆ. ಮೈಮೇಲೆ ವಿವಿಧ ಬಗೆಯ ವಸ್ತ್ರಾಭರಣಗಳನ್ನು ಕಾಣಬಹುದು.

**ನಾಲ್ಕನೆಯ ವೀರಗಲ್ಲು:-** ಈ ವೀರಗಲ್ಲು ಸುಮಾರು 4 ಅಡಿ ಎತ್ತರವಾಗಿದ್ದು, ಬಳಪದ ಕಲ್ಲಿನಲ್ಲಿ ರಚಿಸಲಾಗಿದೆ. ವೀರಪುರುಷನೋರ್ವನು ಗೋವುಗಳ್ಳರ ವಿರುದ್ಧ ಹೋರಾಡಿ ಮಡಿದ ತುರುಗೋಳ್ ವೀರಗಲ್ಲು ಇದಾಗಿದೆ. ಕೆಳಗಿನ ಹಂತ ಭೂಮಿಯಲ್ಲಿ ಊತು ಹೋಗಿದ್ದು, ಗೋವುಗಳು ಮಾತ್ರ ಕಂಡುಬರುತ್ತದೆ. ಎರಡನೇ ಹಂತದಲ್ಲಿ ಮಡಿದ ವೀರಪುರುಷನನ್ನು ಪಲ್ಲಕ್ಕಿಯಲ್ಲಿ ಪದ್ಮಾಸನದಲ್ಲಿ ಕೂರಿಸಿಕೊಂಡು ಗಂಧರ್ವ ಕನ್ಯೆಯರು ಸ್ವರ್ಗಕ್ಕೆ ಕರೆದೊಯ್ಯುತ್ತಿರುವ ದೃಶ್ಯವಿದೆ. ಮೇಲ್ಭಾಗದಲ್ಲಿ ಶಿವಲಿಂಗಕ್ಕೆ ಪೂಜೆ ಸಲ್ಲಿಸುತ್ತಿರುವ ಪೂಜಾರಿ,

ಕೈಮುಗಿದು ಕುಳಿತಿರುವ ವೀರಪುರುಷ, ಸೂರ್ಯ, ಚಂದ್ರ ಕೆತ್ತನೆಗಳು ಹಾಗೂ ನಂದಿಯ ಅಸ್ಪಷ್ಟ ಕೆತ್ತನೆಗಳು ಕಂಡುಬರುತ್ತವೆ. **(ಚಿ.ಸಂ.162)**

**ಐದನೆಯ ಮಹಾಸತಿ ಕಲ್ಲು:–** ಈ ವೀರ ಮಹಾಸತಿ ಕಲ್ಲು ಸುಮಾರು 4 ಅಡಿ ಎತ್ತರವಾಗಿದ್ದು, ಎರಡೂವರೆ ಅಡಿ ಅಗಲವಾಗಿದ್ದು, ಬಳಪದ ಕಲ್ಲಿನ ರಚನೆಯಾಗಿದೆ. ಇದರಲ್ಲಿ ಮೂರು ಹಂತಗಳು ಕಂಡುಬಂದಿದ್ದು, ಕೆಳಭಾಗದ ಹಂತದಲ್ಲಿ ಕತ್ತಿ, ಗುರಾಣಿ, ಬಿಲ್ಲು ಬಾಣ ಹಿಡಿದು ಹೋರಾಡುತ್ತಿರುವ ಸ್ತ್ರೀಯರ ಶಿಲ್ಪ ಕೆತ್ತನೆಗಳಿವೆ. ಯುದ್ಧದಲ್ಲಿ ಗಾಯಗೊಂಡ ವೀರಮಹಿಳೆಯರು ನೆಲಕ್ಕುರುಳಿರುವ ದೃಶ್ಯಾವಳಿಯನ್ನು ಕಾಣಬಹುದು. ಎರಡನೆಯ ಹಂತದಲ್ಲಿ ವೀರಮರಣವನ್ನಪ್ಪಿದ ಸ್ತ್ರೀಯನ್ನು ಪದ್ಮಾಸನದಲ್ಲಿ ಪಲ್ಲಕ್ಕಿಯಲ್ಲಿ ಕೂರಿಸಿಕೊಂಡು ದೇವಕನ್ನಿಕೆಯರು ಸ್ವರ್ಗಕ್ಕೆ ಕರೆದೊಯ್ಯುತ್ತಿರುವ ಶಿಲ್ಪಗಳನ್ನು ಕೆತ್ತಲಾಗಿದೆ. ಮೇಲ್ಭಾಗದಲ್ಲಿ ಶಿವಲಿಂಗಕ್ಕೆ ಪೂಜೆ ಸಲ್ಲಿಸುತ್ತಿರುವ ಪುರೋಹಿತ, ಪುರೋಹಿತರ ಹಿಂದೆ ಸ್ತ್ರೀಯು ಕೈಮುಗಿದು ಕುಳಿತಿದ್ದು, ಸೂರ್ಯ, ಚಂದ್ರ ಹಾಗೂ ನಂದಿಯನ್ನು ಬಿಡಿಸಲಾಗಿದೆ.

**ಹಿಂಡುಮಾರನ ಹಳ್ಳಿ ವೀರಗಲ್ಲು:–** ಈ ಗ್ರಾಮದ ಊರ ಬಾಗಿಲ ಬಳಿ ಪೂರ್ವಾಭಿಮುಖವಾಗಿ ಒಂದು ವೀರಗಲ್ಲನ್ನು ನಿಲ್ಲಿಸಲಾಗಿದೆ. ಈ ವೀರಗಲ್ಲು ಸುಮಾರು 5 ಅಡಿ ಎತ್ತರವಾಗಿದ್ದು, 2 ಅಡಿ ಅಗಲ ಮತ್ತು 10 ಇಂಚು ದಪ್ಪವಾಗಿದೆ. ಇದರ ಅಡ್ಡಪಟ್ಟಿಕೆಯಲ್ಲಿ ಶಾಸನಗಳನ್ನು ಬರೆಯಲಾಗಿದ್ದು [7] ಇದು ಹೊಯ್ಸಳ ದೊರೆ ವೀರಬಲ್ಲಾಳನ ಕಾಲಕ್ಕೆ ಸಂಬಂಧಿಸಿದುದಾಗಿದೆ. ಆದರೆ ಈ ಶಾಸನ ಪಾಠವು ಅಲ್ಲಲ್ಲಿ ಭಾಗಶಃ ಅಳಿಸಿ ಹೋಗಿದೆ. **(ಚಿ.ಸಂ.163)** ಈ ವೀರಗಲ್ಲು ಮೂರು ಹಂತಗಳಿಂದ ಕೂಡಿದ್ದು, ಯುದ್ಧದಲ್ಲಿ ಸೆರೆ ಸಿಕ್ಕ ಅಥವಾ ಕಳ್ಳತನ ಮಾಡಿ ಸೆರೆ ಸಿಕ್ಕ ಪುರುಷನೊಬ್ಬನನ್ನು ಕರೆದೊಯ್ಯುತ್ತಿರುವಂತೆ ಕೆತ್ತಲಾಗಿದೆ. ಸೈನಿಕರು ಬಿಲ್ಲು ಬಾಣ ಹಿಡಿದಿದ್ದಾರೆ. ಎರಡನೆಯ ಹಂತದಲ್ಲಿ ವೀರಮರಣವನ್ನಪ್ಪಿದ ಪುರುಷನನ್ನು ದೇವಕನ್ನಿಕೆಯರು ಸ್ವರ್ಗಕ್ಕೆ ಪಲ್ಲಕ್ಕಿಯಲ್ಲಿ ಕೂರಿಸಿಕೊಂಡು ಕರೆದೊಯ್ಯುತ್ತಿರುವ ಚಿತ್ರಣವಿದೆ. ಈ ದೇವಕನ್ನಿಕೆಯರಿಬ್ಬರೂ ಚಾಮರ ಹಿಡಿದಿದ್ದು, ಮೈಮೇಲೆ ವಿವಿಧ ಬಗೆಯ ವಸ್ತ್ರಾಭರಣಗಳನ್ನು ಧರಿಸಿದ್ದಾರೆ. ಪಲ್ಲಕ್ಕಿಯಲ್ಲಿ ಪದ್ಮಾಸನದಲ್ಲಿ ಕುಳಿತಿರುವ ವೀರ ಪುರುಷನು ಧ್ಯಾನಮಗ್ನನಾಗಿದ್ದಾನೆ. ಮೇಲಿನ ಹಂತದಲ್ಲಿ ಶಿವಲಿಂಗಕ್ಕೆ ಪೂಜೆ ಸಲ್ಲಿಸುತ್ತಿರುವ ಪುರೋಹಿತ, ಶಿವಲಿಂಗದ ಪಕ್ಕ ನಂದಿ, ಧ್ಯಾನಮಗ್ನನಾಗಿರುವ ವೀರಪುರುಷ, ಸೂರ್ಯ, ಚಂದ್ರರ ಕೆತ್ತನೆಗಳನ್ನು ಕಾಣಬಹುದು.

**ಹುಲಿಕಲ್ಲಿನ ವೀರಗಲ್ಲು:–** ತುರುವೇಕೆರೆ ತಾಲೂಕು ಕೇಂದ್ರದಿಂದ 12 ಕಿ.ಮೀ. ದೂರದಲ್ಲಿ ದಿಡಿಗ ರಸ್ತೆಯಲ್ಲಿ ಹುಲಿಕಲ್ ಗ್ರಾಮವು ಕಂಡುಬರುತ್ತದೆ. ಈ ಗ್ರಾಮದ ಶಕ್ತಿ ದೇವತೆಯಾದ ಕೆಂಪಮ್ಮ

ದೇವಾಲಯದ ಪಕ್ಕದಲ್ಲಿರುವ ಅರಳೀ ಮರದ ಕೆಳಗೆ ಪೂರ್ವಾಭಿಮುಖವಾಗಿ ಈ ವೀರಗಲ್ಲನ್ನು ನಿಲ್ಲಿಸಲಾಗಿದೆ. ಇದು ಸುಮಾರು 5 ಅಡಿ ಎತ್ತರವಾಗಿದ್ದು, ಎರಡೂವರೆ ಅಡಿ ಅಗಲವಾಗಿದ್ದು, ಬಳಪದ ಕಲ್ಲಿನ ರಚನೆಯಾಗಿದೆ. **(ಚಿ.ಸಂ.164)** ಇದರಲ್ಲಿ ಮೂರು ಹಂತಗಳಿದ್ದು, ಕೆಳಹಂತವು ಸಂಪೂರ್ಣವಾಗಿ ಭೂಮಿಯಲ್ಲಿ ಊತು ಹೋಗಿದೆ.

ಎರಡನೆಯ ಹಂತದಲ್ಲಿ ಮರಣವನ್ನಪ್ಪಿದ ವೀರಪುರುಷನನ್ನು ಗಂಧರ್ವ ಕನ್ಯೆಯರು ವೀರಪುರುಷನ ತೋಳುಗಳನ್ನು ಹಿಡಿದು ಸ್ವರ್ಗಕ್ಕೆ ಕರೆದೊಯ್ಯುತ್ತಿರುವ ದೃಶ್ಯವಿದೆ. ವೀರಪುರುಷ ಮತ್ತು ಗಂಧರ್ವ ಸ್ತ್ರೀಯರು ಮೈಮೇಲೆ ವಿವಿಧ ಬಗೆಯ ವಸ್ತ್ರಾಭರಣಗಳನ್ನು ಹೊಂದಿದ್ದಾರೆ. ಮೂರನೆಯ ಹಂತದಲ್ಲಿ ಶಿವಲಿಂಗಕ್ಕೆ ಪೂಜೆ ಸಲ್ಲಿಸುತ್ತಿರುವ ಪುರೋಹಿತರು, ವೀರಪುರುಷನು ಪದ್ಮಾಸನದಲ್ಲಿ ಕುಳಿತು ಕೈಮುಗಿಯುತ್ತಿರುವಂತೆ ಚಿತ್ರಿಸಲಾಗಿದೆ. ಇವರ ಪಕ್ಕದಲ್ಲಿ ಸೂರ್ಯ, ಚಂದ್ರ ಹಾಗೂ ನಂದಿಯನ್ನು ಬಿಡಿಸಲಾಗಿದೆ.

ಇದೇ ಗ್ರಾಮದಲ್ಲಿ ಸಂಗಮೇಶ್ವರ ಅಥವಾ ಹಂಸೇಶ್ವರ ಎಂಬ ದೇವಾಲಯವು ಊರಿನ ದಕ್ಷಿಣ ಭಾಗದಲ್ಲಿ ಪೂರ್ವಾಭಿಮುಖವಾಗಿ ನಿರ್ಮಾಣವಾಗಿದೆ. ಈ ದೇವಾಲಯದ ಮುಂಭಾಗದಲ್ಲಿ ನಿಲ್ಲಿಸಲಾಗಿರುವ ಈ ವೀರಗಲ್ಲು ಸುಮಾರು 5 ಅಡಿ ಎತ್ತರವಿದ್ದು, 3 ಅಡಿ ಅಗಲವನ್ನು ಹೊಂದಿದೆ. ಇದನ್ನು ಬಳಪದ ಕಲ್ಲಿನಲ್ಲಿ ರಚಿಸಲಾಗಿದೆ. ಕೆಳಗಿನ ಹಂತದಲ್ಲಿ ಬಲಭಾಗದಲ್ಲಿ ವೀರಯೋಧನೊಬ್ಬ ತನ್ನ ಎದುರಾಳಿಯ ಜೊತೆ ಸೆಣಸಾಡುತ್ತಿರುವ ದೃಶ್ಯವಿದೆ. ಶತ್ರು ಯೋಧನೊಬ್ಬ ಕೆಳಮುಖವಾಗಿ ಸತ್ತು ಬಿದ್ದಿದ್ದು, ಈ ವೀರಯೋಧ ತನ್ನ ಎಡಗಾಲನ್ನು ಆತನ ಬೆನ್ನ ಮೇಲೆ ಇಟ್ಟು ಎದುರಾಳಿಗಳನ್ನು ಹಿಮ್ಮೆಟ್ಟಿಸುತ್ತಿರುವ ಕೆತ್ತನೆಯು ಸುಂದರವಾಗಿ ಮೂಡಿ ಬಂದಿದೆ. ಎಲ್ಲಾ ಸೈನಿಕರು ಶಿರಸ್ತ್ರಾಣ, ಈಟಿ, ಗುರಾಣಿಗಳನ್ನು ಹಿಡಿದುಕೊಂಡಿದ್ದು, ಪ್ರಾಚೀನ ಯುದ್ಧ ಸನ್ನಿವೇಶವನ್ನು ನೋಡುಗರ ಕಲ್ಪನೆಗೆ ತರುವಂತಿದೆ. **(ಚಿ.ಸಂ.165)**

ಎರಡನೆಯ ಹಂತದಲ್ಲಿ ವೀರ ಮರಣವನ್ನಪ್ಪಿದ ಪುರುಷನನ್ನು ಗಂಧರ್ವ ಕನ್ಯೆಯರು ತಮ್ಮ ತೋಳುಗಳಿಂದ ಹಿಡಿದು ಸ್ವರ್ಗಕ್ಕೆ ಕರೆದೊಯ್ಯುತ್ತಿರುವಂತೆ ಕೆತ್ತಲಾಗಿದೆ. ಈ ಗಂಧರ್ವ ಕನ್ಯೆಯರು ಚಾಮರ ಹಿಡಿದು, ಮೈಮೇಲೆ ವಿವಿಧ ವಸ್ತ್ರಾಭರಣಗಳನ್ನು ಧರಿಸಿದ್ದಾರೆ. ಮೂರನೆಯ ಹಂತದಲ್ಲಿ ಶಿವಲಿಂಗಕ್ಕೆ ಪೂಜೆ ಸಲ್ಲಿಸುತ್ತಿರುವ ಪುರೋಹಿತರು, ಮರಣವನ್ನಪ್ಪಿದ ವೀರಪುರುಷನು ಶಿವಲಿಂಗಕ್ಕೆ ಕೈಮುಗಿದು ಕುಳಿತಿರುವಂತೆ, ಸೂರ್ಯ, ಚಂದ್ರ ಹಾಗೂ ನಂದಿಯನ್ನು ಕೆತ್ತಲಾಗಿದೆ.

**ಹುಲಿಕೆರೆ ವೀರಗಲ್ಲು:-** ತುರುವೇಕೆರೆ ತಾಲೂಕಿನ ಹುಲಿಕೆರೆ ಗ್ರಾಮದ ಊರ ಮುಂದಿರುವ ಕೆರೆಯ ಏರಿಯ ಹಿಂಭಾಗದಲ್ಲಿ ಒಟ್ಟು ಐದು ವೀರಗಲ್ಲುಗಳನ್ನು ಸಾಲಾಗಿ ನಿಲ್ಲಿಸಲಾಗಿದ್ದು, ಈ ವೀರಗಲ್ಲುಗಳು ಅರ್ಧಭಾಗದಷ್ಟು ಮಣ್ಣಿನಲ್ಲಿ ಊತು ಹೋಗಿವೆ. **(ಚಿ.ಸಂ.166)**

**ಒಂದನೆಯ ವೀರಗಲ್ಲು:-**ಈ ವೀರಗಲ್ಲಿನ ಅರ್ಧಭಾಗ ಮಣ್ಣಿನಲ್ಲಿ ಊತು ಹೋಗಿದೆ. ಮೇಲ್ಭಾಗದಲ್ಲಿ ಕುದುರೆ ಏರಿ ಬಂದ ವೀರಪುರುಷನು ಮತ್ತೊಬ್ಬ ಪುರುಷನನ್ನು ದಂಡಿಸುತ್ತಿರುವಂತೆ ಕಂಡುಬರುತ್ತದೆ. ಈ ವೀರಪುರುಷನ ಹಿಂದೆ ಆತನ ಪತ್ನಿಯು ಸಹ ಕಂಡುಬರುತ್ತಾಳೆ.

**ಎರಡನೆಯ ವೀರಗಲ್ಲು:-** ಈ ವೀರಗಲ್ಲಿನ ಕಾಲುಭಾಗ ಮಣ್ಣಿನಲ್ಲಿ ಊತು ಹೋಗಿದೆ. ಆದರೆ ಇಲ್ಲಿ ಕಂಡುಬರುವ ದೃಶ್ಯದಲ್ಲಿ ವೀರನು ಎಡಗೈಯಲ್ಲಿ ಬಿಲ್ಲು ಹಿಡಿದು ನಿಂತಿರುವುದು ಮಾತ್ರ ಕಂಡುಬರುತ್ತದೆ.

**ಮೂರನೆಯ ವೀರಗಲ್ಲು:-** ಈ ವೀರಗಲ್ಲಿನ ಕಾಲುಭಾಗ ಮಣ್ಣಿನಲ್ಲಿ ಊತು ಹೋಗಿದೆ. ಮೇಲ್ಭಾಗದಲ್ಲಿ ಕುದುರೆಏರಿ ಯುದ್ಧಕ್ಕೆ ಹೊರಟಿರುವ ವೀರಪುರುಷನು ಎಡಗೈಯಲ್ಲಿ ಕುದುರೆಯ ಲಗಾಮು, ಬಲಗೈಯಲ್ಲಿ ಭರ್ಜಿಯನ್ನು ಹಿಡಿದಿದ್ದಾನೆ. ಇವನ ಹಿಂಬದಿಯಲ್ಲಿ ಆತನ ಪತ್ನಿ ಯುದ್ಧಕ್ಕೆ ಹೊರಟಿರುವುದನ್ನು ನೋಡುತ್ತಾ ಒಂದು ಕೈಯನ್ನು ಮೇಲೆತ್ತಿರುವಂತೆ ಕೆತ್ತಲಾಗಿದ್ದು, ಮೇಲ್ಭಾಗದಲ್ಲಿ ಸೂರ್ಯ, ಚಂದ್ರರ ಕೆತ್ತನೆಯನ್ನು ಮಾಡಲಾಗಿದೆ.

**ನಾಲ್ಕನೆಯ ಮಹಾಸತಿ ಕಲ್ಲು:-** ಇದರಲ್ಲಿ ಇಬ್ಬರು ಸ್ತ್ರೀಯರು ಸಮಭಂಗಿಯಲ್ಲಿ ನಿಂತಿರುವಂತೆ ರಚಿಸಲಾಗಿದೆ. ಮೈಮೇಲೆ ವಿವಿಧ ಬಗೆಯ ವಸ್ತ್ರಾಭರಣಗಳನ್ನು ಹೊಂದಿದ್ದು, ಈ ಸ್ತ್ರೀ ಶಿಲ್ಪಗಳು ಅಸ್ಪಷ್ಟವಾಗಿ ಗೋಚರವಾಗುತ್ತವೆ. ಐದನೆಯ ವೀರಗಲ್ಲು ಇದೊಂದು ವೀರಪುರುಷನ ಸ್ಮಾರಕಶಿಲ್ಪವಾಗಿದ್ದು, ಇದರಲ್ಲಿರುವ ಪುರುಷನು ಬಲಗೈಯಲ್ಲಿ ಕತ್ತಿ ಹಿಡಿದು ಎಡಗೈಯನ್ನು ಮೇಲಕ್ಕೆತ್ತಿದ್ದಾನೆ. ಈ ವೀರಗಲ್ಲು ಮುಕ್ಕಾಲು ಭಾಗ ಭೂಮಿಯಲ್ಲಿ ಊತು ಹೋಗಿದೆ.

**ಕಾಡಸೂರು ವೀರಗಲ್ಲುಗಳು:-** ತುರುವೇಕೆರೆಯಿಂದ ಮಾವಿನಕೆರೆ ನಾಗಲಾಪುರಕ್ಕೆ ಹೋಗುವ ರಸ್ತೆಯಲ್ಲಿ ಕಾಡಸೂರು ಗ್ರಾಮ ಕಂಡುಬರುತ್ತದೆ. ಊರ ಹೊರವಲಯದಲ್ಲಿ ಭೈರವನ ಗುಡಿಯ ಮುಂದೆ ಬಿಲ್ವಪತ್ರದ ಮರದ ಕೆಳಗೆ ವೀರಗಲ್ಲುಗಳು ಕಂಡುಬರುತ್ತವೆ.

**ಒಂದನೆಯ ವೀರಗಲ್ಲು:-**ಈ ವೀರಗಲ್ಲು ಸುಮಾರು 4 ಅಡಿ ಎತ್ತರವಿದ್ದು, 3 ಅಡಿ ಅಗಲವಾಗಿದ್ದು, 10 ಇಂಚು ದಪ್ಪವಾಗಿದೆ. ಇದು ಎರಡು ಹಂತಗಳನ್ನು ಹೊಂದಿದ್ದು, ಬಳಪದ ಕಲ್ಲಿನಲ್ಲಿ ರಚನೆ ಮಾಡಲಾಗಿದೆ. ಇದರ ಅಡ್ಡಪಟ್ಟಿಕೆಯ ಮೇಲೆ ಶಾಸನವನ್ನು ಬರೆಯಲಾಗಿದೆ.[8] ಕ್ರಿ.ಶ.1237ರ ಕಾಲಕ್ಕೆ ಸಲ್ಲುವ ಶಾಸನವಾಗಿದ್ದು ಹೊಯ್ಸಳ ದೊರೆ ವೀರ ಸೋಮೇಶ್ವರನ ಆಡಳಿತವನ್ನು ಉಲ್ಲೇಖಿಸುತ್ತದೆ. ಕಾಡಸೂರ ಕಾವಗೌಡನ ಮಗನಾದ ಕೇತಯ್ಯನು ಕುದುರೆ ಕಾಳಗದಲ್ಲಿ ಮಡಿದ ವಿಷಯವನ್ನು ಪ್ರಸ್ತಾಪಿಸುತ್ತದೆ. ಈ ವೀರಗಲ್ಲಿನ ಕೆಳಹಂತದಲ್ಲಿ ವೀರಮರಣವನ್ನಪ್ಪಿದ ಪುರುಷನನ್ನು ಪಲ್ಲಕ್ಕಿಯಲ್ಲಿ ಪದ್ಮಾಸನದಲ್ಲಿ ಕೂರಿಸಿಕೊಂಡು ದೇವಕನ್ನಿಕೆಯರು ದೇವಲೋಕಕ್ಕೆ ಕರೆದೊಯ್ಯುತ್ತಿರುವಂತೆ ಕೆತ್ತಲಾಗಿದೆ. ಮೇಲಿನ ಹಂತದಲ್ಲಿ ಶಿವಲಿಂಗಕ್ಕೆ ಪೂಜೆ ಸಲ್ಲಿಸುತ್ತಿರುವ ಪುರೋಹಿತರು, ವೀರಮರಣವನ್ನಪ್ಪಿದ ವೀರಪುರುಷನು ಶಿವಲಿಂಗಕ್ಕೆ ಕೈಮುಗಿದು ಕುಳಿತಿರುವಂತೆ ಪುರೋಹಿತರ ಹಿಂದೆ ರಚಿಸಲಾಗಿದೆ. ಶಿವನ ಮುಂದೆ ನಂದಿ ಇದ್ದು, ಮತ್ತೋರ್ವನು ಶಿವಲಿಂಗದ ಎಡಭಾಗದಲ್ಲಿ ಹೂವಿನಹಾರ ಹಿಡಿದು ನಿಂತಿದ್ದಾನೆ. ಮೇಲ್ಭಾಗದಲ್ಲಿ ಸೂರ್ಯ, ಚಂದ್ರರ ಚಿತ್ರ ಇದೆ. **(ಚಿ.ಸಂ.167)**

**ಎರಡನೆಯ ವೀರಗಲ್ಲು:-** ಈ ವೀರಗಲ್ಲು ಸಹ ಬಳಪದ ಕಲ್ಲಿನ ರಚನೆಯಾಗಿದ್ದು, ಪ್ರಕೃತಿಯ ವಿಕೋಪಕ್ಕೆ ಸಿಕ್ಕಿ ಮುರಿದು ಹೋಗಿದೆ. ಕೆಳಗಿನ ಹಂತದಲ್ಲಿ ವೀರಪುರುಷನೋರ್ವನು ಕತ್ತಿ, ಗುರಾಣಿ ಹಿಡಿದು ಕುದುರೆಯನ್ನೇರಿ ಬಂದು ಮತ್ತೋರ್ವ ಎದುರಾಳಿ ವೀರಪುರುಷನೊಟ್ಟಿಗೆ ಹೋರಾಟದಲ್ಲಿ ತೊಡಗಿರುವಂತೆ ದೃಶ್ಯವನ್ನು ಬಿಡಿಸಲಾಗಿದೆ. ಈ ವೀರಗಲ್ಲಿನ ಪಟ್ಟಿಕೆಗಳಲ್ಲಿ ಶಾಸನವನ್ನು ಕಾಣಬಹುದು. ಕ್ರಿ.ಶ.1225ರ ಹೊಯ್ಸಳರ ದೊರೆ ವೀರನರಸಿಂಹನ ಆಳ್ವಿಕೆಯ ಸಮಯದಲ್ಲಿ ಕಾಡಸೂರ ಕಾಡಯ್ಯ ನಾಯಕನನ್ನು ನರಸಿಂಹ ದೇವನು ದಾಳಿಮಾಡಿ ಕೊಂದಿದ ಪರಿಣಾಮ ಕಾಡಯ್ಯನ ಮಗ ನಿಲ್ಲಿಸಿದ ವೀರಗಲ್ಲಾಗಿದೆ. [9] **(ಚಿ.ಸಂ.168)**

**ಮೂರನೆಯ ವೀರಗಲ್ಲು:-** ಈ ವೀರಗಲ್ಲು ಸಹ ಸುಮಾರು 5 ಅಡಿ ಎತ್ತರವಿರುವ ಇದನ್ನು ಬಳಪದ ಕಲ್ಲಿನಲ್ಲಿ ರಚಿಸಲಾಗಿದೆ. ಈ ವೀರಗಲ್ಲು ಮೂರು ಹಂತಗಳನ್ನು ಹೊಂದಿದ್ದು, ಕೆಳಗಿನ ಹಂತದಲ್ಲಿ ಕುದುರೆಯನ್ನೇರಿ ಬಂದ ವೀರ ಪುರುಷನೊಡನೆ ಮತ್ತೋರ್ವ ವೀರನು ಗುರಾಣಿ ಮತ್ತು ಭರ್ಜಿಯನ್ನು ಹಿಡಿದು ಹೋರಾಟದಲ್ಲಿ ತೊಡಗಿರುವ ಚಿತ್ರವಿದೆ. ಎರಡನೇ ಹಂತದಲ್ಲಿ ವೀರಮರಣವನ್ನಪ್ಪಿದ ಪುರುಷನನ್ನು ಪಲ್ಲಕ್ಕಿಯಲ್ಲಿ ಪದ್ಮಾಸನದಲ್ಲಿ ಕೂರಿಸಿಕೊಂಡು ದೇವಕನ್ನಿಕೆಯರು ದೇವಲೋಕಕ್ಕೆ ಕರೆದೊಯ್ಯುತ್ತಿರುವಂತೆ ಚಿತ್ರಿಸಲಾಗಿದೆ. ಮೂರನೇ ಪಟ್ಟಿಕೆಯಲ್ಲಿ ಶಿವಲಿಂಗಕ್ಕೆ ಪೂಜೆ ಸಲ್ಲಿಸುತ್ತಿರುವ ಪುರೋಹಿತರು, ಶಿವನಿಗೆ ಕೈಮುಗಿದು

ಕುಳಿತಿರುವ ವೀರಪುರುಷನನ್ನು ಕೆತ್ತನೆ ಮಾಡಲಾಗಿದೆ ಹಾಗೇ ಶಿವನ ವಾಹನ ನಂದಿ, ಸೂರ್ಯ, ಚಂದ್ರರನ್ನು ಕಾಣಬಹುದು. **(ಚಿ.ಸಂ.169)**

**ನಾಲ್ಕನೆಯ ವೀರಗಲ್ಲು:-** ಈ ವೀರಗಲ್ಲು ಸುಮಾರು 5 ಅಡಿ ಎತ್ತರ, ಎರಡೂವರೆ ಅಡಿ ಅಗಲವಾಗಿದ್ದು, ಇದನ್ನು ಬಳಪದ ಕಲ್ಲಿನಲ್ಲಿ ರಚಿಸಲಾಗಿದೆ. ಇದರ ಅಡ್ಡಪಟ್ಟಿಕೆಗಳ ಮೇಲೆ ಶಾಸನವನ್ನು ಬರೆಯಲಾಗಿದೆ.[10] ಕ್ರಿ.ಶ.1325ರ ಹೊಯ್ಸಳ ದೊರೆ ವೀರಬಲ್ಲಾಳನ ಶಾಸನ ವಾಗಿದ್ದು ಬೇಟೆಯ ದಂಡನಾಯಕ, ಸಿಂಗೆಯ ದಂಡನಾಯಕ ಮುಂತಾದವರು ಕಾಳಗದಲ್ಲಿ ಮಡಿದ ವಿಷಯವನ್ನು ಪ್ರಸ್ತಾಪಿಸುತ್ತದೆ. ಈ ಶಾಸನ ಪಾಠವು ಅಲ್ಲಲ್ಲಿ ನಶಿಸಿದ್ದು ಅಸ್ಪಷ್ಟವಾಗಿದೆ. ಕೆಳಗಿನ ಹಂತದಲ್ಲಿ ಇಬ್ಬರು ವೀರರು ಕತ್ತಿ, ಗುರಾಣಿ ಹಿಡಿದು ಎದುರಾಳಿಯ ಜೊತೆ ಯುದ್ಧ ಮಾಡುತ್ತಿದ್ದಾರೆ. ಎದುರಾಳ ವೀರನು ಬಿಲ್ಲು ಮತ್ತು ಬಾಣ ಹಿಡಿದು ನಿಂತಿದ್ದಾನೆ. ಈ ಹೋರಾಟದ ದೃಶ್ಯ ಸಹಜವಾಗಿ ಮೂಡಿ ಬಂದಿದೆ. ಎರಡನೆಯ ಪಟ್ಟಿಕೆಯಲ್ಲಿ ದೇವಕನ್ನಿಕೆಯರು ಚಾಮರ ಹಿಡಿದು ವೀರಮರಣವನ್ನಪ್ಪಿದ ಪುರುಷನನ್ನು ಪಲ್ಲಕ್ಕಿಯಲ್ಲಿ ಪದ್ಮಾಸನದಲ್ಲಿ ಕೂರಿಸಿಕೊಂಡು ದೇವಲೋಕಕ್ಕೆ ಕರೆದೊಯ್ಯುತ್ತಿರುವಂತೆ ಚಿತ್ರಿಸಲಾಗಿದೆ. ಪಲ್ಲಕ್ಕಿಯ ಮೇಲೆ ಛತ್ರಿ ಇದ್ದು, ಎರಡೂ ಕಡೆ ಅರಳಿದ ಪದ್ಮಪುಷ್ಪವನ್ನು ಬಿಡಿಸಲಾಗಿದೆ. ಮೂರನೇ ಪಟ್ಟಿಕೆಯಲ್ಲಿ ಶಿವಲಿಂಗಕ್ಕೆ ಪೂಜೆ ಸಲ್ಲಿಸುತ್ತಿರುವ ಪುರೋಹಿತರು, ಮರಣ ಹೊಂದಿದ ಪುರುಷನು ದೊಗ್ಗಲು ಮಂಡಿಯೂರಿ ಶಿವಲಿಂಗಕ್ಕೆ ನಮಸ್ಕರಿಸುತ್ತಿದ್ದಾನೆ. ಮೇಲ್ಭಾಗದಲ್ಲಿ ಸೂರ್ಯ, ಚಂದ್ರರನ್ನು ಕೆತ್ತನೆ ಮಾಡಲಾಗಿದೆ. ಕಾಡಸೂರಿನಿಂದ ಸ್ವಲ್ಪ ಮುಂದೆ ತುರುವೇಕೆರೆಗೆ ಹೋಗುವ ಮಾರ್ಗದ ಬದಿಯಲ್ಲಿರುವ ಅರಳೀಮರದ ಕೆಳಗೆ ಒಂದು ವೀರಗಲ್ಲನ್ನು ಇರಿಸಲಾಗಿದೆ. ಈ ವೀರಗಲ್ಲನ್ನು ಬಳಪದ ಕಲ್ಲಿನಲ್ಲಿ ರಚಿಸಲಾಗಿದ್ದು, ಇದು ಸುಮಾರು ನಾಲ್ಕೂವರೆ ಅಡಿ ಎತ್ತರ, ಎರಡೂವರೆ ಅಡಿ ಅಗಲವಾಗಿದೆ. ಇದರಲ್ಲಿ ಮೂರು ಹಂತಗಳಲ್ಲಿ ಶಿಲ್ಪಗಳನ್ನು ಕೆತ್ತಲಾಗಿದೆ. ಕೆಳಗಿನ ಹಂತದಲ್ಲಿ ಇಬ್ಬರು ವೀರ ಪುರುಷರು ಬಿಲ್ಲು ಬಾಣ ಹಿಡಿದು ನಿಂತಿದ್ದಾರೆ. ಇವರ ಮುಂದಿರುವ ಎದುರಾಳಿ ವೀರನು ಬಿಲ್ಲನ್ನು ಹಿಡಿದು ಬಾಣವನ್ನು ಬತ್ತಳಿಕೆಯಿಂದ ತೆಗೆದು ಹಿಡಿದಿರುವಂತೆ ಚಿತ್ರಿಸಲಾಗಿದ್ದು, ಈ ವೀರಪುರುಷನ ಹಿಂದೆ ಗೋವುಗಳ ಕೆತ್ತನೆಗಳಿವೆ. ಇದೊಂದು ತುರುಗೋಳ್ ವೀರಗಲ್ಲಾಗಿದ್ದು, ಗೋರಕ್ಷಣೆಗಾಗಿ ಗೋವುಗಳ್ಳರ ಜೊತೆ ಸೆಣಸಾಡಿ ವೀರಮರಣ ಹೊಂದಿದ ವೀರನ ನೆನಪಿಗಾಗಿ ಸ್ಥಾಪಿಸಿದ ವೀರಗಲ್ಲಾಗಿದೆ. ಎರಡನೆಯ ಹಂತದಲ್ಲಿ ಹೋರಾಟದಲ್ಲಿ ಮರಣ ಹೊಂದಿದ ವೀರ ಮತ್ತು ಆತನ ಮಡದಿಯನ್ನು ಗಂಧರ್ವ ಕನ್ಯೆಯರು ಅಲಂಕೃತವಾದ ಪಲ್ಲಕ್ಕಿಯಲ್ಲಿ ಕೂರಿಸಿಕೊಂಡು ಮತ್ತು ತಮ್ಮ ಕೈಗಳಲ್ಲಿ ಚಾಮರವನ್ನು ಹಿಡಿದು ಸ್ವರ್ಗಲೋಕಕ್ಕೆ ಕರೆದೊಯ್ಯುತ್ತಿರುವ ದೃಶ್ಯವಿದೆ.

ದೇವಕನ್ನಿಕೆಯರು ಮೈಮೇಲೆ ವಿವಿಧ ಬಗೆಯ ವಸ್ತ್ರಾಭರಣಗಳನ್ನು ಧರಿಸಿದ್ದು ತ್ರಿಭಂಗಿಯಲ್ಲಿ ನಿಂತಿರುವಂತೆ ಕೆತ್ತಲಾಗಿದೆ. ಮೇಲಿನ ಹಂತದಲ್ಲಿ ಮರಣ ಹೊಂದಿದ ದಂಪತಿಗಳಿಬ್ಬರೂ ಕೈಮುಗಿದು ಕುಳಿತಿರುವಂತೆ, ಶಿವಲಿಂಗಕ್ಕೆ ಪುರೋಹಿತನು ಪೂಜೆಯನ್ನು ಮಾಡುತ್ತಿರುವಂತೆ ಕೆತ್ತಲಾಗಿದ್ದು ನಂದಿಯನ್ನು ಬಿಡಿಸಲಾಗಿದೆ.

**ಕಡೇಹಳ್ಳಿ ವೀರಗಲ್ಲುಗಳು:-** ತುರುವೇಕೆರೆಯಿಂದ ದಬ್ಬೇಘಟ್ಟ ರಸ್ತೆಯಲ್ಲಿ ಕಡೇಹಳ್ಳಿ ಗ್ರಾಮವು ಕಂಡುಬಂದಿದ್ದು, ಬಸ್ ನಿಲ್ದಾಣದ ಹತ್ತಿರದ ಒಂದು ಮರದ ಕೆಳಗೆ ಎರಡು ವೀರಗಲ್ಲುಗಳನ್ನು ನಿಲ್ಲಿಸಲಾಗಿದೆ. **(ಚಿ.ಸಂ.170)** ಮೊದಲನೆಯ ವೀರಗಲ್ಲು ಎರಡು ಅಡಿ ಎತ್ತರವಾಗಿದ್ದು, ಒಂದು ವೀರನ ಶಿಲ್ಪವನ್ನು ಕೆತ್ತಲಾಗಿದೆ. ಕುದುರೆಯನ್ನೇರಿ ವೀರನು ಎಡಗೈಯಲ್ಲಿ ಕುದುರೆಯ ಕಡಿವಾಣ ಹಿಡಿದಿದ್ದು, ಬಲಗೈಯಲ್ಲಿ ಕತ್ತಿಯನ್ನು ಮೇಲಕ್ಕೆತ್ತಿದ್ದಾನೆ. ಈ ಶಿಲ್ಪದ ಪಕ್ಕದಲ್ಲಿಯೇ ಮೂರು ಅಡಿ ಎತ್ತರವಿರುವ ಒಂದು ಮಹಾಸತಿ ಕಲ್ಲನ್ನು ಇರಿಸಲಾಗಿದೆ. ಸುಮಾರು ಮೂರು ಅಡಿ ಎತ್ತರವಿರುವ ಈ ಮಹಾಸತಿಕಲ್ಲಿನ ಮೂರು ಹಂತಗಳಲ್ಲಿ ಶಿಲ್ಪಗಳನ್ನು ಬಿಡಿಸಲಾಗಿದೆ. ಕೆಳಗಿನ ಹಂತದ ಪಟ್ಟಿಕೆಯ ಮುಕ್ಕಾಲು ಭಾಗ ಮಣ್ಣಿನಲ್ಲಿ ಊತು ಹೋಗಿದೆ. ಆದರೂ ಶಿಲ್ಪದ ಅರ್ಧಭಾಗ ಕಂಡುಬರುತ್ತದೆ. ಈ ಹಂತದಲ್ಲಿ ಮೂರು ಜನ ಸ್ತ್ರೀಯರ ಶಿಲ್ಪಗಳನ್ನು ಬಿಡಿಸಲಾಗಿದೆ. ಎರಡನೆಯ ಪಟ್ಟಿಕೆಯಲ್ಲಿ ಮರಣ ಹೊಂದಿದ ಈ ಮಹಾಸತಿಯನ್ನು ಗಂಧರ್ವ ಕನ್ಯೆಯರು ಪಲ್ಲಕ್ಕಿಯಲ್ಲಿ ಕೂರಿಸಿಕೊಂಡು ದೇವಲೋಕಕ್ಕೆ ಕರೆದೊಯ್ಯುತ್ತಿರುವ ದೃಶ್ಯವಿದೆ. ಮೇಲ್ಭಾಗದಲ್ಲಿ ನಂದಿ, ಶಿವಲಿಂಗ, ಕೈಮುಗಿದು ಕುಳಿತಿರುವ ಮಹಾಸತಿ, ಸೂರ್ಯ, ಚಂದ್ರರ ಕೆತ್ತನೆಗಳನ್ನು ಕಾಣಬಹುದು.

**ಕಣತೂರು ವೀರಮಹಾಸತಿ ಕಲ್ಲುಗಳು:-** ತುರುವೇಕೆರೆಯಿಂದ 13 ಕಿ.ಮೀ ದೂರದಲ್ಲಿ ಕಣತೂರಿನ ಮಧ್ಯದಲ್ಲಿ ರಸ್ತೆಯ ಅಂಚಿನಲ್ಲಿ ಒಂದು ವೀರಗಲ್ಲು ಮತ್ತು ಮತ್ತೊಂದು ಮಹಾಸತಿ ಕಲ್ಲನ್ನು ನಿಲ್ಲಿಸಲಾಗಿದೆ. **(ಚಿ.ಸಂ.171)**

**ಒಂದನೆಯ ವೀರಗಲ್ಲು:-** ಈ ವೀರಗಲ್ಲನ್ನು ಬಳಪದ ಕಲ್ಲಿನಲ್ಲಿ ರಚಿಸಲಾಗಿದ್ದು, ಇದು ಸುಮಾರು 5 ಅಡಿ ಎತ್ತರವಾಗಿದೆ. ಈ ವೀರಗಲ್ಲು ಮೂರು ಹಂತಗಳಲ್ಲಿ ಶಿಲ್ಪಗಳನ್ನು ಹೊಂದಿದ್ದು, ಕೆಳಗಿನ ಹಂತದಲ್ಲಿ ಕುದುರೆಯನ್ನೇರಿದ ವೀರಪುರುಷ ತನ್ನ ಕೈಯಲ್ಲಿ ಭರ್ಜಿಯನ್ನು ಹಿಡಿದು ಮೇಲಕ್ಕೆತ್ತಿದ್ದಾನೆ. ಅವನ ಮುಂದೆ ಸ್ತ್ರೀಯೋರ್ವಳು ನಿಂತಿದ್ದಾಳೆ. ಬಲಭಾಗದಲ್ಲಿ ವೀರಪುರುಷನೋರ್ವನು ಮುಂಭಾಗದಲ್ಲಿರುವ ಸ್ತ್ರೀಯನ್ನು ಹಿಡಿದು ಎದೆಗೆ ಕತ್ತಿಯಿಂದ ತಿವಿಯುತ್ತಿದ್ದಾನೆ. ಈ ವೀರಪುರುಷನ ಹಿಂಭಾಗದಲ್ಲಿ ಕುದುರೆಯನ್ನೇರಿದ ಪುರುಷನೊಬ್ಬನನ್ನು

ಕಾಣಬಹುದು. ಎರಡನೆಯ ಹಂತದಲ್ಲಿ ವೀರಮರಣ ಹೊಂದಿದ ದಂಪತಿಗಳನ್ನು ಅಲಂಕೃತವಾದ ಪಲ್ಲಕ್ಕಿಯಲ್ಲಿ ಕೂರಿಸಿಕೊಂಡು ಗಂಧರ್ವ ಕನ್ಯೆಯರು ಸ್ವರ್ಗಲೋಕಕ್ಕೆ ಕರೆದೊಯ್ಯುತ್ತಿರುವ ದೃಶ್ಯವಿದೆ. ಪಲ್ಲಕ್ಕಿಯ ಅಲಂಕರಣೆಯು ಸೊಗಸಾಗಿ ಮೂಡಿಬಂದಿದೆ. ಮೂರನೆಯ ಹಂತದಲ್ಲಿ ಪುರೋಹಿತರು ಶಿವಲಿಂಗಕ್ಕೆ ಪೂಜೆ ಸಲ್ಲಿಸುತ್ತಿದ್ದು, ವೀರಪುರುಷನು ಪದ್ಮಾಸನದಲ್ಲಿ ಕೈಮುಗಿದು ಕುಳಿತಿದ್ದಾನೆ. ಲಿಂಗದ ಕೆತ್ತನೆಯು ವಿಶೇಷವಾಗಿದ್ದು, ಲಿಂಗದ ತಲೆಯ ಮೇಲ್ಭಾಗದಲ್ಲಿ ರುದ್ರಾಕ್ಷಿ ಮಣಿಗಳ ಮುಕುಟವಿದೆ. ಈ ವೀರಗಲ್ಲಿನ ಎರಡೂ ಕಡೆ ಸೂರ್ಯ, ಚಂದ್ರ ಮತ್ತು ನಂದಿಯನ್ನು ಬಿಡಿಸಲಾಗಿದೆ.

**ಎರಡನೆಯ ಮಹಾಸತಿ ಕಲ್ಲು:–** ಈ ಮಹಾಸತಿ ಕಲ್ಲು ಸುಮಾರು 5 ಅಡಿ ಎತ್ತರವಾಗಿದ್ದು, ಮೂರು ಹಂತಗಳಲ್ಲಿ ಶಿಲ್ಪಗಳು ಕಂಡುಬರುತ್ತವೆ. ಕೆಳಗಿನ ಹಂತವು ಸಂಪೂರ್ಣವಾಗಿ ಮಣ್ಣಿನಲ್ಲಿ ಊತು ಹೋಗಿದೆ. ಎರಡನೆಯ ಹಂತದಲ್ಲಿ ಮರಣ ಹೊಂದಿದ ಮಹಾಸತಿಯನ್ನು ಗಂಧರ್ವ ಕನ್ಯೆಯರು ಪಲ್ಲಕ್ಕಿಯಲ್ಲಿ ಕೂರಿಸಿಕೊಂಡು ಸ್ವರ್ಗಲೋಕಕ್ಕೆ ಕರೆದೊಯ್ಯುತ್ತಿರುವ ದೃಶ್ಯವಿದೆ. ಮೂರನೇ ಹಂತದಲ್ಲಿ ಶಿವಲಿಂಗಕ್ಕೆ ಪೂಜೆ ಸಲ್ಲಿಸುತ್ತಿರುವ ಪುರೋಹಿತರು, ಪದ್ಮಾಸನದಲ್ಲಿ ಕೈಮುಗಿದು ಕುಳಿತಿರುವ ಮಹಾಸತಿ, ನಂದಿ, ಸೂರ್ಯ, ಚಂದ್ರರನ್ನು ಬಿಡಿಸಲಾಗಿದೆ. ನೋಡುವುದಕ್ಕೆ ಅಷ್ಟೇನೂ ಆಕರ್ಷಣೀಯ ಶಿಲ್ಪಗಳು ಕಂಡುಬರುವುದಿಲ್ಲ.

**ಮಾದಿಹಳ್ಳಿಯ ವೀರಗಲ್ಲುಗಳು:–** ತುರುವೇಕೆರೆಯಿಂದ ಸಂಪಿಗೆ ಗ್ರಾಮಕ್ಕೆ ಹೋಗುವ ಮಾರ್ಗದಲ್ಲಿ ಮಾದಿಹಳ್ಳಿ ಗ್ರಾಮವು ಕಂಡುಬರುತ್ತದೆ. ಊರ ಹೊರವಲಯದಲ್ಲಿ ಒಂದು ವೀರಗಲ್ಲು ದೊರೆತಿದೆ. ಈ ವೀರಗಲ್ಲನ್ನು ಕಣಶಿಲೆಯಲ್ಲಿ ಕೆತ್ತಲಾಗಿದ್ದು, ಸುಮಾರು 5 ಅಡಿ ಎತ್ತರವಾಗಿದೆ. ಈ ವೀರಗಲ್ಲಿನ ಮೇಲ್ಭಗದಲ್ಲಿ ಶಾಸನ ಕಂಡುಬರುತ್ತದೆ. ಸ್ವಸ್ತಿಶ್ರೀ ಕೊರವಣಿಗ ನಾಗಪಾರಯ್ಯ ಬೆಳ್ಳರ್ತದ ಮುಂದೆ... ಸವೆದಿದ್ದು ಸತ್ತನು ಎಂದು ಬರೆಯಲಾಗಿದೆ.[11] ಕೆಳಗಿನ ಹಂತದಲ್ಲಿ ಮೂವರು ವೀರರು ಹೋರಾಟದಲ್ಲಿ ತೊಡಗಿರುವ ದೃಶ್ಯವಿದೆ. ಹೋರಾಡಿ ಮಡಿದ ವೀರನನ್ನು ದೇವಲೋಕಕ್ಕೆ ಕರೆದೊಯ್ಯುತ್ತಿರುವ ಗಂಧರ್ವ ಕನ್ಯೆಯರ ಚಿತ್ರಣವಿದೆ. ಇದೇ ಗ್ರಾಮದ ಕಾಡಿನ ಮಧ್ಯೆ ಒಂದು ವೀರಗಲ್ಲು ದೊರೆತಿದೆ. ಇದು ಕಣಶಿಲೆಯಲ್ಲಿ ರಚಿತವಾಗಿದ್ದು, ಮಣ್ಣಿನಲ್ಲಿ ಮುಚ್ಚಿಹೋಗಿದ್ದಂತಹ ಈ ವೀರಗಲ್ಲನ್ನು ನನ್ನ ಕ್ಷೇತ್ರಕಾರ್ಯದ ಸಮಯದಲ್ಲಿ ಆ ಗ್ರಾಮದವರ ಅನುಮತಿ ಪಡೆದು ಮಣ್ಣನ್ನು ತೆಗೆದು ಛಾಯಾಚಿತ್ರ ತೆಗೆದುಕೊಂಡು ಬಂದಿದ್ದೇನೆ. ಈ ವೀರಗಲ್ಲಿನಲ್ಲಿ ಮೂರು ಹಂತಗಳಲ್ಲಿ ಶಿಲ್ಪ ಕೆತ್ತನೆಗಳಿದ್ದು, ಕೆಳಗಿನ ಹಂತದಲ್ಲಿ ಒಬ್ಬ ವೀರಪುರುಷನು ಶತ್ರುವಿನೊಡನೆ ಹೋರಾಡುತ್ತಿದ್ದಾನೆ. ಹೋರಾಡಿ ಮರಣವನ್ನಪ್ಪಿದ ವೀರನನ್ನು

ಎರಡನೆ ಹಂತದಲ್ಲಿ ಗಂಧರ್ವ ಕನ್ಯೆಯರು ದೇವಲೋಕಕ್ಕೆ ಕರೆದೊಯ್ದು, ಮೇಲಿನ ಹಂತದಲ್ಲಿ ಪಲಕ್ಕಿಯಲ್ಲಿ ಕೂರಿಸಿರುವುದು ಕಂಡುಬರುತ್ತದೆ. **(ಚಿ.ಸಂ.172)**

**ವೀರಗಲ್ಲುಗಳು-ನಡುವಿನ ಹಳ್ಳಿ:-** ತುರುವೇಕೆರೆ ತಾಲೂಕು ನಡುವಿನ ಹಳ್ಳಿಯ ತಿರುಮಲಗೌಡನ ಹೊಲದಲ್ಲಿರುವ ಹುಚ್ಚಮ್ಮ ದೇವಾಲಯದ ಪಶ್ಚಿಮ ದಿಕ್ಕಿನಲ್ಲಿ ಎರಡು ವೀರಗಲ್ಲುಗಳು ಕಂಡುಬರುತ್ತವೆ. **(ಚಿ.ಸಂ.173)**

**ಒಂದನೆಯ ವೀರಗಲ್ಲು:-** ಇದು ಸುಮಾರು 3 ಅಡಿ ಎತ್ತರವಿರುವ ಈ ವೀರಗಲ್ಲನ್ನು ಬಳಪದ ಕಲ್ಲಿನಲ್ಲಿ ರಚಿಸಲಾಗಿದೆ. ಇದರ ಅಡ್ಡಪಟ್ಟಿಕೆಯ ಮೇಲೆ ಶಾಸನವನ್ನು ಬರೆಸಲಾಗಿದೆ. ಶ್ರೀ ಪರೀಧಾವಿ ಸಂವತ್ಸರದ ಮುಂದೆ ಸವೆದಿದ್ದು... ದಿಬಿದ ವೀರಗಲ್ಲು ಎಂದಿದೆ.[12] ಕೆಳಗಿನ ಹಂತದಲ್ಲಿ ಕುದುರೆಯನ್ನೇರಿ ಬಂದ ವೀರನೊಂದಿಗೆ ಮತ್ತೋರ್ವ ವೀರನು ಕತ್ತಿ ಗುರಾಣಿ ಹಿಡಿದು ಎದುರಾಳಿ ವೀರನ ಕುದುರೆಯ ತಲೆಯ ಭಾಗಕ್ಕೆ ತಿವಿಯುತ್ತಾ ಇದ್ದು, ಕುದುರೆಯ ಮೇಲಿರುವ ವೀರನು ಮುಂದಿನ ಪುರುಷನಿಗೆ ಕತ್ತಿಯಿಂದ ಹೊಡೆಯುತ್ತಿರುವಂತೆ ಕೆತ್ತಲಾಗಿದ್ದು, ಕುದುರೆಯ ಸವಾರನು ಹಿಂದಿರುವ ಮತ್ತೋರ್ವನು ಬಿಲ್ಲಿನಿಂದ ಬಾಣ ಬಿಡುತ್ತಿರುವಂತೆ ರಚಿಸಲಾಗಿದೆ. ಮೇಲಿನ ಹಂತದಲ್ಲಿ ಶಿವಲಿಂಗಕ್ಕೆ ಪುರೋಹಿತರು ಪೂಜೆ ಸಲ್ಲಿಸುತ್ತಿದ್ದು, ಪುರೋಹಿತರ ಹಿಂದೆ ನಂದಿ, ವೀರಪುರುಷನು ಪದ್ಮಾಸನದಲ್ಲಿ ಕುಳಿತು ದೇವರಿಗೆ ನಮಿಸುತ್ತಿರುವಂತೆ ಕೆತ್ತಲಾಗಿದೆ. ಮೇಲ್ಭಾಗದಲ್ಲಿ ಸೂರ್ಯ, ಚಂದ್ರರನ್ನು ಬಿಡಿಸಿದ್ದು ಮಧ್ಯದಲ್ಲಿ ಕೀರ್ತಿಮುಖವಿದೆ.

**ಎರಡನೆಯ ವೀರಗಲ್ಲು:-** ಈ ವೀರಗಲ್ಲು ಸುಮಾರು 4 ಅಡಿ ಎತ್ತರವಿದ್ದು, ಎರಡು ಅಡಿ ಅಗಲವಾಗಿದೆ. ಎರಡು ಹಂತಗಳಲ್ಲಿ ಶಿಲ್ಪಗಳನ್ನು ಬಿಡಿಸಲಾಗಿದ್ದು, ಕೆಳಗಿನ ಹಂತದಲ್ಲಿ ಕುದುರೆಯನ್ನೇರಿ ಬಂದ ವೀರ ಪುರುಷನು ಶತ್ರುವಿಗೆ ಈಟಿಯಿಂದ ತಿವಿಯುತ್ತಿದ್ದು, ಶತ್ರು ಸೈನಿಕನು ಹಿಮ್ಮೆಟ್ಟುತ್ತಿರುವಂತೆ ಕೆತ್ತಲಾಗಿದೆ. ಕುದುರೆ ಸವಾರನ ಹಿಂದೆ ಸೇವಕನೊಬ್ಬ ವೀರಯೋಧನಿಗೆ ಛತ್ರಿಯನ್ನು ತಲೆಯ ಮೇಲೆ ಹಿಡಿದಿರುವ ದೃಶ್ಯವಿದೆ. ಕುದುರೆಯು ತನ್ನ ಮುಂಗಾಲನ್ನು ಎತ್ತಿ ಶತ್ರುವನ್ನು ಬೆನ್ನಟ್ಟುವಂತಿದೆ. ಎರಡನೇ ಹಂತದಲ್ಲಿ ಶಿವಲಿಂಗಕ್ಕೆ ಪೂಜೆ ಸಲ್ಲಿಸುತ್ತಿರುವ ಅರ್ಚಕ, ವೀರಮರಣ ಹೊಂದಿದ ಪುರುಷನು ಪದ್ಮಾಸನದಲ್ಲಿ ತನ್ನ ಎರಡು ಕೈಗಳನ್ನು ಜೋಡಿಸಿ ದೇವರಿಗೆ ನಮಿಸುತ್ತಿರುವಂತೆ ರಚಿಸಿದ್ದು ಪಕ್ಕದಲ್ಲಿ ನಂದಿಯನ್ನು ಬಿಡಿಸಲಾಗಿದೆ. ಮೇಲ್ಭಾಗದಲ್ಲಿ ಸೂರ್ಯ, ಚಂದ್ರರನ್ನು ಕೆತ್ತನೆ ಇದ್ದು ಅಂತ್ಯ ಭಾಗದಲ್ಲಿ ಕೀರ್ತಿಮುಖ ಬಿಡಿಸಲಾಗಿದೆ.

**ಸೂಳೆಕೆರೆಯ ವೀರಗಲ್ಲುಗಳು:-** ಸೂಳೆಕೆರೆಯ ಗ್ರಾಮದಲ್ಲಿ ನಿರ್ಮಾಣವಾಗಿರುವ ಈಶ್ವರ ದೇವಾಲಯದ ಮುಂಭಾಗ ಪೂರ್ವಾಭಿಮುಖವಾಗಿ ಒಟ್ಟು ನಾಲ್ಕು ವೀರಗಲ್ಲುಗಳನ್ನು ನಿಲ್ಲಿಸಲಾಗಿದ್ದು, ಈ ಎಲ್ಲಾ ವೀರಗಲ್ಲುಗಳು ಬಳಪದ ಕಲ್ಲಿನಲ್ಲಿ ಕೆತ್ತಲ್ಪಟ್ಟಿವೆ. **(ಚಿ.ಸಂ.174)**

**ಒಂದನೆಯ ವೀರಗಲ್ಲು:-** ಇದರ ಮೂರು ಹಂತಗಳಲ್ಲಿ ಶಿಲ್ಪಗಳನ್ನು ಕಂಡರಿಸಲಾಗಿದೆ. ಕೆಳಗಿನ ಹಂತದಲ್ಲಿ ಇಬ್ಬರು ವೀರರು ಬಿಲ್ಲುಬಾಣ ಕತ್ತಿಯನ್ನು ಹಿಡಿದು ಹೋರಾಟದಲ್ಲಿ ತೊಡಗಿದ್ದಾರೆ. ಎರಡನೆಯ ಹಂತದಲ್ಲಿ ಹೋರಾಟದಲ್ಲಿ ಮರಣವನ್ನು ಹೊಂದಿದ ವೀರನನ್ನು ದೇವಕನ್ಯೆಯರು ತಮ್ಮ ಭುಜದ ಮೇಲೆ ವೀರನ ತೋಳುಗಳನ್ನು ಇರಿಸಿಕೊಂಡು ಸ್ವರ್ಗಲೋಕಕ್ಕೆ ಕರೆದೊಯ್ಯುತ್ತಿರುವ ದೃಶ್ಯ ಶಿಲ್ಪವನ್ನು ಬಿಡಿಸಲಾಗಿದೆ. ಮೂರನೆಯ ಹಂತದಲ್ಲಿ ಮರಣ ಹೊಂದಿದ ವೀರನು ದೇವಲೋಕದಲ್ಲಿ ಪದ್ಮಾಸನದಲ್ಲಿ ಕುಳತುಕೊಂಡಿದ್ದಾನೆ. ಅವನ ಎಡಭಾಗದಲ್ಲಿ ಶಿವಲಿಂಗ ಮತ್ತು ನಂದಿಯ ಶಿಲ್ಪಗಳನ್ನು ಬಿಡಿಸಲಾಗಿದೆ. ಮೇಲೆ ಸೂರ್ಯ, ಚಂದ್ರ ಹಾಗೂ ಕೀರ್ತಿಮುಖಗಳ ಕೆತ್ತನೆಗಳಿವೆ.

**ಎರಡನೆಯ ವೀರಗಲ್ಲು:-** ಈ ವೀರಗಲ್ಲು ಸುಮಾರು 5 ಅಡಿ ಎತ್ತರವಿದ್ದು, ಎರಡೂವರೆ ಅಡಿ ಅಗಲ, 5 ಇಂಚು ದಪ್ಪವಾಗಿದೆ. ಇದೊಂದು ತುರುಗೋಳ್ ವೀರಗಲ್ಲಾಗಿದ್ದು, ಗೋರಕ್ಷಣೆಗಾಗಿ ಗೋವುಗಳ್ಳರೊಟ್ಟಿಗೆ ವೀರನೊಬ್ಬ ಹೋರಾಡುತ್ತಿರುವ ದೃಶ್ಯವನ್ನು ಒಳಗೊಂಡಿದೆ. ಇದರ ಮೂರು ಹಂತಗಳಲ್ಲಿ ಶಿಲ್ಪಗಳನ್ನು ರಚಿಸಲಾಗಿದ್ದು, ಕೆಳಗಿನ ಹಂತದಲ್ಲಿ ಗೋವುಗಳು, ಗೋವುಗಳ ಹಿಂಭಾಗದಲ್ಲಿ ಮರಣಹೊಂದಿದ ಇಬ್ಬರು ವೀರರು ಮುಂತಾದ ಕೆತ್ತನೆಗಳಿವೆ. ವೀರಮರಣವನ್ನೊಂದಿದ ಪುರುಷನ ಪತ್ನಿಯೋರ್ವಳು ನಂತರ ಕತ್ತಿ ಗುರಾಣಿ ಹಿಡಿದು ವೀರನೊಟ್ಟಿಗೆ ಹೋರಾಟದಲ್ಲಿ ತೊಡಗಿದ್ದಾರೆ. ಅವಳ ಎದುರಾಳಿಯು ಸಹ ಮಹಿಳೆಯಾಗಿದ್ದು, ಬಿಲ್ಲು ಬಾಣ ಹಿಡಿದುಕೊಂಡಿದ್ದಾಳೆ. ಮರಣವನ್ನಪ್ಪಿದ ಇಬ್ಬರಲ್ಲಿ ಒಬ್ಬ ಸ್ತ್ರೀಯನ್ನು ದೇವಕನ್ಯೆಯರು ಸ್ವರ್ಗಲೋಕಕ್ಕೆ ಕರೆದೊಯ್ಯುತ್ತಿದ್ದಾರೆ. ದೇವಲೋಕದಲ್ಲಿ ಶಿವಲಿಂಗದ ಪಕ್ಕದಲ್ಲಿ ಮರಣ ಹೊಂದಿದ ಸ್ತ್ರೀಯು ಧ್ಯಾನಾಸಕ್ತಳಾಗಿ ಕುಳತಿದ್ದಾಳೆ. ಮೇಲ್ಭಾಗದಲ್ಲಿ ಸೂರ್ಯ, ಚಂದ್ರರ ಚಿಹ್ನೆಗಳಿವೆ.

**ಮೂರನೆಯ ವೀರಗಲ್ಲು:-** ಈ ವೀರಗಲ್ಲು ಸುಮಾರು 5 ಅಡಿ ಎತ್ತರವಿದ್ದು, ನಾಲ್ಕು ಅಡಿ ಅಗಲವಾಗಿದೆ. ಇದರ ಅಡ್ಡಪಟ್ಟಿಕೆಯ ಮೇಲೆ ಶಾಸನವನ್ನು ಬರೆಯಲಾಗಿದೆ. ಕ್ರಿ.ಶ.1052ರ ಕಾಲಮಾನಕ್ಕೆ ಸೇರಬಹುದಾದ ಈ ಶಾಸನ ಪಾಠವು ಅಲ್ಲಲ್ಲಿ ಅಳಿಸಿ ಹೋಗಿದೆ. ಕ್ರಿ.ಶ. 1052ನೆಯ ವಿಜಯ ಸಂವತ್ಸರ ಸೋಮವಾರ ಗಂಗವಾಡಿಯ ನಾಡಿನ ಬಂಗವಾಡಿಯ...

ಮುಂದೆ ಸವೆದಿದ್ದು, ನಾಗಗೌಡನ ಮಗ ನೀರಗುಂದನಾಡು ಎಂಬ ಉಲ್ಲೇಖವಿದ್ದ ಸುರಲೋಕಕ್ಕೇ ಪ್ರಾಪ್ತನಾದ ಎಂದಿದೆ. ಮೂರು ಹಂತಗಳಲ್ಲಿ ಶಿಲ್ಪಗಳನ್ನು ಕಂಡರಿಸಲಾಗಿದೆ. ಕೆಳಗಿನ ಹಂತದಲ್ಲಿ ಗೋವುಗಳ್ಳರು ತುರುಗಳನ್ನು ಕರೆದ್ಪೊಯ್ಯುತ್ತಿರುವಾಗ ವೀರನೊಬ್ಬನು ಅವರ ವಿರುದ್ಧ ಹೋರಾಡುತ್ತಿರುವ ದೃಶ್ಯವಿದೆ. ಕೈಯಲ್ಲಿ ಭರ್ಜಿ ಮತ್ತು ಕತ್ತಿಗಳನ್ನು ಹಿಡಿದು ಗೋವುಗಳ್ಳರಿಗೆ ತಿವಿಯುತ್ತಿದ್ದಾನೆ. ಎರಡನೆಯ ಹಂತದಲ್ಲಿ ದೇವಕನ್ನಿಕೆಯರು ವೀರಮರಣ ವನ್ನಪ್ಪಿದ ಪುರುಷನನ್ನು ಪಲ್ಲಕ್ಕಿಯಲ್ಲಿ ಕೂರಿಸಿಕೊಂಡು ದೇವಲೋಕಕ್ಕೆ ಕರೆದೊಯ್ಯುತ್ತಿರುವ ದೃಶ್ಯವಿದೆ. ಮೂರನೆ ಹಂತದಲ್ಲಿ ಶಿವಲಿಂಗಕ್ಕೆ ಪೂಜೆ ಸಲ್ಲಿಸುತ್ತಿರುವ ಪುರೋಹಿತರು, ಮರಣ ಹೊಂದಿದ ಪುರುಷನು ಪದ್ಮಾಸನದಲ್ಲಿ ಕುಳಿತು ಧ್ಯಾನಾಸಕ್ತ ನಾಗಿರುವುದು ನಂದಿ ಮೇಲ್ಭಾಗದಲ್ಲಿ ಸೂರ್ಯ ಚಂದ್ರರ ಕೆತ್ತನೆಗಳಿವೆ.

**ನಾಲ್ಕನೆಯ ವೀರಗಲ್ಲು:-** ಈ ವೀರಗಲ್ಲು ಸುಮಾರು 4 ಅಡಿ ಎತ್ತರವಿದ್ದು, ಮೂರು ಅಡಿ ಅಗಲ ಅರ್ಧ ಅಡಿ ದಪ್ಪವಾಗಿದೆ. ಇದರ ಎರಡು ಹಂತಗಳಲ್ಲಿ ಶಿಲ್ಪಗಳನ್ನು ಬಿಡಿಸಲಾಗಿದ್ದು, ಕೆಳಗಿನ ಹಂತದಲ್ಲಿ ವೀರರು ಹೋರಾಟದಲ್ಲಿ ತೊಡಗಿರುವಂತೆ ಕೆತ್ತಲಾಗಿದ್ದು, ಎರಡನೇ ಹಂತದಲ್ಲಿ ವೀರಮರಣವನ್ನಪ್ಪಿದ ಮಹಾಪುರುಷನನ್ನು ಗಂಧರ್ವ ಕನ್ಯೆಯರು ದೇವಲೋಕಕ್ಕೆ ಕರೆದೊಯ್ಯುತ್ತಿರುವ ದೃಶ್ಯವಿದೆ. ಪ್ರಕೃತಿಯ ವಿಕೋಪಕ್ಕೆ ತುತ್ತಾಗಿ ಈ ವೀರಗಲ್ಲು ಸಾಕಷ್ಟು ಸವೆದು ಹೋಗಿದೆ.

**ಮಹಾಸತಿ ಕಲ್ಲು:-** ಇದೇ ಗ್ರಾಮದ ಊರಿನ ಪೂರ್ವದಿಕ್ಕಿನಲ್ಲಿರುವ ಕೆರೆಯ ದಂಡೆಯ ಮೇಲೆ ಒಂದು ವೀರ ಮಾಸ್ತಿಕಲ್ಲನ್ನು ಇರಿಸಲಾಗಿದೆ. **(ಚಿ.ಸಂ.175)** ಪ್ರಸ್ತುತ ಈ ಊರಿನ ಜನ ಇದನ್ನು 'ಸೂಳಕಾಲಮ್ಮ' ದೇವರಿ ಎಂದು ಪೂಜಿಸುತ್ತಿದ್ದು, ಈ ಊರಿಗೆ 'ಸೂಳೆಕೆರೆ' ಎಂದು ಹೆಸರು ಬರಲು ಈ ಸೂಳೆಕಾಲಮ್ಮ ದೇವರೇ ಕಾರಣವೆಂದು ಹೇಳುತ್ತಾರೆ. ಬೆಣಚು ಕಲ್ಲಿನಲ್ಲಿ ಇದನ್ನು ರಚಿಸಲಾಗಿದ್ದು, ಇದು ಸುಮಾರು 5 ಅಡಿ ಎತ್ತರವಿದ್ದು ಮೂರು ಅಡಿ ಅಗಲವಾಗಿದೆ. ಇದರಲ್ಲಿ ಎರಡು ದೃಶ್ಯ ಸನ್ನಿವೇಶಗಳನ್ನು ಆಯ್ದುಕೊಂಡು ಶಿಲ್ಪಗಳನ್ನು ಬಿಡಿಸಲಾಗಿದೆ. ಕೆಳಹಂತದಲ್ಲಿ ವೀರಮರಣವನ್ನಪ್ಪಿದ ಸತಿಯು ಪದ್ಮಾಸನದಲ್ಲಿ ಕುಳಿತುಕೊಂಡಿದ್ದಾಳೆ. ಈ ಸತಿಯ ಪಕ್ಕದಲ್ಲಿ ವೀರನೋರ್ವನು ಮಚ್ಚಿನ ರೀತಿಯ ಆಯುಧ ಹಿಡಿದುಕೊಂಡು ನಿಂತಿದ್ದಾನೆ. ಎರಡನೇ ಹಂತದಲ್ಲಿ ಮರಣ ಹೊಂದಿದ ಮಹಾಸತಿಯನ್ನು ದೇವಕನ್ಯೆಯರು ಸ್ವರ್ಗಲೋಕಕ್ಕೆ ಕರೆದೊಯ್ಯುತ್ತಿದ್ದಾರೆ. ದೇವಲೋಕದಲ್ಲಿ ಸತಿಯು ಪದ್ಮಾಸನದಲ್ಲಿ ಕುಳಿತು ಧ್ಯಾನವನ್ನು ಮಾಡುತ್ತಿದ್ದು, ಮೇಲ್ಭಾಗ ಭಗ್ನವಾಗಿದೆ.

**ಸೂಳೆಕೆರೆ ಗ್ರಾಮದ ವೀರಭದ್ರ ಸ್ವಾಮಿ ದೇವಾಲಯದ ಒಳಗೆ ಇರುವ ವೀರಗಲ್ಲುಗಳು:–** ಸೂಳೆಕೆರೆ ಗ್ರಾಮದಲ್ಲಿರುವ ವೀರಭದ್ರ ದೇವಾಲಯದ ನವರಂಗದ ಎಡಭಾಗದಲ್ಲಿ ಎರಡು ವೀರಗಲ್ಲುಗಳು ಕಂಡುಬರುತ್ತವೆ.

**ಒಂದನೆಯ ವೀರಗಲ್ಲು:–**ಈ ವೀರಗಲ್ಲು ಬಳಪದ ಕಲ್ಲಿನ ರಚನೆಯಾಗಿದ್ದು, ಸುಮಾರು ನಾಲ್ಕುವರೆ ಅಡಿ ಎತ್ತರ, 3 ಅಡಿ ಅಗಲವನ್ನು ಹೊಂದಿದ್ದು, 10 ಇಂಚು ದಪ್ಪವಾಗಿದೆ. ಇದರಲ್ಲಿ ಮೂರು ಹಂತಗಳಲ್ಲಿ ಶಿಲ್ಪಗಳನ್ನು ಕಂಡರಿಸಲಾಗಿದೆ. ಮಧ್ಯದಲ್ಲಿನ ಅಡ್ಡಪಟ್ಟಿಕೆಗಳಲ್ಲಿ ಶಾಸನಗಳನ್ನು ಬರೆಯಲಾಗಿದೆ. [13] ಈ ಶಾಸನವು ಹೊಯ್ಸಳ ದೊರೆ ವೀರನರಸಿಂಹನ ಆಡಳಿತವನ್ನು ಉಲ್ಲೇಖಿಸುತ್ತದೆ. ವಿಕ್ರಮ ಸಂವತ್ಸರದಲ್ಲಿ ಚಿಕ್ಕವೀರಯ್ಯನೆಂಬುವನು ಕಲ್ಲಕೆರೆ, ಸೂಳೆಕೆರೆ ಪ್ರದೇಶದ ರಕ್ಷಣೆಗಾಗಿ ಮಡಿದನೆಂಬ ವಿಷಯ ಪ್ರಸ್ತಾಪವಾಗುತ್ತದೆ. **(ಚಿ.ಸಂ.176)** ಕೆಳಗಿನ ಹಂತದಲ್ಲಿ ವೀರರಿಬ್ಬರು ಈಟಿಗಳನ್ನು ಹಿಡಿದು ಪರಸ್ಪರ ಹೋರಾಡುತ್ತಿದ್ದಾರೆ. ಹೋರಾಟದಲ್ಲಿ ಎಡಭಾಗದಲ್ಲಿರುವ ವೀರಪುರುಷನು ಬಲಭಾಗದಲ್ಲಿರುವ ವೀರನ ತಲೆಗೆ ಪೆಟ್ಟನ್ನು ನೀಡುತ್ತಿದ್ದಾನೆ. ಈ ಹೊಡೆತವನ್ನು ತಾಳಲಾರದೆ ವೀರನು ತನ್ನ ಕೈಯಲ್ಲಿದ್ದ ದಂಡವನ್ನು ಬಿಟ್ಟು ತನ್ನನ್ನು ರಕ್ಷಿಸಿಕೊಳ್ಳುತ್ತಿರುವಂತೆ ದೃಶ್ಯ ಕಾಣಬಹುದು. ವೀರಮರಣವನ್ನಪ್ಪಿದ ಪುರುಷನನ್ನು ಪಲ್ಲಕ್ಕಿಯಲ್ಲಿ ಕೂರಿಸಿಕೊಂಡು ದೇವಲೋಕಕ್ಕೆ ಕರೆದೊಯ್ಯುತ್ತಿರುವ ದೃಶ್ಯವು ಎರಡನೇ ಹಂತದಲ್ಲಿ ಕಂಡುಬರುತ್ತದೆ. ಮೇಲ್ಭಾಗದಲ್ಲಿ ಶಿವಲಿಂಗದ ಪೂಜೆಯನ್ನು ನೆರವೇರಿಸುತ್ತಿರುವ ಪುರೋಹಿತ, ಅವನ ಹಿಂಭಾಗದಲ್ಲಿ ಪದ್ಮಾಸನದಲ್ಲಿ ಕುಳಿತು ನಮಿಸುತ್ತಿರುವ ವೀರಪುರುಷ, ನಂದಿ, ಸೂರ್ಯ, ಚಂದ್ರರನ್ನು ಕಾಣಬಹುದು.

**ಎರಡನೆಯ ವೀರಗಲ್ಲು:–** ಮೊದಲನೆಯ ವೀರಗಲ್ಲಿನ ಪಕ್ಕದಲ್ಲಿಯೇ ಈ ವೀರಗಲ್ಲನ್ನು ಇರಿಸಲಾಗಿದೆ. ವೀರಪುರುಷರು ತಮ್ಮ ಆಯುಧಗಳನ್ನು ನೆಲಕ್ಕೆ ಮುಖಮಾಡಿ ನಿಲ್ಲಿಸಿ ಒರಗಿ ನಿಂತಿರುವಂತೆ ಕಂಡರಿಸಲಾಗಿದೆ. ಮೈಮೇಲೆ ವಿವಿಧ ಬಗೆಯ ವಸ್ತ್ರಾಭರಣಗಳು, ಕೇಶಾಲಂಕಾರ, ಮುಕುಟ ಮುಂತಾದವುಗಳು ಸುಂದರವಾಗಿ ಕಾಣಬರುತ್ತವೆ.

**ತಂಡಗ ಗ್ರಾಮದ ವೀರಗಲ್ಲುಗಳು:–** ತಂಡಗ ಗ್ರಾಮದ ಮಲ್ಲೇಶ್ವರ ಅಥವಾ ಮೂಲಸ್ಥಾನೇಶ್ವರ ದೇವಾಲಯದ ದಕ್ಷಿಣ ಭಾಗದ ಪ್ರಾಕಾರದ ಗೋಡೆಯಲ್ಲಿ ಉತ್ತರಾಭಿಮುಖವಾಗಿ ಎರಡು ವೀರಗಲ್ಲು ಮತ್ತು ಒಂದು ಶಾಸನಗಲ್ಲನ್ನು ನಿಲ್ಲಿಸಲಾಗಿದೆ.

**ಒಂದನೆಯ ವೀರಗಲ್ಲು:-** ಇದನ್ನು ಬಳಪದ ಕಲ್ಲಿನಲ್ಲಿ ರಚಿಸಲಾಗಿದ್ದು, 4 ಅಡಿ ಎತ್ತರ, 3 ಅಡಿ ಅಗಲ, 10 ಇಂಚು ದಪ್ಪವಾಗಿದೆ. ಇದೊಂದು ತುರುಗೋಳ್ ವೀರಗಲ್ಲಾಗಿದ್ದು, ಅಡ್ಡಪಟ್ಟಿಕೆಗಳಲ್ಲಿ ಶಾಸನವನ್ನು ಬರೆಸಲಾಗಿದೆ. [14] ಈ ಶಾಸನ ಕ್ರಿ.ಶ.1193ರ ಕಾಲಮಾನ ಹೊಂದಿದ್ದು ಹೊಯ್ಸಳ ದೊರೆ ವೀರಬಲ್ಲಾಳನ ಆಡಳಿತದ ಅವಧಿಯನ್ನು ಸೂಚಿಸುತ್ತದೆ. ತಂಡಗ ಗ್ರಾಮವು ಹೊಯ್ಸಳರ ಕಾಲದಲ್ಲಿ ಅಗ್ರಹಾರವಾಗಿದ್ದು ಶಂಕರನಾರಾಯಣ ಪುರ ಎಂದು ಇದನ್ನು ಕರೆಯಲಾಗುತ್ತಿತ್ತು. ವೀರನೊಬ್ಬ ಗೋಕಳ್ಳರ ವಿರುದ್ಧ ಹೋರಾಡಿ ಮಡಿದ ವಿಷಯವನ್ನು ತಿಳಿಸುತ್ತದೆ. ಆದರೆ ವೀರನ ಹೆಸರು ತಿಳಿದುಬಂದಿಲ್ಲ ಮತ್ತು ವೀರಗಲ್ಲನ್ನು ನಿಲ್ಲಿಸಿದವರು ಆತನ ಅಣ್ಣನ ಹೆಂಡತಿ ಮಾಹಿತಿ ತಿಳಿದು ಬರುತ್ತದೆ. **(ಚಿ.ಸಂ.177)** ಇದರಲ್ಲಿ ಮೂರುಹಂತಗಳಲ್ಲಿ ಶಿಲ್ಪಗಳನ್ನು ಕೆತ್ತಲಾಗಿದ್ದು, ಕೆಳಗಿನ ಹಂತದಲ್ಲಿ ಗೋವುಗಳ್ಳರೊಡನೆ ವೀರಪುರುಷನು ಹೋರಾಟ ನಡೆಸುತ್ತಿದ್ದಾನೆ. ವೀರಪುರುಷನ ಹಿಂದೆ ಗೋವುಗಳಿವೆ. ಆ ಪುರುಷನ ಮುಂದೆ ನಾಲ್ಕು ಜನ ಗೋವುಗಳ್ಳರು ವೀರ ಯೋಧನ ಮೇಲೆ ಮುಗಿಬಿದ್ದಿದ್ದಾರೆ. ವೀರನು ಬಿಲ್ಲು, ಬಾಣ, ಕತ್ತಿಯನ್ನು ಸೊಂಟಕ್ಕೆ ಸಿಕ್ಕಿಸಿಕೊಂಡಿದ್ದಾನೆ. ಎರಡನೆ ಹಂತದಲ್ಲಿ ವೀರಮರಣವನ್ನಪ್ಪಿದ ಪುರುಷನು ಪಲ್ಲಕ್ಕಿಯಲ್ಲಿ ಪದ್ಮಾಸನದಲ್ಲಿ ಕುಳಿತಿದ್ದು, ಗಂಧರ್ವ ಕನ್ಯೆಯರು ಅವನನ್ನು ಸ್ವರ್ಗಲೋಕಕ್ಕೆ ಕರೆದೊಯ್ಯುತ್ತಿರುವ ದೃಶ್ಯವು ಸುಂದರವಾಗಿ ಮೂಡಿಬಂದಿದೆ. ದೇವಕನ್ಯೆಯರು ಹೂವಿನ ಹಾರವನ್ನು ಹಿಡಿದು ದೇವಲೋಕಕ್ಕೆ ಸ್ವಾಗತವನ್ನು ಕೋರುತ್ತಿರುವಂತೆ ಕೆತ್ತಲಾಗಿದ್ದು, ಆಕರ್ಷಣೀಯವಾಗಿವೆ. ಮೇಲಿನ ಹಂತದಲ್ಲಿ ವೀರಮರಣವನ್ನಪ್ಪಿದ ಪುರುಷನು ಶಿವಲಿಂಗಕ್ಕೆ ಪುಷ್ಪವನ್ನು ಅರ್ಪಿಸುತ್ತಿದ್ದಾನೆ. ಮೇಲ್ಭಾಗದಲ್ಲಿ ಸೂರ್ಯ, ಚಂದ್ರರ ಚಿಹ್ನೆಗಳಿಂದ ಕೂಡಿದ್ದು ಚಂದ್ರನ ಚಿಹ್ನೆಯು ತೃಟಿತವಾಗಿದೆ.

**ಎರಡನೆಯ ವೀರಗಲ್ಲು:-** ಈ ವೀರಗಲ್ಲನ್ನು ಒಂದನೆಯ ವೀರಗಲ್ಲಿನ ಪಕ್ಕದಲ್ಲಿಯೇ ನಿಲ್ಲಿಸಲಾಗಿದೆ. ಇದು ಸಹ ತುರುಗೋಳ್ ವೀರಗಲ್ಲಾಗಿದ್ದು, ಈ ವೀರಗಲ್ಲಿನ ಅಡ್ಡ ಪಟ್ಟಿಕೆಗಳಲ್ಲಿ ಶಾಸನಗಳನ್ನು ಬರೆಸಲಾಗಿದೆ. [15] ಹೊಯ್ಸಳರ ದೊರೆ ವೀರನರಸಿಂಹನ ಆಳ್ವಿಕೆಯ ಸಂದರ್ಭದಲ್ಲಿ ಹೊನ್ನವೇಯ ಪುತ್ರ ಗೋಕಳ್ಳರ ವಿರುದ್ಧ ಹೋರಾಡಿ ಮಡಿದ ಸಂಗತಿಯನ್ನು ಪ್ರಸ್ತಾಪಿಸುತ್ತಾ ಆತನ ಅಣ್ಣನ ಹೆಂಡತಿಯಾದ ಕೇತವ್ವೆ ವೀರನ ಸ್ಮರಾರ್ಥವಾಗಿ ನಿಲ್ಲಿಸಿದ ವೀರಗಲ್ಲು ಎಂಬ ಮಾಹಿತಿ ನೀಡುತ್ತದೆ. ಈ ವೀರಗಲ್ಲು ಸುಮಾರು 4 ಅಡಿ ಎತ್ತರ, 3 ಅಡಿ ಅಗಲವಾಗಿದ್ದು, 1 ಅಡಿ ದಪ್ಪವಾಗಿದೆ. ಇದರ ಮೂರು ಹಂತಗಳಲ್ಲಿ ಶಿಲ್ಪಗಳನ್ನು ಕಂಡರಿಸಲಾಗಿದ್ದು, ಕೆಳಗಿನ ಹಂತದಲ್ಲಿ ಗೋವುಗಳ ರಕ್ಷಣೆಗಾಗಿ ಒಬ್ಬ ವೀರಪುರುಷನು ಬಿಲ್ಲು ಮತ್ತು ಬಾಣಗಳನ್ನು ಹಿಡಿದುಕೊಂಡು ನಿಂತಿದ್ದಾನೆ. **(ಚಿ.ಸಂ.178)** ಈ ಮಹಾವೀರನ ಮುಂದೆ ಕತ್ತಿ ಮತ್ತು ಗುರಾಣಿ

ಹಿಡಿದು ಗೋವುಗಳ್ಳರು ವೀರನೊಡನೆ ಹೋರಾಡುತ್ತಿದ್ದ ಪುರುಷನೋರ್ವನು ಸತ್ತು ಬಿದ್ದಿದ್ದಾನೆ. ಎರಡನೆಯ ಹಂತದಲ್ಲಿ ಮಡಿದ ವೀರನನ್ನು ಗಂಧರ್ವ ಕನ್ಯೆಯರು ಚಾಮರವನ್ನು ಹಿಡಿದು ಸ್ವರ್ಗಲೋಕಕ್ಕೆ ಕರೆದೊಯ್ಯುತ್ತಿರುವ ದೃಶ್ಯವಿದೆ. ಮೇಲ್ಭಾಗದ ಹಂತದಲ್ಲಿ ಶಿವಲಿಂಗಕ್ಕೆ ಪೂಜೆ ಸಲ್ಲಿಸುತ್ತಿರುವ ಪುರೋಹಿತ, ಪದ್ಮಾಸನದಲ್ಲಿ ಕುಳಿತ ವೀರಪುರುಷ, ನಂದಿ, ಸೂರ್ಯ, ಚಂದ್ರರನ್ನು ಕೆತ್ತಲಾಗಿದೆ.

**ವೀರಗಲ್ಲು-ತುಂಬೇಪುರ:-**ತುಂಬೇಪುರ ಗ್ರಾಮದಲ್ಲಿರುವ ಈಶ್ವರ ದೇವಾಲಯದ ಮುಂಭಾಗದಲ್ಲಿ ಒಂದು ವೀರಗಲ್ಲು ಕಂಡುಬರುತ್ತದೆ. ಈ ವೀರಗಲ್ಲು ಸುಮಾರು 5 ಅಡಿ ಎತ್ತರವಾಗಿದ್ದು, 2 ಅಡಿ ಅಗಲವಾಗಿದೆ. ಬಳಪದ ಕಲ್ಲಿನಲ್ಲಿ ರಚಿಸಲಾಗಿರುವ ಈ ವೀರಗಲ್ಲಿನಲ್ಲಿ ಮೂರು ಹಂತಗಳಲ್ಲಿ ಶಿಲ್ಪಗಳನ್ನು ಕೆತ್ತಲಾಗಿದೆ. **(ಚಿ.ಸಂ.179)** ಕೆಳಗಿನ ಹಂತದಲ್ಲಿ ಇಬ್ಬರು ವೀರಪುರುಷರು ಹೋರಾಟದಲ್ಲಿ ತೊಡಗಿದ್ದಾರೆ. ಒಬ್ಬನು ಕೆಳಗೆ ಬೀಳುತ್ತಿದ್ದು ಅವನನ್ನು ಎತ್ತಿ ಹಿಡಿಯುತ್ತಿದ್ದಾನೆ. ಎರಡನೆ ಹಂತದಲ್ಲಿ ದೇವಕನ್ನಿಕೆಯರು ಮರಣ ಹೊಂದಿದ ವೀರಪುರುಷನನ್ನು ಪಲ್ಲಕ್ಕಿಯಲ್ಲಿ ಕೂರಿಸಿಕೊಂಡು ದೇವಲೋಕಕ್ಕೆ ಕರೆದೊಯ್ಯುತ್ತಿರುವ ದೃಶ್ಯವಿದೆ. ಮೇಲ್ಭಾಗದಲ್ಲಿ ವೀರಪುರುಷ ಪದ್ಮಾಸನದಲ್ಲಿ ಕುಳಿತು ನಮಿಸುತ್ತಿರುವಂತೆ, ಸೂರ್ಯ, ಚಂದ್ರ ಮತ್ತು ಕೀರ್ತಿಮುಖವನ್ನು ಬಿಡಿಸಲಾಗಿದೆ.

# ಪ್ರಮುಖ ಶಿಲ್ಪಗಳು

## ಪೀಠಿಕೆ

ಯಾವುದಾದರೊಂದು ದೇವಾಲಯ ಅಥವಾ ಸ್ಮಾರಕದ ಸಂಶೋಧನೆಯನ್ನು ಕೈಗೊಂಡಾಗ ಆ ದೇವಾಲಯದಲ್ಲಿ ಕಂಡುಬರುವ ಪ್ರಮುಖ ಶಿಲ್ಪಗಳು ಅಧ್ಯಯನದ ದೃಷ್ಟಿಯಿಂದ ಅಭ್ಯಸಿಸಲು ಮತ್ತು ವಿಮರ್ಶಿಸಲು ಅನಿವಾರ್ಯವಾಗಿರುತ್ತದೆ. ಕಾರಣ ಶಿಲ್ಪಗಳು ಇತಿಹಾಸದ ಕಾಲವನ್ನು ನಿರ್ಣಯಿಸುವುದರಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತವೆ. ಪ್ರಾಚೀನ ಭಾರತದಲ್ಲಿ ಅಂದರೆ ವೇದಗಳ ಕಾಲದಲ್ಲಿ ಅನೇಕ ಗ್ರಂಥಗಳು ಶಿಲ್ಪಕಲೆಗೆ ಸಂಬಂಧಿಸಿದಂತೆ ರಚಿತವಾಗಿವೆ. 'ಶಿಲ್ಪ' ಎಂಬ ಶಬ್ಧವು ಶೀಲ್ ಸಮಾಧೌ ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ.

ನಾನಾವಿಧಾನಂ ವಸ್ತೂನಾಂ ಯಂತ್ರಾಣಾಂ ಕಲ್ಪಸಂಪದಾಮ್

ಧಾತೂನಾಂ ಸಾಧನಾನಾಂ ಚ ವಾಸ್ತೂನಾಂ ಶಿಲ್ಪಸಂಜ್ಞತಮ್

ಅಂದರೆ ನಾನಾ ಪ್ರಕಾರದ ವಸ್ತುಗಳು, ಯಂತ್ರಗಳು, ಯುಕ್ತಿ ಪ್ರಯುಕ್ತಿಗಳೂ, ಧಾತು, ಸಾಧನ, ಕೃತ್ರಿಮ ಪದಾರ್ಥ ಮತ್ತು ಮಂದಿರ ಮೊದಲಾದವುಗಳಗೆ ಶಿಲ್ಪವೆನ್ನುತ್ತಾರೆ ಎಂದು ಭೃಗುವು ಶಿಲ್ಪದ ಲಕ್ಷಣ ನೀಡಿದ್ದಾನೆ. ಶಿಲ್ಪಜ್ಞಾನ, ಶಿಲ್ಪಪ್ರಕಾಶ, ಶಿಲ್ಪಸಂಗ್ರಹ, ಶಿಲ್ಪಕಲಾದೀಪ, ಶಿಲ್ಪ ಸಾಹಿತ್ಯ, ಶಿಲ್ಪರತ್ನಾಕರ, ಶಿಲ್ಪಾವಸಂತ, ಶಿಲ್ಪಜ್ಞಾನಸಾರ, ಶಿಲ್ಪವಿಜ್ಞಾನ, ಶಿಲ್ಪಸರ್ವಸ್ವ ಸಂಗ್ರಹ, ಶಿಲ್ಪಾರ್ಥಸಾರ, ಶಿಲ್ಪಶಾಸ್ತ್ರಸಾರ, ಶಿಲ್ಪಲೇಖ, ಶಿಲ್ಪಸಂಗ್ರಹ, ಶಿಲ್ಪದೀಪಿಕಾ, ಶಿಲ್ಪದೀಪಕ, ಶಿಲ್ಪವಿಷಯ ಮುಂತಾದ ಸಂಸ್ಕೃತ ಗ್ರಂಥಗಳು ಶಿಲ್ಪಕಲೆಯ ಬಗೆ ವಿವರಿಸುತ್ತವೆ. [16] ಧಾರ್ಮಿಕ ಶ್ರದ್ಧೆಯು ಜೀವನದ ಒಂದು ಪ್ರಮುಖ ಅಂಶ ಎನಿಸಿರುವ ಭಾರತದಲ್ಲಿ ಪ್ರಾಚೀನ ಕಾಲದಿಂದಲೂ ದೇವಾಲಯಗಳನ್ನು ನಿರ್ಮಿಸಿರುವುದನ್ನು ಕಾಣುತ್ತೇವೆ. ಈ ದೇವಾಲಯದ ಮುಖ್ಯ ಗರ್ಭಗೃಹದಲ್ಲಿರುವ ವಾಸ್ತುವಿಗೆ ದೇವತೆ ಎನ್ನುತ್ತೇವೆ. ಇವುಗಳ ರೂಪವನ್ನು ತಯಾರಿಸಿರುವ ದೇವತೆಗಳ ಮೂರ್ತಿಯನ್ನು ಶಿಲ್ಪ ಎಂದು ಕರೆಯುತ್ತಾರೆ.[17] ದೇವಾಲಯಗಳು ನಿರ್ಮಾಣವಾದಂತೆ ಶಿಲ್ಪಗಳು ರೂಪಗೊಂಡು ವಾಸ್ತುವಿನ ಸಿರಿವಂತಿಕೆಯನ್ನು ಹೆಚ್ಚಿಸಿದವು. ದೇವಾಲಯದ ವಾಸ್ತುಶಿಲ್ಪವು ಅಧಿಕ ವರ್ಷಗಳ ಕಾಲ ನಶಿಸದೆ ಉಳಿಯಬೇಕು. ಶ್ರೀಮಂತಿಕೆಯಿಂದ ಕೂಡಿದ್ದು ಆಕರ್ಷಣೀಯವಾಗಿರಬೇಕು. ಉತ್ತಮ ಗಾಂಭೀರ್ಯತೆಯ ಜೊತೆಗೆ ಚೆಲುವು ಮೈಗೂಡಿಕೊಂಡಿರಬೇಕು ಇತ್ಯಾದಿ ಉದಾತ್ತ ಭಾವನೆಗಳ ರೂಪದಲ್ಲಿ ಶಿಲ್ಪಗಳು ಹೆಚ್ಚಾಗಿ ದೇವಾಲಯಗಳ ವಾಸ್ತುವಿನೊಂದಿಗೆ ಶಿಲ್ಪಕ್ಕೆ ಹೆಚ್ಚು ಮೆರುಗನ್ನು ನೀಡಿ

ಪೋಷಿಸಿ ಬೆಳೆಸಿದ್ದಾರೆ ಎಂಬುದು ಶ್ರೇಷ್ಠಕರವೆನಿಸಿದೆ ಈ ಬೆಳವಣಿಗೆ ಹೆಚ್ಚಾಗಿ ಕಂಡುಬಂದಿದ್ದು ಹೊಯ್ಸಳರ ಅವಧಿಯಲ್ಲಿ ಎಂದರೆ ತಪ್ಪಾಗಲಾರದು. ಈ ಹಿನ್ನೆಲೆಯಲ್ಲಿ ಶಿಲ್ಪಗಳ ಕಲಾದೃಷ್ಟಿಯಿಂದ ಹೊಯ್ಸಳರ ಶಿಲ್ಪವನ್ನು ಪ್ರತ್ಯೇಕವಾಗಿ ಅಧ್ಯಯನ ಮಾಡುವಷ್ಟು ವಸ್ತು ವಿಷಯವನ್ನು ಹೊಂದಿವೆ. ಪ್ರಸ್ತುತ ತುರುವೇಕೆರೆ ತಾಲೂಕಿನಲ್ಲಿ ಮೈಸೂರು ಒಡೆಯರ ಕಾಲದ ಕೆಲವು ಬಿಡಿಶಿಲ್ಪಗಳು ದೊರೆಯುತ್ತವೆ

ತುರುವೇಕೆರೆಯಿಂದ 8 ಕಿ.ಮೀ. ದೂರದಲ್ಲಿ ಸಂಪಿಗೆ ಗ್ರಾಮಕ್ಕೆ ತೆರಳುವ ಮಾರ್ಗದಲ್ಲಿ ಮಾದಿಹಳ್ಳಿ ಗ್ರಾಮ ಕಂಡುಬರುತ್ತದೆ. ಈ ಗ್ರಾಮದ ವಾಯುವ್ಯ ಭಾಗದಲ್ಲಿ ಪೂರ್ವಾಭಿಮುಖವಾಗಿ ನಿರ್ಮಾಣವಾಗಿರುವ ಈಶ್ವರ ದೇವಾಲಯ ಕಂಡುಬರುತ್ತದೆ. ಈ ದೇವಾಲಯವು ಇತ್ತೀಚೆಗೆ ನವೀಕರಣಗೊಂಡಿದ್ದು ಸಂಪೂರ್ಣವಾಗಿ ಜೀರ್ಣೋದ್ಧಾರಗೊಂಡಿದೆ. ಈ ದೇವಾಲಯದ ಪಕ್ಕದಲ್ಲಿ ಬಳಪದ ಕಲ್ಲಿನಲ್ಲಿ ರಚಿತವಾದ ಕೆಲವು ಮೂರ್ತಿಶಿಲ್ಪಗಳು ಕಂಡುಬರುತ್ತವೆ. ಇವುಗಳು ಹೊಯ್ಸಳ ಶೈಲಿಯಲ್ಲಿದ್ದು ಅಲ್ಲಲ್ಲಿ ತೃಟಿತಗೊಂಡಿವೆ.

**ಗಣಪತಿ**:- ಒಂದು ಅಡಿ ಎತ್ತರವಿರುವ ಮೂಷಿಕ ಪೀಠದ ಮೇಲೆ ಗಣೇಶನನ್ನು ಪ್ರತಿಷ್ಠಾಪಿಸಲಾಗಿದೆ. **(ಚಿ.ಸಂ.180)** ಚತುರ್ಭುಜ ಹೊಂದಿರುವ ಈ ದೇವನು ಉತ್ಕಟಾಸನದಲ್ಲಿ ಕುಳಿತಿದ್ದು ಕೈಗಳಲ್ಲಿ ಪಾಶ, ಅಂಕುಶ, ಫಲ ಮತ್ತು ಮುರಿದ ದಂತ ಹಿಡಿದುಕೊಂಡಿದ್ದಾನೆ. ಈ ಮೂರ್ತಿಶಿಲ್ಪವು ಅಲ್ಲಲ್ಲಿ ತೃಟಿತವಾಗಿದ್ದು ಅಷ್ಟು ಸುಂದರವಾಗಿಲ್ಲ. "ಗಣಾನಾಂ ತ್ವಾ ಗಣಪತಿಂ ಹವಾಮಹೇ" ಎಂಬ ಪ್ರಸಿದ್ಧ ಋಗ್ವೇದ ಮಂತ್ರಗಳಲ್ಲಿ ಗಣಪತಿಯ ಪ್ರಸ್ತಾವನೆ ಬರುತ್ತದೆ. [18]

**ವಿಷ್ಣು**:- ವಿಷ್ಣುವಿನ ಮೂರ್ತಿಶಿಲ್ಪವು ಸುಮಾರು ಐದು ಅಡಿ ಎತ್ತರ ಹೊಂದಿದ್ದು ಚತುರ್ಭುಜ ಹೊಂದಿದೆ. ಭಾಗಶಃ ಇದು ತೃಟಿತವಾಗಿದ್ದು ಒಂದು ಕೈಯಲ್ಲಿ ಗಧೆ ಮಾತ್ರ ಕಂಡುಬರುತ್ತದೆ. **(ಚಿ.ಸಂ.181)** ಉಳಿದಂತೆ ಮೂರು ಕೈಗಳು ಭಗ್ನವಾಗಿವೆ. ಮೈಮೇಲೆ ಬಿಡಿಸಿರುವ ವಸ್ತ್ರಾಭರಣಗಳು ಸುಂದರವಾಗಿವೆ. ಈ ದೇವನ ಇಕ್ಕೆಲಗಳಲ್ಲಿ ಶ್ರೀದೇವಿ ಮತ್ತು ಭೂದೇವಿಯರನ್ನು ಕಾಣಬಹುದು. 'ವಿಷ್ಣು' ಎಂಬ ಪದದ ಅರ್ಥವೇ 'ವಿಷ್' ಅಂದರೆ ಸರ್ವ ವ್ಯಾಸಕೃತಃ, ಆದ್ದರಿಂದಾಗಿಯೇ ವಿಷ್ಣು ಸರ್ವಾಂತರ್ಯಾಮಿ ಎನಿಸಿದ್ದಾನೆ. ಅವನು ಸರ್ವವ್ಯಾಪಕವಾಗಿದ್ದು ಅವನಿಲ್ಲದ ಜಾಗವೇ ಇಲ್ಲ. ವೇದ-ಪುರಾಣಗಳಲ್ಲಿ ಕಂಡುಬರುವಂತೆ ಅವನ ಹೆಸರುಗಳೂ ಸಹ ಅಸಂಖ್ಯಾತವಾಗಿವೆ. ಶಂಕರಾಚಾರ್ಯರು ತರ್ಕಿಸಿರುವಂತೆ ಅವನ ಹೆಸರುಗಳು ಸಹಸ್ರಾರು ಅರ್ಥವೂ ಸಹಸ್ರಾರು.

**ವೇಣುಗೋಪಾಲ:-** ಇದೇ ಸ್ಥಳದಲ್ಲಿ ಸುಮಾರು ಐದು ಅಡಿ ಎತ್ತರವಿರುವ ವೇಣುಗೋಪಾಲ ಮೂರ್ತಿಶಿಲ್ಪವನ್ನು ಇರಿಸಲಾಗಿದೆ. **(ಚಿ.ಸಂ.182)** ಈ ದೇವನು ಚತುರ್ಭುಜ ಹೊಂದಿದ್ದು ತ್ರಿಭಂಗಿಯಲ್ಲಿ ನಿಂತಿದ್ದಾನೆ. ಕೊಳಲನ್ನು ನುಡಿಸುತ್ತಾ ನಿಂತಿರುವ ಇವನು ಹಿಂದಿನ ಎರಡು ಕೈಗಳಲ್ಲಿ ಶಂಖ, ಚಕ್ರ ಇಡಿದಿದ್ದಾನೆ. ಶ್ರೀಕೃಷ್ಣನ ಮುಖಭಂಗಿಗಳು ಯಾವುದೇ ಆದರೂ ಚಿತ್ತಾಕರ್ಷಕ ಹಾಗೂ ಮನಮೋಹಕವಾಗಿರುತ್ತವೆ. ಗೋಪಿಕೆಯರನ್ನು ಕೊಳಲನೂದುತ ಮೋಹಗೊಳಿಸುವ ಭಂಗಿ, ಕಾಳಿಂಗಮರ್ಧನ ಮುಂತಾದ ಭಂಗಿಗಳು ಸುಪ್ರಸಿದ್ಧ.

**ಚತುರ್ಮುಖ ಬ್ರಹ್ಮ:-** ಇದೇ ಸ್ಥಳದಲ್ಲಿ ಸುಮಾರು 4 ಅಡಿ ಎತ್ತರವಿರುವ ಚತುರ್ಮುಖ ಬ್ರಹ್ಮನ ಮೂರ್ತಿ ಶಿಲ್ಪವನ್ನು ಕಾಣಬಹುದು. ಹಂಸದ ಮೇಲೆ ಸುಖಾಸನದಲ್ಲಿ ಕುಳಿತಿರುವ ಈ ದೇವನು ಚತುರ್ಭುಜ ಹೊಂದಿದ್ದು ಕೈಗಳಲ್ಲಿ ಪಾಶ, ಕಮಂಡಲು, ಅಕ್ಷಮಾಲಾ ಮತ್ತು ಪುಸ್ತಕ ಹಿಡಿದಿದ್ದಾನೆ. ಮುಖಭಾಗವು ತೃಟಿತವಾಗಿದ್ದು ಪ್ರಭಾವಳಿಯಲ್ಲಿ ಬಳ್ಳಿ ಸುರುಳಿಗಳ ಕೆತ್ತನೆಯನ್ನು ಕಾಣಬಹುದು. **(ಚಿ.ಸಂ.183)** ಬ್ರಹ್ಮನ ವಾಹನವಾದ ಹಂಸವು ವಿವೇಕ-ವಿವೇಚನೆಗಳ ದ್ಯೋತಕವಾಗಿದೆ. ಅಸ್ತಿತ್ವದಲ್ಲಿರುವ ಪ್ರತಿಯೊಂದಕ್ಕೂ ಬ್ರಹ್ಮನೇ ಮೂಲ ಎನ್ನಬಹುದು. ಹೆಸರೇ ಸೂಚಿಸುವಂತೆ ಅವನು ಅಪರಿಮಿತ ಭೂಮಾದ್ಭೂಮ: ಅವನಿಂದಲೇ ದೇಶ ಕಾಲ ಕಾರಣಗಳು ಜನಿಸುವುವು ಎಂಬ ನಂಬಿಕೆ ಇದೆ.

**ಸಪ್ತಮಾತೃಕೆ ಶಿಲ್ಪಗಳು:-** ಇದೇ ಸ್ಥಳದಲ್ಲಿ ಸಪ್ತಮಾತೃಕೆ ಶಿಲ್ಪವೊಂದು ದೊರೆತಿದ್ದು **(ಚಿ.ಸಂ.184)** ಪುರಾಣಗಳಲ್ಲಿ ಮತ್ತು ಇತರ ಗ್ರಂಥಗಳಲ್ಲಿ ಇವರ ಉಲ್ಲೇಖ ಹಾಗೂ ವರ್ಣನೆ ಇದೆ. ಇವರು ಮೂಲತಃ ಶೈವ ಪಂಥದ ದೇವತೆಗಳಾಗಿದ್ದು ಬ್ರಾಹ್ಮೀ, ಮಹೇಶ್ವರಿ, ಕೌಮಾರಿ, ವೈಷ್ಣವಿ, ವರಾಹಿ, ಇಂದ್ರಾಣಿ, ಚಾಮುಂಡಿ ಇವರೇ ಸಪ್ತಮಾತೃಕೆಯರು, ಸಾಮಾನ್ಯವಾಗಿ ಸ್ತ್ರೀದೇವತೆಗಳನ್ನು ಶಕ್ತಿದೇವತೆಗಳೆಂದು ಕರೆಯುತ್ತಾರೆ. ಇವರು ಒಂದೊಂದು ದೈವದ ಶಕ್ತಿಯೆಂದು ಹೇಳುತ್ತಾರೆ.[19] ಇವರನ್ನು ಕ್ರಮವಾಗಿ ಬ್ರಹ್ಮ, ಮಹೇಶ್ವರ, ಕುಮಾರ, ವಿಷ್ಣು, ವರಾಹ, ಇಂದ್ರ, ಯಮ ದೇವರುಗಳ ಶಕ್ತಿದೇವತೆಗಳೆಂದು ಹೇಳುವುದುಂಟು.[20] ಸಪ್ತಮಾತೃಕೆಯರ ಶಿಲ್ಪವನ್ನು ದೇವಾಲಯಗಳ ನವರಂಗದ ಒಂದು ಭಾಗದಲ್ಲಿ ಪಟ್ಟಿಕೆಗಳಲ್ಲಿ ಕೆತ್ತಲಾಗಿದೆ. ಇವುಗಳು ಒಂದೊಂದೇ ಪೀಠದಲ್ಲಿ ಪದ್ಮಾಸನದಲ್ಲಿ ಕುಳಿತಂತೆ ಕಂಡುಬಂದರೂ ಅವರವರ ಲಾಂಛನ ಸಹಿತವಾಗಿ ಶಿಲ್ಪಿಸಲಾಗಿರುತ್ತದೆ. ಕೆಲವೊಮ್ಮೆ ಇವರ ಜೊತೆಯಲ್ಲಿ ಗಣಪತಿ, ಭೈರವ ಮತ್ತು ಶಿವನನ್ನು ಶಿಲ್ಪಿಸಲಾಗಿರುತ್ತದೆ. ವಾಸ್ತುವಿದ್ಯಾ ಗ್ರಂಥದಲ್ಲಿ ಸೂರ್ಯ ಮತ್ತು ಶಕ್ತಿ ದೇವತೆಗಳಿಗೆ ಈ ದೇವಿಯರು ಶ್ರೀಯೊಡನೆ ನಾಲ್ಕು ದಿಕ್ಕುಗಳ ಬಾಗಿಲು ಕಾಯುವವರಾಗಿದ್ದಾರೆ. ಇವರಲ್ಲಿ ಬ್ರಾಹ್ಮೀ ಮತ್ತು ಮಹೇಶ್ವರಿಯರು ಪಶ್ಚಿಮ ಬಾಗಿಲಲ್ಲೂ ಕೌಮಾರಿ ಮತ್ತು ವೈಷ್ಣವಿಯರು

ಉತ್ತರದ ಬಾಗಿಲಲ್ಲೂ ವರಾಹಿ ಮತ್ತು ಇಂದ್ರಾಣಿಯವರು ಪೂರ್ವದ ಬಾಗಿಲಲ್ಲೂ ಚಾಮುಂಡಿ ಮತ್ತು ಶ್ರೀಯರು ದಕ್ಷಿಣ ಬಾಗಿಲಲ್ಲೂ ಇರಬೇಕೆಂದು ತಿಳಿಸಿದೆ. ಹಾಗೆಯೇ ಇವರುಗಳು ಶಕ್ತಿದೇವತೆಗಳಾದುದರಿಂದ ನೀರಿನ ಸೆದೆಯಲ್ಲಿಟ್ಟು ಪೂಜಿಸುವ ಪದ್ಧತಿಯಿದೆ. ಆದುದರಿಂದ ಕೆಲವು ಕಡೆ ಬಾವಿಗಳ ಹಾಗೂ ಕೆರಗಳ ದಡದಲ್ಲಿಟ್ಟು ಪೂಜಿಸುವುದುಂಟು.[21]

**ಮಹೇಶ್ವರಿ:–** ಈಕೆಯನ್ನು ಭೈರವಿ ಎಂತಲೂ ಸಹ ಕರೆಯುತ್ತಾರೆ. ಈಕೆ ಮಹೇಶ್ವರನ ಶಕ್ತಿದೇವತೆಯಾಗಿದ್ದು ವಾಹನ ವೃಷಭ. ಇವಳು ಐದು ಮುಖ, ಮೂರು ಕಣ್ಣು ಹಾಗೂ ಹತ್ತು ಕೈಗಳನ್ನು ಹೊಂದಿದ್ದು ಬಾಲಚಂದ್ರ ಭೂಷಣಳಾಗಿದ್ದಾಳೆ. ಐದು ಬಲಗೈಗಳಲ್ಲಿ ಅಭಯ ಮುದ್ರೆ, ಕೊಡಲಿ, ಶೂಲ, ವಜ್ರ, ಖಡ್ಗವನ್ನು ಐದು ಎಡಗೈಗಳಲ್ಲಿ ವರಮುದ್ರೆ, ಅಂಕುಶ, ನಾಗ, ಗಂಟ, ಮತ್ತು ಪಾಶವನ್ನು ಹಿಡಿದಿದ್ದಾಳೆ.

**ಬ್ರಾಹ್ಮೀ:–** ಹಂಸವಾಹನೆಯಾದ ಬ್ರಾಹ್ಮೀಯು ಬ್ರಹ್ಮನ ಶಕ್ತಿದೇವತೆಯಾಗಿದ್ದು ಬ್ರಹ್ಮನ ರೀತಿಯಲ್ಲಿ ನಾಲ್ಕು ಮುಖ, ಆರು ಕೈಗಳನ್ನು ಹೊಂದಿರುತ್ತಾಳೆ. ಮೂರು ಬಲಗೈಗಳಲ್ಲಿ ವರಮುದ್ರೆ, ಪಾಶ, ವಸ್ತ್ರವಿದ್ದು ಮೂರು ಎಡಗೈಗಳಲ್ಲಿ ಅಭಯ ಮುದ್ರೆ, ಪುಸ್ತಕ, ಕಮಂಡಲವನ್ನು ಹಿಡಿದಿರುತ್ತಾಳೆ.

**ಪಾರ್ವತಿ:– ಶಿ**ವನ ಹೆಂಡತಿಯಾದ ಈಕೆಯನ್ನು ಗೌರಿ ಎಂತಲೂ ಕರೆಯುತ್ತಾರೆ. ಶಿವನನ್ನು ಸ್ತ್ರೀರೂಪದಲ್ಲಿ ಪೂಜಿಸುವ ಭಕ್ತರು ಶಕ್ತಿಯ ಜೊತೆಯಿಲ್ಲದೆ ನಿರಾಕಾರ ಶಿವನಿಗೆ ಯಾವ ಅಸ್ತಿತ್ವವೂ ಇಲ್ಲ ಎನ್ನುತ್ತಾರೆ. ಪಾರ್ವತಿ ಹಾಗೂ ಇನ್ನಿತರ ಸ್ತ್ರೀ ದೇವತೆಗಳಿಗೆ ಪ್ರತ್ಯೇಕ ಗುರಿಗಳನ್ನು ಕಟ್ಟುವ ಪದ್ಧತಿ ಇರಲಿಲ್ಲ, ಆದರೆ ವಿಜಯನಗರದ ಕಾಲದಲ್ಲಿ ನಿರ್ಮಾಣವಾದಂತಹ ದೇವಾಲಯಗಳಲ್ಲಿ ವಾಸ್ತು ಪ್ರಕಾರವಾಗಿ ಒಂದು ಗುಡಿಯನ್ನು ಕಟ್ಟಿಸಿ, ಅಲ್ಲಿ ದೇವಿಯನ್ನು ಪ್ರತಿಷ್ಠಾಪಿಸುವ ಪದ್ಧತಿ ಜಾರಿಗೆ ಬಂತು. ಸುಪ್ರಭೇದಾಗಮದಲ್ಲಿ ಪಾರ್ವತಿಯು ಉನ್ನತ ಸ್ತನದೊಂದಿಗೆ ಹೆಚ್ಚಿನ ಕಂಠಿಹಾರದಿಂದ ಸೌಂದರ್ಯವತಿಯಾಗುತ್ತಾಳೆ ಎಂದು ಉಲ್ಲೇಖಿಸಿದೆ. ಈಕೆ ಚತುರ್ಭುಜೆಯಾಗಿದ್ದು ಕೈಯಲ್ಲಿ ಢಮರು, ತ್ರಿಶೂಲ, ಪಾಶ, ಅಂಕುಶ ಹೊಂದಿರುತ್ತಾಳೆ. ಕೆಲವು ಸಮಯದಲ್ಲಿ ಅಭಯಹಸ್ತದ ಜೊತೆಯಲ್ಲಿ ಅಕ್ಷರಮಾಲೆಯನ್ನು ಹೊಂದಿರುತ್ತಾಳೆ. ಕೆಲವೊಮ್ಮೆ ಶಿವನ ತೊಡೆಯ ಮೇಲೆ ಕುಳಿತಿರುವಂತೆಯೂ ಚಿತ್ರಿಸಲಾಗಿದೆ.

**ವೈಷ್ಣವಿ:–** ಇವಳು ಆರು ಕೈಗಳನ್ನು ಹೊಂದಿದ್ದು ಎಡಗೈಗಳಲ್ಲಿ ಚಕ್ರ, ಶಂಖವನ್ನು ವಿಶೇಷವಾಗಿ ವನಮಾಲೆಯನ್ನು ಹೊಂದಿರುತ್ತಾಳೆ. ಬಲಗೈಗಳಲ್ಲಿ ವರಮುದ್ರೆ, ಗಧೆ, ಪದ್ಮವಿದ್ದು ಎಡಗೈಯಲ್ಲಿ ಅಭಯಮುದ್ರೆ, ಚಕ್ರ ಮತ್ತು ಶಂಖವನ್ನು ಹೊಂದಿರುತ್ತಾಳೆ. ಇವಳ ವಾಹನ ಗರುಡವಾಗಿದ್ದು, ಈಕೆ ವಿಷ್ಣುವಿನ ಶಕ್ತಿದೇವತೆಯಾಗಿದ್ದಾಳೆ.

**ಕೌಮಾರಿ**:– ಈಕೆಯು ಆರು ತಲೆ ಹಾಗೂ ಹನ್ನೆರಡು ಕೈಗಳನ್ನು ಹೊಂದಿರುತ್ತಾಳೆ. ಆರು ಬಲಗೈಗಳಲ್ಲಿ ವರಮುದ್ರೆ, ಶಕ್ತಿ, ಪತಾಕೆ, ದಂಡ, ಪಾತ್ರೆ, ಬಾಣವನ್ನು ಆರು ಎಡೈಗಳಲ್ಲಿ ಅಭಯಮುದ್ರೆ ಕೊಡಲಿ, ಕುಕ್ಕುಟ (ಕೋಳಿ) ಕಮಲ, ಬಿಲ್ಲು ಮತ್ತು ಗಂಟೆಯನ್ನು ಹಿಡಿದಿರುತ್ತಾಳೆ. ಇವಳ ವಾಹನ ನವಿಲಾಗಿದ್ದು ಈಕೆ ಕುಮಾರನ ಶಕ್ತಿದೇವತೆ ಎನ್ನಲಾಗಿದೆ.

**ವರಾಹಿ**:– ವರಾಹದ ಮುಖವನ್ನು ಹೊಂದಿರುತ್ತಾಳೆ. ಅಂದರೆ ದೊಡ್ಡದಾದ ಹೊಟ್ಟೆಯಿಂದ ಕೂಡಿರುತ್ತಾಳೆ. ಇವಳು ಆರು ಕೈಗಳನ್ನು ಹೊಂದಿದ್ದು ಬಲಗೈಗಳಲ್ಲಿ ವರದಹಸ್ತ, ಖಡ್ಗ, ದಂಡವಿದ್ದು ಎಡಗೈಗಳಲ್ಲಿ ಅಭಯಮುದ್ರೆ, ಖೇಟಕ ಮತ್ತು ಪಾತ್ರೆಯನ್ನು ಹೊಂದಿರುತ್ತಾಳೆ ಹಾಗೂ ಇವಳ ವಾಹನ ಗರುಡವಾಗಿದ್ದು ಈಕೆ ವರಾಹನ ಶಕ್ತಿದೇವತೆಯಾಗಿದ್ದಾಳೆ.

**ಗಣೇಶ**:– ಗಣೇಶನ ಹೆಸರುಗಳು ಅಸಂಖ್ಯಾತ, ಗಣಪತಿ, ಗಣನಾಯಕ, ಗಜಮುಖ, ಹೇರಂಬ, ಸುಮುಖ, ಗಜಾಧಿಪತಿ, ಲಂಬಕರ್ಣ, ಲಂಬೋದರ, ಏಕದಂತೆ ಹೀಗೆ ಸಾಕಷ್ಟು ಹೆಸರುಗಳಿಂದ ಕರೆಯುತ್ತಾರೆ. ಗಣೇಶನು ಚತುರ್ಭುಜ ಹೊಂದಿದ್ದು ಈ ದೇವನು ಉತ್ಕಟಾಸನದಲ್ಲಿ ಕುಳಿತಿದ್ದು ಕೈಗಳಲ್ಲಿ ಪಾಶ, ಅಂಕುಶ, ಫಲ ಮತ್ತು ಮುರಿದ ದಂತ ಹಿಡಿದುಕೊಂಡಿದ್ದಾನೆ.

## ಅಡಿಟಿಪ್ಪಣಿಗಳು

1. ಎಂ. ಚಿದಾನಂದಮೂರ್ತಿ. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 2008 ಸಂ-1, ಪು.ಸಂ.1
2. ಆರ್. ಶೇಷಾ ಶಾಸ್ತ್ರಿ. ಕರ್ನಾಟಕದ ವೀರಗಲ್ಲುಗಳು, ಧಾರವಾಡ, 1982, ಪು.ಸಂ.4
3. ಡಿ.ವಿ. ಪರಶಿವಮೂರ್ತಿ. ಕನ್ನಡ ಶಾಸನ ಶಿಲ್ಪ, 2009, ಪು.ಸಂ.12
4. ಆರ್. ಶೇಷಾ ಶಾಸ್ತ್ರಿ. ಕರ್ನಾಟಕದ ವೀರಗಲ್ಲುಗಳು, ಪು.ಸಂ.4
5. ಎಸ್. ಶೆಟ್ಟರ್. ಮೆಮೋರಿಯಲ್ ಸ್ಟೋನ್ , ಪ್ರಸ್ತಾವನೆ
6. ಬಿ.ಎಸ್. ಶೇಠೆ. ಕರ್ನಾಟಕದಲ್ಲಿ ಸತಿ ಪದ್ಧತಿ, ಪು.ಸಂ.259
7. ಎ.ಕ.ಸಂ.12. ಶಾ.ಸಂ.37, ಪು.ಸಂ.135
8. ಎ.ಕ.ಸಂ.12. ಶಾ.ಸಂ.21, ಪು.ಸಂ.128
9. ಎ.ಕ.ಸಂ.12. ಶಾ.ಸಂ.22, ಪು.ಸಂ.129
10. ಎ.ಕ.ಸಂ.12. ಶಾ.ಸಂ.24, ಪು.ಸಂ.130
11. ಎ.ಕ.ಸಂ.16. ಶಾ.ಸಂ.11, ಪು.ಸಂ.65
12. ಎ.ಕ.ಸಂ.16. ಶಾ.ಸಂ.152, ಪು.ಸಂ.71
13. ಎ.ಕ.ಸಂ.16. ಶಾ.ಸಂ.159, ಪು.ಸಂ.73
14. ಎ.ಕ.ಸಂ.12. ಶಾ.ಸಂ.31, ಪು.ಸಂ.133
15. ಎ.ಕ.ಸಂ.12, ಶಾ.ಸಂ.32, ಪು.ಸಂ.134
16. ಶ್ರೀಧರ ಭಾಸ್ಕರ ವರ್ಣೇಕರ್, ಭಾರತೀಯ ವಿದ್ಯೆ, ಭಾರತೀಯ ವಿದ್ಯಾಭವನ, ಬೆಂಗಳೂರು-1987, ಪು.ಸಂ.121-126
17. ಆಚಾರ್ಯ.ಪಿ.ಕೆ, ಎ ಡಿಕ್ಷನರಿ ಆಫ್ ಹಿಂದೂ ಆರ್ಕಿಟೆಕ್ಚರ್, ಪು.ಸಂ.362
18. ಸ್ವಾಮಿ ಹರ್ಷಾನಂದ, ಹಿಂದೂ ದೇವ ದೇವಿಯರು, ಮೈಸೂರು, 2009, ಪು.ಸಂ.124
19. ಆಚಾರ್ಯ.ಪಿ.ಕೆ, ಪೂರ್ವೋಕ್ತ, ಪು.ಸಂ.570
20. ಗೋಪಿನಾಥ್‌ರಾವ್.ಟಿ.ಎ. ಎಲಿಮೆಂಟ್ಸ್ ಆಫ್ ಹಿಂದೂ ಐಕಾನಗ್ರಫಿ, ಪು.ಸಂ.380-81
21. ದೇವರಕೊಂಡಾರೆಡ್ಡಿ. ತಲಕಾಡಿನ ಗಂಗರ ದೇವಾಲಯಗಳು-ಒಂದು ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪು.ಸಂ.26-28

# ಅಧ್ಯಾಯ–6

## ಉಪಸಂಹಾರ

ಕರ್ನಾಟಕವು ಕಲಾ ಪರಂಪರೆಗಳ ತವರು. ಈ ನಾಡಿನಲ್ಲಿ ಅನಾದಿಕಾಲದಿಂದಲೂ ವೈವಿಧ್ಯಮಯ ಆಕಾರಗಳಲ್ಲಿ ವಿನ್ಯಾಸಗಳಲ್ಲಿ ದೇವಾಲಯಗಳು ನಿರ್ಮಾಣವಾಗಿವೆ. ಸಮಾಜದ ಸಾಂಸ್ಕೃತಿಕ ಅವಿಭಾಜ್ಯ ಅಂಗವಾಗಿರುವ ದೇವಾಲಯಗಳು ನಮ್ಮ ಧಾರ್ಮಿಕ ಇತಿಹಾಸ ಮತ್ತು ಸಂಸ್ಕೃತಿಯ ಪ್ರತಿರೂಪಗಳು ಹಾಗೂ ಸಮಾಜದ ಶಕ್ತಿ ಎಂದರೆ ತಪ್ಪಾಗಲಾರದು "ಜ್ಞಾನಂ ವಿಜ್ಞಾನ ಸಹಿತಂ" ಇದುಒಂದು ಪ್ರಾಚೀನ ನುಡಿಗಟ್ಟು. ಯಾವುದೇ ಜ್ಞಾನವನ್ನು ವಿದ್ಯೆಯನ್ನು ಅದರಲ್ಲಿ ಅಡಕವಾಗಿರುವ ವಿಜ್ಞಾನದೊಂದಿಗೆ ತಿಳಿದರೆ ಅದು ಸಂಪೂರ್ಣವೆನಿಸುತ್ತದೆ. ಎಲ್ಲಾ ವಿದ್ಯೆಗಳಿಗೂ ಎರಡು ಮುಖಗಳುಂಟು. ಒಂದು ಹೊರಮುಖ, ಇನ್ನೊಂದು ಒಳಮುಖ, ಹೊರಮುಖ ಸಾಮಾನ್ಯ ಜ್ಞಾನ. ಸಾಮಾನ್ಯ ಜನರಿಗೂ ಸುಲಭವಾಗಿ ಅರ್ಥವಾಗುವಂತದ್ದು ಎಲ್ಲರೂ ತಿಳಿದು ಅನುಭವಿಸಿ ಬಳಸುವಂತಿರುತ್ತದೆ. ಒಳಮುಖ ಸ್ವಲ್ಪ ಸಂಕೀರ್ಣವೂ ಮೇಲ್ನೋಟಕ್ಕೆ ತಿಳಿಯಲಾಗದಂತಹದ್ದು ಗ್ರಹಿಸಲು ಕಷ್ಟ ಆಗುವಂಥದ್ದು. ಇದರಲ್ಲಿ ತಾಂತ್ರಿಕ, ತಾತ್ವಿಕ, ಸೈದ್ಧಾಂತಿಕ ಅಂಶಗಳಿದ್ದು ವಿಶೇಷವೂ ವಿದ್ವತ್ಪೂರ್ಣವು ಆಗಿರುವುದರಿಂದ ಇದು ವಿಜ್ಞಾನವೆನಿಸುತ್ತದೆ.

ದೇವಾಲಯ ವಾಸ್ತುವು ಇದಕ್ಕೆ ಹೊರತಲ್ಲ, ದೇವಾಲಯದ ಸೌಂದರ್ಯವನ್ನು ಆನಂದಿಸಿ ಅದರ ಮೇಲ್ಮೈ ಲಕ್ಷಣಗಳನ್ನು ಅರಿಯುವುದು ಅದನ್ನು ರಚಿಸಿದ ಶಿಲ್ಪಿಯನ್ನು ಪ್ರಶಂಸಿಸುವುದು. ಪ್ರಾಚೀನ ರಾಜಮನೆತನಗಳ ಆಡಳಿತಾವಧಿಯಲ್ಲಿ ನಿರ್ಮಾಣವಾದ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ ಮುಂತಾದ ಅಂಶಗಳ ಬಗ್ಗೆ ಅರಿಯುವುದು ದೇವಾಲಯದ ವಾಸ್ತು ಜ್ಞಾನದ ಒಂದು ಪ್ರಮುಖ ಅಂಶ. ಕರ್ನಾಟಕದ ಇತಿಹಾಸದಲ್ಲಿ ದೇವಾಲಯದ ವಾಸ್ತು ಮತ್ತು ಶಿಲ್ಪಕಲೆ ಬಹಳ ಪ್ರಾಮುಖ್ಯತೆಯನ್ನು ಪಡೆದಿದೆ. ಇತಿಹಾಸ ರಚನೆಯಲ್ಲಿ ಪ್ರಮುಖ ಮೂಲ ಆಕರವಾಗಿ ವಾಸ್ತುಶಿಲ್ಪ ತನ್ನದೇ ಆದ ಪ್ರಾಧಾನ್ಯತೆಯನ್ನು ಹೊಂದಿದೆ ಹಾಗೂ ಧಾರ್ಮಿಕ ಚೇತನದ ಪ್ರತೀಕವಾಗಿದ್ದಂತೆ ವಾಸ್ತುಶಿಲ್ಪವು ಸಮಕಾಲೀನ ಆದ ಕಾಲಘಟ್ಟದಲ್ಲಾದರೂ ಕಲೆ ಮತ್ತು ದೇವಾಲಯದ ವಾಸ್ತುಶಿಲ್ಪಗಳು ಅಂದಿನ ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಜೀವನದ ಅವಿಭಾಜ್ಯ ಅಂಗಗಳಾಗಿವೆ.

ಪ್ರಸ್ತುತ ತುರುವೇಕೆರೆ ತಾಲೂಕಿನ ದೇವಾಲಯಗಳ ವಾಸ್ತುಶಿಲ್ಪಗಳ ಅಧ್ಯಯನವನ್ನು ಅವುಗಳ ಮಾದರಿಯಿಂದ ಹಾಗೂ ಕಲಾಶೈಲಿಗಳ ಹಿನ್ನೆಲೆಯಲ್ಲಿ ಗಮನಿಸಿ ವಾಸ್ತು ಮತ್ತುಶಿಲ್ಪಗಳ ಚಿತ್ರಣವನ್ನು ನೀಡುವ ಒಂದು ಪ್ರಯತ್ನವನ್ನು ಈ ಮಹಾಪ್ರಬಂಧದಲ್ಲಿ

ಮಾಡಲಾಗಿದೆ. ಈ ದೃಷ್ಟಿಯಿಂದ ತುರುವೇಕೆರೆ ತಾಲೂಕಿನಾದ್ಯಂತ ಕಂಡುಬರುವ ಹಾಗೂ ಶಿಥಿಲಾವಸ್ಥೆಯಲ್ಲಿರುವ ದೇವಾಲಯಗಳ ವಾಸ್ತುಶಿಲ್ಪಗಳನ್ನು ನನ್ನ ಪರಿಮಿತಿಯೊಳಗೆ ಕ್ಷೇತ್ರಕಾರ್ಯ ಕೈಗೊಂಡು ವಿವಿಧ ಕಾಲಘಟ್ಟದಲ್ಲಿ ವಿವಿಧ ಪ್ರದೇಶಗಳಲ್ಲಿ ವಿಭಿನ್ನ ಮಾದರಿಯಲ್ಲಿ ನಿರ್ಮಾಣವಾಗಿರುವ ಪ್ರಾಚೀನ ದೇವಾಲಯಗಳ ವಾಸ್ತುಕೃತಿಗಳ ಒಂದು ಸ್ಥೂಲ ಪರಿಚಯದ ಚಿತ್ರಣ ದೊರೆಯುವಂತೆ ಮಾಡಲಾಗಿದೆ. ಪ್ರಸ್ತುತ ಈ ಚಾರಿತ್ರಿಕ ದೇವಾಲಯಗಳನ್ನು ಸಂರಕ್ಷಿಸದೇ ಅವುಗಳನ್ನು ಮುಂದಿನ ತಲೆಮಾರಿಗೆ ಉಳಿಸಿಕೊಳ್ಳಲು ಹೆಚ್ಚಿನ ಪ್ರಯತ್ನವು ನಡೆಯದಿರುವುದರಿಂದ ಅವುಗಳು ಅವನತಿ ಹೊಂದುತ್ತಿವೆ. ಈ ವಿಷಯವು ದೇವಾಲಯ ವಾಸ್ತುಶಿಲ್ಪ ಅಧ್ಯಯನಕಾರರಿಗೆ ಅತ್ಯಂತ ನೋವಿನ ಸಂಗತಿಯಾಗಿದೆ.

ಇತ್ತೀಚಿನ ದಿನಗಳಲ್ಲಿ ಕರ್ನಾಟಕ ರಾಜ್ಯ ಪುರಾತತ್ವ ಇಲಾಖೆ ಮತ್ತು ಭಾರತ ಸರ್ಕಾರದ ಪುರಾತತ್ವ ಇಲಾಖೆಯವರು ಕೆಲವು ದೇವಾಲಯಗಳನ್ನು ಸಂರಕ್ಷಿಸುವ ಕಾರ್ಯ ಕೈಗೊಂಡಿರುವುದು ಸ್ವಲ್ಪ ಸಮಧಾನ ಪಡುವ ಸಂಗತಿಯಾಗಿದೆ. ಜೊತೆಗೆ ಧರ್ಮಸ್ಥಳದ ಧರ್ಮೋತ್ಥಾನ ಟ್ರಸ್ಟ್‌ನವರು ತುರುವೇಕೆರೆಯ ಮೂಲೆಶಂಕರೇಶ್ವರ ಮುಂತಾದ ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಿರುವುದು ಅತ್ಯಂತ ಸಂತೋಷದಾಯಕ ವಿಷಯವಾಗಿದೆ.

ಈ ನನ್ನಅಧ್ಯಯನಕ್ಕೆ ಸಂಬಂಧಿಸಿದಂತೆ ಶಾಸನಾಧಾರಗಳನ್ನು ಮೂಲ ಆಕರಗಳನ್ನಾಗಿ ಇಟ್ಟುಕೊಂಡು ಶಾಸನಗಳಲ್ಲಿ ಉಲ್ಲೇಖಿಸಲಾಗಿರುವ ದೇವಾಲಯಗಳು ಹಾಗೂ ಶಾಸನಗಳಲ್ಲಿ ಉಲ್ಲೇಖಿಸಲ್ಪಡದಿರುವ ದೇವಾಲಯಗಳನ್ನು ವಿವರಣಾತ್ಮಕವಾಗಿ ಅಧ್ಯಯನ ನಡೆಸಿದ್ದೇನೆ. ಈ ದೃಷ್ಟಿಯಿಂದಾಗಿ ತುರುವೇಕೆರೆ ತಾಲೂಕಿನ ದೇವಾಲಯಗಳ ಬೆಳವಣಿಗೆಯ ಸ್ಥೂಲ ಚಿತ್ರಣ ನಮಗೆ ದೊರೆತಂತಾಗಿದೆ. ಇದು ಈ ಅಧ್ಯಯನದ ಪ್ರಮುಖ ಫಲಶೃತಿ ಎಂದರೆ ತಪ್ಪಾಗಲಾರದು.

ಪ್ರಸ್ತುತ ಅಧ್ಯಯನವನ್ನು ಕ್ಷೇತ್ರಕಾರ್ಯದ ಮುಖಾಂತರ ಅಭ್ಯಾಸಿಸಿ ಮಾಹಿತಿ ಸಂಗ್ರಹಿಸಲಾಗಿದೆ. ಈ ರೀತಿಯ ಕೆಲಸ ಈ ತಾಲೂಕಿನ ಮಟ್ಟಿಗೆ ಇದು ಮೊದಲ ಪ್ರಯತ್ನವಾಗಿದೆ. ಏಕೆಂದರೆ ಇದುವರೆವಿಗೂ ಕೆಲವು ದೇವಾಲಯಗಳ ಬಗ್ಗೆ ಹಲವು ವಿದ್ವಾಂಸರು ಬಿಡಿ ಲೇಖನಗಳನ್ನು ಪ್ರಕಟಿಸಿದ್ದು ಇಡಿಯಾಗಿ ಯಾವುದೇ ಅಧ್ಯಯನ ನಡೆಸಿರುವುದಿಲ್ಲ. ತಾಲೂಕಿನ ವಾಸ್ತುಶಿಲ್ಪವನ್ನು ಗಮನದಲ್ಲಿಟ್ಟುಕೊಂಡು ಸಮಗ್ರ ಕ್ಷೇತ್ರಕಾರ್ಯ ಮಾಡಿರುವುದಿಲ್ಲ. ಈ ದಿಸೆಯಲ್ಲಿ ಪ್ರಸ್ತುತ ಸಂಶೋಧನಾ ಮಹಾಪ್ರಬಂಧವು ಈ ಕೊರತೆಯನ್ನು ನೀಗಿಸುವಲ್ಲಿ ಸಮಾಧಾನ ತಂದುಕೊಡುತ್ತಿರುವುದು ತುಂಬಾ ಸಂತೋಷಕರ ವಿಷಯವಾಗಿದೆ. ಈ

ಮಹಾಪ್ರಬಂಧದಲ್ಲಿ ತಾಲ್ಲೂಕಿನಲ್ಲಿರುವ ಮಹತ್ವದ ಹಲವು ದೇವಾಲಯಗಳ ಹಾಗೂ ಶಿಲ್ಪಗಳ ಪರಿಚಯ ನೀಡಲಾಗಿದೆ. ಪ್ರಸ್ತುತ ಸಂಶೋಧನಾ ಮಹಾಪ್ರಬಂಧದ ಅಧ್ಯಯನವನ್ನು ನಾನು ನನ್ನ ಪರಿಮಿತಿಯಲ್ಲಿ ಸಾಧ್ಯವಾದಷ್ಟು ಮಟ್ಟಿಗೆ ಸಮಗ್ರವಾಗಿ ಅಧ್ಯಯನ ಮಾಡಿದ್ದೇನೆ ಹಾಗೂ ಈ ಮಹಾಪ್ರಬಂಧದ ಅಧ್ಯಾಯಗಳಲ್ಲಿ ಚರ್ಚಿಸಲಾಗಿರುವ ಮತ್ತು ನಮೂದಿಸಿರುವ ವಿಷಯಗಳಿಗೆ ಸಂದರ್ಭೋಚಿತವಾಗಿ ಅಲ್ಲಲ್ಲಿ ನನ್ನ ಅಭಿಪ್ರಾಯವನ್ನು ಸ್ಪಷ್ಟಪಡಿಸಿದ್ದೇನೆ. ಈ ಸಂಶೋಧನೆಯ ಪ್ರಮುಖ ಉದ್ದೇಶ ದೇವಾಲಯಗಳ ವಾಸ್ತುಶಿಲ್ಪಗಳ ವಿವರವಾದ ಅಧ್ಯಯನವಾಗಿದೆ. ಆಯಾ ಕಾಲಘಟ್ಟಗಳಲ್ಲಿ ನಿರ್ಮಾಣವಾದ ಎಲ್ಲಾ ದೇವಾಲಯಗಳನ್ನು ಅಧ್ಯಯನ ಮಾಡುವುದರಿಂದ ದೇವಾಲಯದ ಪ್ರತಿಯೊಂದು ಭಾಗದ ವೈಶಿಷ್ಟ್ಯ ಅದರ ಅಸ್ತಿತ್ವ ಮತ್ತು ಅದರ ಸಮಗ್ರ ಅರ್ಥಪೂರ್ಣವಾದಂತಹ ವಿಷಯಗಳನ್ನು ವಿಮರ್ಶಾತ್ಮಕವಾಗಿ ಸೈದ್ಧಾಂತಿಕವಾಗಿ ನೋಡಲು ಸಾಧ್ಯವಾಗುತ್ತದೆ. ಅಂತಹದೊಂದು ಪ್ರಯತ್ನ ಇಲ್ಲಿ ನನ್ನದಾಗಿದೆ. ಪ್ರಸ್ತುತ ಮಹಾಪ್ರಬಂಧದಲ್ಲಿ ನಾನು ಆರು ಅಧ್ಯಾಯಗಳನ್ನು ಮಾಡಿಕೊಂಡಿರುತ್ತೇನೆ.

ಒಂದನೇ ಅಧ್ಯಾಯವು ಪೀಠಿಕೆಯಾಗಿದ್ದು ಇದರಲ್ಲಿ ಸಂಶೋಧನಾ ವಿಷಯಕ್ಕೆ ಸಂಬಂಧಿಸಿದಂತೆ ವಿವರಗಳನ್ನು ತಿಳಿಸಿದ್ದೇನೆ. ತುರುವೇಕೆರೆ ತಾಲೂಕಿನ ಐತಿಹ್ಯ, ಭೌಗೋಳಿಕ ಹಿನ್ನೆಲೆ, ಅಧ್ಯಯನದ ಉದ್ದೇಶ, ವ್ಯಾಪ್ತಿ, ಅಧ್ಯಯನದ ವಿಧಾನ, ಅಧ್ಯಯನದ ಸ್ವರೂಪ, ಇದುವರೆವಿಗೂ ನಡೆದಿರುವ ಅಧ್ಯಯನ, ದೇವಾಲಯದ ಉಗಮ ಮತ್ತು ವಿಕಾಸ ಮುಂತಾದ ಅಂಶಗಳ ಬಗ್ಗೆ ವಿವರಣೆಯನ್ನು ನೀಡಿದ್ದೇನೆ.

ಎರಡನೇ ಅಧ್ಯಾಯದಲ್ಲಿ ಇತಿಹಾಸ ಆರಂಭಕಾಲದಿಂದ ಪ್ರಾರಂಭಿಸಿ ಕರ್ನಾಟಕಕ್ಕೆ ಸೀಮಿತವಾದಂತೆ ತುಮಕೂರು ಜಿಲ್ಲೆಯನ್ನೊಳಗೊಂಡಂತೆ ತುರುವೇಕೆರೆಯ ರಾಜಕೀಯ ಇತಿಹಾಸವನ್ನು ಬಹಳ ಸಂಕ್ಷಿಪ್ತವಾಗಿ ವಿವರಿಸಿ ಆಯಾ ರಾಜಮನೆತನಗಳ ಆಡಳಿತ, ಆ ಕಾಲದ ಸಾಂಸ್ಕೃತಿಕ ಇತಿಹಾಸದ ಪರಿಚಯ ಅದರಲ್ಲೂ ವಾಸ್ತುಶಿಲ್ಪಕ್ಕೆ ಸಂಬಂಧಿಸಿದ ಕೊಡುಗೆಗಳನ್ನು ಸ್ಥೂಲವಾಗಿ ವಿವರಿಸಲಾಗಿದೆ.

ಮೂರನೇ ಅಧ್ಯಾಯದಲ್ಲಿ ದೇವಾಲಯಗಳ ಪ್ರಾಚೀನತೆ, ದೇವಾಲಯದ ವಾಸ್ತುಶಿಲ್ಪ ಹಾಗೂ ವಿವಿಧ ಭಾಗಗಳನ್ನು ದೇವಾಲಯದ ವಾಸ್ತುಗ್ರಂಥಗಳ ಹಿನ್ನೆಲೆಯಲ್ಲಿ ವಿವರಿಸಲಾಗಿದೆ. ಪ್ರಾಚೀನ ದೇವಾಲಯಗಳ ಪ್ರಬೇಧಗಳು ಅವುಗಳ ಕಲಾಲಕ್ಷಣಗಳ ಬಗ್ಗೆ ಚರ್ಚಿಸಲಾಗಿದೆ. ದೇವಾಲಯದ ಪ್ರಮುಖ ಭಾಗಗಳ ಬಗ್ಗೆ ಮಾಹಿತಿಯನ್ನು ನೀಡಲಾಗಿದೆ. ಪ್ರಸ್ತುತ ತುರುವೇಕೆರೆ ತಾಲೂಕಿನಲ್ಲಿ ನಿರ್ಮಾಣವಾಗಿರುವ ಪ್ರಾಚೀನ ದೇವಾಲಯಗಳ ಬಗ್ಗೆ ಅಧ್ಯಯನ ನಡೆಸಲಾಗಿದೆ. ನನ್ನ ಅಧ್ಯಯನದ ದೃಷ್ಟಿಯಿಂದ ಶೈವ ದೇವಾಲಯಗಳು ಮತ್ತು ವೈಷ್ಣವ ದೇವಾಲಯಗಳು

ಎಂದು ವಿಂಗಡಿಸಲಾಗಿದ್ದು ಶೈವ ಹಾಗೂ ವೈಷ್ಣವ ಪಂಥದ ದೇವಾಲಯಗಳ ಬಗ್ಗೆ ಚರ್ಚಿಸಲಾಗಿದೆ. ಕರ್ನಾಟಕದಲ್ಲಿ ಪ್ರಾಚೀನ ಕಾಲದಿಂದಲೂ ಶೈವ ಧರ್ಮವು ಜನಸಾಮಾನ್ಯರ ಧರ್ಮವಾಗಿ ಬೆಳೆದು ಬಂದಿತು. ಇಲ್ಲಿಗಂಗರ ಕಾಲದಿಂದಲೂ ಶೈವ ದೇವಾಲಯಗಳನ್ನು ನಿರ್ಮಿಸಿಕೊಂಡು ಬಂದಿದ್ದಾರೆ ಹಾಗೂ ಇವುಗಳು ಬೆಳೆದು ಬಂದ ಮಾರ್ಗ, ವಾಸ್ತುಶೈಲಿಯ ಮುಖ್ಯ ಲಕ್ಷಣಗಳು ಮುಂತಾದ ವಿಷಯಗಳ ಬಗ್ಗೆ ತಿಳಿಸಲಾಗಿದೆ. ಪ್ರಸ್ತುತ ಇಲ್ಲಿ ಹದಿನೇಳು ಶೈವ ದೇವಾಲಯಗಳು ಕಂಡುಬಂದಿದ್ದು ಅವುಗಳಲ್ಲಿ ಪ್ರಮುಖವಾಗಿ ತುರುವೇಕೆರೆ ಪಟ್ಟಣದ ಮೂಲಶಂಕರೇಶ್ವರ ದೇವಾಲಯ, ನಾಗಲಾಪುರದ ಕೇದಾರೇಶ್ವರ ದೇವಾಲಯ, ಹುಲಿಕಲ್‌ನ ಹಂಸೇಶ್ವರ ಅಥವಾ ಸಂಗಮೇಶ್ವರ ದೇವಾಲಯ, ತಂಡಗದ ಮಲ್ಲೇಶ್ವರ ದೇವಾಲಯ, ಗೋವಿಂದಘಟ್ಟದ ಗಂಗಾಧರೇಶ್ವರ ದೇವಾಲಯ, ಹುಲಿಕಲ್‌ನ ಕಲ್ಲೇಶ್ವರ ದೇವಾಲಯ, ಗೋಣಿ ತುಮಕೂರಿನ ಕಲ್ಲೇಶ್ವರ ದೇವಾಲಯ, ಕೊಂಡಜ್ಜಿಯ ತ್ರಿಕೂಟ ಸೋಮೇಶ್ವರ ದೇವಾಲಯ, ತುರುವೇಕೆರೆಯ ಗಂಗಾಧರೇಶ್ವರ ದೇವಾಲಯ ಇನ್ನೂ ಮುಂತಾದ ದೇವಾಲಯಗಳು ಕಂಡುಬಂದಿದ್ದು ಗಂಗರ ಕಾಲದಿಂದ ಹಿಡಿದು ವಿಜಯನಗರ ಅರಸರಕಾಲದವರೆಗೆ ನಿರ್ಮಾಣವಾಗಿರುವುದನ್ನು ಇಲ್ಲಿ ಕಾಣಬಹುದಾಗಿದೆ. ಅವುಗಳ ಬಗ್ಗೆ ಸಂಬಂಧಿಸಿದ ಸವಿವರವಾದ ಮಾಹಿತಿಯನ್ನು ನೀಡುವಂತಹ ಪ್ರಯತ್ನವನ್ನು ಮಾಡಲಾಗಿದೆ.

ಇದೇ ಅಧ್ಯಾಯದ ಮುಂದುವರೆದ ಭಾಗವಾದ ವೈಷ್ಣವ ದೇವಾಲಯಗಳ ಅಧ್ಯಯನದಲ್ಲಿ ವೈಷ್ಣವ ದೇವಾಲಯಗಳ ಬಗ್ಗೆ ಚರ್ಚಿಸಲಾಗಿದೆ. ದಕ್ಷಿಣ ಕರ್ನಾಟಕವನ್ನು ಕೇಂದ್ರವಾಗಿಟ್ಟುಕೊಂಡು ವೈಷ್ಣವ ಧರ್ಮವು ಹೊಯ್ಸಳರ ಕಾಲದಲ್ಲಿ ಹೆಚ್ಚು ಪ್ರಚಾರಕ್ಕೆ ಬಂದುದು ಸ್ಪಷ್ಟ ಸಂಗತಿಯಾಗಿದೆ. ಇದಕ್ಕೆ ಪ್ರೇರಣೆಯಾದುದು ರಾಮಾನುಜಾಚಾರ್ಯರ ತತ್ವಗಳು. ಇದರ ಪರಿಣಾಮವಾಗಿ ಹೊಯ್ಸಳ ಅರಸರು ಅನೇಕ ವೈಷ್ಣವ ದೇವಾಲಯಗಳನ್ನು ನಿರ್ಮಿಸಿದರು. ಪ್ರಸ್ತುತ ತುರುವೇಕೆರೆ ಪ್ರದೇಶದಲ್ಲಿ ಹದಿನಾರು ವೈಷ್ಣವ ದೇವಾಲಯಗಳು ನಿರ್ಮಾಣವಾಗಿದ್ದು ಅವುಗಳಲ್ಲಿ ಪ್ರಮುಖವಾದವುಗಳೆಂದರೆ ತುರುವೇಕೆರೆಯ ಚನ್ನಕೇಶವ ದೇವಾಲಯ, ಬೇಟೆರಾಯಸ್ವಾಮಿ ದೇವಾಲಯ, ನಾಗಲಾಪುರದ ಚನ್ನಕೇಶವ ದೇವಾಲಯ, ತಂಡಗದ ಚನ್ನಕೇಶವ ದೇವಾಲಯ, ಬೆನಕನಕೆರೆಯ ಚನ್ನಕೇಶವ ದೇವಾಲಯ, ಮಾವಿನಕೆರೆಯ ಬೇಟೆರಾಯಸ್ವಾಮಿ ದೇವಾಲಯ ಮುಂತಾದವುಗಳು ಪ್ರಮುಖವಾಗಿವೆ. ಕೆಲವು ದೇವಾಲಯಗಳು ಶಾಸನಗಳಲ್ಲಿ ಉಲ್ಲೇಖಿಸಲ್ಪಟ್ಟಿದ್ದು ಉಳಿದ ದೇವಾಲಯಗಳ ಬಗ್ಗೆ ಸವಿವರವಾದ ಮಾಹಿತಿಯನ್ನು ನೀಡುವಂತಹ ಪ್ರಯತ್ನವನ್ನು ಮಾಡಲಾಗಿದೆ.

ನಾಲ್ಕನೇ ಅಧ್ಯಾಯವಾದ ಶಾಸನಗಳ ಅಧ್ಯಯನ ಎಂಬ ಶೀರ್ಷಿಕೆಯಡಿ ಈ ಪ್ರದೇಶದಲ್ಲಿ ದೊರೆಯುತ್ತಿರುವ ಶಾಸನಗಳನ್ನು ಸಂಕ್ಷಿಪ್ತವಾಗಿ ಅಧ್ಯಯನ ನಡೆಸುವ ಪ್ರಯತ್ನ ಮಾಡಲಾಗಿದೆ. ಭರತ ಖಂಡದಲ್ಲಿ ಇತರಚಾರಿತ್ರಿಕ ಆಧಾರಗಳ ಅಭಾವ, ಅಸಮರ್ಪಕತೆ, ಅವಿಶ್ವಾಸನೀಯತೆಗಳನ್ನು ಗಮನಿಸಿದಾಗ ಶಾಸನಗಳ ಮಹತ್ವ ಹಾಗೂ ಪ್ರಾಮುಖ್ಯತೆ ಎಷ್ಟೆಂಬುದು ಚೆನ್ನಾಗಿ ವೇದ್ಯವಾಗುತ್ತದೆ. ಅವು ಈ ದೇಶದ ಪ್ರಾಚೀನ ಇತಿಹಾಸವನ್ನು ಪುನರ್ರಚಿಸುವಲ್ಲಿ ಏಕೈಕ ಖಚಿತ ಆಧಾರವಾಗಿವೆ. ಈ ಹಿನ್ನೆಲೆಯಲ್ಲಿ ತುರುವೇಕೆರೆ ತಾಲೂಕಿನಲ್ಲಿ ದೊರೆತಿರುವ ಶಾಸನಗಳ ಮಾಹಿತಿಯನ್ನು ಅಂದರೆ ಶಾಸನ ಇರುವ ಊರು, ದೊರೆತಸ್ಥಳ, ರಾಜವಂಶ, ರಾಜ, ಭಾಷೆ, ಕಾಲ, ಲಿಪಿ, ಉಲ್ಲೇಖದ ಬಗ್ಗೆ ಸವಿವರವಾದ ಮಾಹಿತಿಯನ್ನು ನೀಡಲಾಗಿದೆ.

ಐದನೇ ಅಧ್ಯಾಯದಲ್ಲಿ ಈ ಪ್ರದೇಶದಲ್ಲಿ ಕಂಡುಬರುವ ವೀರಗಲ್ಲು, ಮಾಸ್ತಿಕಲ್ಲುಗಳು ಹಾಗೂ ಪ್ರಮುಖ ಶಿಲ್ಪಗಳ ಬಗ್ಗೆ ವಿವರಣೆ ನೀಡಲಾಗಿದೆ. ಜೀವನದ ಹಂಗನ್ನು ತೊರೆದು ಗ್ರಾಮವನ್ನು ಕಳ್ಳರಿಂದ ರಕ್ಷಿಸಿ, ಶತ್ರುಗಳ ವಿರುದ್ಧ ಸೆಣಸಾಡಿ ಮಡಿದ ವೀರರ ಸ್ಮರಣಾರ್ಥವಾಗಿ ಸ್ಥಾಪಿಸಿದ ಈ ವೀರಗಲ್ಲುಗಳ ಅಧ್ಯಯನವನ್ನು ಕ್ಷೇತ್ರಕಾರ್ಯದ ಮೂಲಕ ಕೂಲಂಕಷವಾಗಿ ದಾಖಲಿಸಿದ್ದೇನೆ. ಹಾಗೆಯೇ ಮಹಾಸತಿಕಲ್ಲುಗಳ ಅಧ್ಯಯನವನ್ನು ಸಹ ನಡೆಸಿದ್ದೇನೆ.

ಆರನೇ ಅಧ್ಯಾಯವು ಉಪಸಂಹಾರವಾಗಿದ್ದು ಇದರಲ್ಲಿ ಸಂಶೋಧನೆಯ ಒಟ್ಟು ಸಾರಾಂಶವನ್ನು ಕ್ರೋಢೀಕರಿಸಲಾಗಿದೆ. ಈ ತಾಲೂಕಿನಲ್ಲಿ ವಿವಿಧ ಗ್ರಾಮಗಳಲ್ಲಿ ಕಾಣಬರುವ ದೇವಾಲಯಗಳ ಹೆಸರು, ಕಾಲ, ನಿರ್ಮಾಣದ ಕರ್ತೃ, ಪೋಷಕರು ಹಾಗೂ ದೇವಾಲಯಗಳ ಸ್ಥಿತಿಗತಿಗಳ ವಿಷಯಗಳನ್ನು ತಿಳಿಸಲಾಗಿದೆ. ಇದರ ಜೊತೆಗೆ ಪರಾಮರ್ಶನ ಗ್ರಂಥಗಳು, ಭೂಪಟಗಳು, ತಳನಕ್ಷೆಗಳು, ದೇವಾಲಯಗಳ ಪಟ್ಟಿ ಮತ್ತು ಛಾಯಾಚಿತ್ರಗಳನ್ನು ನೀಡಲಾಗಿದೆ. ಕ್ಷೇತ್ರಕಾರ್ಯಕ್ಕೆ ಹೋದ ಸಂದರ್ಭದಲ್ಲಿ ಸುಮಾರು 1000 ಛಾಯಾಚಿತ್ರಗಳನ್ನು ತೆಗೆದು ಅವುಗಳಲ್ಲಿ ಅಧ್ಯಯನಕ್ಕೆ ಅನುಗುಣವಾಗಿ ಆಯ್ಕೆಮಾಡಲಾಗಿರುವ ಕೆಲವು ಛಾಯಾಚಿತ್ರಗಳನ್ನು ಸೂಕ್ತವಾಗಿ ಬಳಸಿಕೊಳ್ಳಲಾಗಿದೆ.

ಪ್ರಸ್ತುತವಾಗಿ ನನ್ನ ಈ ಅಧ್ಯಯನವು ತುರುವೇಕೆರೆ ತಾಲೂಕಿಗೆ ಸೀಮಿತವಾಗಿ ರುವುದರಿಂದ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪದ ವಿವರಣೆಯನ್ನು ಆದಷ್ಟು ಮಟ್ಟಿಗೆ ಅಧಿಕೃತವಾಗಿ ಕ್ಷೇತ್ರಕಾರ್ಯವನ್ನು ಮಾಡಿ ಅದಕ್ಕೆ ಸಂಬಂಧಿಸಿದ ಮಾಹಿತಿಗಳನ್ನು ನೀಡಲಾಗಿದೆ. ಪ್ರಸುತ ಕಾಣಬರುವ ದೇವಾಲಯಗಳು, ವೀರಗಲ್ಲುಗಳನ್ನು ಮತ್ತು ಪ್ರಮುಖ ಶಿಲ್ಪಗಳನ್ನು ಸಂರಕ್ಷಿಸಿ, ಕಾಪಾಡಿಕೊಂಡು ಮುಂದಿನ ಪೀಳಿಗೆಗೆ ಹಸ್ತಾಂತರಿಸುವುದು ಆದ್ಯ

ಕರ್ತವ್ಯವಾಗಿದೆ. ಜೊತೆಗೆ ಸಾಂಸ್ಕೃತಿಕವಾಗಿ ನಮ್ಮ ನಾಡಿನ ಜನತೆಗೆ ಮತ್ತೊಮ್ಮೆ ಇದರ ಬಗ್ಗೆ ಮನವರಿಕೆ ಮಾಡಿ ಇವುಗಳನ್ನು ನಾಶಮಾಡದೆ ಸಂರಕ್ಷಿಸುವುದು ಪ್ರತಿಯೊಬ್ಬ ವ್ಯಕ್ತಿಯ ಆದ್ಯ ಕರ್ತವ್ಯವಾಗಿದೆ ಎಂದು ಸಮಾರೋಪಿಸಬಹುದು.

ಈ ನನ್ನ ಅಧ್ಯಯನವು ಪೂರ್ಣಗೊಂಡ ಅನಂತರದಲ್ಲಿ ಈ ತಾಲೂಕಿಗೆ ಸಂಬಂಧಿಸಿದಂತೆ ಇನ್ನೂ ಹಲವು ಮಜಲುಗಳಲ್ಲಿ ಅಧ್ಯಯನ ಮಾಡಬಹುದು ಮತ್ತು ಈ ಕ್ಷೇತ್ರದ ಐತಿಹಾಸಿಕ ಅಧ್ಯಯನ ಇನ್ನೂ ಹೆಚ್ಚಿಗೆ ನಡೆಯಬೇಕಾಗಿದೆ. ಈ ತಾಲೂಕಿನಲ್ಲಿರುವ ಸ್ಥಳನಾಮಗಳು, ಶಾಸನಗಳು, ಕೆರೆಕಟ್ಟೆಗಳು ಹಾಗೂ ಸಾಂಸ್ಕೃತಿಕ ಅಧ್ಯಯನಗಳ ಬಗ್ಗೆ ವಿವರವಾಗಿ ಅಧ್ಯಯನ ಮಾಡಬಹುದಾಗಿದೆ.

## ಪರಾಮರ್ಶನ ಗ್ರಂಥಗಳು


ಅನಂತರಂಗಚಾರ್, ಎನ್.,**ಕರ್ನಾಟಕದ ವಾಸ್ತುಶಿಲ್ಪ,** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 1972.

ಅಪರ್ಣ, ಕೂ.ಸ.,**ದೇವಾಲಯ ವಾಸ್ತುಶಿಲ್ಪ ಪರಿಚಯ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, 1999.

ಗೋಪಾಲ್.ಆರ್., **ತುಮಕೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ**, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, 2009

ಯೋಗೀಶ್ವರಪ್ಪ.ಡಿ.ಎನ್. **ಕಲ್ಪಶೋಧ** (ತುಮಕೂರು ಜಿಲ್ಲೆಯ ಸಂಶೋಧನಾ ಲೇಖನಗಳು) ಪ್ರಗತಿಗ್ರಾಫಿಕ್ಸ್, ಬೆಂಗಳೂರು, 2012

ಕಡಪಟ್ಟಿ, ಎಮ್.ಎನ್., **ಪ್ರಾಚೀನ ಕರ್ನಾಟಕದಲ್ಲಿ ಶೈವಧರ್ಮ,** ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ, 2008.

ಕಲಬುರ್ಗಿ, ಎಂ.ಎಂ., (ಸಂ), **ಮಾನಸೋಲ್ಲಾಸ, ಸಂಪುಟ-1 ಮತ್ತು 2,** ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, 1988.

ಕಲಬುರ್ಗಿ, ಎಂ.ಎಂ.**ಸಮಾಧಿ ಬಲಿದಾನ, ವೀರಮರಣ ಸ್ಮಾರಕಗಳು,** ಬೆಂಗಳೂರು, 1980

ಕೃಷ್ಣರಾಯ, ಅ.ನ.(ಸಂ), **ಭಾರತೀಯ ಸಂಸ್ಕೃತಿ ದರ್ಶನ,** ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆ, ಮೈಸೂರು ಸರ್ಕಾರ, ಬೆಂಗಳೂರು, 1962.

ಕೃಷ್ಣಶರ್ಮ ಬೆಟಗೇರಿ, **ಕರ್ನಾಟಕ ಜೀವನ,** ಧಾರವಾಡ, 1963

ಗುಂಡಪ್ಪ.ಡಿ.ವಿ. ಅಂತಃಪುರ ಗೀತೆಗಳು, ಮೈಸೂರು-1967

ಗುರುರಾಜರಾವ್, ಬಿ.ಕೆ.,**ಕರ್ನಾಟಕದ ಲೋಹಯುಗ ಸಂಸ್ಕೃತಿಗಳು,** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 1997.

ಗೋಪಾಲ, ಬಾ.ರಾ., **ಕರ್ನಾಟಕದ ಕಲೆಗಳು-ವಾಸ್ತು, ಸಂಪುಟ-4,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1992.

ಗೋಪಾಲ, ಬಾ.ರಾ., **ವಿಜಯನಗರದ ವಾಸ್ತುಶಿಲ್ಪ,** ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, 1982.

ಚಿದಾನಂದ ಮೂರ್ತಿ, ಎಂ., **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ (ಕ್ರಿ.ಶ.450-1150),** ಸಪ್ನ ಬುಕ್ ಹೌಸ್, ಬೆಂಗಳೂರು, ಆರನೆಯ ಮುದ್ರಣ, 2014.

ಜಯದೇವಪ್ಪ ಜೈನಕೇರಿ, **ಕರ್ನಾಟಕ ಶಿಲ್ಪ-ಸಂಸ್ಕೃತಿ,** (ನಾಕಂಡ ದೇಗುಲುಗಳು) ಶಾಂತಲಾ ಪ್ರಕಾಶನ, ಶಿವಮೊಗ್ಗ, 2009

ತಿಪ್ಪೇರುದ್ರಸ್ವಾಮಿ, ಎಚ್., **ಕರ್ನಾಟಕ ಸಂಸ್ಕೃತಿ ಸಮೀಕ್ಷೆ,** ಡಿ.ವಿ.ಕೆ.ಮೂರ್ತಿ ಪ್ರಕಾಶನ, ಮೈಸೂರು, 1968.

ದೇವರಕೊಂಡಾರೆಡ್ಡಿ, **ತಲಕಾಡಿನ ಗಂಗರ ದೇವಾಲಯಗಳ ಒಂದು ಅಧ್ಯಯನ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು 1994.

ನಾಗೇಗೌಡ.ಎಚ್.ಎಲ್. **ಪ್ರವಾಸಿ ಕಂಡ ಇಂಡಿಯಾ,** ಸಂಪುಟ 1 ರಿಂದ 7, ಬೆಂಗಳೂರು

ನರಸಿಂಹ ಮೂರ್ತಿ, ಎ.ವಿ., **ಚಾಲುಕ್ಯ ವಾಸ್ತು ಶಿಲ್ಪ ಪರಿಚಯ,** ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, 1984..

ಪಂಚಮುಖಿ, ಆರ್.ಎಸ್., **ಕರ್ನಾಟಕದ ಅರಸು ಮನೆತನಗಳು,** ಕರ್ನಾಟಕ ಇತಿಹಾಸ ಸಂಶೋಧನಾ ಮಂಡಲ, ಧಾರವಾಡ, 1961.

ಪದ್ಮಾನಾಭ.ಕೆ. **ಹೊಯ್ಸಳ ಸ್ಕಲ್ಫ್‌ಚರ್ಸ್ ಅಂಡ್ ಕಲ್ಚರಲ್ ಸ್ಟಡಿ,** 1989

ಪರಮಶಿವಮೂರ್ತಿ, ಡಿ.ವಿ., **ಕನ್ನಡ ಶಾಸನ ಶಿಲ್ಪ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 1999.

ಪ್ರಭಾಕರ್, ಎಂ.ಎಸ್, **ದೇವಾಲಯ ವಾಸ್ತು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2011.

ಮನೋಜದಾಸ್, (ಮೂಲ), ಸೀತಾರಾಮಯ್ಯ (ಅನು), **ಭಾರತದ ದೇವಾಲಯಗಳು,** ಐ.ಬಿ.ಎಚ್. ಪ್ರಕಾಶನ, ಬೆಂಗಳೂರು, 1978.

ಮಲ್ಲೇಪುರ, ಜಿ., ವೆಂಕಟೇಶ (ಸಂ), **ಶಿವತತ್ವ ರತ್ನಾಕರ, ಸಂಪುಟ-1 ಮತ್ತು 2,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2000.

ಮೈಸೂರು ನಾಗರಾಜ ಶರ್ಮಾ, **ಹೊಯ್ಸಳ ಶಿಲ್ಪದಲ್ಲಿ ಶಿವ,** (ಪುರಾತತ್ವ, ಇತಿಹಾಸ ಮತ್ತು ಕಲೆ) ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 2010

ರಮೇಶ, ಚಿ.ಗೋ.,**ಕರ್ನಾಟಕದ ವಾಸ್ತುಶಿಲ್ಪ,** ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, 1984.

ರಮೇಶ ನಾಯಕ, (ಸಂ), **ಕರ್ನಾಟಕದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನಗಳ ಮರು ಚಿಂತನೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2007.

ರಾಜಶೇಖರ್, ಎಸ್.,**ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ,** ಸುಜಾತ ಪಬ್ಲಿಕೇಶನ್, ಧಾರವಾಡ, 1988.

ರಾಬರ್ಟ್ ಸೆವೆಲ್, **ಮರೆತು ಹೋದ ಮಹಾ ಸಾಮ್ರಾಜ್ಯ ವಿಜಯನಗರ** (ಕನ್ನಡಕ್ಕೆ ಅನುವಾದ; ಸದಾನಂದ ಕನವಳ್ಳಿ) ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು, 2015

ರಾಮಚಂದ್ರರಾವ್, ಎಸ್.ಕೆ., **ಮೂರ್ತಿಶಿಲ್ಪ ನೆಲೆ ಹಿನ್ನೆಲೆ,** ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, 1975.

ರಾಮಚಂದ್ರರಾವ್, ಎಸ್.ಕೆ., **ಭಾರತದ ದೇವಾಲಯ ನೆಲೆ- ಹಿನ್ನೆಲೆ,** ಸುರಮಾ ಪ್ರಕಾಶನ, ಬೆಂಗಳೂರು, ಎರಡನೆಯ ಮುದ್ರಣ, 2010.

ವೆಂಕೋಬರಾವ್, ಬಿ., **ಮೈಸೂರು ದೇಶದ ವಾಸ್ತುಶಿಲ್ಪ**. ಕರ್ನಾಟಕ ಸಂಘ, ಸೆಂಟ್ರೆಲ್ ಕಾಲೇಜು, ಬೆಂಗಳೂರು, 1928.

ಶಿವಲಿಂಗಯ್ಯ. ಡಿ. (ಸಂ) **ತುಮಕೂರು ಜಿಲ್ಲೆಯ ಸ್ಥಳನಾಮಗಳು,**ತುಮಕೂರು ವಿಶ್ವವಿದ್ಯಾನಿಲಯ, ತುಮಕೂರು, 2011

ಶಿವತಾರಕ್, ಕೆ.ಬಿ, **ಕರ್ನಾಟಕದ ಪುರಾತತ್ವ ನೆಲೆಗಳು**. ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2001.

ಶಿವರಾಮ ಕಾರಂತ, **ಚಾಲುಕ್ಯ ವಾಸ್ತು ಮತ್ತು ಶಿಲ್ಪ,** ಲಲಿತಕಲಾ ಅಕಾಡೆಮಿ, ಬೆಂಗಳೂರು, 1969.

ಶಿವರಾಮ ಕಾರಂತ, **ಭಾರತೀಯ ಶಿಲ್ಪ,** ಬೆಂಗಳೂರು, ವಿಶ್ವವಿದ್ಯಾಲಯ, ಬೆಂಗಳೂರು, 1975.

ಶೇಷಶಾಸ್ತ್ರಿ, ಆರ್, **ಕರ್ನಾಟಕದ ವೀರಗಲ್ಲುಗಳು,** ಕನ್ನಡ ಸಾಹಿತ್ಯ ಪರಿಷತ್ತು, ಧಾರವಾಡ, 1982.

ಶ್ರೀಕಂಠಶಾಸ್ತ್ರಿ, ಎಸ್., **ಹೊಯ್ಸಳ ವಾಸ್ತುಶಿಲ್ಪ,** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 1965.

ಶ್ರೀಧರ, ಬಿ.ಎಚ್, **ಭಾರತೀಯ ಮೂರ್ತಿಶಿಲ್ಪ,** ರಂಗಸಂಗ ಮತ್ತು ಕಲಾರಂಗ, ಶಿರಸಿ, 1988

ಸತೀಶ, ಕೆ.,**ವಿಜಯನಗರ ಕಾಲದ ಶೈವ ದೇವಾಲಯಗಳು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 2008.

ಜ್ಞಾನಾನಂದ, ಜಿ., **ಶಿಲ್ಪಾದರ್ಶ, ಭಾಗ-1,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2001.

ಜ್ಞಾನಾನಂದ, ಜಿ., **ಶಿಲ್ಪಾದರ್ಶ, ಭಾಗ-2,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2004.

ಎಸ್. ಶೆಟ್ಟರ್., **ಸೋಮನಾಥಪುರ,** ಅಭಿನವ ಪ್ರಕಾಶನ, ಬೆಂಗಳೂರು, 2008

ಯೋಗೀಶ್ವರಪ್ಪ.ಡಿ.ಎನ್. **ಹಾಗಲವಾಡಿ ನಾಯಕರು,** ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ವಿದ್ಯಾರಣ್ಯ, ೧೯೯೯

## ಆಂಗ್ಲ ಭಾಷೆಯ ಪುಸ್ತಕಗಳು

Acharya, P.K., **Indian Architecture according to ManasaraSilpa Shastra,** Madras, 1927.

Acharya, P.K., **A Dictionary of Hidnu Architecture,** Oxford, 1927.

Acharya, P.K., **Architecture of Manasara,** Oxford, 1933.

Acharya, P.K., **an Encyclopedia of Hindu Architecture,** London, 1946.

AjitGhosh, **Some Unpublished Early Chola Portrait Sculpture,** Catasiatizea, Zeitschift, 1933.

Altekar, A.S., **Rashtrakutas and their Times,** Poona, 1967.

Ambrose Kay**, Classical Dances and Costumes of India,** London, 1945.

Balasubramanya, S.R., **The Early Chola Art,** Bombay, 1966.

Banarjee, J.N., **The Development of Hindu Iconolography,** Calcutta, 1956.

Banarji, J.N., **Religion in Art and Archaeology,** Vaishnavism and Saivism, Lucknow, 1968.

Basavaraju, K.R., **History and Culture of Karnataka,** Dharward, 1984.

Dhaky., M.A**. Indian Temple Architecture, South India: Lower Dravidadesa,** American Institute of Indian Studies, Oxford University Press. Delhi, 1983

Gururaja Rao.B.K.**The Megalithic Culture in South India,** Prasaranga, University of Mysore, 1972

Percy Brown, **Indian Architecture, (Buddhist, Hindu),** 3rd Revised and enlarged Edition, Bombay, 1956.

Dasguptha, S.N., **Fundamentals of Indian Art,** Bombay, 1960.

Dayananda Patel, T., **Kesava Temple Somanathapura, A Cultural Study,** Delhi, 1990.

Dayalan, O.L., **Early Temples of South Indian Art,** ASI, New Delhi, 1992.

Diwakar, R.R., (Ed) **Karnataka Through the Ages,** Bangalore, 1968.

Edith Tomory., **A History of Fine Arts in India and the West**, Orient Black Swan Publication, New Delhi. 2010

Frederic Louis, **Indian Temples and Sculptures,** London, 1959.

Gerard Foekema, **Hoysala Architecture Medieval Temples of Southern Karnataka, Built during Hoysala Rule, Vol-I & II,** Delhi, 1994.

Ghosh, A., **Jaina Art and Architecture,** Vol-I, II, New Delhi, 1975.

Gupte, R.S., **Iconography of The Hindus Buddhist and Jains**, Bomby, 1972.

Havell, E.B., **Indian Acrchitecture,** London, 1927.

Percy Brown., **Indian Architecture. (Buddhist and Hindu Periods)** D.B. Taraporevala sons and co private Ltd., Bombay, 1959

Rangaraju. N.S., The Hoysala Temples in Mandya and Tumkur District, Prasaranga, University of Mysore, Mysore, 1998

Kelleson Collyer., **The Hoysala Artists Their Identity and Styles,** Directorate of Archaeology and Museums, Mysore, 1990

Krishna Rao, M.V., **The Gangas of Talakad,** Madras, 1936.

M.S. Krishna Murthy., **The Nolambas**, Prasaranga, University of Mysore, 1980

Rowl and Benjamin, **The Art and Architecture of India, (Buddhist, Hindu, Jaina)** Reprint-1959.

Settar, S., **The Hoysala Temples,** Karnataka University, Kala Yatra Publication. Bangalore, 1992.

Soundar Rajan, K.V**., Early Temple Architecture in Karnataka and its Ramifications,** First Edition, Dharwad, 1969.

Soundar Rajan, K.V., **Indian Temple Styles,** New Delhi, 1972.

Srinivasan, K.R., **Temples of South India,** New Delhi, 1993.

## ಗೆಜೆಟಿಯರ್, ನಿಘಂಟು, ನಿಯತಕಾಲಿಕೆಗಳು ಮತ್ತು ವರದಿಗಳು

Suryanath U. Kamath, **Karnataka State Gazetteer, Mysore District 1988,** Bangalore

Rice, B.L., Mysore A Gazetteer Complied for Government, Vol-II (Kadur District) London-1897

Kitterl Rev, F.A., **Kannada-English Disctionary,** Mangalore-1894.

Sircar, D.C., **Indian Epigraphical Glossary.**Varanasi-1966.

Saletore, R.N., **Encyclopedia of Indian Culture,** New Delhi-1982.
**Indian Antiquary**, Volum 1 to 62.

**Mysore Archaeological Reports,** 1906-1954.

**South Indian Inscriptions,** Volumes 1-32

## ಗ್ಯಾಸೆಟಿಯರ್‌ಗಳು

ಸೂರ್ಯನಾಥ ಕಾಮತ್ ಯು (ಸಂ), ಕರ್ನಾಟಕ ರಾಜ್ಯ ಗೆಜೆಟಿಯರ್, ಭಾಗ-1, 1984.

ಸೂರ್ಯನಾಥ ಕಾಮತ್ ಯು (ಸಂ), ಕರ್ನಾಟಕ ರಾಜ್ಯ ಗೆಜೆಟಿಯರ್, ಭಾಗ-2, 1985.

ಸೂರ್ಯನಾಥ ಕಾಮತ್ ಯು (ಸಂ), ಕರ್ನಾಟಕ ರಾಜ್ಯ ಗೆಜೆಟಿಯರ್, ಭಾಗ-3, 1986.

ಕನ್ನಡ ವಿಶ್ವಕೋಶ ಸಂ.1 ರಿಂದ 14, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು-1979.

ಮಾನವಿಕ ಕರ್ನಾಟಕ ಸಂಪುಟಗಳು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

ಇತಿಹಾಸ ದರ್ಶನ ಸಂ.1 ರಿಂದ 30, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು

ಎಪಿಗ್ರಾಫಿಯ ಕರ್ನಾಟಿಕ, ಸಂಪುಟಗಳು 1 ರಿಂದ 24, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

ಇತಿಹಾಸ ಮತ್ತು ಪುರಾತತ್ವ ವಿಶ್ವಕೋಶ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

\




**ಕರ್ನಾಟಕ ರಾಜ್ಯ ಭೂಪಟ, ಕೃಪೆ; ಅಂತರ್ಜಾಲ**



ತಳನಕ್ಷೆ.1. ಮೂಲೆಶಂಕರೇಶ್ವರ ದೇವಾಲಯ, ತುರುವೇಕೆರೆ. ಕೃಪೆ; ಎಂ.ಎ.ಆರ್. 1934, ಪು.ಸಂ.28

ತಳನಕ್ಷೆ.2. ಚನ್ನಕೇಶವ ದೇವಾಲಯ, ತುರುವೇಕೆರೆ. ಕೃಪೆ; ಎಂ.ಎ.ಆರ್. 1916, ಪು.ಸಂ.3




ತಳನಕ್ಷೆ.3. ಕೇದಾರೇಶ್ವರ ದೇವಾಲಯ, ನಾಗಲಾಪುರ. ಕೃಪೆ; ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆ




**ತಳನಕ್ಷೆ.4. ಚನ್ನಕೇಶವ ದೇವಾಲಯ, ನಾಗಲಾಪುರ. ಕೃಪೆ; ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆ**

## ತುರುವೇಕೆರೆ ತಾಲೂಕಿನ ದೇವಾಲಯಗಳ ಪಟ್ಟಿ

## ಶೈವ ದೇವಾಲಯಗಳು

| ಕ್ರಮ ಸಂಖ್ಯೆ | ಗ್ರಾಮದ ಹೆಸರು | ದೇವಾಲಯದ ಹೆಸರು | ಕಾಲ | ಆಕರ | ಷರಾ |
|---|---|---|---|---|---|
| 1 | ಹುಲಿಕಲ್ | ಹಂಸೇಶ್ವರ ಅಥವಾ ಸಂಗಮೇಶ್ವರ ದೇವಾಲಯ | ಗಂಗ | ತಲಕಾಡಿನ ಗಂಗರ ದೇವಾಲಯಗಳು ದೇವರಕೊಂಡ ರೆಡ್ಡಿ | ಸುಸ್ಥಿತಿಯಲ್ಲಿದೆ |
| 2 | ತಂಡಗ | ಮಲ್ಲೇಶ್ವರ ದೇವಾಲಯ | ಗಂಗ | ತಲಕಾಡಿನ ಗಂಗರ ದೇವಾಲಯಗಳು ದೇವರಕೊಂಡ ರೆಡ್ಡಿ | ಸುಸ್ಥಿತಿಯಲ್ಲಿದೆ |
| 3 | ಗೋವಿಂಧಘಟ್ಟ | ಗಂಗಾಧರೇಶ್ವರ ದೇವಾಲಯ | ಗಂಗ | – | ದುಸ್ಥಿತಿಯಲ್ಲಿದೆ |
| 4 | ಜಡೇಯ | ಈಶ್ವರ ದೇವಾಲಯ | ಕ್ರಿ.ಶ.1259 | ಎ.ಕ.ಸಂ.12, ಶಾ.ಸಂ.28 | ದುಸ್ಥಿತಿಯಲ್ಲಿದೆ |
| 5 | ತುರುವೇಕೆರೆ | ಮೂಲೆಶಂಕರೇಶ್ವರ ದೇವಾಲಯ | ಕ್ರಿ.ಶ. 1264–1291 | ಎಸ್.ಶೆಟ್ಟರ್, ಸೋಮನಾಥಪುರ | ಸುಸ್ಥಿತಿಯಲ್ಲಿದೆ |
| 6 | ನಾಗಲಾಪುರ | ಕೇದಾರೇಶ್ವರ ದೇವಾಲಯ | ಹೊಯ್ಸಳ, ಕ್ರಿ.ಶ.1258 | ಎಂ.ಎ.ಆರ್.1916 | ಸುಸ್ಥಿತಿಯಲ್ಲಿದೆ |
| 7 | ಹುಲಿಕಲ್ | ಕಲ್ಲೇಶ್ವರ ದೇವಾಲಯ | ಹೊಯ್ಸಳ | ಎಂ.ಎ.ಆರ್.1916 | ಸುಸ್ಥಿತಿಯಲ್ಲಿದೆ |
| 8 | ಗೋಣಿತುಮಕೂರು | ಕಲ್ಲೇಶ್ವರ ದೇವಾಲಯ | ಹೊಯ್ಸಳ | ಎಂ.ಎ.ಆರ್.1916 | ಸುಸ್ಥಿತಿಯಲ್ಲಿದೆ |
| 9 | ಕಲ್ಕೆರೆ | ಕಲ್ಲೇಶ್ವರ ದೇವಾಲಯ | ಹೊಯ್ಸಳ | ಮಾಹಿತಿ ಕಂಡು ಬರುವುದಿಲ್ಲ | ದುಸ್ಥಿತಿಯಲ್ಲಿದೆ |
| 10 | ಕೊಂಡಜ್ಜಿ | ತ್ರಿಕೂಟ ಸೋಮೇಶ್ವರ ದೇವಾಲಯ | ಹೊಯ್ಸಳ | ಎಂ.ಎ.ಆರ್.1916, ಶಾ.ಸಂ.76, ಪು.ಸಂ.41 | ಸುಸ್ಥಿತಿಯಲ್ಲಿದೆ |
| 11 | ಸೂಳೆಕೆರೆ | ಈಶ್ವರ ದೇವಾಲಯ | ಹೊಯ್ಸಳ | ಕರ್ನಾಟಕ ರಾಜ್ಯ ಗೆಜೆಟಿಯರ್–1916, ತುಮಕೂರು ಜಿಲ್ಲೆ | ಸುಸ್ಥಿತಿಯಲ್ಲಿದೆ |

| | | | | | |
|---|---|---|---|---|---|
| 12 | ತಾವರೇಕೆರೆ | ಅಘೋರೇಶ್ವರ ದೇವಾಲಯ | ವಿಜಯನಗರ ಕಾಲ | ಮಾಹಿತಿ ಕಂಡು ಬರುವುದಿಲ್ಲ | ಸುಸ್ಥಿತಿಯಲ್ಲಿದೆ |
| 13 | ಬೆನಕನಕೆರೆ | ಈಶ್ವರ ದೇವಾಲಯ | ವಿಜಯನಗರ ಕಾಲ | ಮಾಹಿತಿ ಕಂಡು ಬರುವುದಿಲ್ಲ | ಸುಸ್ಥಿತಿಯಲ್ಲಿದೆ |
| 14 | ತುರುವೇಕೆರೆ | ಗಂಗಾಧರೇಶ್ವರ ದೇವಾಲಯ | ವಿಜಯನಗರ ಕಾಲ | ಎಂ.ಎ.ಆರ್.1916 | ಸುಸ್ಥಿತಿಯಲ್ಲಿದೆ |
| 15 | ಪುರ | ಶಂಭುಲಿಂಗೇಶ್ವರ ದೇವಾಲಯ | ವಿಜಯನಗರ ಕಾಲ | ಎಂ.ಎ.ಆರ್.1916 | ಸುಸ್ಥಿತಿಯಲ್ಲಿದೆ |
| 16 | ಮಲ್ಲೂರು | ಈಶ್ವರ ದೇವಾಲಯ | – | ಮಾಹಿತಿ ತಿಳಿದು ಬಂದಿಲ್ಲ | ದುಸ್ಥಿತಿಯಲ್ಲಿದೆ |
| 17 | ಚಿಕ್ಕಮಲ್ಲಿಗೆರೆ | ಕಲ್ಲೇಶ್ವರ ದೇವಾಲಯ | – | – | ದುಸ್ಥಿತಿಯಲ್ಲಿದೆ |

## ವೈಷ್ಣವ ದೇವಾಲಯಗಳು

| ಕ್ರಮ ಸಂಖ್ಯೆ | ಗ್ರಾಮದ ಹೆಸರು | ದೇವಾಲಯದ ಹೆಸರು | ಕಾಲ | ಆಕರ (ಎಂ.ಎ.ಆರ್) | ಷರಾ |
|---|---|---|---|---|---|
| 1 | ನಾಗಲಾಪುರ | ಚನ್ನಕೇಶವ ದೇವಾಲಯ | ಕ್ರಿ.ಶ.1249 | ಎಂ.ರಾಧಾ ಪಟೇಲ್, Life and Time of Hoysala Narasimha-3 | ಸುಸ್ಥಿತಿಯಲ್ಲಿದೆ |
| 2 | ತುರುವೇಕೆರೆ | ಚನ್ನಕೇಶವ ದೇವಾಲಯ | ಕ್ರಿ.ಶ.1258 | ಎಂ.ರಾಧಾ ಪಟೇಲ್ | |
| 3 | ತಂಡಗ | ಚನ್ನಕೇಶವ ದೇವಾಲಯ | ಕ್ರಿ.ಶ.1160 | ಎನ್.ಎಸ್.ರಂಗರಾಜು, ದಿ ಹೊಯ್ಸಳ ಟೆಂಪಲ್ಸ್ ಇನ್ ಮಂಡ್ಯ ಅಂಡ್ ತುಮಕೂರು ಡಿಸ್ಟ್ರಿಕ್ಟ್ಸ್ | |
| 4 | ರಾಮಸಾಗರ | ವರದರಾಜ ಸ್ವಾಮಿ ದೇವಾಲಯ | ಹೊಯ್ಸಳ | ಕರ್ನಾಟಕ ರಾಜ್ಯ ಗೆಜೆಟಿಯರ್–1916 | |
| 5 | ಬೆನಕನಕೆರೆ | ಚನ್ನಕೇಶವ ದೇವಾಲಯ | ವಿಜಯನಗರ | – | |
| 6 | ಸೂಳೆಕೆರೆ | ಚನ್ನಕೇಶವ ದೇವಾಲಯ | ವಿಜಯನಗರ | | ದುಸ್ಥಿತಿಯಲ್ಲಿದೆ |
| 7 | ತುರುವೇಕೆರೆ | ಬೇಟೆರಾಯಸ್ವಾಮಿ ದೇವಾಲಯ | ಕ್ರಿ.ಶ.1504–1509 | ಎಂ.ಎ.ಆರ್.1916 | ಸುಸ್ಥಿತಿಯಲ್ಲಿದೆ |
| 8 | ಮಾವಿನಕೆರೆ | ಬೇಟೆರಾಯಸ್ವಾಮಿ ದೇವಾಲಯ | ವಿಜಯನಗರ | | ಸುಸ್ಥಿತಿಯಲ್ಲಿದೆ |
| 9 | ಕಡೇಹಳ್ಳಿ | ವೆಂಕಟರಮಣಸ್ವಾಮಿ ದೇವಾಲಯ | ವಿಜಯನಗರ | | ಸುಸ್ಥಿತಿಯಲ್ಲಿದೆ |
| 10 | ವಿಠಲಾಪುರ | ತಿರುಮಲರಾಯ ದೇವಾಲಯ | ಕ್ರಿ.ಶ.1504–1509 | ಎಂ.ಎ.ಆರ್.1916 | ಸುಸ್ಥಿತಿಯಲ್ಲಿದೆ |
| 11 | ಚಿಕ್ಕಶೆಟ್ಟಿಕೆರೆ | ರಂಗನಾಥ ದೇವಾಲಯ | ವಿಜಯನಗರ | | ಸುಸ್ಥಿತಿಯಲ್ಲಿದೆ |

| | | | | | |
|---|---|---|---|---|---|
| 12 | ಬುಗುಡನಹಳ್ಳಿ | ರಂಗನಾಥ ದೇವಾಲಯ | ವಿಜಯನಗರ | | ಸುಸ್ಥಿತಿಯಲ್ಲಿದೆ |
| 13 | ಸೂಳೆಕೆರೆ | ವೀರಭದ್ರಸ್ವಾಮಿ ದೇವಾಲಯ | ವಿಜಯನಗರ | | ದುಸ್ಥಿತಿಯಲ್ಲಿದೆ |
| 14 | ಜಡೇಯ | ರಂಗನಾಥ ದೇವಾಲಯ | ವಿಜಯನಗರ | | ಜೀರ್ಣೋದ್ಧಾರಗೊಂಡಿದೆ |
| 15 | ಕಡೇಹಳ್ಳಿ | ರಂಗನಾಥ ದೇವಾಲಯ | ವಿಜಯನಗರ | | ಜೀರ್ಣೋದ್ಧಾರಗೊಂಡಿದೆ |
| 16 | ಸೂಳೆಕೆರೆ | ಆಂಜನೇಯ ದೇವಾಲಯ | ವಿಜಯನಗರ | | ದುಸ್ಥಿತಿಯಲ್ಲಿದೆ |





ಚಿ.ಸಂ.1. ಗರ್ಭಗೃಹದಲ್ಲಿರುವ ಶಿವಲಿಂಗ
ಹಂಸೇಶ್ವರ ದೇವಾಲಯ, ಹುಲಿಕಲ್

ಚಿ.ಸಂ.2. ನಂದಿಶಿಲ್ಪ
ಹಂಸೇಶ್ವರ ದೇವಾಲಯ

ಚಿ.ಸಂ.3. ವೇಣುಗೋಪಾಲ ಶಿಲ್ಪ
ಹಂಸೇಶ್ವರ ದೇವಾಲಯ




ಚಿ.ಸಂ.4. ನಾರಾಯಣ ಶಿಲ್ಪ
ಹುಲಿಕಲ್

ಚಿ.ಸಂ.5. ಸಪ್ತಮಾತೃಕೆಯರ ಶಿಲ್ಪಗಳು, ಹಂಸೇಶ್ವರ ದೇವಾಲಯ
ಹುಲಿಕಲ್




ಚಿ.ಸಂ.6. ಗರ್ಭಗೃಹದಲ್ಲಿರುವ ಶಿವಲಿಂಗ
ಮಲ್ಲೇಶ್ವರ ದೇವಾಲಯ, ತಂಡಗ

ಚಿ.ಸಂ.7. ನವರಂಗದ ಕಂಬಗಳು, ಮಲ್ಲೇಶ್ವರ ದೇವಾಲಯ, ತಂಡಗ



ಚಿ.ಸಂ.8. ಗಣೇಶ ಶಿಲ್ಪ
ಮಲ್ಲೇಶ್ವರ ದೇವಾಲಯ, ತಂಡಗ

ಚಿ.ಸಂ.9. ಪಾರ್ವತಿ ಶಿಲ್ಪ
ಮಲ್ಲೇಶ್ವರ ದೇವಾಲಯ, ತಂಡಗ

ಚಿ.ಸಂ.10. ಭುವನೇಶ್ವರಿ
ಮಲ್ಲೇಶ್ವರ ದೇವಾಲಯ, ತಂಡಗ



ಚಿ.ಸಂ.11. ಗರ್ಭಗೃಹದಲ್ಲಿರುವ ಶಿವಲಿಂಗ,
ಗಂಗಾಧರೇಶ್ವರ ದೇವಾಲಯ, ಗೋವಿಂದಘಟ್ಟ

ಚಿ.ಸಂ.12. ನವರಂಗದ ಕಂಬಗಳು
ಗಂಗಾಧರೇಶ್ವರ ದೇವಾಲಯ, ಗೋವಿಂದಘಟ್ಟ



ಚಿ.ಸಂ.13. ದೇವಾಲಯದ ಹಿನ್ನೋಟ, ಗಂಗಾಧರೇಶ್ವರ ದೇವಾಲಯ, ಗೋವಿಂದಘಟ್ಟ





ಚಿ.ಸಂ.14. ಈಶ್ವರ ದೇವಾಲಯ, ಜಡೇಯ

ಚಿ.ಸಂ.15. ನಂದಿಶಿಲ್ಪ, ಈಶ್ವರ ದೇವಾಲಯ



ಚಿ.ಸಂ.16. ಮೂಲೆ ಶಂಕರೇಶ್ವರ ದೇವಾಲಯ, ತುರುವೇಕೆರೆ





ಚಿ.ಸಂ.17. ಶಿವಲಿಂಗ

ಚಿ.ಸಂ.18. ನವರಂಗದ ಕಂಬಗಳು, ಮೂಲೆಶಂಕರೇಶ್ವರ ದೇವಾಲಯ




ಚಿ.ಸಂ.19. ನವರಂಗದಲ್ಲಿರುವ ಭುವನೇಶ್ವರಿಗಳು, ಮೂಲೆ ಶಂಕರೇಶ್ವರ ದೇವಾಲಯ, ತುರುವೇಕೆರೆ








ಚಿ.ಸಂ.20. ಗಣೇಶ ಶಿಲ್ಪ

ಚಿ.ಸಂ. 21. ಭೈರವ ಶಿಲ್ಪ

ಚಿ.ಸಂ.22. ನಂದಿ ಶಿಲ್ಪ



ಚಿ.ಸಂ.23. ಸಪ್ತಮಾತೃಕೆಯರ ಶಿಲ್ಪಗಳು



ಚಿ.ಸಂ.24. ದೇವಾಲಯದ ಹಿನ್ನೋಟ, ಮೂಲೆಶಂಕರೇಶ್ವರ ದೇವಾಲಯ, ತುರುವೇಕೆರೆ





ಚಿ.ಸಂ.25. ಅಧಿಷ್ಠಾನದ ಪಟ್ಟಿಕೆಯಲ್ಲಿರುವ ಹೆಸರುಗಳು



ಚಿ.ಸಂ.26. ಕೇದಾರೇಶ್ವರ ದೇವಾಲಯದ ಮುನ್ನೋಟ, ನಾಗಲಾಪುರ



ಚಿ.ಸಂ.27. ಶಿವಲಿಂಗ



ಚಿ.ಸಂ.28. ನಾಗಶಿಲ್ಪ



ಚಿ.ಸಂ.29. ಲಲಾಟಬಿಂಬ






ಚಿ.ಸಂ. ೩೦. ನವರಂಗದಲ್ಲಿರುವ ಕಂಬಗಳು, ಕೇದಾರೇಶ್ವರ ದೇವಾಲಯ, ನಾಗಲಾಪುರ










ಚಿ.ಸಂ.೩೧. ನವರಂಗದಲ್ಲಿರುವ ಭುವನೇಶ್ವರಿಗಳು, ಕೇದಾರೇಶ್ವರ ದೇವಾಲಯ, ನಾಗಲಾಪುರ




ಚಿ.ಸಂ.32. ಕೋಷ್ಟಗುಡಿಗಳು




ಚಿ.ಸಂ.33. ಸಪ್ತಮಾತೃಕೆಯರ ಶಿಲ್ಪಗಳು




ಚಿ.ಸಂ.34. ಕೇದಾರೇಶ್ವರ ದೇವಾಲಯದ ಪಾರ್ಶ್ವನೋಟ, ನಾಗಲಾಪುರ



ಚಿ.ಸಂ.35. ದೇವಾಲಯದ ಭಿತ್ತಿಯಲ್ಲಿರುವ ಶಿಲ್ಪಗಳು, ಕೇದಾರೇಶ್ವರ ದೇವಾಲಯ, ನಾಗಲಾಪುರ




ಚಿ.ಸಂ.೩೬. ಶಿವಲಿಂಗ
ಕಲ್ಲೇಶ್ವರ ದೇವಾಲಯ, ಹುಲಿಕಲ್ಲು

ಚಿ.ಸಂ.೩೭. ನವರಂಗದ ಕಂಬಗಳು, ಕಲ್ಲೇಶ್ವರ ದೇವಾಲಯ, ಹುಲಿಕಲ್ಲು




ಚಿ.ಸಂ.೩೮. ಕಲ್ಲೇಶ್ವರ ದೇವಾಲಯ, ಹುಲಿಕಲ್ಲು



ಚಿ.ಸಂ.೩೯. ದೇವಾಲಯದ ಹಿನ್ನೋಟ, ಕಲ್ಲೇಶ್ವರ ದೇವಾಲಯ, ಹುಲಿಕಲ್ಲು





ಚಿ.ಸಂ.40. ಶಿವಲಿಂಗ

ಚಿ.ಸಂ.41. ನವರಂಗದ ಕಂಬಗಳು, ಕಲ್ಲೇಶ್ವರ ದೇವಾಲಯ, ಗೋಣಿತುಮಕೂರು



ಚಿ.ಸಂ.42. ಗಣೇಶ ಶಿಲ್ಪ
ಕಲ್ಲೇಶ್ವರ ದೇವಾಲಯ



ಚಿ.ಸಂ.43. ಸರಸ್ವತಿ ಶಿಲ್ಪ
ಕಲ್ಲೇಶ್ವರ ದೇವಾಲಯ



ಚಿ.ಸಂ.44. ನಾಗಶಿಲ್ಪ
ಕಲ್ಲೇಶ್ವರ ದೇವಾಲಯ



ಚಿ.ಸಂ.45. ಕಲ್ಲೇಶ್ವರ ದೇವಾಲಯದ ಪಾರ್ಶ್ವನೋಟ, ಗೋಣಿತುಮಕೂರು




ಚಿ.ಸ.46. ಕಲ್ಲೇಶ್ವರ ದೇವಾಲಯ, ಕಲ್ಕೆರೆ




ಚಿ.ಸಂ.47. ಮುಖ್ಯ ಗರ್ಭಗೃಹ, ತ್ರಿಕೂಟ ಸೋಮೇಶ್ವರ ದೇವಾಲಯ ಕೊಂಡಜ್ಜಿ

ಚಿ.ಸಂ.48. ಉತ್ತರದ ಗರ್ಭಗೃಹ

ಚಿ.ಸಂ.49. ದಕ್ಷಿಣದ ಗರ್ಭಗೃಹ




ಚಿ.ಸಂ.50. ಗಣಪತಿ ಶಿಲ್ಪ ಚಿ.ಸಂ.51. ನವರಂಗದ ಕಂಬಗಳು, ತ್ರಿಕೂಟ ಸೋಮೇಶ್ವರ ದೇವಾಲಯ, ಕೊಂಡಜ್ಜಿ




ಚಿ.ಸಂ.52. ತ್ರಿಕೂಟ ಸೋಮೇಶ್ವರ ದೇವಾಲಯದ ಹೊರನೋಟ, ಕೊಂಡಜ್ಜಿ




ಚಿ.ಸಂ.53. ಶಿವಲಿಂಗ, ಈಶ್ವರ ದೇವಾಲಯ
ಸೂಳೆಕೆರೆ




ಚಿ.ಸಂ.54. ನಂದಿ ಶಿಲ್ಪ, ಈಶ್ವರ ದೇವಾಲಯ
ಸೂಳೆಕೆರೆ



ಚಿ.ಸಂ.55. ಅಘೋರೇಶ್ವರ ದೇವಾಲಯ, ತಾವರೆಕೆರೆ





ಚಿ.ಸಂ.56. ಶಿವಲಿಂಗ

ಚಿ.ಸಂ.57. ಮುಖಮಂಟಪ, ಅಘೋರೇಶ್ವರ ದೇವಾಲಯ, ತಾವರೆಕೆರೆ






ಚಿ.ಸಂ.58. ಸ್ತಂಭಗಳಲ್ಲಿ ಕೆತ್ತಲಾಗಿರುವ ವಿವಿಧ ಶಿಲ್ಪಗಳು



ಚಿ.ಸಂ.59. ಅಘೋರೇಶ್ವರ ದೇವಾಲಯದ ಹಿನ್ನೋಟ, ತಾವರೆಕೆರೆ






ಚಿ.ಸಂ.60. ಶಿವಲಿಂಗ
ಈಶ್ವರ ದೇವಾಲಯ, ಬೆನಕನಕೆರೆ

ಚಿ.ಸಂ.61. ಮುಖಮಂಟಪ, ಈಶ್ವರ ದೇವಾಲಯ, ಬೆನಕನಕೆರೆ






ಚಿ.ಸಂ.62. ಶಿಖರ

ಚಿ.ಸಂ.63. ಗಂಗಾಧರೇಶ್ವರ ದೇವಾಲಯ, ತುರುವೇಕೆರೆ





ಚಿ.ಸಂ.64. ಗರ್ಭಗೃಹದಲ್ಲಿರುವ ಶಿವಲಿಂಗ
ಗಂಗಾಧರೇಶ್ವರ ದೇವಾಲಯ, ತುರುವೇಕೆರೆ

ಚಿ.ಸಂ.65. ನವರಂಗದಲ್ಲಿರುವ ಕಂಬಗಳು
ಗಂಗಾಧರೇಶ್ವರ ದೇವಾಲಯ, ತುರುವೇಕೆರೆ



ಚಿ.ಸಂ.66. ಸಾಶ್ರಯ ಸ್ತಂಭಗಳು, ಗಂಗಾಧರೇಶ್ವರ ದೇವಾಲಯ, ತುರುವೇಕೆರೆ



ಚಿ.ಸಂ.67. ಕಲ್ಲಿನ ಘಂಟೆ, ಗಂಗಾಧರೇಶ್ವರ ದೇವಾಲಯ, ತುರುವೇಕೆರೆ



ಚಿ.ಸಂ.68. ನಂದಿ ಶಿಲ್ಪ, ಗಂಗಾಧರೇಶ್ವರ ದೇವಾಲಯ, ತುರುವೇಕೆರೆ



ಚಿ.ಸಂ.69. ಶಿಖರ, ಗಂಗಾಧರೇಶ್ವರ ದೇವಾಲಯ, ತುರುವೇಕೆರೆ







ಚಿ.ಸಂ.70. ಗರ್ಭಗೃಹದಲ್ಲಿರುವ ಶಿವಲಿಂಗ
ಶಂಭುಲಿಂಗೇಶ್ವರ ದೇವಾಲಯ, ಪುರ

ಚಿ.ಸಂ.71. ನವರಂಗದಲ್ಲಿರುವ ಶಿವಲಿಂಗಗಳು



ಚಿ.ಸಂ.72. ಅಧಿಷ್ಠಾನ, ಭಿತ್ತಿ, ಶಿಖರ, ಶಂಭುಲಿಂಗೇಶ್ವರ ದೇವಾಲಯ, ಪುರ







ಚಿ.ಸಂ.73. ಈಶ್ವರ ದೇವಾಲಯ, ಮಲ್ಲೂರು




ಚಿ.ಸಂ.74. ಕಲ್ಲೇಶ್ವರ ದೇವಾಲಯ, ಚಿಕ್ಕಮಲ್ಲಿಗೆರೆ



ಚಿ.ಸಂ.75. ಗರ್ಭಗೃಹದಲ್ಲಿರುವ ಶಿವಲಿಂಗ

## ವೈಷ್ಣವ ದೇವಾಲಯಗಳು



ಚಿ.ಸಂ.76. ವೆಂಕಟರಮಣ ಮೂರ್ತಿ



ಚಿ.ಸಂ.77. ಭುವನೇಶ್ವರಿ



ಚಿ.ಸಂ.78. ಸುಖನಾಸಿದ್ವಾರ



ಚಿ.ಸಂ.79. ನವರಂಗದ ಕಂಬಗಳು, ಚನ್ನಕೇಶವ ದೇವಾಲಯ, ನಾಗಲಾಪುರ





ಚಿ.ಸಂ.೮೦. ನವರಂಗದಲ್ಲಿರುವ ಭುವನೇಶ್ವರಿಗಳು, ಚನ್ನಕೇಶವ ದೇವಾಲಯ, ನಾಗಲಾಪುರ



ಚಿ.ಸಂ.೮೧. ಕೋಷ್ಟ ಗುಡಿಗಳು



ಚಿ.ಸಂ.೮೨. ಜಗತಿ, ಚನ್ನಕೇಶವ ದೇವಾಲಯ, ನಾಗಲಾಪುರ



ಚಿ.ಸಂ.೮೩. ದೇವಾಲಯದ ಹಿನ್ನೋಟ, ಚನ್ನಕೇಶವ ದೇವಾಲಯ, ನಾಗಲಾಪುರ



ಚಿ.ಸಂ.84. ಭಿತ್ತಿಯಲ್ಲಿರುವ ಶಿಲ್ಪಗಳು



ಚಿ.ಸಂ.85. ದೇವಾಲಯದ ಅಧಿಷ್ಠಾನ, ಭಿತ್ತಿ




ಚಿ.ಸಂ.86. ಚನ್ನಕೇಶವ ದೇವಾಲಯದ ಮುನ್ನೋಟ, ನಾಗಲಾಪುರ



ಚಿ.ಸಂ.೮೭. ದೇವಾಲಯದ ಪಾರ್ಶ್ವನೋಟ, ನಾಗಲಾಪುರ



ಚಿ.ಸಂ.೮೮. ದೇವಾಲಯದ ಭಿತ್ತಿಯಲ್ಲಿರುವ ವಿವಿಧ ಶಿಲ್ಪಗಳು, ನಾಗಲಾಪುರ



ಚಿ.ಸಂ.೮೯. ದೇವಾಲಯದ ಹೊರನೋಟ, ಚನ್ನಕೇಶವ ದೇವಾಲಯ, ನಾಗಲಾಪುರ



ಚಿ.ಸಂ.೯೦. ಚನ್ನಕೇಶವ ದೇವಾಲಯ, ತುರುವೇಕೆರೆ



ಚಿ.ಸಂ.೯೧. ಗರ್ಭಗೃಹ ಚಿ.ಸಂ.೯೨, ನವರಂಗದ ಕಂಬಗಳು, ಚನ್ನಕೇಶವ ದೇವಾಲಯ, ತುರುವೇಕೆರೆ



ಚಿ.ಸಂ.೯೩. ನವರಂಗದಲ್ಲಿರುವ ಭುವನೇಶ್ವರಿಗಳು, ಚನ್ನಕೇಶವ ದೇವಾಲಯ, ತುರುವೇಕೆರೆ




ಚಿ.ಸಂ.94. ಗಣೇಶ ಶಿಲ್ಪ ಚಿ.ಸಂ.95. ಮುಖಮಂಟಪ, ಚನ್ನಕೇಶವ ದೇವಾಲಯ, ತುರುವೇಕೆರೆ




ಚಿ.ಸಂ.96. ಶಿಖರ ಚಿ.ಸಂ.97 .ಗರ್ಭಗೃಹ ಚಿ.ಸಂ.98. ಸುಖನಾಸಿದ್ವಾರ



ಚಿ.ಸಂ.99. ನವರಂಗದ ಕಂಬ ಚಿ.ಸಂ.100. ಕೋಷ್ಟ ಗುಡಿಗಳು



ಚಿ.ಸಂ.101. ಮುಖಮಂಟಪ, ಚನ್ನಕೇಶವ ದೇವಾಲಯ, ತಂಡಗ



ಚಿ.ಸಂ.102. ಭುವನೇಶ್ವರಿ



ಚಿ.ಸಂ.103. ಧ್ಯಾನಸಕ್ತ ಶಿಲ್ಪ



ಚಿ.ಸಂ.104. ಅಧಿಷ್ಠಾನ, ಚನ್ನಕೇಶವ ದೇವಾಲಯ, ತಂಡಗ



ಚಿ.ಸಂ.105. ಚನ್ನಕೇಶವ ದೇವಾಲಯದ ಹಿನ್ನೋಟ, ತಂಡಗ



ಚಿ.ಸಂ.106. ಸುಖನಾಸ, ಚನ್ನಕೇಶವ ದೇವಾಲಯ, ತಂಡಗ




ಚಿ.ಸಂ.107. ವರದರಾಜಸ್ವಾಮಿ ಶಿಲ್ಪ




ಚಿ.ಸಂ.108. ನವರಂಗದ ಕಂಬಗಳು




ಚಿ.ಸಂ.109. ದ್ವಾರಮಂಟಪ, ವರದರಾಜಸ್ವಾಮಿ ದೇವಾಲಯ, ರಾಮಸಾಗರ




ಚಿ.ಸಂ.110. ಅಧಿಷ್ಠಾನ, ವರದರಾಜ ಸ್ವಾಮಿ ದೇವಾಲಯ, ರಾಮಸಾಗರ




ಚಿ.ಸಂ.111. ವರದರಾಜ ಸ್ವಾಮಿ ದೇವಾಲಯದ ಹೊರನೋಟ, ರಾಮಸಾಗರ




ಚಿ.ಸಂ.112. ವರದರಾಜ ಸ್ವಾಮಿ ದೇವಾಲಯದ ಪಾರ್ಶ್ವನೋಟ, ರಾಮಸಾಗರ



ಚಿ.ಸಂ.113. ಚನ್ನಕೇಶವ ಮೂರ್ತಿ    ಚಿ.ಸಂ.114. ನವರಂಗದ ಕಂಬಗಳು, ಚನ್ನಕೇಶವ ದೇವಾಲಯ, ಬೆನಕನಕೆರೆ




ಚಿ.ಸಂ.115. ದೇವಾಲಯದ ಮುನ್ನೋಟ, ಚನ್ನಕೇಶವ ದೇವಾಲಯ, ಬೆನಕನಕೆರೆ







ಚಿ.ಸಂ.116. ಚನ್ನಕೇಶವ ಮೂರ್ತಿ ಚಿ.ಸಂ.117. ವೈಷ್ಣವ ದ್ವಾರಪಾಲಕರು, ಚನ್ನಕೇಶವ ದೇವಾಲಯ, ಸೂಳೆಕೆರೆ





ಚಿ.ಸಂ.118. ಗರ್ಭಗೃಹ ಚಿ.ಸಂ.119. ಸುಖನಾಸಿಯ ದ್ವಾರ, ಬೇಟೆರಾಯ ಸ್ವಾಮಿ ದೇವಾಲಯ, ತುರುವೇಕೆರೆ





ಚಿ.ಸಂ.120. ನವರಂಗದ ಕಂಬ ಚಿ.ಸಂ.121. ಪಾತಾಳಾಂಕಣ, ಬೇಟೆರಾಯ ಸ್ವಾಮಿ ದೇವಾಲಯ, ತುರುವೇಕೆರೆ







ಚಿ.ಸಂ.122. ಗೋಪುರ ಚಿ.ಸಂ.123. ಬೇಟೆರಾಯಸ್ವಾಮಿ ಮೂರ್ತಿ ಚಿ.ಸಂ.124. ನವರಂಗದ ಕಂಬ



ಚಿ.ಸಂ.125. ದೇವಾಲಯದ ಮುನ್ನೋಟ, ಬೇಟೆರಾಯ ಸ್ವಾಮಿ ದೇವಾಲಯ, ಮಾವಿನಕೆರೆ







ಚಿ.ಸಂ.126. ದ್ವಾರಪಾಲಕರು, ವೆಂಕಟರಮಣ ದೇವಾಲಯ, ಕಡೆಹಳ್ಳಿ ಚಿ.ಸಂ.127. ಶಿಖರ










ಚಿ.ಸಂ.128. ಗರ್ಭಗೃಹ

ಚಿ.ಸಂ.129. ನವರಂಗದ ಕಂಬಗಳು, ತಿರುಮಲರಾಯರಾಯ ದೇವಾಲಯ ವಿಠಲಾಪುರ



ಚಿ.ಸಂ.130. ರಂಗನಾಥ ದೇವಾಲಯ, ಚಿಕ್ಕಶೆಟ್ಟಿಕೆರೆ



ಚಿ.ಸಂ.131. ನವರಂಗದ ಕಂಬಗಳು, ರಂಗನಾಥ ದೇವಾಲಯ, ಚಿಕ್ಕಶೆಟ್ಟಿಕೆರೆ



ಚಿ.ಸಂ.132. ಮುಖಮಂಟಪ, ರಂಗನಾಥ ದೇವಾಲಯ, ಚಿಕ್ಕಶೆಟ್ಟಿಕೆರೆ



ಚಿ.ಸಂ.133, ದೇವಾಲಯದ ಹೊರನೋಟ, ರಂಗನಾಥ ದೇವಾಲಯ, ಚಿಕ್ಕಶೆಟ್ಟಿಕೆರೆ







ಚಿ.ಸಂ.134. ಗರ್ಭಗೃಹ

ಚಿ.ಸಂ.135. ನವರಂಗದ ಕಂಬಗಳು, ರಂಗನಾಥ ದೇವಾಲಯ, ಬುಗುಡನಹಳ್ಳಿ



ಚಿ.ಸಂ.136. ಪಾತಾಳಾಂಕಣ, ರಂಗನಾಥ ದೇವಾಲಯ, ಬುಗುಡನಹಳ್ಳಿ






ಚಿ.ಸಂ.137. ಗರ್ಭಗೃಹ

ಚಿ.ಸಂ.138. ವಿವಿಧಾಕೃತಿಯ ಕಂಬಗಳು, ವೀರಭದ್ರಸ್ವಾಮಿ ದೇವಾಲಯ, ಸೂಳೆಕೆರೆ







ಚಿ.ಸಂ.139. ಗರ್ಭಗೃಹ

ಚಿ.ಸಂ.140. ನವರಂಗದ ಕಂಬಗಳು, ರಂಗನಾಥ ದೇವಾಲಯ, ಜಡೇಯ




ಚಿ.ಸಂ.141. ರಂಗನಾಥ ದೇವಾಲಯ, ಕಡೇಹಳ್ಳಿ,



ಚಿ.ಸಂ.142. ಗರ್ಭಗೃಹ




ಚಿ.ಸಂ.143. ದೀಪಸ್ತಂಭ




ಚಿ.ಸಂ.144. ಶಿಖರ



ಚಿ.ಸಂ.145. ಆಂಜನೇಯ ಶಿಲ್ಪ




ಚಿ.ಸಂ.146. ಭೈರವ ಶಿಲ್ಪ




ಚಿ.ಸಂ. 147. ಆಂಜನೇಯ ದೇವಾಲಯ, ಸೂಳೆಕೆರೆ

## ವೀರಗಲ್ಲು ಮತ್ತು ಮಾಸ್ತಿಗಲ್ಲುಗಳು



ಚಿ.ಸಂ.148. ವೀರಗಲ್ಲು, ಬಡಗರಹಳ್ಳಿ ಚಿ.ಸಂ.149. ವೀರಗಲ್ಲು, ಬೆನಕನಕೆರೆ ಚಿ.ಸಂ.150. ವೀರಗಲ್ಲು, ಬೆನಕನಕೆರೆ



ಚಿ.ಸಂ.151. ಮಹಾಸತಿಕಲ್ಲು, ಬೆಂಕಿಕೆರೆ

ಚಿ.ಸಂ.152. ತುರುಗೋಳ್ ವೀರಗಲ್ಲು ಬೆಂಕಿಕೆರೆ

ಚಿ.ಸಂ.153. ವೀರಗಲ್ಲು ಚಿಕ್ಕಮಲ್ಲಿಗೆರೆ



ಚಿ.ಸಂ.154. ಮಹಾಸತಿಕಲ್ಲು ಚಿಕ್ಕಶೆಟ್ಟಿಕೆರೆ

ಚಿ.ಸಂ.155. ವೀರಗಲ್ಲು ಚಿಕ್ಕಶೆಟ್ಟಿಕೆರೆ

ಚಿ.ಸಂ.156. ವೀರಗಲ್ಲು ಚಿಕ್ಕಶೆಟ್ಟಿಕೆರೆ

ಚಿ.ಸಂ.157. ವೀರಗಲ್ಲು ಚಿಕ್ಕೋನಹಳ್ಳಿ




ಚಿ.ಸಂ.158. ವೀರಗಲ್ಲುಗಳು, ದೊಡ್ಡೇರಿ




ಚಿ.ಸಂ.159. ವೀರಗಲ್ಲು
ಗೋಣಿತುಮಕೂರು



ಚಿ.ಸಂ.160. ವೀರಗಲ್ಲು
ಗೋಣಿತುಮಕೂರು




ಚಿ.ಸಂ.161. ಮಹಾಸತಿಕಲ್ಲು
ಗೋಣಿತುಮಕೂರು



ಚಿ.ಸಂ.162. ವೀರಗಲ್ಲು
ಗೋಣಿತುಮಕೂರು



ಚಿ.ಸಂ.163. ವೀರಗಲ್ಲು
ಹಿಂಡುಮಾರನಹಳ್ಳಿ



ಚಿ.ಸಂ.164.ವೀರಗಲ್ಲು
ಹುಲಿಕಲ್ಲು




ಚಿ.ಸಂ.165. ವೀರಗಲ್ಲು
ಹುಲಿಕಲ್ಲು



ಚಿ.ಸಂ.166. ವೀರಗಲ್ಲುಗಳು, ಹುಲಿಕೆರೆ



ಚಿ.ಸಂ.167. ವೀರಗಲ್ಲು
ಕಾಡಸೂರು

ಚಿ.ಸಂ.168. ವೀರಗಲ್ಲು
ಕಾಡಸೂರು

ಚಿ.ಸಂ.169. ವೀರಗಲ್ಲು
ಕಾಡಸೂರು

ಚಿ.ಸಂ.170. ವೀರಗಲ್ಲುಗಳು
ಕಡೇಹಳ್ಳಿ



ಚಿ.ಸಂ.171. ಮಹಾಸತಿ ಕಲ್ಲುಗಳು,
ಕಣತೂರು

ಚಿ.ಸಂ.172. ವೀರಗಲ್ಲು
ಮಾದಿಹಳ್ಳಿ

ಚಿ.ಸಂ.173. ವೀರಗಲ್ಲುಗಳು
ನಡುವಿನಹಳ್ಳಿ



ಚಿ.ಸಂ.174. ವೀರಗಲ್ಲುಗಳು, ಸೂಳೆಕೆರೆ

ಚಿ.ಸಂ.175. ಮಹಾಸತಿಕಲ್ಲು, ಸೂಳೆಕೆರೆ



ಚಿ.ಸಂ.176. ಶಾಸನೋಕ್ತ ವೀರಗಲ್ಲು ಸೂಳೆಕೆರೆ


ಚಿ.ಸಂ.177. ವೀರಗಲ್ಲು ತಂಡಗ


ಚಿ.ಸಂ.178. ವೀರಗಲ್ಲು ತಂಡಗ


ಚಿ.ಸಂ.179. ವೀರಗಲ್ಲು ತುಂಬೇಪುರ

## ಪ್ರಮುಖ ಶಿಲ್ಪಗಳು



ಚಿ.ಸಂ.180. ಗಣೇಶ ಶಿಲ್ಪ



ಚಿ.ಸಂ.181. ಚಿ.ಸಂ. ವಿಷ್ಣು



ಚಿ.ಸಂ.182. ವೇಣುಗೋಪಾಲ



ಚಿ.ಸಂ.183. ಬ್ರಹ್ಮ



184. ಸಪ್ತಮಾತೃಕೆ ಶಿಲ್ಪಗಳು